# ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ
ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು
ಎ. ನಾಗವೇಣಿ

ಮಾರ್ಗದರ್ಶಕರು
ಡಾ. ಎಂ. ಕೊಟ್ರೇಶ್
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ತುಮಕೂರು ವಿಶ್ವವಿದ್ಯಾಲಯ, ತುಮಕೂರು





ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೫

# ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಶಾಸನಶಾಸ್ತ್ರ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
**ಎ. ನಾಗವೇಣಿ**

ಮಾರ್ಗದರ್ಶಕರು
**ಡಾ. ಎಂ. ಕೊಟ್ರೇಶ್**
ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ತುಮಕೂರು ವಿಶ್ವವಿದ್ಯಾಲಯ, ತುಮಕೂರು



**ಶಾಸನಶಾಸ್ತ್ರ ವಿಭಾಗ**
**ಸಮಾಜವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬

೨೦೧೫

## ಮಾರ್ಗದರ್ಶಕರ ದೃಢೀಕರಣ ಪತ್ರ

**ಎ. ನಾಗವೇಣಿ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

M. Kotresh

(ಡಾ. ಎಂ. ಕೊಟ್ರೇಶ್)
ಸಹ ಪ್ರಾಧ್ಯಾಪಕರು
ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು

CHAIRMAN
Dept. of Studies and Research
in History and Archaeology
Tumkur University
Tumkur - 572103

ದಿನಾಂಕ : 27-7-2015
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಸಹಾಯಕ ಪ್ರಾಧ್ಯಾಪಕರಾಗಿದ್ದ **ಡಾ. ಎಂ. ಕೊಟ್ರೇಶ್** ಪ್ರಸ್ತುತ ಸಹ ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ತುಮಕೂರು ವಿಶ್ವವಿದ್ಯಾನಿಲಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.


ಸಂಶೋಧಕರು

A. Nageweni

**(ಎ. ನಾಗವೇಣಿ)**

ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**ವಿದ್ಯಾರಣ್ಯ–೫೮೩ ೨೭೬**


**ದಿನಾಂಕ** : ೨7.7.2015

**ಸ್ಥಳ** : ವಿದ್ಯಾರಣ್ಯ

# ಕರ್ನಾಟಕದ ನಕ್ಷೆ




ಕೃಪೆ : ಅಂತರ್ಜಾಲ

# ಬಳ್ಳಾರಿ ಜಿಲ್ಲೆ – ಹಡಗಲಿ ತಾಲೂಕು ನಕ್ಷೆ



# ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

**ಅಧ್ಯಯನದ ವಿಷಯ**

ಬಳ್ಳಾರಿ ಜಿಲ್ಲೆಯಲ್ಲಿರುವ ಏಳು ತಾಲೂಕುಗಳಲ್ಲಿ ಹೂವಿನಹಡಗಲಿ ತಾಲೂಕು ಒಂದು. ಇದು ಜಿಲ್ಲಾ ಕೇಂದ್ರದಿಂದ ನೈರುತ್ಯಕ್ಕಿದ್ದು, ಹಲವು ರೀತಿಯ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಹಿರೇಹಡಗಲಿ, ಹೂವಿನಹಡಗಲಿ, ಇಟಗಿ ಈ ತಾಲೂಕಿನ ಹೋಬಳಿ ಕೇಂದ್ರಗಳಾಗಿವೆ. ಇದು ಕರ್ನಾಟಕ ರಾಜ್ಯದ ರಾಜಧಾನಿ ಬೆಂಗಳೂರಿನಿಂದ ೩೪೧ ಕಿ.ಮೀ. ದೂರದಲ್ಲಿ ಹಾಗೂ ಜಿಲ್ಲಾ ಕೇಂದ್ರದಿಂದ ನೈರುತ್ಯಕ್ಕೆ ೧೫೦ ಕಿ.ಮೀ. ದೂರದಲ್ಲಿದೆ.[೧] ಪೂರ್ವದಲ್ಲಿ ಹಗರಿಬೊಮ್ಮನಹಳ್ಳಿ, ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕು ಮತ್ತು ಉತ್ತರಕ್ಕೆ ಗದಗ ಜಿಲ್ಲೆಯ ಮುಂಡರಗಿ ತಾಲೂಕು ಹಾಗೂ ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕುಗಳು ಸುತ್ತುವರಿದಿದ್ದು, ತಾಲೂಕಿನ ಗಡಿಗಳಾಗಿವೆ. ತಾಲೂಕಿನ ದಕ್ಷಿಣ ಮತ್ತು ಪಶ್ಚಿಮದ ಅಂಚಿನಲ್ಲಿ ಗಡಿಯಾಗಿ ತುಂಗಭದ್ರಾ ನದಿ ತಾಲೂಕು ಕೇಂದ್ರದಿಂದ ೮ ಕಿ.ಮೀ. ದೂರದಲ್ಲಿ ಹರಿಯುತ್ತದೆ. ತುಂಗಭದ್ರಾ ನದಿಯು ಹೂವಿನಹಡಗಲಿಯಲ್ಲಿ ಹರಿಯುವುದರ ಮೂಲಕ ಇಲ್ಲಿನ ರೈತರ ಮತ್ತು ಜನರ ಜೀವನದಿಯಾಗಿ ಕುಡಿಯುವ ನೀರಿನ ಅವಶ್ಯಕತೆಯನ್ನು ಪೂರೈಸುತ್ತಿದೆ.

ಹೂವಿನಹಡಗಲಿ ತಾಲೂಕಿನ ಒಟ್ಟು ಭೌಗೋಳಿಕ ಕ್ಷೇತ್ರ ೨,೩೪,೩೧೭.೧೭ ಚದರ ಕಿ.ಮೀ. ಈ ತಾಲೂಕನ್ನು ಆಡಳಿತದ ಅನುಕೂಲಕ್ಕಾಗಿ ಹೂವಿನಹಡಗಲಿ (೯೯,೪೦೬.೮೭), ಹಿರೇಹಡಗಲಿ (೬೮,೨೬೨.೧೮), ಇಟಗಿ(೬೬,೬೪೮.೧೨) ಮೂರು ಹೋಬಳಿಗಳಾಗಿ ವಿಂಗಡಿಸಲಾಗಿದೆ.[೨] ೨೦೧೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೧,೯೫,೨೧೯ರಷ್ಟು ಇದೆ(ಗಂಡು-೯೮,೮೫೩ ಹೆಣ್ಣು-೯೬,೩೬೬). ಹಡಗಲಿ ತಾಲೂಕಿನ ಉತ್ತಮ ಭೌಗೋಳಿಕ ಪರಿಸರವು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ವಾಸಕ್ಕೆ ಅವಕಾಶ ಕಲ್ಪಿಸಿಕೊಟ್ಟಿದೆ. ಈ ತಾಲೂಕಿಗೆ ಭಾರತದ ಚರಿತ್ರೆಯಲ್ಲಿ ಮಹತ್ವದ ಸ್ಥಾನವಿದೆ. ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಇದು ತನ್ನದೇ ಆದ ಪಾತ್ರ ನಿರ್ವಹಿಸಿದೆ. ದಕ್ಷಿಣ ಭಾರತದ ಇತಿಹಾಸದಲ್ಲಿಯೇ ಅತಿ ಮಹತ್ವ ಪಡೆದಿರುವ ವಿಜಯನಗರ ಸಾಮ್ರಾಜ್ಯ ಹುಟ್ಟಿ, ಬೆಳೆದು, ಅವಸಾನಗೊಂಡಿದ್ದು ಹಡಗಲಿಗೆ ಅತಿ ಸಮೀಪದಲ್ಲಿರುವ ಹಂಪಿಯಲ್ಲಿ. ಇದಕ್ಕೆ ಆಸರೆಯಾಗಿ ನಿಂತಿದ್ದು ಇಲ್ಲಿನ ತುಂಗಭದ್ರಾ ನದಿ ಮತ್ತು ಇಲ್ಲಿನ ಭೌಗೋಳಿಕ ಪರಿಸರ.

ಹೂವಿನಹಡಗಲಿ ತಾಲೂಕಿನ ವಿವಿಧ ಪ್ರದೇಶಗಳು ಬಹು ಹಿಂದಿನಿಂದಲೂ ಜನವಸತಿಗೆ ಯೋಗ್ಯವಾದ ಪ್ರದೇಶಗಳಾಗಿವೆ. ಇಲ್ಲಿನ ಫಲವತ್ತಾದ ಭೂಮಿ, ಉತ್ತಮ ಭೌಗೋಳಿಕ ಪರಿಸರ ಅನ್ಯರ ದಾಳಿಗೆ ಸುಲಭವಾಗಿ ತುತ್ತಾಗದ ಹಾಗೆ ಇದ್ದು ಮಾನವ ಚರಿತ್ರೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಇದರಿಂದಾಗಿ ಪ್ರಾಗೈತಿಹಾಸಿಕ ಮಾನವರು ಹಡಗಲಿ ಪರಿಸರದ ವಿವಿಧ ನೆಲೆಗಳಲ್ಲಿ ಹಿಂದಿನಿಂದಲೂ ವಾಸಿಸುತ್ತಾ ಬಂದಿದ್ದಾರೆ. ಪ್ರತಿಯಾಗಿ ಹಲವು ಕುರುಹುಗಳನ್ನು ಇಲ್ಲಿ ಬಿಟ್ಟು ಹೋಗಿದ್ದಾರೆ. ಇವು ಅಂದಿನ ಸಂಸ್ಕೃತಿಯನ್ನು, ಅವರ ಜೀವನಶೈಲಿಯನ್ನು ಅರಿಯಲು ಏಕಮೇವ ಆಧಾರಗಳಾಗಿವೆ. ಈ ಪರಿಸರದಲ್ಲಿ ಪ್ರಾಗೈತಿಹಾಸಿಕ ಮಾನವರಿಗೆ ಸೇರಿದ ಸುಮಾರು ೨೦ಕ್ಕೂ ಹೆಚ್ಚು ನೆಲೆಗಳಿವೆ. ಅವುಗಳಲ್ಲಿ ಮುಖ್ಯವಾಗಿ ಕುರುವತ್ತಿ, ಅಲ್ಲಿಪುರ, ಮಾಗಳ, ಮೈಲಾರ, ರಾಜವಾಳಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕುರುಹುಗಳು ದೊರೆತಿವೆ ಹಾಗೂ ಶಿಲಾ, ತಾಮ್ರಯುಗ ಸಂಸ್ಕೃತಿಯ ಅವಶೇಷಗಳು ಅಲ್ಲಿಪುರ, ನವಲಿ, ಮಾಗಳ, ರಾಜವಾಳ, ಹುಲಿಗುಡ್ಡಗಳಲ್ಲಿ ದೊರೆತಿವೆ. ಹೂವಿನ ಹಡಗಲಿ, ಕುರುವತ್ತಿ, ಕತ್ತೆಬೆನ್ನೂರು ಮೊದಲಾದೆಡೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಕೆಲವು ಕಡೆ ಈ ನೆಲೆಗಳು ಸಾಕಷ್ಟು ದುಸ್ಥಿತಿಯಲ್ಲಿ ಇದ್ದರೆ, ಇನ್ನೂ ಕೆಲವು ಕಡೆ ಕಾಲನ ತುಳಿತಕ್ಕೆ ಸಿಕ್ಕಿ ಅವನತಿಯತ್ತ ಸಾಗಿವೆ.

ಈ ಪ್ರದೇಶವು ಕರ್ನಾಟಕದ ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದು ಕಂಡು ಬರುತ್ತದೆ. ಆಳ್ವಿಕೆ ಮಾಡಿದ ವಿವಿಧ ಅರಸು ಮನೆತನಗಳೆಂದರೆ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ದ್ವಾರಸಮುದ್ರದ ಹೊಯ್ಸಳರು, ಕುಮ್ಮಟದುರ್ಗದ ಅರಸರು, ಕುರುಗೋಡಿನ ಸಿಂಧರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ನೊಳಂಬ ಪಲ್ಲವರು, ಸೇವುಣರು, ವಿಜಯನಗರದ ಅರಸರು, ಪಾಳೆಯಗಾರರು, ಮೈಸೂರು ಒಡೆಯರು, ಸುಲ್ತಾನರು ಮತ್ತು ಬ್ರಿಟಿಷರು ಇಲ್ಲಿ ಆಳ್ವಿಕೆ ಮಾಡಿ ತಮ್ಮದೇ ಆದ ಕೊಡುಗೆಗಳನ್ನು ಈ ಪ್ರದೇಶಕ್ಕೆ ನೀಡಿದ್ದಾರೆ. ತಮ್ಮ ಅಧಿಕಾರಾವಧಿಯಲ್ಲಿ ಹಲವಾರು ಶಾಸನಗಳನ್ನು ಹೊರಡಿಸಿದ್ದಾರೆ. ಅವರು ಹೊರಡಿಸಿದ ಶಾಸನಗಳು ಅಂದಿನ ಪರಿಸ್ಥಿತಿ ಅರಿಯಲು ಮುಖ್ಯವಾದ ಆಧಾರಗಳಾಗಿವೆ. ಹಾಗೆಯೇ ಆಳ್ವಿಕೆ ಮಾಡಿದ ರಾಜರು ಇಲ್ಲವೇ ಅವರ ಸಾಮಂತರು ಹಲವಾರು ದೇವಾಲಯಗಳನ್ನು ನಿರ್ಮಿಸಿ, ಮುಂದಿನ ಪೀಳಿಗೆಗೆ ಕಲಾಕಾಣಿಕೆಗಳಾಗಿ ಬಿಟ್ಟು ಹೋಗಿದ್ದಾರೆ. ಇವು ಆ ಕಾಲದ ರಾಜರ ಇಲ್ಲವೇ ಸಾಮಂತ ಅಧಿಕಾರಿಗಳ ಸೌಂದರ್ಯಪ್ರಜ್ಞೆಯ ದ್ಯೋತಕಗಳಾಗಿವೆ. ಈ ತಾಲೂಕಿನ ಅನೇಕ ಕಡೆ ವಿವಿಧ ಧರ್ಮಗಳಿಗೆ ಸೇರಿದ ಕುರುಹುಗಳು ಕಂಡುಬರುವುದರ ಹಿನ್ನೆಲೆಯಲ್ಲಿ ಧಾರ್ಮಿಕ ಸಮನ್ವಯತೆ ಇತ್ತೆಂಬುದನ್ನು ಕಂಡುಕೊಳ್ಳಬಹುದಾಗಿದೆ.

ಪವಿತ್ರ ಪುಣ್ಯಕ್ಷೇತ್ರವೆನಿಸಿದ ಇಲ್ಲಿನ ಮೈಲಾರ, ಕುರುವತ್ತಿ, ಮಾಗಳ, ಹಡಗಲಿ ಮೊದಲಾದ ಪ್ರದೇಶಗಳು ಕೆಲವರಿಗೆ ಯಾತ್ರಾ ಕ್ಷೇತ್ರಗಳಾಗಿದ್ದರೆ, ಇನ್ನು ಕೆಲವರಿಗೆ ಭಕ್ತಿ ಮತ್ತು ಮುಕ್ತಿಯನ್ನು ಕರುಣಿಸುವ ಕ್ಷೇತ್ರಗಳಾಗಿ, ಇನ್ನೂ ಕೆಲವರಿಗೆ ಪ್ರಸಿದ್ಧ ಪ್ರವಾಸಿ ಕ್ಷೇತ್ರವಾಗಿ ಬಹು ಹಿಂದಿನಿಂದಲೂ

ಪರಿಗಣಿಸಲ್ಪಟ್ಟಿವೆ. ಅಂದಿನಿಂದ ಇಂದಿನವರೆಗೂ ಒಂದಲ್ಲ ಒಂದು ಕಾರಣಕ್ಕೆ ಇಲ್ಲಿನ ದೇವಾಲಯಗಳಿಗೆ ಅನೇಕರು ಭೇಟಿ ನೀಡುತ್ತಲೇ ಇದ್ದಾರೆ. ಇಲ್ಲಿಗೆ ಭೇಟಿ ನೀಡಿದ ಭಕ್ತಜನರು, ಪ್ರವಾಸಿಗಳು, ಅಧಿಕಾರಿಗಳು, ಯಾತ್ರಿಕರು, ವಿದ್ವಾಂಸರು ಬಹು ಹಿಂದಿನಿಂದಲೂ ಅದನ್ನು ತಮ್ಮದೇ ಆದ ದೃಷ್ಟಿಯಲ್ಲಿ ನೋಡಿದ್ದಾರೆ. ಈ ತಾಲೂಕಿನಲ್ಲಿರುವ ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿರದೆ ಖ್ಯಾತ ವಾಸ್ತುಶಿಲ್ಪ ಕೇಂದ್ರಗಳಾಗಿದ್ದು, ದೇಶೀಯರು ಮತ್ತು ವಿದೇಶಿಯರನ್ನು ಆಕರ್ಷಿಸುವ ಕೇಂದ್ರಗಳಾಗಿವೆ. ಈ ದೇವಾಲಯಗಳಲ್ಲಿನ ಮೂರ್ತಿಗಳು, ಶಿಲ್ಪಗಳು ಮತ್ತು ಈ ಪ್ರದೇಶದಲ್ಲಿ ದೊರೆತ ಶಾಸನಗಳು ಅಧ್ಯಯನದ ದೃಷ್ಟಿಯಿಂದ ಅತಿ ಮಹತ್ವದ ಸ್ಥಾನವನ್ನು ಪಡೆದಿವೆ.

ವಾಸ್ತು ಮತ್ತು ಮೂರ್ತಿಶಿಲ್ಪಗಳ ಅಧ್ಯಯನವನ್ನು ಮಾಡುವಾಗ ವಾಸ್ತು ಮತ್ತು ಮೂರ್ತಿಶಿಲ್ಪಗಳ ಬದಲಾವಣೆಯ ಹಂತಗಳನ್ನು ಆಯಾ ಕಾಲದ ರಾಜವಂಶಜರ ಹೆಸರಿನೊಂದಿಗೆ ಸಮೀಕರಿಸಲಾಗುತ್ತದೆ. ಆಶ್ರಯದಾತರು ಇಲ್ಲದೇ ಯಾವುದೇ ಕಲೆ ಪ್ರವರ್ಧಮಾನಕ್ಕೆ ಬರುವುದಿಲ್ಲ. ಪ್ರಾಚೀನ ಭಾರತದಲ್ಲಿ ಬಹುಪಾಲು ಎಲ್ಲಾ ಕಲಾಪ್ರಕಾರಗಳು ಹುಟ್ಟಿ ಬೆಳೆದಿದ್ದು ರಾಜಾಶ್ರಯದಲ್ಲಿಯೇ. ಹಾಗಾಗಿ ಆಯಾ ರಾಜಮನೆತನಗಳ ಏಳು-ಬೀಳುಗಳ ಪ್ರಭಾವವು ಆಯಾ ಕಲಾ ಪ್ರಕಾರಗಳ ಮೇಲೂ ಆಗಿರುವುದು ಸ್ಪಷ್ಟವಾಗಿ ಗಮನಿಸಬಹುದಾದ ಅಂಶ. ಒಂದು ರಾಜ್ಯದ ನಿರ್ದಿಷ್ಟ ಅವಧಿಯ ಸಮೃದ್ಧಿ, ಸ್ಥಿರತೆ, ಅರಸನಾದವನ ಕಲಾಭಿರುಚಿ, ಧರ್ಮಬುದ್ಧಿ ಇವು ಆಯಾ ಕಾಲದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಬಿಂಬಿಸುತ್ತವೆ.

ಕರ್ನಾಟಕದ ವಾಸ್ತುಶಿಲ್ಪವನ್ನಾಗಲಿ ಅಥವಾ ಭಾರತೀಯ ವಾಸ್ತುಶಿಲ್ಪವನ್ನಾಗಲಿ ವಿಂಗಡಿಸುವಾಗ ಮೊದಲಿಗೆ ಅರಸು ಮನೆತನಗಳನ್ನು ಗಮನದಲ್ಲಿಟ್ಟುಕೊಂಡು, ಅನಂತರ ಅವುಗಳನ್ನು ಧರ್ಮದ ದೃಷ್ಟಿಯಿಂದ ವಿಂಗಡಿಸಲಾಗುತ್ತದೆ. ಕರ್ನಾಟಕದ ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡುವಾಗ ಬಾದಾಮಿ ಚಾಲುಕ್ಯರ, ಹೊಯ್ಸಳರ, ರಾಷ್ಟ್ರಕೂಟರ, ಕಲ್ಯಾಣಚಾಲುಕ್ಯರ, ವಿಜಯನಗರದ ಅರಸರ ಹಾಗೂ ಪಾಳೆಯಗಾರರ ಕಾಲವೆಂದು ವಿಭಾಗಿಸಿ, ಆಯಾ ಕಾಲದ ವಾಸ್ತುರಚನೆಗಳ ಅಧ್ಯಯನ ಮಾಡಿರುವುದನ್ನು ಗಮನಿಸಬಹುದು.[೩] ಇದೇ ಕ್ರಮದ ಅಧ್ಯಯನವನ್ನು ಅನುಸರಿಸಿ ಹೂವಿನಹಡಗಲಿ ತಾಲೂಕಿನಲ್ಲಿರುವ ಎಲ್ಲಾ ದೇವಾಲಯಗಳನ್ನು ಮತ್ತು ಶಾಸನಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ದೇವಾಲಯಗಳು ಮುಖ್ಯವಾಗಿ ಹೊಳಗುಂದಿ, ಹೂವಿನಹಡಗಲಿ, ಹಿರೇಹಡಗಲಿ, ಮಾಗಳ, ರಂಗಾಪುರ, ಹೊಳಲು, ಮೈಲಾರ, ಕುರುವತ್ತಿ, ಕೊಂಬಳಿ, ಬಸಾಪುರ, ಸೋಗಿ, ಉತ್ತಂಗಿ, ಅಂಗೂರು, ಇಟಗಿ, ಕತ್ತೆಬೆನ್ನೂರು, ಕೊಟ್ನೆಕಲ್‌ಗಳಲ್ಲಿ ಕಂಡುಬರುತ್ತವೆ. ಕೆಲವು ಕಡೆ ಸುಸ್ಥಿತಿಯಲ್ಲಿರುವ ಹಲವು ದೇವಾಲಯಗಳಿವೆ. ಇನ್ನೂ ಕೆಲವು ದೇವಾಲಯಗಳು ಕಾಲನ ತುಳಿತಕ್ಕೆ ಸಿಕ್ಕು, ಅವನತಿಯ ಹಾದಿಯನ್ನು ಹಿಡಿದಿವೆ. ಕೆಲ ಗ್ರಾಮಗಳಲ್ಲಿ ಸಂಪೂರ್ಣವಾಗಿ ನವೀಕರಣಗೊಂಡು ಇಲ್ಲವೇ ಅಲ್ಪಸ್ವಲ್ಪ ಜೀರ್ಣೋದ್ಧಾರಗೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿವೆ.

ಇಲ್ಲಿನ ದೇವಾಲಯಗಳ ವಾಸ್ತು ಮತ್ತು ಮೂರ್ತಿಶಿಲ್ಪ ಕುರಿತಂತೆ ಸಮಗ್ರ ಅಧ್ಯಯನ ನಡೆದಿಲ್ಲ. ಈ ಕೊರತೆಯನ್ನು ತುಂಬಲು ವ್ಯವಸ್ಥಿತ ಅಧ್ಯಯನದ ಅವಶ್ಯಕತೆ ಇದೆ. ಇಲ್ಲಿ ಆಳ್ವಿಕೆ ನಡೆಸಿದ ರಾಜರು ಅಥವಾ ಸಾಮಂತ ಅಧಿಕಾರಿಗಳು ನಿರ್ಮಿಸಿದ ದೇವಾಲಯಗಳು, ಅವುಗಳ ವಾಸ್ತು ವೈಶಿಷ್ಟ್ಯ, ವಿಭಿನ್ನ ಶೈಲಿಗಳು ಮತ್ತು ಮೂರ್ತಿಗಳ ವೈಶಿಷ್ಟ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಸ್ಥೂಲವಾಗಿ ಚರ್ಚಿಸಿ ಒಂದು ಚಿತ್ರಣ ನೀಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಭಾಗದ ಶಾಸನಗಳು, ವಾಸ್ತು ಮತ್ತು ಮೂರ್ತಿಶಿಲ್ಪದ ಬಗ್ಗೆ ಅಧ್ಯಯನ ಮಾಡುವವರಿಗೆ ಮೂಲಸಾಮಾಗ್ರಿಗಳು ಸಾಕಷ್ಟು ಇವೆ. ಇವು ಕಾಲಾಂತರಗೊಂಡು, ಇಲ್ಲವೇ ಮೂಲರೂಪದಲ್ಲಿಯೇ ಇಂದಿಗೂ ಉಳಿದುಬಂದಿವೆ. ಇವುಗಳ ವ್ಯಾಪಕ ಸಮೀಕ್ಷೆ ನಡೆಯಬೇಕಿದೆ. ಇಲ್ಲಿನ ದೇವಾಲಯಗಳ ಮೇಲೆ ಇತರ ವಾಸ್ತು ಶೈಲಿಗಳ ಪ್ರಭಾವ, ಈ ದೇವಾಲಯಗಳು ಸ್ಥಳೀಯವಾಗಿ ಇತರ ರಚನೆಗಳ ಮೇಲೆ ಬೀರಿರಬಹುದಾದ ಪ್ರಭಾವ ಮತ್ತು ಬೆಳವಣಿಗೆ ಹಾಗೆಯೇ ಈ ಪ್ರದೇಶದಲ್ಲಿ ಪರಿವರ್ತಿತ ದೇವಾಲಯಗಳು, ಇಲ್ಲಿನ ವಿಭಿನ್ನ ಮತ್ತು ವಿವಿಧ ರೀತಿಯ ಮೂರ್ತಿಶಿಲ್ಪಗಳನ್ನು ಪ್ರಾಥಮಿಕವಾಗಿ ಒಂದೆಡೆ ದಾಖಲಿಸಿ ಅವುಗಳನ್ನು ತಾರ್ಕಿಕವಾಗಿ ವಿಶ್ಲೇಷಿಸಬೇಕಾದ ಅಗತ್ಯತೆ ಇದೆ.

ಶಾಸನಗಳು ಆಯಾ ಕಾಲದ ಪ್ರಮುಖ ದಾಖಲೆಗಳು. ಅವುಗಳ ಆಧಾರದ ಮೇಲೆ ತಲಸ್ಪರ್ಶಿ ಅಧ್ಯಯನದ ಚಿತ್ರಣ ನೀಡುವ ಪ್ರಯತ್ನವನ್ನು ಮಾಡಲಾಗಿದೆ. ಅವುಗಳಿಂದ ತಿಳಿದುಬರುವ ಮಾಹಿತಿಯು ಬಹಳಷ್ಟು ಚದುರಿದ ಹಾಗೂ ಬಿಡಿ ಮಾಹಿತಿಗಳೇ ಆದರೂ ಅವುಗಳನ್ನು ಒಂದು ಚೌಕಟ್ಟಿನಲ್ಲಿ ಪರಿಶೀಲಿಸಿದಾಗ ವಿಶ್ಲೇಷಿಸಲು ನೆರವಾಗುತ್ತವೆ.

## ಅಧ್ಯಯನಗಳ ಸಮೀಕ್ಷೆ

ಹೂವಿನಹಡಗಲಿ ತಾಲೂಕಿಗೆ ಸಂಬಂಧಿಸಿದಂತೆ ಕೆಲವೊಂದು ಅಧ್ಯಯನಗಳು ನಡೆದಿವೆ. ಈ ಕುರಿತಂತೆ ಕೆಲವು ಕೃತಿಗಳು ಈಗಾಗಲೇ ಪ್ರಕಟಗೊಂಡಿದ್ದು ಆ ಕುರಿತ ವಿವರ ಇಲ್ಲಿದೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ "ಕಲ್ಯಾಣ ಚಾಲುಕ್ಯರ ಶಾಸನಗಳು ಸಂಪುಟ–೧"ರಲ್ಲಿ ಈ ಭಾಗದ ಕೆಲ ಶಾಸನಗಳನ್ನು ಉಲ್ಲೇಖಿಸಿದ್ದಾರೆ.[೪] ಹಡಗಲಿ ಭಾಗದಲ್ಲಿನ ಕೆಲ ಶಾಸನಗಳು "ಸೌಥ್ ಇಂಡಿಯನ್ ಇನ್ಸ್ಕ್ರಿಪ್ಷನ್" ಮತ್ತು "ಇಂಡಿಯನ್ ಆ್ಯಂಟಿಕ್ವೆರಿ"ಯಲ್ಲಿ ಪ್ರಕಟವಾಗಿವೆ. ಚೆನ್ನಬಸಪ್ಪ ಎಸ್. ಪಾಟೀಲ್ ಮತ್ತು ವಿನೋದ ಪಾಟೀಲ್ ಸಂಪಾದಿಸಿರುವ "ಬಳ್ಳಾರಿ ಜಿಲ್ಲೆಯ ಶಾಸನಸೂಚಿ"ಯಲ್ಲಿ ಹಾಗೂ ಇಲ್ಲಿನ ಶಾಸನಗಳನ್ನು[೫] "ಇನ್ಸ್ಕ್ರಿಪ್ಷನ್ಸ್ ಆಫ್ ಬಳ್ಳಾರಿ ಡಿಸ್ಟ್ರಿಕ್ಟ್" ಹಾಗೂ ಕನ್ನಡ ವಿಶ್ವವಿದ್ಯಾಲಯ ಹೊರತಂದಿರುವ "ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ"ಯಲ್ಲಿ ಈ ಭಾಗದ ಶಾಸನಗಳನ್ನು ಪ್ರಕಟಿಸಲಾಗಿದೆ.[೬] ಕರಣಂ ವಿರುಪಾಕ್ಷಗೌಡರು ತಮ್ಮ "ಹೂವಿನಹಡಗಲಿ ತಾಲೂಕಿನ ಶಾಸನಗಳ ಸಮಗ್ರ ಅಧ್ಯಯನ" ಗ್ರಂಥದಲ್ಲಿ ಇಲ್ಲಿನ ಶಾಸನಗಳ ಹೊಸಗನ್ನಡ ಅನುವಾದಗಳನ್ನು ನೀಡಿ ಕೆಲ ಶಾಸನಗಳ ಮೇಲೆ ವಿಶೇಷ ಅಧ್ಯಯನ ಮಾಡಿದ್ದಾರೆ. ಮೈಸೂರು ಪುರಾತತ್ವ ಇಲಾಖೆಯ ವಿವಿಧ

ವಾರ್ಷಿಕ ವರದಿಗಳಲ್ಲಿ ಈ ಭಾಗದ ಕೆಲವು ದೇವಾಲಯಗಳ ವಾಸ್ತು, ಕಲೆ ಮತ್ತು ಶಾಸನಗಳ ಕುರಿತು ಪ್ರಕಟಿಸಲಾಗಿದೆ.[೭] ಇವುಗಳಲ್ಲಿ ಪ್ರಮುಖ ಶಾಸನ, ದೇವಾಲಯಗಳ ಮತ್ತು ಮೂರ್ತಿಗಳ ಛಾಯಾಚಿತ್ರ, ತಲನಕ್ಷೆಗಳನ್ನು ನೀಡಲಾಗಿದೆ. ಸಿ.ಎಸ್. ಪಾಟೀಲ್ ಅವರು ತಮ್ಮ "ಟೆಂಪಲ್ಸ್ ಇನ್ ರಾಯಚೂರು ಆ್ಯಂಡ್ ಬಳ್ಳಾರಿ ಡಿಸ್ಟ್ರಿಕ್ಟ್" ಎಂಬ ಗ್ರಂಥದಲ್ಲಿ ಈ ಭಾಗದ ಕೆಲವು ದೇವಾಲಯಗಳ ಅಧ್ಯಯನ ಮಾಡಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರುಗಳಾದ ಕೆ.ಎಂ. ಸುರೇಶ್, ವಾಸುದೇವ ಬಡಿಗೇರ, ಎಸ್.ವೈ. ಸೋಮಶೇಖರ್ ಮತ್ತು ಎಂ. ಕೊಟ್ರೇಶ್ ಅವರುಗಳು "ಬಳ್ಳಾರಿ ಜಿಲ್ಲೆಯ ದೇವಾಲಯ ಕೋಶ"ದಲ್ಲಿ ಈ ಭಾಗದ ಕೆಲವು ದೇವಾಲಯಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಕೆ.ಎಂ.ಸುರೇಶ್ ಅವರು "ಟೆಂಪಲ್ಸ್ ಆಫ್ ಕರ್ನಾಟಕ" ಸಂಪುಟ-೧ರಲ್ಲಿ ಮತ್ತು ಅಲೆಕ್ಸಾಂಡರ್ ರೇ ಅವರು "ಕಲ್ಯಾಣ ಚಾಲುಕ್ಯ ಟೆಂಪಲ್ಸ್" ಕೃತಿಯಲ್ಲಿ ಇಲ್ಲಿನ ಕೆಲವು ದೇವಾಲಯಗಳ ಉಲ್ಲೇಖ ಮಾಡಿದ್ದಾರೆ. ಕರ್ನಾಟಕ ಸರ್ಕಾರ ಪ್ರಕಟಿಸಿರುವ "ಬಳ್ಳಾರಿ ಜಿಲ್ಲೆಯ ಗ್ಯಾಜೆಟಿಯರ್ಸ್"ನಲ್ಲಿ ಇಲ್ಲಿನ ಕೆಲ ಐತಿಹಾಸಿಕ ಸ್ಥಳಗಳ ವಿವರ ಮತ್ತು ಕೆಲ ರಾಜಮನೆತನಗಳ ವಿವರವನ್ನು ನೀಡಲಾಗಿದೆ. ಕುಂ.ಬಾ. ಸದಾಶಿವಪ್ಪ ಅವರು "ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ" ಕೃತಿಯಲ್ಲಿ ಈ ಪ್ರದೇಶದ ವಿವಿಧ ಸ್ಥಳಗಳ ಮಾಹಿತಿ ನೀಡಿದ್ದಾರೆ. ಅದರಂತೆ ಟಿ. ಗಿರಿಜಾ ಅವರು "ಶ್ರೀ ಕುರುವತ್ತಿ ಬಸವೇಶ್ವರ ಕ್ಷೇತ್ರದರ್ಶನ" ಕೃತಿಯಲ್ಲಿ ಕುರುವತ್ತಿಯ ವೈಶಿಷ್ಟ್ಯತೆಯ ಕುರಿತು ವಿವರಿಸಿದ್ದಾರೆ. "ಪ್ರೋಟೋ ಹಿಸ್ಟಾರಿಕ್ ಕಲ್ಚರ್ ಆಫ್ ದಿ ತುಂಗಭದ್ರಾ ವ್ಯಾಲಿ" ಎನ್ನುವ ಕೃತಿಯಲ್ಲಿ ಈ ಭಾಗದ ಪ್ರಾಗೈತಿಹಾಸಿಕ ನೆಲೆಗಳ ಕುರಿತು ಎಂ.ಎಸ್. ನಾಗರಾಜರಾವ್ ದಾಖಲಿಸಿದ್ದಾರೆ. ಕೆ.ಬಿ. ಶಿವತಾರಕ್ ಅವರು "ಕರ್ನಾಟಕ ಪುರಾತತ್ವ ನೆಲೆಗಳು" ಎನ್ನುವ ಕೃತಿಯಲ್ಲಿ ಇಲ್ಲಿನ ಪ್ರಾಗೈತಿಹಾಸಿಕ ನೆಲೆಗಳನ್ನು ದಾಖಲೆ ಮಾಡಿದ್ದಾರೆ. ಎಂ.ವಿ. ವಸು ಅವರು ಕರ್ನಾಟಕದ ನಾಡುಗಳ ಬಗ್ಗೆ ಪ್ರಕಟಿಸಿರುವ ಕೃತಿಯಲ್ಲಿ ವಿಜಯನಗರ ಕಾಲದ ಈ ಭಾಗದ ನಾಡುಗಳ ವಿವರಗಳಿವೆ. ಎಸ್. ರಾಜಶೇಖರ್ ಅವರು "ವಿಜಯನಗರ ಕಲೆ ಮತ್ತು ವಾಸ್ತುಶಿಲ್ಪ"ದ ಬಗ್ಗೆ ಬರೆದಿದ್ದಾರೆ.

ರಾಜ್ಯ ಪುರಾತತ್ವ ಇಲಾಖೆಯವರು ಪ್ರತಿವರ್ಷ ಇಲಾಖೆಯ ವತಿಯಿಂದ ಪ್ರಕಟಿಸುತ್ತಿರುವ 'ವಿಜಯನಗರ ಅಧ್ಯಯನ'ದ ವಿವಿಧ ಸಂಪುಟಗಳಲ್ಲಿ ವಿಜಯನಗರ ಚರಿತ್ರೆಯ ಇತ್ತೀಚಿನ ಸಂಶೋಧನೆಗಳನ್ನು ದಾಖಲಿಸಲಾಗಿದೆ. ಜೆ.ಎಂ. ನಾಗಯ್ಯನವರು ಪ್ರಕಟಿಸಿರುವ "ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ" ಕೃತಿಯಲ್ಲಿ ಈ ಭಾಗದಲ್ಲಿ ಆಳ್ವಿಕೆ ಮಾಡಿದ ರಾಜವಂಶಗಳು, ಸಾಂಸ್ಕೃತಿಕ ವಿವರಗಳನ್ನು ದಾಖಲಿಸಿದ್ದಾರೆ. ಡಿ. ತಿಪ್ಪೇಸ್ವಾಮಿ ಅವರ "ಕೋಗಳಿ ನಾಡಿನ ಶಾಸನಗಳ ಅಧ್ಯಯನ" ಎಂಬ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಇಲ್ಲಿನ ಶಾಸನಗಳ ಕುರಿತು ಅಧ್ಯಯನ ಮಾಡಿದ್ದಾರೆ. ವಾಸುದೇವ ಬಡಿಗೇರ ಅವರ "ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೧" ಎಂಬ ಪ್ರಕಟಿತ ಕೃತಿಯಲ್ಲಿ ಇಲ್ಲಿನ ಐತಿಹ್ಯ, ಚಾರಿತ್ರಿಕ ಅಂಶ, ಕಲೆ ಮತ್ತು ವಾಸ್ತುಶಿಲ್ಪ

ಸೇರಿದಂತೆ ಸಾಂಸ್ಕೃತಿಕ ಅಂಶಗಳು ಹಾಗೂ ಜಾನಪದ ಕುರಿತಂತೆ ದಾಖಲಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಲಕ್ಷ್ಮಣ್ ತೆಲಗಾವಿ, ಮಂಜುನಾಥ ಬೇವಿನಕಟ್ಟಿ, ಸಿ.ಎಸ್. ವಾಸುದೇವನ್, ವಾಸುದೇವ ಬಡಿಗೇರ, ಎಸ್.ವೈ. ಸೋಮಶೇಖರ್, ಎಂ. ಕೊಟ್ರೇಶ್ ಹಾಗೂ ಎಚ್. ತಿಪ್ಪೇಸ್ವಾಮಿ, ಹರಿಹರ ಶ್ರೀನಿವಾಸರಾವ್, ಕರಣ ವಿಜಯೇಂದ್ರ ಇವರುಗಳು ಈ ಪರಿಸರದ ಕುರಿತು ಅಲ್ಲಲ್ಲಿ ಕೆಲ ಬಿಡಿಲೇಖನಗಳನ್ನು, ವರದಿಗಳನ್ನು ಪ್ರಕಟಿಸಿದ್ದಾರೆ. ಇನ್ನೂ ಕೆಲ ಬಿಡಿಲೇಖನಗಳು ಈ ಪ್ರದೇಶದ ಚಾರಿತ್ರಿಕ ಅಂಶಗಳ, ದೇವಾಲಯಗಳ ಕುರಿತಾಗಿ ನಿಯತಕಾಲಿಕೆ ಮತ್ತು ಸಂಸ್ಮರಣಾ ಗ್ರಂಥಗಳಲ್ಲಿ ಪ್ರಕಟವಾಗಿವೆ.

ಈ ಮೇಲೆ ಹೆಸರಿಸಲಾದ ಮತ್ತು ಇಲ್ಲಿ ಉಲ್ಲೇಖಿಸದೇ ಇರುವ ಈ ಭಾಗದ ಕುರಿತಾಗಿ ಅಧ್ಯಯನ ಮಾಡಿದ ಎಲ್ಲ ದೇಶಿ ಮತ್ತು ವಿದೇಶಿ ವಿದ್ವಾಂಸರು ಪ್ರಧಾನವಾಗಿ ಮತ್ತು ಸಮಗ್ರವಾಗಿ ಅಂದಿನ ಅವಧಿಯ ಶಿಲ್ಪ, ಶಾಸನ, ಚಿತ್ರಕಲೆ, ವೀರಗಲ್ಲು ಮತ್ತು ಮಾಸ್ತಿಕಲ್ಲು, ಹಸ್ತಪ್ರತಿ ಹಾಗೂ ಸಾಹಿತ್ಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಆಡಳಿತ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಷಯಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡದೆ, ಈ ಎಲ್ಲಾ ವಿಷಯಗಳನ್ನು ಗೌಣವಾಗಿಸಿ ಕೆಲವು ಮಿತಿಯೊಳಗೆ ಸಂಕ್ಷಿಪ್ತವಾಗಿ ಮಾತ್ರ ಅಧ್ಯಯನ ಮಾಡಿದ್ದಾರೆ. ಆದರೆ **"ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ"** ಎನ್ನುವ ಪ್ರಸಕ್ತ ವಿಷಯದ ಮೇಲೆ ಕೆಲವೇ ಕೆಲ ವಿದ್ವಾಂಸರು ಅಲ್ಲಲ್ಲಿ ಪೂರಕವಾಗಿ ತಮ್ಮ ಕೃತಿಗಳಲ್ಲಿ ತುಂಬಾ ಗೌಣವಾಗಿ ಪ್ರಸ್ತಾಪಿಸಿದ್ದಾರೆ. ಅಂದರೆ ಈ ಕುರಿತಂತೆ ಇಲ್ಲಿಯವರೆಗೆ ಈ ವಿಷಯದ ಮೇಲೆ ಯಾವುದೇ ಅಧ್ಯಯನಗಳು ವ್ಯವಸ್ಥಿತವಾಗಿ ನಡೆದಿಲ್ಲ. ಸಂಶೋಧಕರಿಂದ, ವಿದ್ವಾಂಸರಿಂದ ನಿರ್ಲಕ್ಷ್ಯಕ್ಕೆ ಒಳಗಾದ ಈ ಕ್ಷೇತ್ರದ ಮೇಲೆ ವ್ಯವಸ್ಥಿತ ಅಧ್ಯಯನ ಮಾಡಬೇಕಾದ ತುರ್ತು ಅಗತ್ಯವಿದೆ. ಇಲ್ಲಿನ ಶಾಸನಗಳ ವೈಶಿಷ್ಟ್ಯತೆ ಏನು? ಅವು ಯಾವ ಯಾವ ವಿಷಯಗಳನ್ನು ಒಳಗೊಂಡಿವೆ. ಅವುಗಳ ಸಾಂಸ್ಕೃತಿಕ ಮಹತ್ವವೇನು? ಇಲ್ಲಿರುವ ದೇವಾಲಯಗಳ ವಾಸ್ತು ವೈಶಿಷ್ಟ್ಯತೆ ಏನು? ಅವು ಚಾರಿತ್ರಿಕ ಕಾಲಘಟ್ಟದಲ್ಲಿ ನಿರ್ವಹಿಸಿದ ಪಾತ್ರವೇನು? ಅವುಗಳಲ್ಲಿನ ಸೌಂದರ್ಯಪ್ರಜ್ಞೆ ಯಾವ ಬಗೆಯದು, ಅವುಗಳನ್ನು ಜನರು ಏಕೆ ಮುಖ್ಯವೆಂದು ಪರಿಗಣಿಸುತ್ತಾರೆ ಎನ್ನುವುದನ್ನು ಪರಿಶೀಲಿಸಿ ಸಂಶೋಧನೆಗೆ ಒಳಪಡಿಸಬೇಕಾದ ಅಗತ್ಯತೆ ಇದೆ. ಇದರಿಂದ ಪ್ರಸಕ್ತ ವಿಷಯ ಕುರಿತಂತೆ ಯಾವ ಬಗೆಯಲ್ಲಿ ಇತಿಹಾಸ ಲೇಖನಶಾಸ್ತ್ರ (ಇತಿಹಾಸ ಬರವಣಿಗೆ ಕ್ರಮ) ಬೆಳವಣಿಗೆ ಆಯಿತು ಎನ್ನುವುದನ್ನು ಅರಿಯಲು ಸಹಾಯಕವಾಗುತ್ತದೆ. ಅಲ್ಲದೆ ಮುಂದಿನ ಅಧ್ಯಯನಗಳಿಗೆ ಇದು ಒಂದು ಮಾದರಿಯೂ ಆಗುತ್ತದೆ. ಆದ್ದರಿಂದ ಈ ಕುರಿತಂತೆ ವ್ಯವಸ್ಥಿತ ದಾಖಲೆಯ ಅವಶ್ಯಕತೆ ಇದೆ. ತಪ್ಪಿದಲ್ಲಿ ಚಾರಿತ್ರಿಕ ಆಕರಗಳು ಕೈತಪ್ಪಿ ಹೋಗುವ ಸಾಧ್ಯತೆ ಇದೆ.

## ಅಧ್ಯಯನದ ಉದ್ದೇಶ

ಯಾವುದೇ ಇತಿಹಾಸ ಅಧ್ಯಯನಕ್ಕೆ ಆಕರಗಳು ಬಹುಮುಖ್ಯ. ಈ ಪ್ರಸಕ್ತ ವಿಷಯವನ್ನು ಕುರಿತು ಅಧ್ಯಯನ ಮಾಡಲು ಶಾಸನಗಳು, ಸಾಹಿತ್ಯಕ ಆಕರಗಳು, ವರದಿಗಳು, ಸ್ಮಾರಕ ಅವಶೇಷಗಳು,

ಪ್ರಕಟಿತ ಗ್ರಂಥಗಳು ಮತ್ತು ಲೇಖನಗಳು ಸಹಾಯಕವಾಗಿವೆ. ಹಡಗಲಿ ತಾಲೂಕಿನ ದೇವಾಲಯ ಮತ್ತು ಶಾಸನಗಳ ಕುರಿತು ಅಧ್ಯಯನ ಮಾಡುವವರಿಗೆ ಮೂಲಸಾಮಗ್ರಿಗಳು ಸಾಕಷ್ಟಿವೆ. ಇವು ಕಾಲಾಂತರದಲ್ಲಿ ರೂಪಾಂತರಗೊಂಡು ಇಲ್ಲವೇ ಮೂಲರೂಪದಲ್ಲಿಯೇ ಇಂದಿಗೂ ಉಳಿದುಬಂದಿವೆ. ಇವುಗಳ ವ್ಯಾಪಕ ಸಮೀಕ್ಷೆ ನಡೆಯಬೇಕಿದೆ. ಹಡಗಲಿಯ ಚಾರಿತ್ರಿಕ ಹಿನ್ನೆಲೆ, ಇಲ್ಲಿನ ದೇವಾಲಯ ಮತ್ತು ಶಾಸನಗಳ ವೈಶಿಷ್ಟ್ಯತೆ ಏನು? ಸಮಾಜೋ-ಧಾರ್ಮಿಕ ಹಾಗೂ ಆರ್ಥಿಕ-ರಾಜಕೀಯ ರಂಗದಲ್ಲಿ ಅವು ನಿರ್ವಹಿಸಿರುವ ಪಾತ್ರವೇನು? ಮತ್ತು ಈ ಎಲ್ಲಾ ಅಂಶಗಳನ್ನು ವಿದ್ವಾಂಸರು ಯಾವ ಬಗೆಯಲ್ಲಿ ನೋಡಿದ್ದಾರೆ ಎಂಬುದನ್ನು ಮತ್ತು ಇಲ್ಲಿನ ಪರಂಪರೆ ಮತ್ತು ಸಂಸ್ಕೃತಿಯ ಹರಡುವಿಕೆಯಲ್ಲಾದ ಬದಲಾವಣೆ, ಅವುಗಳ ವಿಸ್ತಾರದ ಕುರಿತು ತಾರ್ಕಿಕವಾಗಿ ವಿಶ್ಲೇಷಿಸಬೇಕಾದ ಅಗತ್ಯತೆ ಇದೆ. ಈ ಹಿನ್ನೆಲೆಯಲ್ಲಿ ಈ ಪ್ರಸಕ್ತ ಅಧ್ಯಯನ ಕೈಗೊಳ್ಳಲಾಗಿದ್ದು, ಅದರ ಉದ್ದೇಶಗಳು ಹೀಗಿವೆ.

೧. ಹೂವಿನಹಡಗಲಿ ತಾಲೂಕಿನಲ್ಲಿರುವ ಒಟ್ಟು ದೇವಾಲಯ ಮತ್ತು ಶಾಸನಗಳ ಪ್ರಮಾಣವೆಷ್ಟು? ಮತ್ತು ಅವು ಯಾವ್ಯಾವ ಆಯಾಮಗಳ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಿ ಸಮಾಜದ ಬದಲಾವಣೆಗೆ ಹೇಗೆ ಕಾರಣವಾಗಿವೆ? ಅವು ನಿರ್ವಹಿಸಿದ ಪಾತ್ರಗಳೇನು ಎನ್ನುವುದನ್ನು ಪ್ರಾಥಮಿಕವಾಗಿ ಒಂದೆಡೆ ದಾಖಲಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

೨. ಮಾನವ ಸಂಸ್ಕೃತಿಯ ಏಳ್ಗೆಯಲ್ಲಿ ಹಡಗಲಿಯ ಭೌಗೋಳಿಕ ಲಕ್ಷಣಗಳು ಮತ್ತು ಅವುಗಳ ಪ್ರಭಾವ ಏನು? ಈ ಪರಿಸರದಲ್ಲಿನ ಸಂಸ್ಕೃತಿ ಮತ್ತು ಪರಂಪರೆಯ ಬೆಳವಣಿಗೆಗೆ ಇಲ್ಲಿನ ಪರಿಸರದ ಪಾತ್ರವನ್ನು ಪ್ರಾಸಂಗಿಕವಾಗಿ ವಿಶ್ಲೇಷಿಸುವುದು.

೩. ಇಲ್ಲಿ ದೊರೆಯುವ ಪ್ರಾಚ್ಯ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಪ್ರಾಗೈತಿಹಾಸಿಕ ಮಾನವರ ಜೀವನಕ್ರಮ ಮತ್ತು ವೈಶಿಷ್ಟ್ಯತೆ ಹಾಗೂ ಚಾರಿತ್ರಿಕ ಕಾಲಘಟ್ಟದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳು ಮತ್ತು ಅವರ ಕೊಡುಗೆಗಳು ಮೊದಲಾದ ವಿವರಗಳನ್ನು ವಿಶ್ಲೇಷಿಸುವುದು.

೪. ವಿವಿಧ ಕಾಲಘಟ್ಟಗಳಲ್ಲಿ ಹಡಗಲಿ ತಾಲೂಕಿನಲ್ಲಿ ನಿರ್ಮಾಣವಾಗಿರುವ ಅನೇಕ ಪ್ರಕಾರದ ದೇವಾಲಯಗಳ ವಾಸ್ತುವೈಶಿಷ್ಟ್ಯತೆಯೇನು? ಅವು ಯಾವ ಶೈಲಿಯಲ್ಲಿ ನಿರ್ಮಾಣವಾಗಿವೆ? ಅವುಗಳ ನಿರ್ಮಾಣದ ಹಿಂದಿರುವ ಕಾರಣಗಳೇನು? ಎನ್ನುವುದನ್ನು ಗುರುತಿಸಿ ದಾಖಲಿಸುವುದು ಮತ್ತು ಅವುಗಳನ್ನು ವಾಸ್ತುಶಾಸ್ತ್ರಕ್ಕನುಗುಣವಾಗಿ ಚರ್ಚಿಸುವುದು.

೫. ಇಲ್ಲಿನ ಮುಖ್ಯ ಮೂರ್ತಿಗಳ ವೈಶಿಷ್ಟ್ಯತೆ ಮತ್ತು ಅವುಗಳ ಮಹತ್ವವನ್ನು ಮೂರ್ತಿಶಾಸ್ತ್ರದ ಹಿನ್ನೆಲೆಯಲ್ಲಿ ದಾಖಲಿಸಿ ವಿಶ್ಲೇಷಿಸುವುದು.

೬. ಹಡಗಲಿ ತಾಲೂಕಿನಲ್ಲಿ ಕಾಲಾಂತರದಲ್ಲಿ ಹೊರಡಿಸಲ್ಪಟ್ಟ ಶಾಸನಗಳ ವೈಶಿಷ್ಟ್ಯತೆ, ಅವುಗಳ ಪ್ರಕಾರ, ಮಾಧ್ಯಮ, ಮಹತ್ವ ಮತ್ತು ಅವು ವಿಶದೀಕರಿಸುವ ಅಂಶಗಳ ಬಗೆಗೆ ಚರ್ಚಿಸುವುದು.

ಅವುಗಳ ನಿರ್ಮಾಣದಲ್ಲಿ ಪಾತ್ರ ವಹಿಸಿದ ವಿವಿಧ ಅಧಿಕಾರಿ ಮತ್ತು ಸಿಬ್ಬಂದಿಗಳ ಕುರಿತು ವಿವರಿಸುವುದು.

೭. ಈ ತಾಲೂಕಿನ ವಿವಿಧೆಡೆ ದೊರೆಯುವ ಅಪ್ರಕಟಿತ ಶಾಸನಗಳನ್ನು ಪ್ರಾಸಂಗಿಕವಾಗಿ ಒಂದೆಡೆ ದಾಖಲಿಸಿ ವಿಶ್ಲೇಷಿಸುವುದು. ಅವು ಮುಂದಿನ ಅಧ್ಯಯನಕಾರರಿಗೆ ಲಭ್ಯವಾಗುವಂತೆ ಮಾಡುವುದು.

೮. ಸಾಂಸ್ಕೃತಿಕ ಕೇಂದ್ರಗಳಾಗಿ ದೇವಾಲಯಗಳು ಯಾವ ರೀತಿ ಪಾತ್ರ ನಿರ್ವಹಿಸಿವೆ ಮತ್ತು ಅವು ಮನುಕುಲಕ್ಕೆ ಯಾವ ರೀತಿ ಕೊಡುಗೆ ನೀಡಿವೆ? ಅವು ಸಮಾಜೋ ಧಾರ್ಮಿಕ ಮತ್ತು ಆರ್ಥಿಕ ಹಾಗೂ ರಾಜಕೀಯ ಕೇಂದ್ರಗಳಾಗಿ ನಿರ್ವಹಿಸಿದ ಪಾತ್ರವನ್ನು ಗುರುತಿಸಿ ಅಧ್ಯಯನ ಮಾಡುವುದು.

೯. ಈ ಪ್ರದೇಶದ ಸಾಂಸ್ಕೃತಿಕ ಅಂಶಗಳಾದ ಹಬ್ಬ, ಹರಿದಿನ, ಉತ್ಸವ, ನಂಬಿಕೆ, ಆಚರಣೆ ಮೊದಲಾದ ವಿಷಯಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ಕಟ್ಟಿಕೊಡುವುದು.

೧೦. ಹೂವಿನಹಡಗಲಿಯ ಸಾಂಸ್ಕೃತಿಕ ಹಿನ್ನೆಲೆ ಅತ್ಯಂತ ಮಹತ್ವದ್ದು, ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಇಲ್ಲಿನ ಸ್ಥಳೀಯ ಪ್ರಮುಖ ಹಬ್ಬ, ಜಾತ್ರೆಗಳ ಪಾತ್ರ ಏನು? ಮೊದಲಾದ ಅಂಶಗಳನ್ನು ಪೂರಕವಾಗಿ ಚರ್ಚಿಸುವುದು.

ಪ್ರಕಟಿತ ಮತ್ತು ಮತ್ತು ಅಪ್ರಕಟಿತ ಮಾಹಿತಿಗಳನ್ನು ಅನುಸರಿಸಿ ಇಲ್ಲಿನ ದೇವಾಲಯ ಮತ್ತು ಶಾಸನಗಳ ಸಂಸ್ಕೃತಿಯ ಹರಿವು, ಬೆಳವಣಿಗೆ ಮತ್ತು ವಿಸ್ತಾರಗಳನ್ನು ದಾಖಲಿಸುವುದು.

**ಅಧ್ಯಯನ ವಿಧಾನ**

ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕಾಗುತ್ತದೆ. ನಿರ್ದಿಷ್ಟವಾದ ವ್ಯಾಪ್ತಿಯು ವಿಷಯದ ಅಧ್ಯಯನಕ್ಕೆ ಅನುಕೂಲತೆಯನ್ನು ಮಾಡಿ ಕೊಡುತ್ತದೆ. ಅದರಂತೆ "ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ" ಎಂಬ ವಿಷಯದ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಆಕರ ವ್ಯಾಪ್ತಿ, ಸ್ಥಳ ವ್ಯಾಪ್ತಿ ಮತ್ತು ಕಾಲ ವ್ಯಾಪ್ತಿ ಎಂದು ಮೂರು ರೀತಿಯಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ.

**ಅ. ಆಕರ ವ್ಯಾಪ್ತಿ:** ಹಡಗಲಿ ತಾಲೂಕಿಗೆ ಸಂಬಂಧಿಸಿದಂತೆ ಈವರೆಗೆ ಪ್ರಕಟವಾದ ಸಾಹಿತ್ಯ, ಚರಿತ್ರೆಗೆ ಸಂಬಂಧಿಸಿದ ಪ್ರಕಟಿತ ಕೃತಿಗಳು ಮತ್ತು ಅಪ್ರಕಟಿತ ಸಂಶೋಧನ ಪ್ರಬಂಧಗಳು, ಶಾಸನಗಳು, ಸ್ಮಾರಕ ಮತ್ತು ಸ್ಮಾರಕ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಈ ಅಧ್ಯಯನ ಮಾಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಅಲ್ಲಿಯ ಸ್ಥಳೀಯರನ್ನು ಹಾಗೂ ವಿದ್ವಾಂಸರನ್ನು ಸಂದರ್ಶನ ಮಾಡಿ ಪ್ರಸ್ತುತ ವಿಷಯದ ಬಗ್ಗೆ ಚರ್ಚೆ ಮಾಡಿ ಅವಶ್ಯಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

**ಆ. ಸ್ಥಳ ವ್ಯಾಪ್ತಿ:** ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಇಂದಿನ ಹಡಗಲಿ ತಾಲೂಕಿಗೆ ಸೇರಿದ ಸುಮಾರು ೮೦ ಹಳ್ಳಿಗಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಪ್ರದೇಶಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಪೂರಕವಾದ ಮಾಹಿತಿಗಳನ್ನು ಪಡೆಯಲಾಗಿದೆ.

**ಇ. ಕಾಲ ವ್ಯಾಪ್ತಿ:** ಪ್ರಸ್ತುತ ಅಧ್ಯಯನವನ್ನು ಮಾನವನ ಉಗಮದಿಂದ ಪಾಳೆಯಗಾರರ ಅಂತ್ಯದವರೆಗಿನ ಕಾಲಕ್ಕೆ ಮಾತ್ರ ಪ್ರಾಸಂಗಿಕವಾಗಿ ಸೀಮಿತಗೊಳಿಸಲಾಗಿದೆ. ಅಂದರೆ ಹಡಗಲಿ ತಾಲೂಕಿನ ದೇವಾಲಯ ಮತ್ತು ಶಾಸನಗಳನ್ನು ನಿರ್ವಚಿಸುವಾಗ ಅವುಗಳನ್ನು ಚಾರಿತ್ರಿಕ ಆರಂಭ ಕಾಲದಿಂದ ಹಿಡಿದು ಕ್ರಿ.ಶ.೧೬-೧೭ನೇ ಶತಮಾನದವರೆಗಿನ ಕಾಲಕ್ಕೆ ಮಿತಿಗೊಳಿಸಿಕೊಂಡು ಅಧ್ಯಯನ ಮಾಡಲಾಗಿದೆ.

ವರದಿಗಳು, ಗ್ಯಾಜೆಟಿಯರ್‌ಗಳು ಮತ್ತು ಪ್ರಕಟಿತ ಕೃತಿಗಳ ನೆರವಿನಿಂದ ಈ ತಾಲೂಕಿನಲ್ಲಿ ಕಂಡುಬರುವ ದೇವಾಲಯಗಳ ಮತ್ತು ಈ ಪರಿಸರದಲ್ಲಿ ಕಾಣಬರುವ ಸಂಸ್ಕೃತಿಯ ಕೇಂದ್ರಗಳಾದ ಪ್ರಾಗೈತಿಹಾಸಿಕ ನೆಲೆಗಳು, ಚಾರಿತ್ರಿಕ ನೆಲೆಗಳು, ಹಬ್ಬ, ಜಾತ್ರೆ ನಡೆಯುವ ದೇವಾಲಯಗಳು ಮತ್ತು ಅಲ್ಲಿ ನಡೆಯುವ ವಿಶೇಷ ಆಚರಣೆಗಳು ಹಾಗೂ ಪ್ರಮುಖ ಪ್ರವಾಸಿ ತಾಣಗಳು, ಅವುಗಳಿಗಿರುವ ಸವಲತ್ತುಗಳ ಕುರಿತು ಪಟ್ಟಿಯೊಂದನ್ನು ಮೊದಲಿಗೆ ತಯಾರಿಸಿಕೊಳ್ಳಲಾಯಿತು. ನಂತರ ತಾಲೂಕು ಕಛೇರಿ(ಮುಜರಾಯಿ ಇಲಾಖೆ), ರಾಜ್ಯ ಮತ್ತು ಕೇಂದ್ರ ಪುರಾತತ್ವ ಇಲಾಖೆಗಳಿಂದ ದೇವಾಲಯಗಳ ಬಗ್ಗೆ ಮಾಹಿತಿ ಪಡೆದು ಕ್ಷೇತ್ರಕಾರ್ಯ ಮಾಡಬೇಕಾದ ಸ್ಥಳಗಳನ್ನು ಖಚಿತಪಡಿಸಿಕೊಳ್ಳಲಾಯಿತು. ದೇವಾಲಯದ ಹೆಸರು, ಮುಖ-ದಿಕ್ಕು, ಸ್ಥಳ, ತಾಲೂಕು, ಜಿಲ್ಲೆ, ಪಂಥ, ಕಾಲಮಾನ, ತಲನಕ್ಷೆ, ದೇವಾಲಯಕ್ಕೆ ಸಂಬಂಧಿಸಿದ ಶಾಸನದ ವಿವರ, ಇತರೆ ಎಲ್ಲಾ ಅಂಶಗಳನ್ನೊಳಗೊಂಡ ಪ್ರಪತ್ರವೊಂದನ್ನು ಸಿದ್ಧಪಡಿಸಿಕೊಂಡು ನಂತರ ದೇವಾಲಯವಿರುವ ಸ್ಥಳಕ್ಕೆ ಹೋಗಿ ಅದನ್ನು ಭರ್ತಿ ಮಾಡಿಕೊಂಡು ಬರಲಾಯಿತು. ಕ್ಷೇತ್ರಕಾರ್ಯದ ವೇಳೆ ದೇವಾಲಯ ಮತ್ತು ಶಾಸನಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ಅಲ್ಲದೆ ಪರಿಣಿತರಿಂದ ದೇವಾಲಯಗಳ ತಲನಕ್ಷೆಗಳನ್ನು ತಯಾರಿಸಿಕೊಳ್ಳಲಾಯಿತು. ಸ್ಥಳದಲ್ಲಿ ದೊರೆತ ಶಿಲಾಶಾಸನಗಳ ಪಡಿಯಚ್ಚು ತೆಗೆದು ಅವುಗಳ ಆಧಾರದ ಮೇಲೆ ಶಾಸನಗಳ ಪಾಠವನ್ನು ಓದಲಾಯಿತು. ಕ್ಲಿಷ್ಟ ಹಾಗೂ ತ್ರುಟಿತ ಶಾಸನಗಳನ್ನು ತಜ್ಞ ವಿದ್ವಾಂಸರಿಂದ ಓದಿಸಿ ಅವುಗಳ ಪಾಠವನ್ನು ಸಿದ್ಧಪಡಿಸಿಕೊಳ್ಳಲಾಯಿತು. ಅಲ್ಲದೇ ದೊರೆತ ಶಾಸನಗಳು ಪ್ರಕಟಿತವೋ ಅಥವಾ ಅಪ್ರಕಟಿತವೋ ಎಂಬುದನ್ನು ಪ್ರಕಟಿತ ಶಾಸನ ಪಠ್ಯದೊಂದಿಗೆ ತಾಳೆ ನೋಡಿ ಖಚಿತಪಡಿಸಿಕೊಳ್ಳಲಾಯಿತು. ಈ ಮೊದಲು ಪ್ರಕಟಿತ ಗ್ರಂಥಗಳಿಂದ ಸಂಗ್ರಹಿಸಲಾದ ಟಿಪ್ಪಣಿ ಇತ್ಯಾದಿ ಮಾಹಿತಿಗಳನ್ನೆಲ್ಲಾ ಕಲೆಹಾಕಿ ತಾತ್ವಿಕವಾಗಿ ಚಿಂತಿಸಿ ಈ ಪ್ರಬಂಧವನ್ನು ಸಿದ್ಧಪಡಿಸಲಾಯಿತು. ಶಾಸನಗಳು ಮತ್ತು ಪ್ರಕಟಿತ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಕೆಲವು ಸ್ಥಳಗಳಲ್ಲಿ ದೇವಾಲಯಗಳಿದ್ದ ಬಗ್ಗೆ ಯಾವುದೇ ಸ್ಪಷ್ಟ ಸುಳಿವುಗಳು ದೊರಕುವುದಿಲ್ಲ. ಆದರೂ ಶಾಸನಗಳಲ್ಲಿ ಉಲ್ಲೇಖವಾಗಿರುವ ಕೆಲವು ಸ್ಪಷ್ಟ ಮಾಹಿತಿ ಅನುಸರಿಸಿ, ಆ ಸ್ಥಳಗಳಲ್ಲಿ ದೇವಾಲಯಗಳಿದ್ದಿರ

ಬಹುದೆಂದು ಊಹಿಸಲಾಗಿದೆ. ದೇವಾಲಯಗಳಲ್ಲಿ ದೊರೆಯುವ ಶಾಸನಗಳ ಆಧಾರದ ಮೇಲೆ ಅನೇಕ ಕಡೆ ಅವುಗಳ ಕಾಲವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಕ್ಷೇತ್ರ ಪರಿವೀಕ್ಷಣಾ ಕಾಲದಲ್ಲಿ ತೆಗೆದ ಛಾಯಾಚಿತ್ರಗಳು ಮತ್ತು ಸಂದರ್ಶನಕಾರರಿಂದ ಪಡೆದ ಮಾಹಿತಿಗಳು ಈ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸುತ್ತವೆ. ಹೀಗೆ ಶಾಸನಗಳ ಆಧಾರದ ಮೇಲೆ ದೇವಾಲಯಗಳನ್ನು ಗುರುತಿಸಲು ಪ್ರಯತ್ನಿಸಿದಾಗ ಅವುಗಳ ಹರವು ವಿಸ್ತಾರವಾಗಿರುವುದು ಕಂಡುಬಂದಿದೆ. ಪ್ರಸ್ತುತ ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಪೂರಕ ಸಾಮಗ್ರಿಯೆಂದು ಪರಿಗಣಿಸಿ, ರಾಜವಂಶಗಳ ಮೇಲೆ ಬರೆದಿರಬಹುದಾದ ಚಾರಿತ್ರಿಕ ಗ್ರಂಥಗಳಲ್ಲದೆ, ವಾಸ್ತು ಮತ್ತು ಮೂರ್ತಿಗಳ ಕುರಿತು ರಚಿತವಾಗಿರುವ ಕೃತಿಗಳನ್ನು ಮತ್ತು ಕೆಲವು ನಿಯತಕಾಲಿಕೆಗಳಲ್ಲಿ ಬಂದಿರುವ ಬಿಡಿ ಲೇಖನಗಳನ್ನು ಗಮನಿಸಿ, ವಿವರ ಪಡೆಯಲಾಗಿದೆ. ಈ ಕ್ಷೇತ್ರದ ಮೇಲೆ ರಚಿತವಾಗಿರುವ ಕೆಲ ಅಪ್ರಕಟಿತ ಲೇಖನಗಳನ್ನು ಅಭ್ಯಸಿಸಲಾಗಿದೆ. ಇವುಗಳ ಆಧಾರದ ಮೇಲೆ ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಸಂಶೋಧಿಸಿದ ಮಾಹಿತಿಯನ್ನು ಪೂರಕ ಸಾಮಾಗ್ರಿಯಾಗಿ ಪರಿಗಣಿಸುವುದರೊಂದಿಗೆ, ಪೂರಕ ಮಾಹಿತಿಗಳನ್ನು ಪ್ರಕಟಿತ ಕೃತಿಗಳಿಂದ, ವರದಿಗಳು ಹಾಗೂ ನಿಯತಕಾಲಿಕೆ, ಸಂಸ್ಮರಣಾ ಗ್ರಂಥಗಳಿಂದ ಸಂಗ್ರಹಿಸಲಾಗಿದೆ. ಅಲ್ಲದೇ ಈ ಕ್ಷೇತ್ರದ ವ್ಯಾಪ್ತಿಗೆ ಸಂಬಂಧಿಸಿದ ಅಪ್ರಕಟಿತ ಬರಹ ಹಾಗೂ ಹಸ್ತಪ್ರತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳುವುದರ ಮೂಲಕ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಯನ ಸ್ವರೂಪ**

ಅಧ್ಯಯನದ ಅನುಕೂಲಕ್ಕಾಗಿ ಪ್ರಸಕ್ತ ವಿಷಯವನ್ನು ಏಳು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಸಮೀಕ್ಷೆ, ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಅಧ್ಯಯನದ ಸ್ವರೂಪ ಕುರಿತಂತೆ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹೂವಿನಹಡಗಲಿ ತಾಲೂಕಿನ ಭೌಗೋಳಿಕ ಹಿನ್ನೆಲೆಯಲ್ಲಿ ಭೌಗೋಳಿಕ ಲಕ್ಷಣಗಳು, ವೈಶಿಷ್ಟ್ಯತೆ ಮತ್ತು ಪ್ರಭಾವದ ಕುರಿತು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹೂವಿನಹಡಗಲಿಯ ಐತಿಹಾಸಿಕ ವಿಶ್ಲೇಷಣೆ ಕುರಿತು ವಿವರಿಸಲಾಗಿದೆ. ಪ್ರಾಗೈತಿಹಾಸಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕವನ್ನು ಆಳ್ವಿಕೆ ಮಾಡಿದ ರಾಜಮನೆತನಗಳ ಮಾದರಿಯನ್ನು ಆಧಾರವಾಗಿಟ್ಟುಕೊಂಡು, ಅವರ ಆಳ್ವಿಕೆಯ ಕಾಲಾವಧಿಯನ್ನು ವಿವಿಧ ಉಪ ಭಾಗಗಳಾಗಿ ವಿಭಾಗಿಸಿಕೊಂಡು ಅವರ ರಾಜಕೀಯ, ಆರ್ಥಿಕ, ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲಾಗಿದೆ.

ಹೂವಿನಹಡಗಲಿ ತಾಲೂಕಿನ ಶಾಸನಗಳ ವೈವಿಧ್ಯತೆ ಎನ್ನುವ ನಾಲ್ಕನೇ ಅಧ್ಯಾಯದಲ್ಲಿ ಶಾಸನಗಳ ವೈಶಿಷ್ಟ್ಯತೆ, ಪ್ರಕಾರಗಳು ಮತ್ತು ಮಹತ್ವ, ಹೂವಿನಹಡಗಲಿಯನ್ನು ಆಳ್ವಿಕೆ ಮಾಡಿದ ರಾಜಮನೆತನಗಳ ಆಳ್ವಿಕೆಯ ಕಾಲಾವಧಿಯ ದಾನಶಾಸನಗಳು, ವೀರಗಲ್ಲುಗಳು, ದಾನದ ಪ್ರಮುಖ ವಸ್ತುಗಳು ಹಾಗೂ ದಾನದ ಪರಿಕರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಹೂವಿನಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಮೂರ್ತಿಶಿಲ್ಪ ಎನ್ನುವ ಐದನೇ ಅಧ್ಯಾಯದಲ್ಲಿ ಪ್ರಮುಖ ದೇವಾಲಯಗಳ ವಾಸ್ತುವೈಶಿಷ್ಟ್ಯತೆ, ಮಹತ್ವ ಮತ್ತು ಪ್ರಮುಖ ಮೂರ್ತಿಶಿಲ್ಪಗಳ ಮಹತ್ವ ಎನ್ನುವ ಎರಡು ಉಪಅಧ್ಯಾಯಗಳನ್ನು ಮಾಡಿಕೊಂಡು ಅವುಗಳಲ್ಲಿ ಹೂವಿನಹಡಗಲಿ ತಾಲೂಕಿನಲ್ಲಿ ಬರುವ ದೇವಾಲಯಗಳು ಮತ್ತು ಮೂರ್ತಿಗಳ ವೈಶಿಷ್ಟ್ಯತೆ ಏನು ಎಂಬುದನ್ನು ಪ್ರತ್ಯೇಕವಾಗಿ ಧರ್ಮಗಳ ಆಧಾರದ ಮೇಲೆ ಮುಖ್ಯವಾಗಿ ವಿವರಿಸಲಾಗಿದೆ. ಸಂಬಂಧಿಸಿದ ದೇವಾಲಯಗಳು ನೀಡಿದ ಕಾಣಿಕೆಗಳೇನು ಮತ್ತು ಅವುಗಳ ವಾಸ್ತುಶಿಲ್ಪ ಪ್ರಾಮುಖ್ಯತೆ ಏನು ಎನ್ನುವುದನ್ನು ಸಹ ಇದೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ದೇವಾಲಯ ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎನ್ನುವ ಆರನೇ ಅಧ್ಯಾಯದಲ್ಲಿ ಹಡಗಲಿ ತಾಲೂಕಿನ ಸಾಂಸ್ಕೃತಿಕ ಹಿನ್ನೆಲೆಯನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ಸಾಂಸ್ಕೃತಿಕ ಕೇಂದ್ರಗಳಾಗಿ ದೇವಾಲಯಗಳು ಎನ್ನುವ ಉಪಅಧ್ಯಾಯದಲ್ಲಿ ಪ್ರಾಚೀನ ಕಾಲದಿಂದ ದೇವಾಲಯಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಯಾವ ರೀತಿ ಕಾರ್ಯ ನಿರ್ವಹಿಸುತ್ತಾ ಬಂದಿವೆ ಎನ್ನುವುದನ್ನು ಕಲೆ ಮತ್ತು ವಾಸ್ತುಶಿಲ್ಪ, ಪ್ರಮುಖ ಹಬ್ಬ, ಜಾತ್ರೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಶಾಸನ ಉಲ್ಲೇಖಿತ ಸಾಂಸ್ಕೃತಿಕ ವಿವರಗಳು ಎನ್ನುವ ಮತ್ತೊಂದು ಉಪಶೀರ್ಷಿಕೆಯಡಿಯಲ್ಲಿ ಇಲ್ಲಿನ ದೇವಾಲಯಗಳಲ್ಲಿ ನಡೆಯುತ್ತಿದ್ದ ಹಬ್ಬ, ಉತ್ಸವಗಳಲ್ಲದೆ ದಿನನಿತ್ಯ ಮತ್ತು ವಿಶೇಷ ದಿನಗಳಂದು ನಡೆಯುವ ಆಚರಣೆಗಳು ಮತ್ತು ಆ ಸಾಂಸ್ಕೃತಿಕ ಪರಂಪರೆಯನ್ನು ಇಲ್ಲಿನ ಶಾಸನಗಳು ಯಾವ ಬಗೆಯಲ್ಲಿ ದಾಖಲಿಸಿವೆ ಎನ್ನುವುದನ್ನು ವ್ಯವಸ್ಥಿತವಾಗಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯವಾದ ಏಳರಲ್ಲಿ ಈ ಪ್ರಸಕ್ತ ಅಧ್ಯಯನದ ಫಲಿತಗಳನ್ನು ಸಮಾರೋಪ ಎನ್ನುವ ಶೀರ್ಷಿಕೆಯಡಿ ನೀಡಲಾಗಿದೆ.

ಅನುಬಂಧದಲ್ಲಿ ಸಂಕ್ಷೇಪಗಳು, ಪರಾಮರ್ಶನ ಗ್ರಂಥಗಳು, ಅಪ್ರಕಟಿತ ಶಾಸನಗಳು, ತಲನಕ್ಷೆಗಳು ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ.

**ಟಿಪ್ಪಣಿಗಳು**

೧. ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ್.

೨. ಅದೇ.

೩. ತಿಪ್ಪೇಸ್ವಾಮಿ ಎಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪು. ೨.

೪. ಗಂಗಾನಾಯಕ್(ಪ್ರ.ಸಂ.), 'ಕಲ್ಯಾಣ ಚಾಲುಕ್ಯರ ಶಾಸನಗಳು', ಸಂ. ೧ರಲ್ಲಿವೆ.

೫. ಪಾಟೀಲ್ ಸಿ.ಎಸ್. ಮತ್ತು ವಿನೋದ ಸಿ. ಪಾಟೀಲ್ ಅವರು 'ಇನ್ಸ್‌ಕ್ರಿಪ್ಷನ್ಸ್ ಆಫ್ ಬಳ್ಳಾರಿ ಡಿಸ್ಟ್ರಿಕ್ಟ್' ಎಂಬ ಶಾಸನ ಸಂಪುಟದಲ್ಲಿ ಈ ಭಾಗದ ಶಾಸನಗಳನ್ನು ಪ್ರಕಟಿಸಿದ್ದಾರೆ.

೬. ದೇವರಕೊಂಡಾರೆಡ್ಡಿ ಮತ್ತು ಇತರರಿಂದ ಸಂಪಾದಿಸಲ್ಪಟ್ಟ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೧ ಬಳ್ಳಾರಿ ಜಿಲ್ಲೆ' ಎಂಬ ಗ್ರಂಥದಲ್ಲಿ ಈ ಭಾಗದ ಶಾಸನಗಳನ್ನು ಉಲ್ಲೇಖಿಸಿದ್ದಾರೆ.

೭. ಎಂ.ಎ.ಆರ್. ೧೯೨೮ರಿಂದ ೧೯೪೬ರವರೆಗಿನ ವರದಿಗಳಲ್ಲಿ ಪ್ರಕಟಿಸಲಾಗಿದೆ.

□□

ಅಧ್ಯಾಯ : ಎರಡು

# ಭೌಗೋಳಿಕ ಹಿನ್ನೆಲೆ

೨.೧. ಭೌಗೋಳಿಕ ಲಕ್ಷಣಗಳು, ವೈಶಿಷ್ಟ್ಯತೆ ಮತ್ತು ಪ್ರಭಾವ

೨.೧.೧. ಮಾನವ ಸಂಪನ್ಮೂಲ

೨.೧.೨. ನೈಸರ್ಗಿಕ ಸಂಪನ್ಮೂಲ

ಅಧ್ಯಾಯ : ಎರಡು

# ಭೌಗೋಳಿಕ ಹಿನ್ನೆಲೆ

**ಪೀಠಿಕೆ**

ಮಾನವ ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಪರಿಸರ ಪ್ರಮುಖ ಪಾತ್ರ ವಹಿಸುತ್ತದೆ. ವಿವಿಧ ಅರಸುಮನೆತನಗಳ ಬೆಳವಣಿಗೆ ಮತ್ತು ಅವನತಿ, ಕೀರ್ತಿಪತಾಕೆ ಅಲ್ಲಿನ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಒಂದು ದೇಶದ ಇತಿಹಾಸವನ್ನು ತಿಳಿಯಬೇಕಾದರೆ ಮೊದಲು ಅಲ್ಲಿನ ಭೌಗೋಳಿಕ ಅಂಶಗಳಾದ ಆ ಪ್ರದೇಶದ ಸ್ಥಾನ, ಜಲಾಶಯಗಳು, ನದಿ ಕಣಿವೆಗಳು, ಕಾಡು, ಮರುಭೂಮಿ, ವಾಯುಗುಣ, ಪರ್ವತಗಳು, ಸಮುದ್ರ, ಆ ಪ್ರದೇಶದ ಆಕಾರ ಮತ್ತು ವಿಸ್ತಾರ ಇವುಗಳೆಲ್ಲವನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಇವು ಒಂದು ಪ್ರದೇಶದಲ್ಲಿನ ನಾಗರಿಕತೆ ಬೆಳೆಯುವುದಕ್ಕೆ ಮತ್ತು ಇತಿಹಾಸ ಬೆಳವಣಿಗೆಗೆ ಪೂರಕವಾಗಿರುತ್ತವೆ. ಜೊತೆಗೆ ಇವು ಸಂಸ್ಕೃತಿಯ ಬೆಳವಣಿಗೆಗೂ ಕೂಡ ಸಹಕಾರಿಯಾಗುತ್ತವೆ. ಅದಕ್ಕಾಗಿಯೇ ಕ್ರಿ.ಪೂ. ಮೂರನೆಯ ಶತಮಾನದ ಗ್ರೀಕ್ ಇತಿಹಾಸಕಾರ ಪಾಲಿಬಿಯಸ್ "ಭೌಗೋಳಿಕ ಹಿನ್ನೆಲೆಯಲ್ಲಿ ಮಾತ್ರ ಇತಿಹಾಸವನ್ನು ಸರಿಯಾಗಿ ಅರಿಯಲು ಸಾಧ್ಯ" ಎಂದಿದ್ದಾರೆ.[೧] ಭೌಗೋಳಿಕ ಲಕ್ಷಣಗಳ ಮಹತ್ವವನ್ನು ಕುರಿತಂತೆ ವೀಲ್ ಮತ್ತು ಏರಿಯಲ್ ಡ್ಯುರಾಂಟ್ ಅವರು ಈ ರೀತಿ ಹೇಳುತ್ತಾರೆ "ಮಳೆ ಬೀಳುವುದು ತೀರಾ ಅಪರೂಪವಾದರೆ ಮಧ್ಯ ಏಶಿಯಾದಲ್ಲಿ ಆದಂತೆ ನಾಗರಿಕತೆ ಮರಳು ರಾಶಿಯಲ್ಲಿ ಮಾಯವಾಗುತ್ತದೆ; ತೀರಾ ಉಗ್ರವಾಗಿ ಬಿದ್ದರೆ ಮಧ್ಯ ಅಮೆರಿಕದಲ್ಲಿ ಆದಂತೆ ನಾಗರಿಕತೆ ಕಾಡಿನೊಡನೆಯೇ ಅಡಗಿ ಹೋಗುತ್ತದೆ. ನಮ್ಮ ವೃದ್ಧಿ ಹೊಂದುತ್ತಿರುವ ವಲಯಗಳಲ್ಲಿ ಇಪ್ಪತ್ತು ಡಿಗ್ರಿಯಷ್ಟು ಸರಾಸರಿ ಉಷ್ಣ ಏರಿದರೆ ನಾವು ಮತ್ತೆ ಜಡ ನಾಗರಿಕತೆಗೆ ಸರಿದು ಬಿಡುತ್ತೇವೆ." ಈ ಹೇಳಿಕೆಯನ್ನು ಭಾರತಕ್ಕೂ ಅನ್ವಯಿಸಿಕೊಳ್ಳ ಬೇಕಾಗುತ್ತದೆ. ಏಕೆಂದರೆ ಭಾರತಕ್ಕೆ ಹಲವಾರು ಶತಮಾನಗಳ ಕಾಲದ ಇತಿಹಾಸ ಇದೆ. ಎಷ್ಟೋ ರಾಜವಂಶಸ್ಥರು ಇಲ್ಲಿ ಆಳಿದ್ದಾರೆ ಮತ್ತು ಅಳಿದು ಹೋಗಿದ್ದಾರೆ. ಹಾಗೆಯೇ ಆದಿಮಾನವನ ಚಹರೆಗಳು ಸಹ ಇಲ್ಲಿ ಕಂಡುಬರುತ್ತವೆ. ಇವುಗಳೆಲ್ಲವನ್ನು ಗುರುತಿಸದ ಹೊರತು ಭಾರತದ ಇತಿಹಾಸವನ್ನು ಕಟ್ಟಲು ಸಾಧ್ಯವಿಲ್ಲ.

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಶಾಸನಗಳು ಮತ್ತು ದೇವಾಲಯಗಳ ಸಾಂಸ್ಕೃತಿಕ ಅಧ್ಯಯನಕ್ಕೆ ತೊಡಗುವಾಗ ಅದರ ಭೌಗೋಳಿಕ ಹಿನ್ನೆಲೆಯನ್ನು ಅವಲೋಕಿಸಬೇಕಾಗುತ್ತದೆ. ಹಡಗಲಿ ಮತ್ತು ಅದರ ಸುತ್ತಲಿರುವ ಮಾನವ ವಾಸಯೋಗ್ಯ ಭೌಗೋಳಿಕ

ಪರಿಸರದಿಂದಾಗಿ, ಇಲ್ಲಿ ಬಹು ಹಿಂದಿನಿಂದ ಮಾನವ ಸಂಸ್ಕೃತಿ ರೂಪುಗೊಂಡಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಕಾಣಬರುವ ಪ್ರಮುಖ ಭೌಗೋಳಿಕ ಅಂಶಗಳು ಯಾವುವು, ಅದರ ಭೂಮೇರೆಗಳು ಯಾವುವು ಮತ್ತು ಅವು ಇಲ್ಲಿನ ಮಾನವಸಂಸ್ಕೃತಿಯ ಅಭಿವೃದ್ಧಿಯಲ್ಲಿ ಹೇಗೆ ತಮ್ಮ ಪಾತ್ರವನ್ನು ನಿರ್ವಹಿಸಿವೆ ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ.

**ಹೂವಿನಹಡಗಲಿ ತಾಲೂಕು**

'ಮಲ್ಲಿಗೆಯ ತವರೂರು' ಮತ್ತು 'ಮಲ್ಲಿಗೆಯ ನಾಡೆಂಬ' ಕೀರ್ತಿಗೆ ಪಾತ್ರವಾಗಿರುವ ಹಡಗಲಿಯು ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ನೈರುತ್ಯ ಭಾಗದಲ್ಲಿದೆ. ಇದು ೧೪°೫೪'೫೫" ಉತ್ತರ ಅಕ್ಷಾಂಶ ಮತ್ತು ೭೬°೦೦'೨೦" ಪೂರ್ವ ರೇಖಾಂಶಗಳ ನಡುವೆ ಇದೆ ಮತ್ತು ಸಮುದ್ರ ಮಟ್ಟದಿಂದ ೫೩೭ ಮೀಟರ್ ಎತ್ತರದಲ್ಲಿದೆ. ಹಡಗಲಿಯು ಪ್ರಸಕ್ತ ಪಟ್ಟಣ ಪಂಚಾಯಿತಿಯ ಕೇಂದ್ರ ಮತ್ತು ತಾಲೂಕು ಕೇಂದ್ರವೂ ಆಗಿದೆ. ಇದು ಜಿಲ್ಲಾಕೇಂದ್ರ ಬಳ್ಳಾರಿಯಿಂದ ಸುಮಾರು ೧೫೦ ಕಿ.ಮೀ. ಮತ್ತು ರಾಜಧಾನಿ ಬೆಂಗಳೂರಿನಿಂದ ೩೪೧ ಕಿ.ಮೀ. ದೂರದಲ್ಲಿದೆ. ಹಡಗಲಿಯು ಮೊದಲು ಹೋಬಳಿಯಾಗಿತ್ತು. ನಂತರ ತಾಲೂಕು ಕೇಂದ್ರವಾಗಿ ರಚಿಸಲ್ಪಟ್ಟಿತು. ಹಿಂದೆ ಹೂವಿನಹಡಗಲಿ ಎಂದು ಕರೆಯಲ್ಪಡುತ್ತಿದ್ದ ಈ ಪ್ರದೇಶದ ಹೆಸರಿನಲ್ಲಿ ಕಾಲಕ್ರಮೇಣ ಹೂವಿನ ಎಂಬ ಪದವು ಮಾಯವಾಗಿ ಹಡಗಲಿ ಎಂಬುದು ಮಾತ್ರ ಉಳಿದುಕೊಂಡಿತು. ಆದರೆ ಸರಕಾರಿ ದಾಖಲೆಗಳಲ್ಲಿ ಹೂವಿನಹಡಗಲಿ ಎಂದೇ ದಾಖಲಾಗಿದೆ. ಇಂದು ಹಡಗಲಿ, ಹಡಗ್ಲಿ ಹಾಗೂ ಹೂವಿನಹಡಗಲಿ ಎಂದು ಸಹ ಜನರ ಭಾಷೆಯಲ್ಲಿ ಬಳಕೆಯಲ್ಲಿದೆ. ಈ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣವು ೨,೩೪,೩೧೭.೧೭ ಚದರ ಕಿ.ಮೀ. ಇದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಏಳು ತಾಲೂಕುಗಳಲ್ಲಿ ಹೂವಿನಹಡಗಲಿ ತಾಲೂಕು ಒಂದಾಗಿದೆ. ಇದು ಜಿಲ್ಲಾಕೇಂದ್ರದಿಂದ ನೈರುತ್ಯ ದಿಕ್ಕಿನಲ್ಲಿದ್ದು ಹಲವು ರೀತಿಯ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಪೂರ್ವದಲ್ಲಿ ಹಗರಿಬೊಮ್ಮನಹಳ್ಳಿ, ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕು ಮತ್ತು ಉತ್ತರಕ್ಕೆ ಗದಗ ಜಿಲ್ಲೆಯ ಮುಂಡರಗಿ ತಾಲೂಕು ಹಾಗೂ ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕುಗಳು ಸುತ್ತುವರಿದಿದ್ದು, ಇವು ಈ ತಾಲೂಕಿನ ಗಡಿಗಳಾಗಿವೆ. ಈ ತಾಲೂಕಿನ ದಕ್ಷಿಣ ಮತ್ತು ಪಶ್ಚಿಮದ ಅಂಚಿನಲ್ಲಿ ತಾಲೂಕಿನ ಗಡಿಯಾಗಿ ತುಂಗಭದ್ರಾ ನದಿ ತಾಲೂಕು ಕೇಂದ್ರದಿಂದ ೮ ಕಿ.ಮೀ. ದೂರದಲ್ಲಿ ಹರಿಯುತ್ತದೆ. ತುಂಗಭದ್ರಾ ನದಿಯು ಹೂವಿನಹಡಗಲಿಯಲ್ಲಿ ಹರಿಯುವುದರ ಮೂಲಕ ಇಲ್ಲಿನ ಕೆಲವು ರೈತರ ಮತ್ತು ಈ ಭಾಗದ ಜನರ ಕುಡಿಯುವ ನೀರಿನ ಅವಶ್ಯಕತೆಯನ್ನು ಪೂರೈಸುತ್ತದೆ.

ಹೂವಿನಹಡಗಲಿ ತಾಲೂಕನ್ನು ಆಡಳಿತದ ಅನುಕೂಲಕ್ಕಾಗಿ ಹೂವಿನಹಡಗಲಿ (೯೯,೪೦೬.೮೭), ಹಿರೇಹಡಗಲಿ(೬೮,೨೬೨.೧೮), ಇಟಗಿ(೬೬,೬೪೮.೧೨) ಎಂಬ ಮೂರು ಹೋಬಳಿಗಳನ್ನಾಗಿ

ವಿಂಗಡಿಸಲಾಗಿದೆ.[2] ಇಲ್ಲಿ ೨೪ ಗ್ರಾಮ ಪಂಚಾಯ್ತಿಗಳು ಮತ್ತು ಒಟ್ಟು ೧೧೨ ಗ್ರಾಮಗಳು ಈ ತಾಲ್ಲೂಕಿನಲ್ಲಿದ್ದು, ಅದರಲ್ಲಿ ೫೬ ಗ್ರಾಮಗಳು ಕಂದಾಯ ಗ್ರಾಮಗಳಾಗಿವೆ. ೨೦೧೧ರ ಜನಗಣತಿಯ ಪ್ರಕಾರ ಇಲ್ಲಿನ ಒಟ್ಟು ಜನಸಂಖ್ಯೆ ೧,೯೫,೨೧೯ ಇದೆ(ಅದರಲ್ಲಿ ಗಂಡು-೯೮,೮೫೩ ಹೆಣ್ಣು-೯೬,೩೬೬). ಲಿಂಗಾನುಪಾತ ೯೭೦ರಷ್ಟಿದೆ.[3]

## ಜನಗಣತಿ-೨೦೧೧ ಹೂವಿನಹಡಗಲಿ ತಾಲೂಕು-ಬಳ್ಳಾರಿ ಜಿಲ್ಲೆ

| ಕ್ರಸಂ. | ವಿವರ | ಹಡಗಲಿ ತಾಲೂಕು | | ಬಳ್ಳಾರಿ ಜಿಲ್ಲೆ | |
|---|---|---|---|---|---|
| | | ೨೦೦೧ | ೨೦೧೧ | ೨೦೦೧ | ೨೦೧೧ |
| ೧. | ಕಂದಾಯ ಗ್ರಾಮಗಳು | ೫೬ | ೫೬ | ೫೨೪ | ೫೨೪ |
| ೨. | ಬೇಚಾರಕ್ ಗ್ರಾಮ | ೧ | ೧ | ೩೦ | ೩೦ |
| | ಹೋಬಳಿಗಳು | ೩ | ೩ | ೨೪ | ೨೪ |
| ೩. | ಗ್ರಾಮ ಪಂಚಾಯಿತಿಗಳು | ೨೪ | ೨೪ | ೧೮೯ | ೧೮೯ |
| | ಪಟ್ಟಣ ಪಂಚಾಯತ್ | ೧ | ೧ | ೪ | ೪ |
| ೪. | ಪ್ರದೇಶ ವ್ಯಾಪ್ತಿ ಚ.ಮೀ. | ೯೪೮ | ೯೪೮.೦೦ | ೮೪೪೭ | ೮೪೫೦ |
| | ದಶಕದ ಬೆಳವಣಿಗೆ ಪ್ರಮಾಣ ಪ್ರತಿಶತ | - | ೨೩.೧೩ | - | ೨೪.೯೨ |
| ೫. | ಒಟ್ಟು ಜನಸಂಖ್ಯೆ(ಲಕ್ಷಗಳಲ್ಲಿ) | ೧.೬೮ | ೧೯೫೨೧೯ | ೮೪೪೭ | ೨೪೫೨೫೯೫ |
| | ಪುರುಷರು(ಲಕ್ಷಗಳಲ್ಲಿ) | ೦.೮೫ | ೯೮೮೫೩ | ೪೦.೨೮ | ೧೨೩೬೯೫೪ |
| | ಮಹಿಳೆಯರು(ಲಕ್ಷಗಳಲ್ಲಿ) | ೦.೮೩ | ೯೬೩೬೬ | ೯.೯೭ | ೧೨೧೫೬೪೧ |
| ೬. | ಜನಸಾಂದ್ರತೆ ಪ್ರತಿ ಚ.ಕಿ.ಮೀ. | ೧೭೭ | ೨೧೮ | ೨೪೦ | ೩೦೦ |
| ೭ | ಲಿಂಗಾನುಪಾತ(೧೦೦೦ ಪುರುಷರಿಗೆ) | ೯೭೭ | ೯೭೦ | ೯೬೯ | ೯೭೮ |
| ೮. | ೦-೬ರ ವಯೋಮಾನದ ಒಟ್ಟು ಜನಸಂಖ್ಯೆ | ೧೪.೧೨ | ೨೫೮೨೧ | ೧೪.೮೭ | ೯೬೦ |
| | ೦-೬ರ ವಯೋಮಾನದ ಮಕ್ಕಳು ಗಂಡು | - | ೧೩೨೭೨ | - | ೧೭೪೯೪೬ |
| | ೦-೬ರ ವಯೋಮಾನದ ಮಕ್ಕಳು ಹೆಣ್ಣು | - | ೧೨೮೦೦ | - | ೧೬೬೮೫೮ |
| ೯. | ಗ್ರಾಮೀಣ ಪ್ರದೇಶದ ಜನಸಂಖ್ಯೆ(ಶೇಕಡ) | ೧೪೫೦೦೦ (೮೬.೦೦) | ೧೬೭೨೫೨ | ೧೩೨೦೨೯೦ (೬೫.೧೩) | ೧೬೧೩೦೩೮ |
| ೧೦. | ನಗರ ಪ್ರದೇಶದ ಜನಸಂಖ್ಯೆ (ಶೇಕಡ) | ೨೩೦೦೦ (೧೪.೦೦) | ೨೭೯೬೭ | ೭೦೬೮೫೦ (೩೪.೮೭) | ೯೧೯೩೪೫ |
| ೧೧. | ಪ.ಜಾ. ಜನಸಂಖ್ಯೆ(ಶೇಕಡ) | ೩೭೬೧೮ (೨೩.೩೮) | ೫೩೮೯೩ | ೩೭೪೨೧೮ (೧೮.೪೬) | ೫೧೭೪೮೯ (೨೧.೧) |
| ೧೨. | ಪ.ಪಂ. ಜನಸಂಖ್ಯೆ(ಶೇಕಡ) | ೧೩೦೭೪ (೭೭೮) | ೧೪೬೨೦ | ೩೬೪೬೩೮ (೧೭.೯೯) | ೪೫೧೪೦೬ (೧೮.೪) |
| ೧೩. | ಸಾಕ್ಷರತೆ | ೬೦.೪೩ | ೧೨೦೬೫೭ | ೫೮.೫೫ | ೬೭.೪೫ |
| | ಪುರುಷರ ಸಾಕ್ಷರತೆ | ೭೧.೬೯ | ೮.೧.೪೩ | ೭೦.೨೦ | ೭೭.೨೪ |
| | ಮಹಿಳೆಯರ ಸಾಕ್ಷರತೆ | ೪೮.೮೯ | ೬೨.೪೦ | ೪೬.೫೮ | ೫೮.೨೮ |

(೨೦೧೧-೧೨ನೇ ಸಾಲಿನ ಬಳ್ಳಾರಿ ಜಿಲ್ಲೆ ಅಂಕಿ-ಅಂಶಗಳ ನೋಟ)

ಮೊದಲು ಮುಂಬೈ ಕರ್ನಾಟಕಕ್ಕೆ ಸೇರಿದ್ದ ಬಳ್ಳಾರಿ ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ಸ್ವಾತಂತ್ರ್ಯಾನಂತರ ಎರಡು ಭಾಗಗಳಾಗಿ ಮತ್ತು ಎಂಟು ತಾಲೂಕುಗಳಾಗಿ ವಿಂಗಡಿಸಲಾಗಿತ್ತು. ಮೊದಲನೆಯದು ಬಳ್ಳಾರಿ ವಿಭಾಗ; ಇದರಲ್ಲಿ ಸಂಡೂರು, ಸಿರುಗುಪ್ಪ ತಾಲೂಕುಗಳು ಸೇರಿದ್ದವು. ಎರಡನೆಯದಾಗಿ ಹೊಸಪೇಟೆ ಉಪವಿಭಾಗ; ಇದರಲ್ಲಿ ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳು ಸೇರಿದ್ದವು. ಅಂದರೆ ೧೯೯೭ಕ್ಕೆ ಮೊದಲು ಬಳ್ಳಾರಿ ಜಿಲ್ಲೆಯು ೮ ತಾಲೂಕುಗಳನ್ನು ಹೊಂದಿತ್ತು. ಅವುಗಳೆಂದರೆ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಹಗರಿಬೊಮ್ಮನಹಳ್ಳಿ, ಹಡಗಲಿ ಮತ್ತು ಹರಪನಹಳ್ಳಿ. ೧೯೯೭ರ ನಂತರ ದಾವಣಗೆರೆ ಜಿಲ್ಲೆಯು ಹೊಸದಾಗಿ ರಚನೆಯಾಯಿತು. ಆಗ ಈ ಜಿಲ್ಲೆಗೆ ಹಡಗಲಿ ಮತ್ತು ಹರಪನಹಳ್ಳಿ ತಾಲೂಕುಗಳನ್ನು ಸೇರಿಸಬೇಕೆಂದು ಕರ್ನಾಟಕ ಸರ್ಕಾರದ ಎ.ಡಿ.ಗೋರ್ವಲ ಮತ್ತು ಪಿ.ಸಿ.ಮಹಾಲ ನೋಬಿಸ್ ಮುಂತಾದ ತಜ್ಞರನ್ನು ಒಳಗೊಂಡ ಸಮಿತಿಯು ಸೂಚಿಸಿತ್ತು. ಈ ಸೂಚನೆಗೆ ಹಡಗಲಿ ಮತ್ತು ಹರಪನಹಳ್ಳಿ ತಾಲೂಕುಗಳಿಂದ ಭಾರೀ ವಿರೋಧ ವ್ಯಕ್ತವಾಯಿತು. ಈ ವಿರೋಧದ ಮಧ್ಯೆಯೂ ಶ್ರೀ ಹುಂಡೇಕರ್ ಮತ್ತು ಗದ್ದಿಗೌಡರ್ ಸಮಿತಿಗಳು ಹರಪನಹಳ್ಳಿ ತಾಲೂಕನ್ನು ಮಾತ್ರ ದಾವಣಗೆರೆ ಜಿಲ್ಲೆಗೆ ಸೇರ್ಪಡೆಗೊಳಿಸಿತು.[೪] ಹಡಗಲಿ ತಾಲೂಕು ಬಳ್ಳಾರಿ ಜಿಲ್ಲೆಯಲ್ಲಿಯೇ ಉಳಿದು ಇಂದಿಗೂ ತಾಲೂಕು ಕೇಂದ್ರವಾಗಿ ಮುಂದುವರಿದಿದೆ. ಇಂದು ಬಳ್ಳಾರಿ ಜಿಲ್ಲೆಯು ಕೈಗಾರಿಕೆಗಳಿಂದ ತುಂಬಿಕೊಂಡಿದ್ದು, ಜಿಲ್ಲೆಯ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲೂಕುಗಳು ಗಣಿಗಾರಿಕೆಗೆ ಹೆಸರಾಗಿವೆ. ಉಳಿದಂತೆ ಕೂಡ್ಲಿಗಿ, ಸಿರುಗುಪ್ಪ, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ಗಣಿಗಾರಿಕೆಯಿಂದ ದೂರವಿದ್ದು ಇಲ್ಲಿನ ಜನರು ವ್ಯವಸಾಯವನ್ನೇ ನಂಬಿಕೊಂಡು ಜೀವಿಸುತ್ತಿದ್ದಾರೆ. ಹಡಗಲಿಯು ಇತಿಹಾಸ ಪ್ರಸಿದ್ಧ ದೇವಾಲಯಗಳನ್ನು ಹೊಂದುವುದರ ಮೂಲಕ ನಾಡಿನ ಜನರನ್ನು ತನ್ನತ್ತ ಸೆಳೆದುಕೊಂಡಿದೆ. ಹಾಗೆಯೇ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿಯೂ ಸಹ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದಿದೆ.

ಹಡಗಲಿ ತಾಲೂಕನ್ನು, ಪೂರ್ವದಲ್ಲಿ ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ, ಉತ್ತರದಲ್ಲಿ ಹಗರಿಬೊಮ್ಮನಹಳ್ಳಿ ಮತ್ತು ಹಾವೇರಿ ಜಿಲ್ಲೆಯ ಶಿರಹಟ್ಟಿ, ಪಶ್ಚಿಮದಲ್ಲಿ ಹಾವೇರಿ ಮತ್ತು ರಾಣೆಬೆನ್ನೂರು ತಾಲೂಕುಗಳು, ದಕ್ಷಿಣದಲ್ಲಿ ಹರಪನಹಳ್ಳಿ ತಾಲೂಕಿನ ಪ್ರದೇಶಗಳು ಸುತ್ತುವರಿದಿವೆ. ಹಾಗೆಯೇ ಪೂರ್ವದಲ್ಲಿ ಸಿದ್ದೇಶ್ವರ ಬೆಟ್ಟ, ಪಶ್ಚಿಮದಲ್ಲಿ ಹುಲಿಗುಡ್ಡ ಬೆಟ್ಟ, ದಕ್ಷಿಣದಲ್ಲಿ ಬೆಟ್ಟದ ಮಲ್ಲೇಶ್ವರ ಬೆಟ್ಟಗಳು ಸುತ್ತುವರೆದಿವೆ. ಉತ್ತರದಲ್ಲಿ ತುಂಗಭದ್ರೆಯು ವಿಶಾಲವಾಗಿ ಹರಿಯುತ್ತಿದ್ದಾಳೆ. ಈ ನದಿಯು ತಾಲೂಕಿನ ದಕ್ಷಿಣ ಮತ್ತು ಪಶ್ಚಿಮದ ಅಂಚಿನಲ್ಲಿ ತಾಲೂಕು ಗಡಿಯಾಗಿ ಸ್ವಲ್ಪ ದೂರ ಹರಿಯುವುದರಿಂದ ರಾಣೆಬೆನ್ನೂರು, ಹಾವೇರಿ ಮತ್ತು ಶಿರಹಟ್ಟಿ ತಾಲೂಕುಗಳನ್ನು ಹಡಗಲಿ ತಾಲೂಕಿನಿಂದ ಬೇರ್ಪಡಿಸಿರುವುದು ಕಂಡುಬರುತ್ತದೆ. ಇದು ಕಲಬುರ್ಗಿ ಕಂದಾಯ ವಿಭಾಗಕ್ಕೆ ಸೇರ್ಪಡೆಯಾಗಿದ್ದು, ಹೊಸಪೇಟೆ ಉಪವಿಭಾಗ ಮತ್ತು ಅದೇ ಆದಾಯ ವೃತ್ತದ ವ್ಯಾಪ್ತಿಯಲ್ಲಿ ಬರುತ್ತದೆ. ಇದು ಜಿಲ್ಲಾ ಪಂಚಾಯಿತಿ ಇಂಜಿನಿಯರಿಂಗ್ ಉಪವಿಭಾಗದ ಕೇಂದ್ರಬಿಂದುವೂ

ಆಗಿದೆ ಮತ್ತು ಈ ತಾಲೂಕಿನ ವಿಸ್ತೀರ್ಣ ಮತ್ತು ಜನಸಂಖ್ಯೆ ಎರಡೂ ಜಿಲ್ಲೆಯಲ್ಲಿ ಆರನೇ ಸ್ಥಾನವನ್ನು ಪಡೆದುಕೊಂಡಿದೆ. ಪ್ರಸ್ತುತ ಇಲ್ಲಿನ ಸರಾಸರಿ ತಾಪಮಾನ ೨೬.೪° ಇದ್ದು, ಆರ್ದ್ರತೆ ೭° ಇದೆ. ಅಲ್ಲದೆ ಗಾಳಿಯ ಚಲನೆ ಗಂಟೆಗೆ ೫.೫ ಕಿ.ಮೀ. ವೇಗದಲ್ಲಿರುತ್ತದೆ. ಮುಂಡರಗಿ, ಲಕ್ಷ್ಮೇಶ್ವರ, ಹೊಸಪೇಟೆ, ಗದಗ, ಹಡಗಲಿ ಸಮೀಪದ ನಗರಗಳಾಗಿವೆ. ಕನ್ನಡ ಸ್ಥಳೀಯ ಭಾಷೆಯಾಗಿದೆ. ತೆಲುಗು, ಉರ್ದು, ತಮಿಳು, ಹಿಂದಿ, ಇಂಗ್ಲಿಷ್ ಭಾಷೆಗಳನ್ನು ಬಲ್ಲವರಿದ್ದು, ಸಂದರ್ಭಾನುಸಾರ ಮಾತಾಡುತ್ತಾರೆ. ಜನರು ಬೇರೆಡೆಯಿಂದ ಇಲ್ಲಿಗೆ ಬರಲು ಬಸ್ ಮತ್ತು ರೈಲುಗಾಡಿಗಳ ಅನುಕೂಲವಿದೆ. ಹಡಗಲಿಯ ಸಮೀಪದಲ್ಲಿ ಹರಿಹರ ಮತ್ತು ರಾಣೆಬೆನ್ನೂರುಗಳಲ್ಲಿ ರೈಲ್ವೆ ನಿಲ್ದಾಣಗಳಿವೆ. ೧೦ ಕಿ.ಮೀ. ದೂರದಲ್ಲಿರುವ ರಾಣೆಬೆನ್ನೂರು ಅತಿ ಹತ್ತಿರದ ರೈಲು ನಿಲ್ದಾಣವಾಗಿದ್ದು, ಅಲ್ಲಿಂದ ಹಡಗಲಿಗೆ ಬಸ್ಸಿನಲ್ಲಿ ಬರಬಹುದು. ೧೦೩ ಕಿ.ಮೀ. ದೂರದಲ್ಲಿರುವ ಹುಬ್ಬಳ್ಳಿಗೆ ರೈಲು ಇಲ್ಲವೇ ವಿಮಾನದ ಮೂಲಕ ಬಂದು ನಂತರ ಬಸ್ ಮುಖಾಂತರ ಕೊಪ್ಪಳ ಹಾಗೂ ಮುಂಡರಗಿ ಮಾರ್ಗವಾಗಿ ತಲುಪಬಹುದು. ಬೆಂಗಳೂರು, ಮೈಸೂರಿನಿಂದ ಇಲ್ಲಿಗೆ ಬರುವವರು ಹರಿಹರದವರೆಗೆ ರೈಲು ಮೂಲಕ ಬಂದು ನಂತರ ಹರಪನಹಳ್ಳಿವರೆಗೆ ಬಸ್‌ನಲ್ಲಿ ಪ್ರಯಾಣಿಸಿ ಹಡಗಲಿ ತಲುಪಬಹುದು. ಹೊಸಪೇಟೆ ಮುಖಾಂತರ ರೈಲು ಇಲ್ಲವೇ ಬಸ್ ಬಳಸಿ ತಲುಪಬಹುದು. ರಾಜ್ಯ, ಜಿಲ್ಲಾ ಹೆದ್ದಾರಿಗಳು ಮತ್ತು ತಾಲೂಕುಗಳ ಮುಖ್ಯ ರಸ್ತೆಗಳು ಇಲ್ಲಿಂದ ಹಾದು ಹೋಗಿ ಇತರೆ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುತ್ತವೆ.[೫]

## ಹೆಸರಿನ ಹಿನ್ನೆಲೆ ಮತ್ತು ಪದನಿಷ್ಪತ್ತಿ

ಹೂವಿನಹಡಗಲಿಯು ಮಲ್ಲಿಗೆ ಹೂವಿಗೆ ದೇಶದಲ್ಲೇ ಪ್ರಸಿದ್ಧವಾಗಿದೆ. ಹಾಗಾಗಿ ಇದನ್ನು ಮಲ್ಲಿಗೆಯ ತವರೂರು ಮತ್ತು ಮಲ್ಲಿಗೆಯ ನಾಡೆಂದು ಕರೆಯಲಾಗುತ್ತದೆ. ಮಲ್ಲಿಗೆ ಹೂವಿನ ಕೃಷಿ ಬಹು ಹಿಂದಿನಿಂದ ಇಲ್ಲಿ ಜನಪ್ರಿಯವಾಗಿದೆ. ಈ ಹಿಂದೆ ವಿಜಯನಗರ ರಾಜರ ಕಾಲದಲ್ಲಿ ಈ ಊರಿನಿಂದ ತುಂಗಭದ್ರಾ ನದಿ ಮೂಲಕ ಮಲ್ಲಿಗೆ ಹೂವುಗಳನ್ನು ದೋಣಿಯಲ್ಲಿ ತುಂಬಿಕೊಂಡು ಹಂಪಿಯ ಶ್ರೀ ವಿರೂಪಾಕ್ಷ ದೇವರ ಪೂಜೆಗೆ ಪ್ರತಿನಿತ್ಯ ಕಳುಹಿಸಿಕೊಡಲಾಗುತ್ತಿತ್ತು. ಈ ರೀತಿ ಕಳುಹಿಸಿಕೊಡುತ್ತಿದ್ದ 'ಹೂವಿನ ಹಡಗಿ'ನಿಂದಾಗಿ ಈ ಊರಿಗೆ 'ಹೂವಿನಹಡಗಲಿ' ಎಂಬ ಹೆಸರು ಬಂದಿತು ಎನ್ನುವ ಅಭಿಪ್ರಾಯ ಇದೆ. ಈ ಊರಿಗೆ ಹೂವಿನಹಡಗಲಿ ಎಂದು ಹೆಸರು ಬರಲು ಈ ಊರಿನಿಂದ ಹಂಪೆಗೆ ಬರುತ್ತಿದ್ದ ಹೂಗಳು ಮಾತ್ರ ಕಾರಣ ಅಲ್ಲ. ಬದಲಾಗಿ ಇದಕ್ಕೂ ಮೊದಲೇ ಅಂದರೆ ಹಂಪಿಯಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವ ಮೊದಲೇ ಈ ಊರಿಗೆ 'ಪೂವಿನ ಪಡಂಗಿಲೆ' ಎಂಬ(ಸುಮಾರು ೩೦೦ ವರ್ಷಗಳ ಹಿಂದೆ) ಹೆಸರು ಇತ್ತೆಂದು ತಿಳಿದುಬರುತ್ತದೆ. ಕಲ್ಯಾಣಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಕಾಲದ ಕೇಶವ ಮತ್ತು ಕಲ್ಲೇಶ್ವರ ದೇವಸ್ಥಾನದ ಶಾಸನಗಳಲ್ಲಿ ಮತ್ತು ಇತರೆ ಶಾಸನಗಳಲ್ಲಿ ಇದು ಉಲ್ಲೇಖಗೊಂಡಿದೆ. ಹೂವಿನಹಡಗಲಿ ಎಂಬ ಪದವೂ ಕೂಡ ಅಲ್ಲಲ್ಲಿ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ. ಹಡಗಲಿಯಲ್ಲಿ ಕೆಲ ಶಾಸನಗಳು ದೊರೆತಿದ್ದು ಅವುಗಳಲ್ಲಿ ಊರಿನ ಹೆಸರನ್ನು ಅಥವಾ ಈ ಪ್ರದೇಶವನ್ನು 'ಪೂವಿನ

ಪಡಂಗಿಲೆ', 'ಪೂವಿನ ಪೊಸವಡಂಗಿಲೆ' ಎಂದು ಹೆಸರಿಸಿವೆ.[೬] ಪೂವಿನ ಪಡಂಗಿಲೆ ಎಂಬ ಹೆಸರೇ ಸೂಚಿಸುವಂತೆ ಅದು ಹೂದೋಟ, ಇಲ್ಲವೇ ಮಾಲೆಗಾರರಿಗೆ ಪ್ರಾಶಸ್ತ್ಯ ನೀಡಲಾಗಿದ್ದ ಸ್ಥಳ ಎಂದು ಅರ್ಥವಾಗುತ್ತದೆ. ಈ ಪದವನ್ನು ಬಿಡಿಸಿ ಬರೆದಾಗ ಪೂವು+ಇನ+ಪಡಂಗಿಲೆ ಎಂದಾಗುತ್ತದೆ. ಇಲ್ಲಿ ಪೂವು ಎಂದರೆ ಪುಷ್ಪ, ಹೂವು ಎಂದರ್ಥ. ಪಡಂಗಿಲೆ ಎಂದರೆ ತೆಪ್ಪ, ಹಡಗು ಎಂದಾಗುತ್ತದೆ. ಅಂದರೆ ತೆಪ್ಪದಲ್ಲಿ ಹೂವಿನ ರಾಶಿಯನ್ನು ತೇಲಿಬಿಡುತ್ತಿದ್ದವರ ನೆಲೆವೀಡಾಗಿತ್ತು ಎಂದು ತಿಳಿಯುತ್ತದೆ. ಜೊತೆಗೆ ತುಂಗಭದ್ರಾ ತೀರದ ಹಂಪೆಯ ವಿರೂಪಾಕ್ಷನಿಗೆ ಪೂಜೆಯ ವೇಳೆಗೆ ಮಲ್ಲಿಗೆ ಹೂವುಗಳು ತಲುಪುವಂತೆ ಪಡಂಗಿಲೆಯಲ್ಲಿ ಹೂವಿನ ರಾಶಿಯನ್ನು ತೇಲಿ ಬಿಡುತ್ತಿದ್ದರೆಂಬುದಾಗಿ ಜನರಲ್ಲಿ ಇಂದಿಗೂ ಪ್ರತೀತಿ ಇದೆ.

ಪೂವಿನ ಪಡಂಗಿಲೆಯ ಮುಂದುವರೆದ ಭಾಗವಾಗಿ ಪೂವಿನ ಪೊಸವಡಂಗಿಲೆ ಎಂಬ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಇಲ್ಲಿ ಪೊಸ ಎಂಬ ಪದದ ಉಲ್ಲೇಖವಿದೆ. ಪೊಸ ಎಂದರೆ ನೂತನ, ನವೀನ, ಚೆಲುವಾದ, ಮನೋಹರವಾದ, ಶುಭ್ರವಾದ, ಸ್ವಚ್ಛವಾದ, ಮಾಸದಿರುವ, ಅಳಿಸದಿರುವ ಎಂಬಂತಹ ಅರ್ಥಗಳಿವೆ. ಅಂದರೆ ಮಾಸದಿರುವ ಅಥವಾ ಚೆಲುವಾದ ಹೂವಿನ ರಾಶಿಯನ್ನು ತೆಪ್ಪದಲ್ಲಿ ತೇಲಿಬಿಡು ಎಂಬ ಅರ್ಥ ಬರುತ್ತದೆ. ಜೊತೆಗೆ ಹೊಸ ಹೊಸ ಹೂವುಗಳನ್ನು, ಶುಭ್ರವಾದ ಹೂವುಗಳನ್ನು ರಾಶಿ ಮಾಡಿ ಅವುಗಳನ್ನು ತೆಪ್ಪದಲ್ಲಿ ಹಾಕಿ ಹಂಪೆಯ ವಿರೂಪಾಕ್ಷ ದೇವರಿಗೆ ಕಳುಹಿಸಿಕೊಡುತ್ತಿದ್ದರು ಎಂಬ ನಂಬಿಕೆ ಜನರಲ್ಲಿದೆ.

ಹೂವಿನಹಡಗಲಿಯ ವಿಚಾರವು ಹಡಗಲಿಯ ಶಾಸನಗಳಲ್ಲಿ ಮಾತ್ರವಲ್ಲದೆ ಬೇರೆ ಬೇರೆ ತಾಲೂಕಿನ ಬೇರೆ ಬೇರೆ ಗ್ರಾಮದ ಶಾಸನಗಳಲ್ಲಿಯೂ ಪ್ರಸ್ತಾಪಗೊಂಡಿದೆ. ಕಲಬುರ್ಗಿ ಜಿಲ್ಲಾ ಸುರಪುರ ತಾಲೂಕಿನ ಏವೂರಿನಲ್ಲಿ, ಗದಗ ಜಿಲ್ಲಾ ಮುಂಡರಗಿ ತಾಲೂಕಿನ ಮಾಳದಾಲೂರಿನಲ್ಲಿ (ಆಲೂರ ಶಾಸನ–ಕ್ರಿ.ಶ.೧೯೯೧). ಹೂವಿನಹಡಗಲಿ ತಾಲೂಕಿನ ಕೊಟ್ನಕಲ್‌ನಲ್ಲಿ, ಹಗರಿಬೊಮ್ಮನಹಳ್ಳಿ ತಾಲೂಕಿನ ಏಣಗಿಯಲ್ಲಿ ಮತ್ತು ಹಡಗಲಿ ಪಟ್ಟಣದಲ್ಲಿರುವ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.[೭] ಏಣಿಗೆಯ ಹನುಮಂತದೇವರ ಗುಡಿಯ ಮುಂದಿರುವ ಶಾಸನ(೧೪.೧.೧೨೫೮) ಸೇವುಣ ಕಂದರ ದೇವನ ೧೩ನೇ ವರ್ಷದಲ್ಲಿ ಅವನು ದೇವಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದನು. ನೊಳಂಬವಾಡಿ ಕುಂತಳದೇಶದ ನಾಸಿಕದಂತಿತ್ತು. ಕೋಗಳಿ ಆ ಕುಂತಳನಾಡಿನ ಕಣ್ಣಿನಂತಿತ್ತು. ಇಂತಹ ಕೋಗಳಿ ನಾಡಿಗೆ ಸೇರಿದ ಹೂವಿನಹಡಗಲಿಯನ್ನು ಶಾಸನವು ಪೂವಿನ–ಪಡಂಗಿಲೆ (ಹೂವಿನಹಡಗಲಿ) ಎಂದು ಉಲ್ಲೇಖಿಸಿದೆ.[೮]

ಇದೇ ತಾಲೂಕಿನ ಕುರುವತ್ತಿಯಲ್ಲಿ ದೊರೆತ ಶಾಸನವು ಹಡಗಲಿಯನ್ನು ಪೂವಿನ ಪಡಂಗಿಲೆ ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ಇದು ಈ ಪ್ರದೇಶವನ್ನು ಉಲ್ಲೇಖಿಸಿದ ಮೊದಲನೆಯ ಶಾಸನವಾಗಿದೆ. ಈ ಶಾಸನದಲ್ಲಿ ತಿಳಿಸಿರುವಂತೆ ಕ್ರಿ.ಶ.೧೦೪೫ರಲ್ಲಿ ಚಾಲುಕ್ಯ ತ್ರೈಲೋಕ್ಯಮಲ್ಲ ಆಹವಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದಾಗ ಇವನ ಸಾಮಂತ ನೊಳಂಬ ಘಟೆಯಂಕಾರನ

ಮಗ ಉದಯಾದಿತ್ಯ, ಇವನ ಮಗ ಜಗದೇಕಮಲ್ಲ ಇರ್ಮಡಿ ನೊಳಂಬ ಇವನ ತಮ್ಮ ತ್ರೈಲೋಕ್ಯಮಲ್ಲ ನನ್ನಿನೊಳಂಬ ಇಲ್ಲಿನ ದೇವಾಲಯವೊಂದಕ್ಕೆ ದಾನ ನೀಡಿದ ವಿವರವಿದೆ.

ಕುರುವತ್ತಿ ಗ್ರಾಮದ ಮಲ್ಲಿಕಾರ್ಜುನ ದೇವಾಲಯದಲ್ಲಿನ ಶಾಸನದಲ್ಲಿ ಕ್ರಿ.ಶ.೧೧೦೪ರಲ್ಲಿ ಚಾಲುಕ್ಯ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಗಂಡರಾದಿತ್ಯನ ಪೊಳಲ ಅಗ್ರಹಾರದ ಮಹಾಜನಗಳು ಮನ್ನೆಯ ಬೊಪ್ಪಯ್ಯನು ಹೊಳಲನ್ನು ಸೆರೆಹಿಡಿದು ಗ್ರಾಮವನ್ನು ಸುಲಿಗೆ ಮಾಡಿ, ಬ್ರಾಹ್ಮಣರನ್ನು ಕೊಂದನೆಂದು ದೊರೆಗೆ ದೂರು ನೀಡಿದಾಗ, ದೊರೆಯು ಅವನನ್ನು ದಂಡಿಸಿ ಅವನು ಮತ್ತು ಅವನ ಸಂತತಿಯವರು ಹೊಳಲಿನ ಮನ್ನೆಯನ್ನು ಪಡೆಯದಂತೆ ಆಜ್ಞಾಪಿಸಿದನು. ಆ ಪ್ರಕಾರ ಒಪ್ಪಿ ಬೆಣೆವೂರು-೧೨, ನಿರುಗುಂದ, 'ಎರಡು ಹಡಂಗಿಲೆಗಳು', ಮಾಂಗೋಳ, ಬಿದರಹಳ್ಳಿ, ಹಹನೂರು, ಹೊನ್ನವಳ್ಳಿ, ಕುರುವತ್ತಿ ಮತ್ತು ಬಾಳ್ಗುಳಿಯನ್ನೊಳಗೊಂಡಂತೆ ೩೨ ಸಾವಿರದ ಜನರ ಸಮ್ಮುಖದಲ್ಲಿ ತ್ರಿಪುರಾಂತಕ ದೇವರ ಬಳಿ ಬೊಪ್ಪಯ್ಯನು ನೀರನ್ನು ಕುಡಿದು ನಂತರ ಈ ಕಲ್ಲನ್ನು ನಿಲ್ಲಿಸಿದನು ಎಂದು ಉಲ್ಲೇಖಿಸಲ್ಪಟ್ಟಿದೆ.[8]

ಹೂವಿನಹಡಗಲಿಯ ಹನುಮಂತ ದೇವಾಲಯದ ಆವರಣದಲ್ಲಿನ ಶಾಸನದಲ್ಲಿ "ಅಚ್ಯುತ ದೇವರಾಯನ ಕಾಲದಲ್ಲಿ 'ಹೂವಿನಹಡಗಲಿ'ಯ ಹನುಮಂತ ದೇವರಿಗೆ ಸಿರಿಯಪ್ಪನು ಭೂದಾನ ಮಾಡಿದನು" ಎಂದು ಉಲ್ಲೇಖವಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಹಡಗಲಿಯ ಶಾಸನಗಳಲ್ಲಿ ತನ್ನದೇ ಆದ ಪದನಿಷ್ಪತ್ತಿಯನ್ನು ಹೊಂದಿದ್ದು ಮೇಲಿನ ಎಲ್ಲಾ ಶಾಸನಗಳ ಉಲ್ಲೇಖಗಳಿಂದ ಮೊದಲು 'ಪೂವಿನ ಪಡಂಗಿಲೆ' ಎಂದು ಕರೆಯಲ್ಪಟ್ಟಿದ್ದು ನಂತರ ವಿಜಯನಗರದ ಅರಸರ ಕಾಲಕ್ಕೆ 'ಹೂವಿನಹಡಗಲಿ'ಯಾಗಿ ಮಾರ್ಪಟ್ಟು ಇಂದು 'ಹಡಗಲಿ' ಎಂದು ಕರೆಯಲ್ಪಡುತ್ತಿದೆ. ಇದನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಗುರುತಿಸಬಹುದು.

ಪೂವಿನಪಡಂಗಿಲೆ > ಪೊಸವಡಂಗಿಲೆ > ಪೂವಿನ ಪೊಸವಡಂಗಿಲೆ ಎಂಬ ಪದಗಳು ಎರಡು ಹಡಂಗಿಲೆ > ಹೂವಿನಹಡಗಲಿ ಎಂದಾದಂತೆ ಕಂಡುಬರುತ್ತದೆ.

ಪಲ್ಲವಪೆರ್ಮಾನಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಳಿಗೆ-೧೦೦೦, ಕುದಿಯ ಹರವಿ-೭೦, ಕರಿವಿಡಿ-೭೦ ಮತ್ತು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು. ರಾಜನು 'ಪೂವಿನ ಪಂಡಗಿಲೆಯ' ನೆಲೆವೀಡಿನಲ್ಲಿದ್ದಾಗ ಘಟ್ಟಿಯರಸನು ಕೋಗಳಿಯ ಮಠದ ಮಲೆಯಾಳ ಪಂಡಿತನ ಶಿಷ್ಯನಾದ ಜ್ಞಾನೇಶ್ವರ ಪಂಡಿತ ಅವನ ಶಿಷ್ಯನಾದ ಸೋಮೇಶ್ವರ ಪಂಡಿತನ ಕಾಲನ್ನು ತೊಳೆದು ದಾನ ನೀಡಿರುವ ಉಲ್ಲೇಖವಿದೆ.

ಕ್ರಿ.ಶ.೧೦೫೭ರ ಹಡಗಲಿಯಲ್ಲಿ ದೊರೆತ ಶಾಸನದಲ್ಲಿ 'ಪೊಸವಡಂಗಿಲೆ'ಯಲ್ಲಿ ಬೆಳೆಯುತ್ತಿದ್ದ ಪುಷ್ಪಗಳ ಬಗ್ಗೆ ವಿವರ ನೀಡುತ್ತದೆ. ಅದರ ಪ್ರಕಾರ "ಪೊಗ, ನಾಗವಲೀ ವನದಿಂದ ಸೊಗಯಿಸುವ ಪಡಂಗಿಲೆ ಎಂದೂ, ಚಂಪಕ, ಮೋಚ, ಪಾಜಳ, ಪನ, ಸಾಂಬ್ರ ಪೂಗವನ ನಾಗಲತಾಳಿಯ,

ನಗ್ರಹಾರ" ಎಂದು ಉಲ್ಲೇಖವಿದೆ. ಅಂದರೆ ಈ ಅಗ್ರಹಾರದಲ್ಲಿ ಸಾದರಿ, ಗುಲಾಬಿ, ಮಲ್ಲಿಗೆ, ಸುಗಂಧ ದ್ರವ್ಯ, ಅಡಿಕೆಮರ, ವೀಳೆಯ ಬಳ್ಳಿಗಳನ್ನು ಬೆಳೆಯುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಹೂವಿನಹಡಗಲಿ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ದೊರೆತಿರುವ ಶಾಸನದಲ್ಲಿ ಪೂವಿನಪಡಂಗಿಲೆಯ ಉಲ್ಲೇಖವಿರುವುದನ್ನು ಕಾಣುತ್ತೇವೆ. ಕ್ರಿ.ಶ.೧೦೬೨ರಲ್ಲಿ ಕಲ್ಯಾಣದಲ್ಲಿ ತ್ರೈಲೋಕ್ಯಮಲ್ಲದೇವನು(ಒಂದನೇ ಸೋಮೇಶ್ವರ) ಆಳುತ್ತಿರುವಾಗ ಆತನ ಮಗನಾದ ವಿಜಯಾದಿತ್ಯನು 'ಪೂವಿನಪಡಂಗಿಲೆ'ಯ ೧೨೦ ಮಹಾಜನಗಳು ಪೂವಿನ ಪಡಂಗಿಲೆಯ ಕಲಿದೇವಸ್ವಾಮಿಯ ದೇವಾಲಯವನ್ನು ಕಟ್ಟಲು ಕೆಸರುಗಲ್ಲು ಹಾಕಿದ ಮಾರೋಜನಿಗೆ ಭೂದಾನ ಮಾಡಿದರು ಹಾಗೂ ದೇವಾಲಯವನ್ನು ಕಟ್ಟುವ ಶಿಲ್ಪಿಗಳಿಗೆ ಕೆಲವು ತೆರಿಗೆಗಳಿಂದ ವಿನಾಯಿತಿ ನೀಡಿರುತ್ತಾರೆ ಎಂಬ ಉಲ್ಲೇಖವಿದೆ. ಇದೇ ಗ್ರಾಮದ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನದಲ್ಲಿಯೂ ಇದರ ಉಲ್ಲೇಖವಿದೆ. ಅಂದರೆ ಕ್ರಿ.ಶ.೧೦೭೧ರಲ್ಲಿ ಚಾಲುಕ್ಯ ದೊರೆ ತ್ರಿಭುವನ ಮಲ್ಲದೇವನು ಗೋವಿಂದವಾಡಿಯಿಂದ ಆಳುತ್ತಿದ್ದಾಗ ದಂಡನಾಯಕನಾದ ಚಿದ್ದಯ್ಯನು ಗೆಲುವಿನ ಉತ್ಸಾಹದಲ್ಲಿದ್ದಾಗ ಕೊಮಾರಸ್ವಾಮಿ ದ್ವೇದಿಭಟ್ಟನು ಮತ್ತು 'ಪೂವಿನ ಪಡಂಗಿಲಿಯ' ಉಳಿದ ಮಹಾಜನಗಳು ರಾಜನಲ್ಲಿಗೆ ಬಂದು ಆಶೀರ್ವದಿಸಿದರು ಎಂಬ ಉಲ್ಲೇಖವಿದೆ. ಅದೇ ರೀತಿಯಲ್ಲಿ ಹೂವಿನಹಡಗಲಿಯ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ಶಾಸನದಲ್ಲಿ ಕ್ರಿ.ಶ.೧೯೯೦ರಲ್ಲಿ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲೀಕ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಶೂರ ಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟೂರಾದ 'ಪೂವಿನ ಪೊಸವಡಂಗಿಲೆ'ಯಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ದೇವರನ್ನು ಸ್ಥಾಪಿಸಿ, ದೇವರ ಸೇವಾಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರಸತ್ರಕ್ಕಾಗಿ, ಹೂದೋಟಕ್ಕಾಗಿ ಭೂದಾನ ಮುಂತಾದವನ್ನು ಅಲ್ಲಿನ ಬ್ರಾಹ್ಮಣ ಮಹಾಜನಗಳ ಸಮ್ಮುಖದಲ್ಲಿ ದಾನ ಮಾಡಿದಳು ಎಂಬ ಉಲ್ಲೇಖವಿರುವುದನ್ನು ಕಾಣುತ್ತೇವೆ.[೧೦]

ಈ ರೀತಿ ಶಾಸನಗಳು ಹೂವಿನಹಡಗಲಿಯನ್ನು ಉಲ್ಲೇಖಿಸಿದ್ದು, ಕಾಲಕ್ರಮೇಣ ತಮ್ಮದೇ ಧಾಟಿಯಲ್ಲಿ ಆ ಊರಿನ ಹೆಸರನ್ನು ಪ್ರಯೋಗಿಸುತ್ತಿರುವುದನ್ನು ಕಾಣಬಹುದು.

### ೨.೧. ಭೌಗೋಳಿಕ ಲಕ್ಷಣಗಳು, ವೈಶಿಷ್ಟ್ಯತೆ ಮತ್ತು ಪ್ರಭಾವ

ಹೂವಿನಹಡಗಲಿಯ ಪರಿಸರ ಹಲವು ತೆರನಾದ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಮಾನವ ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಇಲ್ಲಿನ ಭೌಗೋಳಿಕ ಅಂಶಗಳು ಪ್ರಭಾವ ಬೀರಿವೆ.

#### ೨.೧.೧. ಮಾನವ ಸಂಪನ್ಮೂಲ(ಜನಸಂಖ್ಯೆ)

೨೦೧೧ರ ಜನಗಣತಿಯ ಪ್ರಕಾರ ಹಡಗಲಿ ತಾಲೂಕಿನ ಒಟ್ಟು ಜನಸಂಖ್ಯೆ ೧,೯೫,೨೧೯ ರಷ್ಟಿದೆ. ಇದರಲ್ಲಿ ನಗರ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ೨೭,೯೬೭ರಷ್ಟಿದ್ದರೆ, ಗ್ರಾಮೀಣ

ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ೧,೬೭,೨೫೨ರಷ್ಟಿದೆ. ಪ್ರತಿ ಚದರ ಕಿ.ಮೀ. ಜನಸಾಂದ್ರತೆಯು ೨೧೮ ಚದರ ಕಿ.ಮೀ. ತಾಲೂಕಿನ ಒಟ್ಟು ಸಾಕ್ಷರತೆಯ ಪ್ರಮಾಣ ಶೇ.೭೨.೦೮ರಷ್ಟಿದ್ದು ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ.೮೧.೪೩ರಷ್ಟಿದ್ದರೆ, ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೬೨.೪೦ರಷ್ಟಿದೆ.[೧೧] ಈ ಮೇಲಿನ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ಹೆಚ್ಚಾಗಿದೆ. ಜೊತೆಗೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ. ಇಲ್ಲಿ ಹಲವಾರು ಜಾತಿ/ಜನಾಂಗದವರು ವಾಸವಾಗಿದ್ದು, ಕೃಷಿ ಆಧಾರಿತ ಕುಶಲಕರ್ಮಿಗಳು ಸಹ ಇರುವುದನ್ನು ಕಾಣುತ್ತೇವೆ. ಕುಂಬಾರಿಕೆ, ಚಮ್ಮಾರಿಕೆ, ಬಡಿಗತನ ಹೀಗೆ ಹಲವಾರು ವೃತ್ತಿಗಳನ್ನು ಮಾಡುವ ಜನರಿದ್ದಾರೆ. ಹಾಗೆಯೇ ಕೂಲಿನಾಲಿ ಮಾಡಿಕೊಂಡು ಜೀವನ ಸಾಗಿಸುವವರೂ ಇದ್ದಾರೆ. ಕೃಷಿಯೇ ಪ್ರಮುಖ ಕಸುಬಾಗಿರುವುದರಿಂದ ಕೃಷಿ ಕೂಲಿಕಾರ್ಮಿಕರು ಹೆಚ್ಚಾಗಿ ಕಂಡು ಬರುತ್ತಾರೆ. ಜೊತೆಗೆ ಕೂಲಿಯನ್ನರಸಿ ವಲಸೆ ಹೋಗುವ ಜನರೂ ಇದ್ದಾರೆ. ಒಟ್ಟಾರೆಯಾಗಿ ಇಲ್ಲಿನ ಜನರ ಆರ್ಥಿಕ ಸ್ಥಿತಿಗತಿ ಬೇರೆ ತಾಲೂಕು ಪ್ರದೇಶಗಳಿಗೆ ಹೋಲಿಸಿಕೊಂಡರೆ ಸಾಧಾರಣವಾಗಿದೆ ಎಂದು ಹೇಳಬಹುದು. ಏಕೆಂದರೆ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕುಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ತಾಲೂಕುಗಳಲ್ಲೂ ಕೈಗಾರಿಕಾ ಕೇಂದ್ರಗಳು ಹೆಚ್ಚಾಗಿದ್ದು ಅಲ್ಲಿನ ಜನರು ಹೆಚ್ಚಾಗಿ ಕೈಗಾರಿಕೆಗಳನ್ನೇ ಅವಲಂಬಿಸಿದ್ದಾರೆ. ಆದರೆ ಹಡಗಲಿಯಲ್ಲಿ ಯಾವುದೇ ಕೈಗಾರಿಕೆಗಳು ಸ್ಥಾಪನೆಯಾಗಿಲ್ಲ. ಹಾಗಾಗಿ ಇಲ್ಲಿನ ಜನರು ಕೆಲಸವನ್ನರಸಿ ವಲಸೆ ಹೋಗುವುದನ್ನು ಹಾಗೂ ವ್ಯವಸಾಯವನ್ನು ಪ್ರಧಾನ ಉದ್ಯೋಗವನ್ನಾಗಿಸಿರುವುದನ್ನು ಕಾಣುತ್ತೇವೆ.

**೨.೧.೨. ನೈಸರ್ಗಿಕ ಸಂಪನ್ಮೂಲ(ಭೌಗೋಳಿಕ ಲಕ್ಷಣಗಳು)**

ಹಡಗಲಿ ಮತ್ತು ಅದರ ಸುತ್ತಲಿನ ಭೂಭಾಗಗಳು ಇಲ್ಲಿನ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಬಹುಮುಖ್ಯವಾದ ಪಾತ್ರ ನಿರ್ವಹಿಸಿವೆ. ಆದ್ದರಿಂದ ಹಡಗಲಿಯ ಕೇಂದ್ರಭಾಗವನ್ನು ಮುಖ್ಯಭಾಗವೆಂದು ಪರಿಗಣಿಸಿ, ಅದರ ಸುತ್ತಲಿನ ಸುಮಾರು ೧೦೦ ಕಿ.ಮೀ. ಭೂಪ್ರದೇಶವನ್ನು ಹಡಗಲಿಯ ಪರಿಸರ ಎಂದು ಪ್ರಾಸಂಗಿಕವಾಗಿ ಅಧ್ಯಯನದ ಅನುಕೂಲಕ್ಕಾಗಿ ಮಾಡಿಕೊಳ್ಳಲಾಗಿದೆ. ಇಲ್ಲಿನ ಭೂಭಾಗದ ಲಕ್ಷಣಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅ. ಭೂಮಿಯ ರಚನೆ ಮತ್ತು ಶಿಲಾ ಸಂಪನ್ಮೂಲ**

ಇಲ್ಲಿನ ಭೌಗೋಳಿಕ ಪರಿಸರವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್ ಶಿಲೆಗಳಿಂದ ಆವೃತವಾಗಿದೆ. ಸಾಮಾನ್ಯವಾಗಿ ಕ್ರಿಸ್ಟಸ್ ಲೈನ್‌ಸಿಸ್ಟ್(ಸ್ಪಟಿಕಾತ್ಮಕ ಪದರು ಶಿಲೆ) ಎಪಿಡಿಯೋರಾಯಿಟ್ಸ್ ಗ್ರಾನೈಟ್(ಜಂಬಿಟ್ಟಿಗೆ) ಮತ್ತು ಲೇಟರ್ ಗ್ರಾನೈಟ್ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ ಕಂಡುಬರುತ್ತದೆ. ಕ್ರಿಸ್ಟ್‌ಲೈನ್‌ಸಿಸ್ಟ್, ಎಪಿಡಿಯೋರಾಯಿಟ್ಸ್, ಗ್ರಾನೈಟ್ ಮೊದಲಾದ ಶಿಲೆಗಳು ಇಲ್ಲಿ ದೊರೆಯುತ್ತವೆ. ಇವುಗಳನ್ನು ಧಾರವಾಡ ಪ್ರದೇಶದಲ್ಲಿರುವಂತೆ ಹಳೇ ಮಾದರಿಯೆಂದು ಗುರುತಿಸಲಾಗಿದೆ.

ಹೂವಿನಹಡಗಲಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು ಬೆಟ್ಟದಿಂದಾವರಿಸಿದೆ. ಬೆಟ್ಟದ ಮಲ್ಲೇಶ್ವರ, ಹಿರೇಗುಡ್ಡ ಮತ್ತು ಮಲ್ಲಪ್ಪನ ಗುಡ್ಡ, ಕಲ್ಲಪ್ಪನ ಗುಡ್ಡ, ಕುರುವತ್ತಿ, ಮೈಲಾರ ಗುಡ್ಡಗಳಿದ್ದು ಅವು ಇಲ್ಲಿನ ಎತ್ತರದ ಪ್ರದೇಶಗಳಾಗಿವೆ. ಇಲ್ಲಿನ ಹೇರಳವಾದ ಬೆಟ್ಟರಾಶಿಯನ್ನು ಗಮನಿಸಿದಾಗ ಈ ಪ್ರದೇಶವು ಹಿಂದೆ ಸಮೃದ್ಧ ಸಸ್ಯರಾಶಿಯ ತಾಣವಾಗಿತ್ತೆಂಬುದಾಗಿ ತಿಳಿದುಬರುತ್ತದೆ. ಅಲ್ಲದೆ, ಆದಿಮ ಸಂಸ್ಕೃತಿಯ ಜನರು ಚಿತ್ರಿಸಿರುವ ಹುಲಿ, ಚಿರತೆ, ಆನೆಯಂತಹ ಚಿತ್ರಗಳು, ಆನೆಗಳು ಈ ದಟ್ಟ ಅರಣ್ಯದಲ್ಲಿ ವಾಸಿಸುತ್ತಿದ್ದ ಕುರುಹನ್ನು ತಿಳಿಸುತ್ತದೆ.

ಹಡಗಲಿಯ ಹತ್ತಿರವಿರುವ ಮಲ್ಲಪ್ಪನ ಗುಡ್ಡ(೯೨೮ ಮೀ.) ತುಂಗಭದ್ರಾ ನದಿ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ಕಡೆಗೆ ಹಬ್ಬಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ ಕಲ್ಲಪ್ಪನ ಗುಡ್ಡ ವಾಯುವ್ಯದಿಂದ ಈಶಾನ್ಯಕ್ಕೆ ಸಾಗಿದ್ದು ಇದರಲ್ಲಿ ನರಸಿಂಹದೇವರ ಗುಡ್ಡ ಸೇರಿದಂತೆ ಉಚ್ಚಂಗಿಯಲ್ಲಿ ಕೊನೆಗೊಳ್ಳುತ್ತದೆ.[೨] ತಾಲೂಕಿನ ಪೂರ್ವ ಹಾಗೂ ಪಶ್ಚಿಮದ ನಡುವೆ ಸಂಡೂರು ಬೆಟ್ಟಗಳ ಶ್ರೇಣಿಯಿದೆ. ಇವು ಈಶಾನ್ಯದಿಂದ ಆಗ್ನೇಯದವರೆಗೂ ಹರಡಿವೆ. ಸಿರುಗುಪ್ಪ ಹಾಗೂ ಬಳ್ಳಾರಿ ಜಿಲ್ಲೆಯ ಪೂರ್ವದ ಭಾಗ ಬಯಲು ಪ್ರದೇಶವಾಗಿದೆ. ಈ ಪ್ರದೇಶವು ಸಮತಟ್ಟಾಗಿರುವುದರಿಂದ ಯಾವುದೇ ಹೆಚ್ಚಿನ ಮರಗಿಡಗಳು ಇರುವುದಿಲ್ಲ. ಈ ಪ್ರದೇಶ ಕಪ್ಪು ಎರೆಮಣ್ಣಿನಿಂದ ಕೂಡಿದೆ. ಸಮತಟ್ಟಾದ ಪ್ರದೇಶದಲ್ಲಿ ಅಲ್ಲಲ್ಲಿ ಸಣ್ಣ ಬೆಟ್ಟಗಳ ಸಾಲುಗಳನ್ನು ಕಾಣಬಹುದು. ಈ ಸಾಲು ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣಕ್ಕೆ ಹಬ್ಬಿವೆ. ಇವು ಅಲ್ಲಲ್ಲಿ ಸಣ್ಣ ದ್ವೀಪಗಳ ರೀತಿಯಾಗಿ ಮೇಲೆದ್ದಿರುವುದನ್ನು ಕಾಣಬಹುದು. ಈ ರೀತಿ ಅಲ್ಲಲ್ಲಿ ಬೆಟ್ಟಗಳು ಗುಂಪುಗಳಾಗಿರುವುದನ್ನು ಸಾಮಾನ್ಯವಾಗಿ ದಖ್ಖನ್ ಪ್ರಸ್ಥಭೂಮಿಯ ಹಲವೆಡೆ ಕಾಣಬಹುದು. ಈ ಲಕ್ಷಣಗಳು ಹೊಸಪೇಟೆ ತಾಲೂಕಿನ ಹಂಪಿಯ ಪೂರ್ವ ದಿಕ್ಕಿನಲ್ಲಿ ಮತ್ತು ಬಳ್ಳಾರಿಯಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಆದರೆ ಹಡಗಲಿಯ ಭಾಗದಲ್ಲಿ ಮೇಲ್ಕಂಡ ಲಕ್ಷಣಗಳು ಸ್ವಲ್ಪ ಭಿನ್ನವಾಗಿವೆ. ಇಲ್ಲಿಯ ಬೆಟ್ಟ ಗುಡ್ಡಗಳು ಪೂರ್ವದಲ್ಲಿ ಕಂಡುಬರುವ ಭೂಪ್ರದೇಶಕ್ಕಿಂತ ಭಿನ್ನವಾಗಿವೆ. ಬೆಟ್ಟಗುಡ್ಡಗಳಿರುವುದರಿಂದ ಇಲ್ಲಿ ಸ್ವಲ್ಪ ಮಳೆ ಜಾಸ್ತಿ ಬೀಳುತ್ತದೆ. ಒರಟಾದ ನೆಲ ಹಾಗೂ ಎತ್ತರದ ದಿಣ್ಣೆಗಳು ಇಲ್ಲಿವೆ. ಇವು ಇಳಿಜಾರನ್ನು ಉತ್ತರದ ಕಡೆ ಹೊಂದಿವೆ. ಇದರಿಂದಾಗಿ ಮಳೆಯ ನೀರು ಉತ್ತರದಲ್ಲಿರುವ ಜೀವನದಿ ತುಂಗಭದ್ರೆಗೆ ಹರಿಯುತ್ತದೆ.

ಪಶ್ಚಿಮದಲ್ಲಿ ಭೂಮೇಲ್ಮೈ ಎತ್ತರದಲ್ಲಿರುವುದರಿಂದ ಕುರುಚಲು ಗಿಡದ ಸಣ್ಣ ಕಾಡುಗಳಿವೆ. ಸಂಡೂರು ಬೆಟ್ಟಗಳ ಶ್ರೇಣಿಯು ಮಧ್ಯದಲ್ಲಿರುವುದರಿಂದ ಜಿಲ್ಲೆಯಲ್ಲಿ ಎದ್ದುಕಾಣುತ್ತದೆ. ಅಲ್ಲದೆ ಅದು ಕಬ್ಬಿಣ ಮ್ಯಾಂಗನೀಸ್ ಅದಿರಿನ ಅಗಾಧ ಭಂಡಾರವನ್ನು ಹೊಂದಿದೆ. ಆದುದರಿಂದ ಈ ಪ್ರದೇಶ ಕಬ್ಬಿಣ, ಮ್ಯಾಂಗನೀಸ್ ಅದಿರಿನ ಗಣಿಗಾರಿಕೆಗೆ ಹೆಸರುವಾಸಿಯಾಗಿದೆ. ಮೇಲೆ ತಿಳಿಸಿದ ಬೆಟ್ಟಗಳ ಸಾಲುಗಳಲ್ಲದೆ ಇಲ್ಲಿ ಕೆಲವು ಬಿಡಿ ಬಿಡಿಯಾದ ಬೆಟ್ಟಗಳ ಗುಂಪುಗಳಿವೆ. ಇಲ್ಲಿನ ಬೆಟ್ಟಗಳ ನಡುವೆ ಕಣಿವೆ ಪ್ರದೇಶವಿದ್ದು ವ್ಯವಸಾಯಕ್ಕೆ ಅನುಕೂಲವಾಗಿದೆ. ಅಲ್ಲದೆ ಫಲವತ್ತಾದ ಭೂಮಿಯನ್ನು ಹೊಂದಿದೆ.

ಹಡಗಲಿ ತಾಲೂಕಿನ ಗಡಿಗಳಿಗೆ ಹತ್ತಿರದಲ್ಲಿರುವ ಸಂಡೂರು, ಕೂಡ್ಲಿಗಿ, ಹರಪನಹಳ್ಳಿ, ಗುಡೇಕೋಟೆ, ಹೊಸಪೇಟೆ, ಕಂಪ್ಲಿ, ದರೋಜಿ, ಕುರುಗೋಡು, ಬಳ್ಳಾರಿ ಮುಂತಾದ ಕಡೆ ದೊಡ್ಡ ದೊಡ್ಡ ಬೆಟ್ಟಗಳಿವೆ. ಸಂಡೂರು ಕುಮಾರಸ್ವಾಮಿ ಬೆಟ್ಟ(೧೩೬ ಮೀ.), ರಾಮನಮಲ್ಯೆ ಬೆಟ್ಟ(೯೯೨ ಮೀ.), ಜಂಬುನಾಥ ಗುಡ್ಡ(೯೦೮ ಮೀ.) ಎತ್ತರದ ಶಿಖರಗಳನ್ನು ಹೊಂದಿವೆ. ಕೂಡ್ಲಿಗಿ ಬೆಟ್ಟಗಳು ಎರಡು ಸಾಲುಗಳಲ್ಲಿವೆ. ಅವುಗಳಲ್ಲಿ ಒಂದು ಶ್ರೇಣಿ ಆನೆಕಲ್ಲು ದುರ್ಗ (೭೪ ಮೀ.), ಜರಿಮಲೆ ಗುಡ್ಡ(೮೩೮ ಮೀ.) ಹಾಗೂ ಗುಡೇಕೋಟೆಯಿಂದ ಈಶಾನ್ಯಕ್ಕೆ ಹರಡಿರುವ ಗುಡೇಕೋಟೆ ಬೆಟ್ಟ ಚಿನ್ನಹಗರಿ ನದಿ ದಾಟಿ ಚಿತ್ರದುರ್ಗ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗಿ ನೈಸರ್ಗಿಕವಾಗಿ ಹಡಗಲಿಗೆ ರಕ್ಷಣೆ ಒದಗಿಸಿವೆ.[೧೩]

ಇಲ್ಲಿನ ಮಲ್ಲಪ್ಪನ ಗುಡ್ಡ ಮತ್ತು ಕಲ್ಲಪ್ಪನ ಗುಡ್ಡ ಧಾರವಾಡ ಶಿಸ್ಟ್ ಶಿಲಾಶ್ರೇಣಿಯನ್ನು ಹೊಂದಿದೆ. ಇಲ್ಲಿನ ಬೆಟ್ಟಗಳಲ್ಲಿ ಗ್ರಾನೈಟ್ ಶಿಲೆಗಳನ್ನು ಕಾಣಬಹುದು. ಇಲ್ಲಿನ ಶಿಸ್ಟ್ ಶಿಲಾವರ್ಗದ ಶ್ರೇಣಿಗಳಲ್ಲಿ ಎತ್ತರದ ಕೋಡುಬೆಟ್ಟಗಳನ್ನು ಕಾಣಬಹುದು. ಅದರೊಡನೆ ದೊಡ್ಡ ಕೊರಕಲ್ಲಿನ ಕಣಿವೆಗಳು ಇರುವುದು ಸಾಮಾನ್ಯ. ಈ ಗ್ರಾನೈಟ್ ಬೆಟ್ಟಗಳಲ್ಲಿ ಕಲ್ಲುಗಳ ಕುಪ್ಪೆಗಳು ದೊಡ್ಡ ದೊಡ್ಡ ರಾಶಿಯಾಗಿದ್ದು ಇಲ್ಲಿ ಬೆಟ್ಟಗಳ ಗುಂಪನ್ನು ಕಾಣಬಹುದಾಗಿದೆ. ಈ ರೀತಿಯ ಬೆಟ್ಟಗಳ ಗುಂಪನ್ನು ರಾಯಚೂರು, ಚಿತ್ರದುರ್ಗ ಮತ್ತು ಬಳ್ಳಾರಿಯ ಕೆಲವು ಪ್ರದೇಶಗಳಲ್ಲಿ ಕಾಣಬಹುದು. ಈ ಬೆಟ್ಟಗಳ ವಿಶೇಷತೆ ಎಂದರೆ ಬೆಟ್ಟಗಳು ಅಸಾಮಾನ್ಯ ಕಂದು ಇಲ್ಲವೇ ಬೂದು ವರ್ಣದವಾಗಿದ್ದು ಈಗಾಗಲೆ ತಿಳಿಸಿರುವ ಗ್ರಾನೈಟ್ ಶಿಲಾವರ್ಗಕ್ಕೆ ಸೇರಿವೆ.[೧೪] ಈ ಪ್ರದೇಶದಲ್ಲಿ ಸಾಮಾನ್ಯವಾಗಿ ದೊಡ್ಡ ಬಂಡೆಗಳು ಸೀಳಿವೆ. ಹೀಗೆ ಬಿರುಕು ಬಿಟ್ಟು ಸೀಳಿದವುಗಳಲ್ಲಿ ಕೆಲವು ಮುಂಚಾಚಿ ಕಲ್ಲಾಸರೆಗಳಾದರೆ ಕೆಲವು ಗುಹೆಗಳಾಗಿವೆ. ಸಹಸ್ರಾರು ವರ್ಷಗಳ ನಿರಂತರವಾದ ಸವಕಳಿಯಿಂದ ಗುಹೆಗಳು ಹೆಚ್ಚಾಗಿ ಕಂಡುಬಂದಿವೆ. ಇವು ಆದಿಮಾನವನ ವಸತಿಗೆ ಆಸರೆಯಾಗಿದ್ದವು.

ಈ ಬೆಟ್ಟ ಗುಡ್ಡಗಳಲ್ಲಿನ ಗುಹೆಗಳು, ಕಲ್ಲಾಸರೆಗಳು ಆದಿಮಾನವರ ವಾಸಕ್ಕೆ ಒಂದೆಡೆ ಸಹಕಾರಿಯಾದರೆ, ಇನ್ನೊಂದೆಡೆ ಶಿಲೆ ಅವರಿಗೆ ಅಗತ್ಯವಾದ ಆಯುಧೋಪಕರಣಗಳನ್ನು ತಯಾರಿಸಿ ಕೊಳ್ಳಲು ಸಹಕಾರಿಯಾಗಿದ್ದರಿಂದ ಈ ಪರಿಸರದಲ್ಲಿ ಅಂದಿನ ಮಾನವ ನೆಲೆ ನಿಲ್ಲಲು ಸಹಕಾರಿ ಯಾಯಿತು.

### ಆ. ನದಿ ಮತ್ತು ನೀರಿನ ಸೌಕರ್ಯಗಳು

ಹಡಗಲಿಯಲ್ಲಿ ಹರಿಯುವ ತುಂಗಭದ್ರಾ ನದಿ ರಾಜ್ಯದ ಪ್ರಮುಖ ನದಿಗಳಲ್ಲಿ ಒಂದು. ಇದು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾದ ತುಂಗ ಮತ್ತು ಭದ್ರಾ ಎಂಬ ಎರಡು ನದಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಈ ನದಿಯನ್ನು ತುಂಗಭದ್ರಾ ಎಂದು ಕರೆಯಲಾಗಿದೆ. ತುಂಗಭದ್ರಾ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ. ಮಹಾಭಾರತದಲ್ಲಿ

ಜಾಹ್ನವಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಹೊಸಪೇಟೆ ತಾಲೂಕಿನ ಹಂಪಿಯ ಕೋದಂಡರಾಮಸ್ವಾಮಿ ದೇವಾಲಯದ ಬಳಿ ಇರುವ ಚಕ್ರತೀರ್ಥದ ಬಳಿ ಈ ನದಿ ಉತ್ತರಾಭಿಮುಖವಾಗಿ ಹರಿಯುತ್ತದೆ. ಇಲ್ಲಿ ಚಕ್ರಾಕಾರವಾಗಿ ಸುರುಳಿಯಾಕಾರದಲ್ಲಿ ತಿರುಗುತ್ತಾ ಹರಿಯುವುದರಿಂದ ಇದನ್ನು ಚಕ್ರತೀರ್ಥವೆಂದು, ಇದು ಇಲ್ಲಿನ ಅಧಿದೇವತೆಯಾದ ಪಂಪಾಂಬಿಕೆಯ ಪ್ರತೀಕವಾಗಿರುವ ಕಾರಣಕ್ಕಾಗಿ ಇದನ್ನು ಪಂಪಾತೀರ್ಥವೆಂದೇ ಕರೆಯಲಾಗುತ್ತದೆ. ಇದರ ನೀರು ರುಚಿಕರವಾಗಿದ್ದು, ಇದರಿಂದ 'ಗಂಗಾಸ್ನಾನ ತುಂಗಾಪಾನ' ಎಂಬ ನಾಣ್ಣುಡಿಯೇ ಈ ಪರಿಸರದಲ್ಲಿ ಬೆಳೆದು ಬಂದಿರುವುದು ಗಮನಾರ್ಹ. ಇದೇ ನದಿ ತುಂಬಿ ಹರಿಯುವಾಗ ಹಲವು ನೈಸರ್ಗಿಕ ಜಲಪಾತಗಳನ್ನು ವಿವಿಧ ಕಡೆ ಸೃಷ್ಟಿಸಿ ಪ್ರವಾಸಿಗರ ಆಕರ್ಷಣೆಯ ಕೇಂದ್ರವಾಗಿಸಿದೆ.

ತುಂಗಭದ್ರಾ ನದಿ ಬಳ್ಳಾರಿ ಜಿಲ್ಲೆಯನ್ನು ಈಗಿನ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಕಡತಿ ಎಂಬ ಗ್ರಾಮದಲ್ಲಿ ಪ್ರವೇಶಿಸಿ ಮುಂದೆ ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲೂಕುಗಳನ್ನೊಳಗೊಂಡಂತೆ ೩೨೦ ಕಿ.ಮೀ. ಉದ್ದದವರೆಗೆ ಚಲಿಸಿ ಆಲೂರು ತಾಲೂಕಿನ ಚಲ್‌ಕೂಡಲೂರು ಗ್ರಾಮದ ಬಳಿ ಆಂಧ್ರಪ್ರದೇಶವನ್ನು ಸೇರುತ್ತದೆ.

ಈ ನದಿ ಪಶ್ಚಿಮದಲ್ಲಿ ಧಾರವಾಡ, ಉತ್ತರದಲ್ಲಿ ಕೊಪ್ಪಳ ಹಾಗೂ ರಾಯಚೂರು ಜಿಲ್ಲೆಗಳಿಗೆ ಗಡಿಯಾಗಿ ಪರಿಣಮಿಸಿದೆ. ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿ ನದಿಗಳು ಪ್ರಾಚೀನ ಕಾಲದಿಂದಲೂ ಕೃಷಿ ಅಭಿವೃದ್ಧಿಗೆ ನೀರನ್ನೊದಗಿಸುತ್ತಿವೆ.

ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕಹಗರಿಗಳಲ್ಲದೆ ಚಿನ್ನ ಹಗರಿಯನ್ನೊಳ ಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ತುಂಗಭದ್ರಾ ನದಿಯಂತೆ ಹಗರಿಯೂ ಚಿಕ್ಕಮಗಳೂರು ಜಿಲ್ಲೆಯ ಮುಳ್ಳಯ್ಯನ ಗಿರಿ ಮತ್ತು ತಂಗಲಿಯಲ್ಲಿ ಹರಿಯುವ ವೇದ ಮತ್ತು ಆವತಿ ಎಂಬ ಎರಡು ನದಿಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಒಂದುಗೂಡಿ ವೇದಾವತಿ ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು(ರೂಪನಗುಡಿಯಲ್ಲಿ) ಪ್ರವೇಶಿಸುತ್ತವೆ. ಈ ಪ್ರದೇಶದ ಶಾಸನಗಳು ಇದನ್ನು 'ಅಹರಿ' 'ಅಗ-ಹರಿ'(ಅಘಹರಿ=ಪಾಪವನ್ನು ತೊಳೆಯುವ) ಎಂದು ಕರೆದಿವೆ. ಈ ಪ್ರದೇಶದಲ್ಲಿ ೬೨.೮ ಕಿ.ಮೀ. ದೂರದ ತನಕ ಸಾಗಿ ಸಿರುಗುಪ್ಪ ತಾಲೂಕಿನ ಸಿದ್ಧರಗಡ್ಡೆ ಹಳ್ಳಿಯಲ್ಲಿ ತುಂಗಭದ್ರಾ ನದಿಯನ್ನು ಸೇರುತ್ತದೆ. ವಿಶಾಲವಾಗಿ ಹರಿದಿರುವ ಈ ನದಿ ನೀರನ್ನು ಪ್ರಾಚೀನ ಕಾಲದಿಂದಲೂ ತೋಟ ಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ.

ತುಂಗಭದ್ರೆಯ ಇನ್ನೊಂದು ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ, ಹರಪನಹಳ್ಳಿ ತಾಲೂಕಿನ ಅಂಜಿಗೇರಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತದೆ. ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಹರಿಯುವ ಇದು ಒಟ್ಟು ೪೦ ಕಿ.ಮೀ. ಸಾಗಿ ತುಂಗಭದ್ರೆಯನ್ನು ಸೇರುತ್ತದೆ.

ಅದೇ ರೀತಿ ಚಿನ್ನಹಗರಿ ನದಿಯು ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮಗೊಂಡು ಕೂಡ್ಲಿಗಿಯ ದಕ್ಷಿಣಕ್ಕೆ ಕಲ್ಲಹಳ್ಳಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತದೆ. ಇದನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಜಿನಗಿಹಳ್ಳ ಎಂದು ಕರೆಯಲಾಗುತ್ತದೆ. ಬಳ್ಳಾರಿ-ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಪರಿಣಮಿಸಿರುವ ಇದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ಹಗರಿ ನದಿಗೆ ಬಂದು ಕೂಡುತ್ತದೆ. ಪೆದ್ದವಂಕಾ ಎಂದು ಕರೆಯುವ ಒಂದು ನೀರಿನ ಹರಿಯು ತಾಮ್ರಪರ್ವತದಲ್ಲಿ ಹುಟ್ಟಿ, ಕುಮತಿಯಲ್ಲಿ ಈ ಚಿನ್ನಹಗರಿ ಉಪನದಿಗೆ ಬಂದು ಸೇರುತ್ತದೆ.

**ಇ. ಸಿಂಗಟಾಲೂರು ಜಲಾಶಯ**

ಪ್ರವಾಸಿಗರು ಇಂದು ಹೂವಿನಹಡಗಲಿಗೆ ಬಂದರೆ ನೋಡಲೇಬೇಕಾಗಿರವ ಸುಂದರವಾದ ಮತ್ತು ರಮಣೀಯವಾದ ಒಂದು ತಾಣವೆಂದರೆ ಸಿಂಗಟಾಲೂರು ಜಲಾಶಯ. ಇದು ಹೂವಿನ ಹಡಗಲಿಯಿಂದ ಸುಮಾರು ೮ ಕಿ.ಮೀ ದೂರದಲ್ಲಿದೆ.

ಹಡಗಲಿ ತಾಲೂಕಿನ ಹುಲಿಗುಡ್ಡ ಎಂಬ ಪ್ರದೇಶದಲ್ಲಿ ಸಿಂಗಟಾಲೂರು ಏತ ನೀರಾವರಿ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಹೂವಿನಹಡಗಲಿ ತಾಲೂಕು ಮತ್ತು ಗದಗ ಜಿಲ್ಲೆಯ ಮುಂಡರಗಿ ತಾಲೂಕು ಮತ್ತು ಕೊಪ್ಪಳ ಜಿಲ್ಲೆ ಮತ್ತು ತಾಲೂಕುಗಳಿಗೆ ನೀರಾವರಿ ಸೌಲಭ್ಯ (ಒಟ್ಟು ೪೮,೦೦೦ ಸಾವಿರ ಎಕರೆಗೆ) ಒದಗಿಸಿ ಕೃಷ್ಣೆಯ ಕ್ಷೇತ್ರದಲ್ಲಿ ಗಣನೀಯವಾದ ಅಭಿವೃದ್ಧಿ ಸಾಧಿಸುವುದು ಈ ಯೋಜನೆಯ ಮೂಲ ಉದ್ದೇಶವಾಗಿದೆ. ೧೯೯೨ರಲ್ಲಿ ಸರಕಾರಿ ಆದೇಶದ ಪ್ರಕಾರ ೯೨ ಮತ್ತು ೯೩ ದರಗಳ ಆಧಾರದ ಮೇಲೆ ೬೨-೬೩ ಕೋಟಿ ರೂಪಾಯಿಗಳನ್ನು ಈ ಯೋಜನೆಯ ಅನುಷ್ಠಾನಕ್ಕಾಗಿ ವೆಚ್ಚ ಮಾಡಲಾಗಿದೆ. ಈ ಯೋಜನೆಯಿಂದ ತುಂಗಭದ್ರಾ ನದಿಗೆ ಸಿಂಗಟಾಲೂರು ಬಳಿ ೪೦೨ ಮೀಟರ್ ಉದ್ದದ ಬ್ಯಾರೇಜ್ ಕಟ್ಟಿ ೯ ಮೀಟರ್ ಎತ್ತರದಷ್ಟು ನೀರನ್ನು ಶೇಖರಿಸಲಾಗುವುದು. ಶೇಖರಿಸಿದ ಈ ನೀರಿನಿಂದ ಮುಳುಗಡೆಯಾಗುವ ಪ್ರದೇಶವು ೯೬೦ ಹೆಕ್ಟೇರ್‌ಗಳಾಗಿರುತ್ತದೆ.

ಈ ಯೋಜನೆಯಿಂದಾಗಿ ಮುಂಗಾರಿನ ೪೦ ಸಾವಿರ ಎಕರೆ ಮತ್ತು ಹಿಂಗಾರಿನಲ್ಲಿ ೬ ಸಾವಿರ ಎಕರೆ ಜಮೀನಿಗೆ ನೀರು ಲಭ್ಯವಾಗುತ್ತದೆ. ಅಂದರೆ ಎಡದಂಡೆ ಕಾಲುವೆಯಲ್ಲಿನ ೨೮ ಸಾವಿರ ಎಕರೆ ಭೂಮಿಗೆ ಮತ್ತು ಬಲದಂಡೆ ಕಾಲುವೆಗೆ ಬರುವ ೨೦ ಸಾವಿರ ಎಕರೆ ಭೂಮಿಗೆ ನೀರು ದೊರೆಯುತ್ತದೆ. ಎಡದಂಡೆ ಕಾಲುವೆಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕು ಮತ್ತು ಕೊಪ್ಪಳ ತಾಲೂಕು ಪ್ರದೇಶಗಳು ಒಳಪಟ್ಟರೆ, ಬಲದಂಡೆ ಕಾಲುವೆಗೆ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು ಒಳಪಡುತ್ತದೆ. ಈ ಯೋಜನೆಗೆ ೧೯೯೨ರಲ್ಲಿ ಆಡಳಿತಾತ್ಮಕವಾಗಿ ಮಂಜೂರಾತಿ ದೊರೆತಿದೆ. ಅಂದಿನ ಮುಖ್ಯಮಂತ್ರಿಯಾಗಿದ್ದ ಎಸ್.ಎಂ. ಕೃಷ್ಣ ಅವರು ಶಿಲಾನ್ಯಾಸವನ್ನು ನೆರವೇರಿಸಿದ್ದರು. ಅನುಭವದ ಹಿರಿಯ ರಾಜಕಾರಣಿ, ಗ್ರಾಮೀಣಾಭಿವೃದ್ಧಿ ಸಚಿವರಾಗಿದ್ದ ಮತ್ತು ನಂತರದಲ್ಲಿ ಕಂದಾಯ ಸಚಿವರಾಗಿದ್ದ ಎಂ.ಪಿ.ಪ್ರಕಾಶ್ ಅವರ ಸತತವಾದ ಪ್ರಯತ್ನದಿಂದ ಈ ಯೋಜನೆಗೆ ಚಾಲನೆ ದೊರೆಯಿತು. ಅಂದಿನಿಂದ ಕಟ್ಟಡದ ಕಾಮಗಾರಿ ಆರಂಭವಾಗಿ ೨೦೧೨ರಲ್ಲಿ ಪೂರ್ಣಗೊಂಡಿತು.

ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಜಗದೀಶ ಶೆಟ್ಟರ್ ಅವರು ಈ ಯೋಜನೆಯನ್ನು ಡಿಸೆಂಬರ್-೨೦೧೨ರಲ್ಲಿ ಲೋಕಾರ್ಪಣೆ ಮಾಡಿದರು. ಇದರಿಂದ ರೈತರಿಗೆ ಸಾಕಷ್ಟು ಉಪಕಾರವಾಗಲಿದೆ.

ಮೇಲಿನ ಉಪನದಿಗಳೊಂದಿಗೆ ಆಯಾಯ ಸ್ಥಳಗಳಲ್ಲಿ ಅನೇಕ ಹಳ್ಳಗಳು ಉಗಮವಾಗಿ ತುಂಗಭದ್ರಾ ನದಿ ಇಲ್ಲವೇ ಈ ಉಪನದಿಗಳನ್ನು ಕೂಡಿಕೊಳ್ಳುತ್ತವೆ. ಅವುಗಳಲ್ಲಿ ಭೈರಾಪುರ ಹಳ್ಳ, ಮಾದಿಹಳ್ಳ, ತೆಲಗಿಹಳ್ಳ, ಇಟ್ಟಗಿಹಳ್ಳ, ಮಾರಹಳ್ಳ(ಹರಪನಹಳ್ಳಿ), ತಿಪ್ಪಾಪುರಹಳ್ಳ, ಕುರುವತ್ತಿ ಹಳ್ಳ, ಮಾಗಳದ ಹಳ್ಳ, ಹಿರೇಹಳ್ಳ(ಹಡಗಲಿ) ಮೊದಲಾದವು ಪ್ರಮುಖವಾದವು. ಇಲ್ಲಿನ ಅರಣ್ಯವು ಜನರಿಗೆ ಅವಶ್ಯಕವಾದ ಹಣ್ಣು ಹಂಪಲು, ಮರ ಮುಟ್ಟು, ಉರುವಲು, ಔಷಧಿಗೆ ಉಪಯುಕ್ತವಾದ ಗಿಡ, ನಾರು-ಬೇರುಗಳನ್ನು ಒದಗಿಸಿದರೆ; ನದಿ, ಹಳ್ಳಗಳು ಅವರಿಗೆ ಅವಶ್ಯಕವಾಗಿ ಬೇಕಾದ ಜೀವಸೆಲೆ(ನೀರು)ಯನ್ನು ಒದಗಿಸಿ ಅವರ ಅವಶ್ಯಕತೆಗಳನ್ನು ಪೂರೈಸಿ ಅವರು ಇಲ್ಲಿ ನೆಲೆಸಿ ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳಲು ಸಹಾಯಕವಾಗಿದೆ.

**ಈ. ವಾಯುಗುಣ ಮತ್ತು ಜೀವಸಂಕುಲ**

ಬಳ್ಳಾರಿ ಜಿಲ್ಲೆ ಬಿಸಿಲಿಗೆ ತುಂಬಾ ಪ್ರಸಿದ್ಧಿಯಾಗಿದೆ. ಇಲ್ಲಿನ ತಾಪಮಾನ ಗರಿಷ್ಠ ಮಟ್ಟಕ್ಕಿದ್ದಾಗ ಹೊರಗಿನಿಂದ ಬಂದವರು ಇಲ್ಲಿರುವುದು ಕಷ್ಟ. ಹಡಗಲಿಯಲ್ಲಿ ಬೇಸಿಗೆ ಕಾಲವು ಫೆಬ್ರವರಿ ಅಂತ್ಯದಿಂದ ಆರಂಭವಾಗಿ ಜೂನ್ ತಿಂಗಳವರೆಗೆ ಇರುತ್ತದೆ. ಆಗ ಶಾಖವು ಸರಾಸರಿ ೧೬.೭° ಸೆ.ದಿಂದ ೪೩.೯° ಸೆ.ವರೆಗೆ ಇರುತ್ತದೆ. ಕೆಲವು ಸಲ ಇದು ೪೫°ರಿಂದ ೪೯°ಸೆ.ವರೆಗೆ ಏರುತ್ತದೆ. ಜುಲೈ ತಿಂಗಳಲ್ಲಿ ಆರಂಭವಾಗುವ ಮಳೆಗಾಲ ನವೆಂಬರ್ ತಿಂಗಳವರೆಗೆ ಇರುತ್ತದೆ. ಮಳೆಯ ವಾರ್ಷಿಕ ಸರಾಸರಿ ೬೧೫.೫ ಮಿ.ಮೀ. ಇರುತ್ತದೆ. ನವೆಂಬರ್ ಕೊನೆಯಿಂದ ಫೆಬ್ರುವರಿಯವರೆಗೆ ಚಳಿಗಾಲವಿರುತ್ತದೆ. ಶುಷ್ಕ ವಾತಾವರಣವಿರುವ ಈ ಪ್ರದೇಶ ಮನುಷ್ಯರ ವಾಸಕ್ಕೆ ಅತ್ಯಂತ ಯೋಗ್ಯವಾಗಿದೆ.

ಈ ಪ್ರದೇಶದ ಕಾಡು ಹಾಗೂ ಬೆಟ್ಟಗುಡ್ಡಗಳಲ್ಲಿ ಒಟ್ಟು ಜಾನುವಾರುಗಳ ಸಂಖ್ಯೆ ೧,೯೪,೨೧೩ ರಷ್ಟಿದೆ. ಇಲ್ಲಿ ಚಿರತೆ, ಕರಡಿ, ಕಾಡುಹಂದಿ, ಮುಳ್ಳುಹಂದಿ, ನರಿ, ಜಿಂಕೆ, ತೋಳ, ನೀರುಹಂದಿ, ಮೊದಲಾದ ಕಾಡುಪ್ರಾಣಿಗಳು ಹಾಗೂ ನವಿಲು, ಕಾಗೆ, ಗೂಬೆ, ಗೊರವಂಕ, ಕೌಜ, ಗುಡ್ಡಪೀರೆಡೆ, ನೀರುಕೋಳಿ, ಗುಬ್ಬಿ, ಕಿಂಗ್‌ಫಿಷರ್ ಮುಂತಾದ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ತುಂಗಭದ್ರಾ ನದಿ ನೀರಿನಲ್ಲಿ ಮೊಸಳೆ, ಮೀನು, ಕಪ್ಪೆ ಮೊದಲಾದ ಜಲಚರಗಳಿವೆ. ಅಲ್ಲದೆ ಮೊಲ, ಜಿಂಕೆ ಮತ್ತು ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ನಾಗರ, ಮಿಡಿನಾಗರ, ಕೆರೆ, ಹಸಿರು, ಬಿಲ್ಸುರಗ, ನೂಲಾವು, ಪೆಂಜರ, ಹೆಬ್ಬಾವು, ಮಣ್ಣುಮುಕ್ಕಿನಾವು ಹಾಗೂ ಕಪ್ಪು ಮತ್ತು ಕೆಂಪುಚೇಳು, ಜರಿ ಮೊದಲಾದ ವಿಷಜಂತುಗಳಿವೆ.

## ಉ. ಅರಣ್ಯ ಮತ್ತು ಖನಿಜ ಸಂಪನ್ಮೂಲ

ಈ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶವು ೪,೭೩೮ ಹೆಕ್ಟೇರುಗಳು ಮಾತ್ರ. ಅಂದರೆ ಇಲ್ಲಿ ಶೇ.೪೦ರಷ್ಟು ಅರಣ್ಯವಿದೆ. ಈ ಪ್ರದೇಶವು ಮುಂಗಾರು ಹಾಗೂ ಹಿಂಗಾರು ಮಳೆಯ ಸೆರಗಿನ ಪ್ರದೇಶ. ಆದುದರಿಂದ ಅಲ್ಬೇಜಿಯ, ಅಕೇಶಿಯ, ಅರಾಬಿಕ್, ಯುಪೋರ್, ಬಿಯಾಸ ಜಾತಿಗಳಿಗೆ ಸೇರಿದ ಮರಗಿಡಗಳು ಇಲ್ಲಿ ಹೆಚ್ಚಾಗಿ ಬೆಳೆಯುತ್ತವೆ. ಇಂತಹ ಮರಗಿಡಗಳನ್ನು ಅವಲಂಬಿಸುವ ಪ್ರಾಣಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಇದಕ್ಕೆ ಪೂರಕವಾಗಿ ಹೇಳುವುದಾದರೆ ಹಡಗಲಿಗೆ ಅನತಿ ದೂರದಲ್ಲಿರುವ ತೆಕ್ಕಲಕೋಟೆ, ಸಂಗನಕಲ್ಲು ಹಳ್ಳೂರಿನಲ್ಲಿ ಆಲ್ವಿಯುಯಾ ಅಕೇಶಿಯ ಗುಂಪಿಗೆ ಸೇರಿದ ಸಸ್ಯಗಳು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಬೆಳೆಯುತ್ತಿದ್ದವು. ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ದೊರೆತಿರುವ ಇದ್ದಿಲಿನಿಂದ ಈ ಸಸ್ಯಗಳನ್ನು ಗುರುತಿಸಲಾಗಿದೆ.[೧೫] ಇಂದಿಗೂ ಸಹ ಉರುವಲು ಮತ್ತು ಬೇಸಾಯದ ಉಪಕರಣಗಳಿಗೆ ಇವುಗಳನ್ನು ಬಳಸುತ್ತಾರೆ. ಈ ಪ್ರದೇಶವು ಕಪ್ಪು ಎರೆಮಣ್ಣಿನಿಂದ ಕೂಡಿದ್ದು, ಇದು ಮೇಲೆ ತಿಳಿಸಿದ ಕುರುಚಲು ಗಿಡಗಳ ಪ್ರದೇಶದಿಂದ ಆವೃತವಾಗಿದೆ.

ಹೂವಿನಹಡಗಲಿ ತಾಲೂಕು ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಫಲವತ್ತಾದ ಕಪ್ಪು ಜೇಡಿಮಣ್ಣು ಹರಡಿದೆ. ಮರಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ತುಂಗಭದ್ರಾ-ಹಗರಿ ನದಿ ಪ್ರದೇಶಗಳಲ್ಲಿ ಕಂಡುಬರುತ್ತದೆ. ಈ ತಾಲೂಕಿಗೆ ಹೊಂದಿಕೊಂಡಿರುವ ಇದೇ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹೇರಳವಾದ ಖನಿಜ ಸಂಪತ್ತು ದೊರೆಯುತ್ತದೆ. ಈ ಭೂಭಾಗವನ್ನು 'ಖನಿಜಗಳ ನಿಧಿ" ಎಂದರೂ ತಪ್ಪಲ್ಲ. ಖನಿಜಗಳಲ್ಲಿ ಅತಿ ಮುಖ್ಯವಾದುದೆಂದರೆ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದಲೂ ಇದರ ಉಪಯೋಗದಿಂದ ಮಾನವನು ನಗರೀಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಇಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳ ವಿವರ ಇಂತಿದೆ. ಹಡಗಲಿಯಲ್ಲಿ ಪ್ರಧಾನವಾಗಿ ಗ್ರಾನೈಟ್ ಶಿಲೆ ದೊರೆಯುತ್ತದೆ. ನಾಗಲಾಪುರ, ರಾಜಾಪುರ, ಗಾದಿಗನೂರು, ಅಂಕಮನಾಳ, ರಾಮದುರ್ಗ, ಕಡೆಬಾಗಿಲುಗಳಲ್ಲಿ[೧೬] ಬೆಣಚುಕಲ್ಲು ದೊರೆಯುತ್ತದೆ. ದೇವಗೊಂಡನಹಳ್ಳಿಯಲ್ಲಿ ವಜ್ರ ಮತ್ತು ರೆಡ್ ಓಕರ್, ಜಾನಿಕುಂಟೆ, ಜಂಬುನಾಥನಹಳ್ಳಿ, ವ್ಯಾಸನಕೆರೆ, ಕರಡಿಕೊಳ್ಳ ಮೊದಲಾದೆಡೆ ಹಾಗೂ ಸಂಡೂರು, ನಂದಿಹಳ್ಳಿ, ಹೊಸಪೇಟೆ ಸುತ್ತಮುತ್ತ ಕಬ್ಬಿಣದ ಅದಿರು ಸಿಗುತ್ತದೆ. ಮೆಟ್ರಿ ಬಳಿ ಸತು, ತಾಳೂರು, ಉತ್ತನೂರು, ಹಿರೇಹಡಗಲಿ, ಚಿನ್ನಹಳ್ಳಿಗಳಲ್ಲಿ ಜಿಪ್ಸಮ್, ಹಲವಾಗಲು, ಸುಬ್ರಾಯನಹಳ್ಳಿ, ಯರನಹಳ್ಳಿ, ಬೆನಕಲ್, ತುಂಬರಗುಡ್ಡ ಮತ್ತಿತರೆಡೆ ಜೇಡಿಮಣ್ಣು ಹಾಗೂ ತಮರಿ, ರಾಮಘಡ, ಬಲದ ಗುಡ್ಡಗಳಲ್ಲಿ ಹಳದಿ ಓಕರ್, ತಿಮ್ಮಾಪುರದಲ್ಲಿ ಬೆಸಾಲ್ಟ್ ಶಿಲೆ, ರಾಮಘಡ, ದೇವಗಿರಿ, ಸುಬ್ರಾಯನಹಳ್ಳಿ ಮ್ಯಾಂಗನೀಸ್ ಮತ್ತು ಬಂಗಾರದ ಅದಿರು ಶೃಂಗಮರಡಿ, ಬೆಟಗೇರಿ, ತಾರಾನಗರ, ಕಂಚೂರುಗಳಲ್ಲಿ ದೊರೆಯುತ್ತದೆ.[೧೭] ತಾಮ್ರವು ಹರಪನಹಳ್ಳಿ, ಚಿನ್ನಾಪುರ, ರಾಮಘಡ, ತಾಮ್ರಪರ್ವತಗಳಲ್ಲಿ ಸಿಗುತ್ತದೆ. ಅದೇ ರೀತಿ ಮ್ಯಾಗ್ನಸೈಟ್ ಅದಿರು ತೋರಣಗಲ್ಲಿನಲ್ಲಿ,

ಸುಣ್ಣದಕಲ್ಲು ತೋರಣಗಲ್ಲು, ಮೆಟ್ರಿ, ಉಬ್ಬಲಗಂಡಿ, ದೇವಲಾಪುರ, ಮಲ್ಲಪ್ಪನ ಗುಡ್ಡಗಳಲ್ಲಿ ದೊರೆಯುತ್ತದೆ. ಅದೇ ರೀತಿ ಹರಿಶಂಕರ, ಜೋಗಿಕೊಳ್ಳ, ಬಳಪದ ಕಲ್ಲು ಅರಸಾಪುರ, ನೀಲಗುಂದಗಳಲ್ಲಿ ದೊರೆಯುತ್ತದೆ.

ಈ ಮೇಲೆ ಕಾಣಿಸಿದ ಮಣ್ಣು ಕೃಷಿ ಚಟುವಟಿಕೆಗಳನ್ನು ನಡೆಸಲು ಸಹಕಾರಿಯಾಯಿತು. ಇಲ್ಲಿ ದೊರೆಯುವ ಖನಿಜಸಂಪತ್ತು ಅಂದಿನಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ ಅಂದರೆ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಉಪಯುಕ್ತವಾಗಿದೆ.

**ಊ. ಕೃಷಿ ಉತ್ಪನ್ನಗಳು**

ಹಡಗಲಿಯಲ್ಲಿನ ಜನರ ಪ್ರಮುಖ ವೃತ್ತಿ ಕೃಷಿ. ಇಲ್ಲಿನ ಭೂಮಿಯು ಉಸುಕು ಮಿಶ್ರಿತ ಕೆಂಪುಮಣ್ಣು ಮತ್ತು ಜಿಗುಟುಮಣ್ಣಿನಿಂದ ಕೂಡಿದೆ. ಅಂದರೆ ತುಂಗಭದ್ರಾ ನದಿಯ ಬಯಲು ಪ್ರದೇಶದಲ್ಲಿ ಕೆಂಪುಮಿಶ್ರಿತ ಮರಳಿನಿಂದ ಕೂಡಿದ ಜೇಡಿಮಣ್ಣಿನ ಫಲವತ್ತಾದ ಪ್ರದೇಶವಿದ್ದರೆ ಉಳಿದಂತೆ ಕಪ್ಪುಮಣ್ಣಿನ ಪ್ರದೇಶವಿದೆ. ಈ ಪ್ರದೇಶದಲ್ಲಿ ವಾರ್ಷಿಕ ಮಳೆಯ ಪ್ರಮಾಣವು ೬೧೫.೫. ಮಿ.ಮೀಟರ್‌ನಷ್ಟಿದೆ. ಇಲ್ಲಿನ ರೈತರು ಹೆಚ್ಚಾಗಿ ಮಳೆಯನ್ನೇ ಆಧರಿಸಿದ್ದಾರೆ. ಉಳಿದಂತೆ ಕೆರೆಗಳು, ಬಾವಿಗಳು ಮತ್ತು ಕೊಳವೆಬಾವಿಗಳಿಂದ ನೀರನ್ನು ಪಡೆದು ಕೃಷಿಯಲ್ಲಿ ತೊಡಗಿದ್ದಾರೆ. ಹೂವಿನಹಡಗಲಿ ತಾಲೂಕು ಒಟ್ಟು ೯೪,೮೫೩ ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ಇದರಲ್ಲಿ ೪,೭೩೮ ಹೆಕ್ಟೇರ್ ಭೂಮಿ ಅರಣ್ಯದಿಂದ ಆವೃತವಾಗಿದೆ. ಇತ್ತೀಚಿನ ಅಂಕಿ-ಅಂಶಗಳ ಪ್ರಕಾರ ಸಾಗುವಳಿಗೆ ಲಭ್ಯವಿಲ್ಲದ ಭೂಮಿ ೧೨,೧೫೬ ಹೆಕ್ಟೇರ್ ಇದೆ. ಬಂಜರುಭೂಮಿ ೨,೭೬೬ ಹೆಕ್ಟೇರ್ ಇದೆ. ಸಾಗುವಳಿಗೆ ಯೋಗ್ಯವಾದ ಬಂಜರುಭೂಮಿ ೧೭,೪೮೧ ಹೆಕ್ಟೇರ್ ಇದ್ದರೆ ಒಟ್ಟು ಸಾಗುವಳಿಗೆ ಲಭ್ಯವಿರುವ ಭೂಮಿ ೭೫,೩೬೧ ಹೆಕ್ಟೇರ್ ಇದೆ. ಹಾಗೆಯೇ ತಾಲೂಕಿನ ಒಟ್ಟು ಭೂಮಿಯಲ್ಲಿ ೩,೬೩೧ ಹೆಕ್ಟೇರ್ ಪ್ರದೇಶದಲ್ಲಿ ಏತ ನೀರಾವರಿ, ೩೮೯ ಹೆಕ್ಟೇರ್ ಪ್ರದೇಶದಲ್ಲಿ ಕೆರೆ ನೀರಾವರಿ, ೧೭,೧೩೬ ಹೆಕ್ಟೇರ್ ಪ್ರದೇಶದಲ್ಲಿ ಕೊಳವೆಬಾವಿಯಿಂದ ಮತ್ತು ೫೯,೫೫೭ ಹೆಕ್ಟೇರ್ ಪ್ರದೇಶವು ಮಳೆಯಾಶ್ರಯದಿಂದ ಕೃಷಿಯನ್ನು ಕೈಗೊಂಡಿರುವುದು ಕಂಡುಬರುತ್ತದೆ. ಬೇಸಿಗೆ ನೀರಾವರಿ ಯೋಜನೆಯಡಿ ೪,೪೫೦ ಹೆಕ್ಟೇರ್ ಭೂಮಿಯನ್ನು ಮೀಸಲಿಡಲಾಗಿದೆ.[೧೮] ಇವುಗಳೆಲ್ಲವನ್ನೂ ಗಮನಿಸಿದಾಗ ಇಲ್ಲಿ ಹೆಚ್ಚಾಗಿ ಒಣಬೇಸಾಯ ಪದ್ಧತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಏತ ನೀರಾವರಿ ವ್ಯವಸ್ಥೆ, ಕೆರೆ ನೀರಾವರಿ ವ್ಯವಸ್ಥೆ, ಕೊಳವೆ ಬಾವಿಗಳಿಂದ ನೀರನ್ನು ಪಡೆಯುವ ವ್ಯವಸ್ಥೆ ಇದೆಯಾದರೂ ಈ ವ್ಯವಸ್ಥೆಯನ್ನು ಹೊಂದಿರುವ ಜನವರ್ಗವೇ ಬೇರೆಯಿದೆ. ಇಲ್ಲಿ ಮುಖ್ಯವಾಗಿ ಏಕದಳ, ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹತ್ತಿ, ಜೋಳ, ಭತ್ತ, ಕಬ್ಬು, ಶೇಂಗಾ, ಮೆಣಸಿನಕಾಯಿ, ಸೂರ್ಯಕಾಂತಿ, ರಾಗಿ, ಸಜ್ಜೆ, ಗೋಧಿ, ಮುಸುಕಿನ ಜೋಳ, ತೊಗರಿ ಮುಂತಾದ ಆಹಾರ ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ತೋಟಗಾರಿಕಾ ಬೆಳೆಗಳಾದ ಹಣ್ಣು, ತರಕಾರಿ, ವೀಳ್ಯದೆಲೆ, ಬಾಳೆ, ಮಲ್ಲಿಗೆ ಹೂವು ಮುಂತಾದವುಗಳನ್ನು ಸಹ ಬೆಳೆಯುತ್ತಾರೆ. ಈ ಹಿಂದೆ ಹಡಗಲಿಯಲ್ಲಿ ಹೂವಿನ ವ್ಯಾಪಾರವೇ ಪ್ರಮುಖ ವಾಣಿಜ್ಯವಾಗಿತ್ತು. ಕ್ರಿ.ಶ.೧೧ನೆಯ ಶತಮಾನದ

ಕೆಲವು ಶಾಸನಗಳಿಂದ ಇಲ್ಲಿ ಅಡಿಕೆ, ವೀಳ್ಯದೆಲೆ ಹಾಗೂ ಹೂವಿನ ತೋಟಗಳು ಇದ್ದವು ಎಂಬುದರ ಬಗ್ಗೆ ತಿಳಿದುಬರುತ್ತದೆ. ಆದರೆ ಇಂದು ಅಡಿಕೆ ತೋಟಗಳು ಈ ಪರಿಸರದಲ್ಲಿ ಕಂಡುಬರುತ್ತಿಲ್ಲ. ಕಾಲ ಬದಲಾದಂತೆ ಜನರ ಜೀವನ ಕ್ರಮವೂ ಬದಲಾಗತೊಡಗುತ್ತದೆ. ಹಾಗಾಗಿ ಇಂದು ಎಲ್ಲ ಬೆಳೆಗಳನ್ನು ವಾಣಿಜ್ಯೀಕರಣದ ದೃಷ್ಟಿಯಿಂದ ಬೆಳೆಯುತ್ತಾರೆ. ಒಟ್ಟಾರೆಯಾಗಿ ಬಳ್ಳಾರಿ ಜಿಲ್ಲೆಯಲ್ಲಿನ ಬೇರೆ ತಾಲೂಕುಗಳಿಗೆ ಹೋಲಿಸಿದರೆ ಹಡಗಲಿಯು ಪ್ರತ್ಯೇಕವಾಗಿ ಗುರುತಿಸಿಕೊಳ್ಳುತ್ತದೆ.

**ಹೂವಿನಹಡಗಲಿ ತಾಲೂಕಿನ ವಿವಿಧ ಜಲಮೂಲಗಳ ಅಡಿಯಲ್ಲಿ ಬರುವ ನೀರಾವರಿ ಭೂಮಿ**

| ಕ್ರ.ಸಂ. | ವಿವರಗಳು | ಪ್ರದೇಶ(ಹೆಕ್ಟೇರುಗಳಲ್ಲಿ) |
|---|---|---|
| ೧ | ಏತ ನೀರಾವರಿ | ೩,೬೩೧ |
| ೨ | ಕೆರೆಗಳು | ೩೦೯ |
| ೩ | ಬಾವಿಗಳು | ೧,೨೫೩ |
| ೪ | ಕೊಳವೆಬಾವಿಗಳು | ೧೭,೧೩೬ |
| **ಒಟ್ಟು ನೀರಾವರಿಗೊಳಪಟ್ಟ ನೀರಾವರಿ ಪ್ರದೇಶ** | | **೨೨,೩೨೯ ಹೆಕ್ಟೇರು** |

(೨೦೧೧-೧೨ನೇ ಸಾಲಿನ ಎ.ಎಸ್.ಸಿ.ಆರ್. ವರದಿ)

ತುಂಗಭದ್ರಾ ಮತ್ತು ಅದರ ಉಪನದಿಗಳ ಹಾಗೂ ಹಳ್ಳ, ಕೆರೆಗಳ ನೀರನ್ನು ಬಳಸಿಕೊಂಡು ಇಲ್ಲವೆ ಮಳೆಯಾಶ್ರಿತ ನೀರಿನ ಸಹಾಯದಿಂದ ಕೃಷಿಕರು ವ್ಯವಸಾಯ ಕೈಗೊಂಡಿದ್ದಾರೆ.

ಈ ರೀತಿಯ ಎಲ್ಲ ಸವಲತ್ತುಗಳು ಈ ಭೂಭಾಗದಲ್ಲಿ ಇದ್ದಿದ್ದರಿಂದ ಹಡಗಲಿ, ಮಾಗಳ, ಕುರುವತ್ತಿ, ಮೈಲಾರ, ಬೆಟ್ಟದ ಮಲ್ಲೇಶ್ವರ ಮೊದಲಾದ ಸ್ಥಳಗಳಲ್ಲಿ ಆದಿಶಿಲಾಯುಗದಿಂದ ಆದಿಮಾನವರು ವಾಸಿಸಿದ್ದಾರೆ. ಅಲ್ಲದೆ ಮುಂದೆ ಅಂದರೆ ಚಾರಿತ್ರಿಕ ಕಾಲದಲ್ಲಿ ವಿಜಯನಗರ ಸೇರಿದಂತೆ ಇತರೆ ಪ್ರಬಲ ರಾಜ್ಯಗಳನ್ನು ಕಟ್ಟಲು ಇಲ್ಲಿನ ಭೌಗೋಳಿಕ ಪರಿಸರವು ಸಹಕಾರಿಯಾಯಿತು. ಇದರಿಂದಾಗಿಯೇ ಹಡಗಲಿ ಮತ್ತು ಅದರ ಸುತ್ತಲಿನ ನೆಲೆಗಳಲ್ಲಿ ಮನುಷ್ಯರು ಪ್ರಾಗೈತಿಹಾಸಿಕ ಕಾಲದಿಂದ ಇತಿಹಾಸ ಕಾಲದಲ್ಲೂ ವಾಸಿಸುತ್ತಾ ಬಂದಿದ್ದಾರೆ. ಆ ಪರಂಪರೆ ಇಂದಿಗೂ ಮುಂದುವರಿಯಲು ಕಾರಣವಾಗಿದೆ.[೯]

ಬೆಟ್ಟಗಳಿಂದ ಸುತ್ತುವರಿದ ಎತ್ತರವಾದ ಈ ಭೂಪ್ರದೇಶ ಪ್ರಕೃತಿದತ್ತ ರಕ್ಷಣೆಯನ್ನು ನೀಡಿದೆ. ಇಂತಹ ಬೆಟ್ಟಗಳ ಸಾಲಿನಲ್ಲಿ ನದಿ, ಸಣ್ಣನದಿ, ಹಳ್ಳಗಳು ಹರಿಯುವುದು ಸಾಮಾನ್ಯ. ಈ ನೀರಿನ ಪ್ರದೇಶದ ಆಸುಪಾಸಿನಲ್ಲಿ ಇರುವ ಫಲವತ್ತಾದ ಮಣ್ಣಿನಿಂದಾಗಿ ಕೃಷಿಗೆ ಯೋಗ್ಯವಾದ ಪ್ರದೇಶ ದೊರಕಿದೆ. ಮಣ್ಣು ಫಲವತ್ತಾದರೂ ಇಲ್ಲಿ ಮಳೆ ಕಡಿಮೆಯಾದದ್ದರಿಂದ ಇತ್ತೀಚಿನವರೆಗೂ ಈ ಪ್ರದೇಶ ಒಣಬೇಸಾಯಕ್ಕೆ ಒಳಪಟ್ಟಿತ್ತು. ಆದರೆ ಸಿಂಗಟಾಲೂರು ಅಣೆಕಟ್ಟು ಮತ್ತು ಕೆಲವು ಕೆರೆಗಳ ನಿರ್ಮಾಣದಿಂದ ಹಾಗೂ ಕೊಳವೆಬಾವಿಗಳಿಂದಾಗಿ ಇಂದು ಈ ಭೂಭಾಗ ನೀರಾವರಿ ಭೂಮಿ

ಯಾಗಿದೆ. ಇಲ್ಲಿಯ ಭೂಭೌತಿಕ ಸ್ವರೂಪ ಇಲ್ಲಿ ದೊರೆಯುವ ಅದಿರು, ಖನಿಜ, ಶಿಲಾಸ್ತೋಮ, ಮಣ್ಣು, ಸಸ್ಯಗಳು ಮಾನವನಿಗೆ ಸಹಕಾರಿಯಾಗಿದ್ದವು. ಇದುವೇ ಪ್ರಾಚೀನ ಮನುಷ್ಯ ಒಕ್ಕಲುಸಂಸ್ಕೃತಿ ಆರಂಭಿಸಲು ಪ್ರೇರಣೆಯಾಗಿರಬೇಕು.

ಒಟ್ಟಾರೆ ಭೌಗೋಳಿಕವಾಗಿ ಹೂವಿನಹಡಗಲಿ ಪ್ರಾಚೀನ ಪ್ರದೇಶವಾಗಿದ್ದು, ವಿಶಾಲವಾಗಿ ಹರಡಿಕೊಂಡಿದೆ. ಇಲ್ಲಿ ಹರಿಯುವ ತುಂಗಭದ್ರಾ ನದಿಯು ಹಲವು ರೀತಿಯಲ್ಲಿ ಜನಜೀವನದ ಮೇಲೆ ಪ್ರಭಾವ ಬೀರಿದೆ. ಅಲ್ಲದೆ ಅನೇಕ ಸಂಸ್ಕೃತಿಗಳ ಬೆಳವಣಿಗೆಗೂ ಕಾರಣವಾಗಿದೆ. ಇಲ್ಲಿನ ಬೆಟ್ಟ ಗುಡ್ಡಗಳಲ್ಲಿ ದೊರೆಯುವ ನೀರನ್ನು ಆಧರಿಸಿ ಆದಿಮಾನವರು ಈ ಸ್ಥಳವನ್ನು ಆಯ್ಕೆ ಮಾಡಿಕೊಂಡರು. ಉತ್ತಮವಾದ ಭೂಮಿಯಲ್ಲಿ ವ್ಯವಸಾಯದ ಕಸುಬನ್ನು ಕರಗತ ಮಾಡಿಕೊಂಡರು. ಫಲವತ್ತಾದ ಭೂಮಿ, ದೊಡ್ಡದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲತೆಗಳಿಂದ ಇಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಮಾನವರು ವಾಸಿಸಲು ಸಾಧ್ಯವಾಯಿತು. ಮುಂದೆ ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿದ ಅರಸರಿಗೆ ಇಲ್ಲಿನ ಭೌಗೋಳಿಕ ಪರಿಸರವೇ ಅವರ ಕೀರ್ತಿಪತಾಕೆ ಹೆಚ್ಚಿಸಿಕೊಳ್ಳಲು ಸಹಾಯಕವಾಯಿತು. ಅವರು ದೇವಾಲಯ, ಅರಮನೆ, ಗುರುಮನೆ, ವಾಸದ ಕಟ್ಟಡಗಳನ್ನು, ಶಿಲ್ಪಗಳನ್ನು ನಿರ್ಮಿಸಲು, ತಮಗೆ ಬೇಕಾದ ಆಯುಧೋಪಕರಣಗಳನ್ನು ತಯಾರಿಸಿ ಕೊಳ್ಳಲು ಹಾಗೂ ತಮ್ಮ ರಾಜಾಜ್ಞೆಗಳನ್ನು ಹೊರಡಿಸಲು ಬೇಕಾದ ಕಚ್ಚಾವಸ್ತುಗಳಾದ ಶಿಲೆ, ಲೋಹ, ಮಣ್ಣು ಹಾಗೂ ಮರ ಮುಟ್ಟುಗಳನ್ನು ಒಂದೆಡೆ ಒದಗಿಸಿತು. ಇನ್ನೊಂದೆಡೆ ಫಲವತ್ತಾದ ಭೂಪ್ರದೇಶ ಕೃಷಿಯನ್ನು ಕಂಡುಕೊಂಡು ವಿವಿಧ ಆಹಾರದ ಬೆಳೆಗಳನ್ನು ಬೆಳೆಯಲು ಸಹಾಯವಾಯಿತು. ಮತ್ತೊಂದೆಡೆ ಇಲ್ಲಿನ ನೈಸರ್ಗಿಕ ಪರಿಸರವು ತಾಯಿ ಮಗುವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಸಂರಕ್ಷಿಸುವಂತೆ ಇಡೀ ಮಾನವ ಕುಲವನ್ನು ಇಲ್ಲಿನ ಬೆಟ್ಟಗುಡ್ಡಗಳು ರಕ್ಷಿಸಿ ಮಾನವನ ಅಭಿವೃದ್ಧಿಗೆ ಮತ್ತು ಸಂಸ್ಕೃತಿ ಪ್ರಸರಣಕ್ಕೆ ನೇರವಾಗಿ ಕಾರಣವಾಯಿತು.

ಅದರಂತೆ ಈ ಪ್ರದೇಶದ ಪರಿಸರದಲ್ಲಿರುವ ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ದೊಡ್ಡ ಗ್ರಾನೈಟ್ ಕಲ್ಲುಗುಂಡುಗಳ ರಾಶಿಯನ್ನು ಹೊದ್ದುಕೊಂಡಿರುವ ಬೆಟ್ಟಸಾಲುಗಳು, ನಿಸರ್ಗ ನಿರ್ಮಿತವಾದ ಬೃಹತ್ ಗವಿಗಳು, ಕಂದರಗಳು, ಏಕಶಿಲಾ ಬೆಟ್ಟಗಳು, ಬಂಡೆಗಳ ಕಡಿದಾದ ಇಳಿಜಾರುಗಳು ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಬೆಟ್ಟಗುಡ್ಡಗಳ ನಡುವೆ ನುಸುಳಿ ಹರಿಯುವ ತುಂಗಭದ್ರಾ ನದಿ ಈ ಪ್ರದೇಶಕ್ಕೆ ಮತ್ತೊಂದು ವರದಾನ, ಜನರ ಜೀವನದಿ ಕೂಡ. ಇಂದಿಗೂ ಈ ಪ್ರದೇಶದಲ್ಲಿ ಹಲವಾರು ಅಪರೂಪದ ಪ್ರಾಣಿವರ್ಗ ಹಾಗೂ ಸಸ್ಯವರ್ಗಗಳು ಕಂಡುಬರಲು ಇದು ಕಾರಣವಾಗಿದೆ. ಇಲ್ಲಿ ಹಲವಾರು ಅಪರೂಪದ ಗಿಡಮೂಲಿಕೆಗಳು ಇರುವುದಾಗಿ ಹಲವಾರು ದೇಶ ವಿದೇಶಗಳ ಔಷಧತಜ್ಞರು ಹಾಗೂ ಸಂಶೋಧಕರು ದೃಢಪಡಿಸುತ್ತಾರೆ. ಹಲವಾರು ಸಾಧುಸಂತರು

ಮತ್ತು ಜನಪದರು ಬೆಳೆಸಿಕೊಂಡು ಬಂದ ನಾಟಿ ವೈದ್ಯ ಪದ್ಧತಿಯನ್ನು ಇಂದಿಗೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇದಕ್ಕೆ ಇಲ್ಲಿನ ಉತ್ತಮ ಪರಿಸರವೇ ಕಾರಣವಾಗಿದೆ.

ಹೂವಿನಹಡಗಲಿ ಪ್ರದೇಶವು ವ್ಯವಸಾಯದ ಕಸುಬನ್ನು ಕರಗತ ಮಾಡಿಕೊಂಡ ನದಿ ಬಯಲಿನ ಪ್ರದೇಶವಾದ್ದರಿಂದ ಇಲ್ಲಿ ವಿವಿಧ ಸಮುದಾಯದವರು ತಮ್ಮ ನೆಲೆಯನ್ನು ಕಂಡು ಕೊಂಡಿದ್ದಾರೆ. ಅವರಲ್ಲಿ ವಿಶೇಷವಾಗಿ ಪಶುಸಂಗೋಪನಾ ವೃತ್ತಿಯ ಗೊಲ್ಲರು, ಕುರುಬರು ಈ ಪ್ರದೇಶದಲ್ಲಿ ಕಂಡುಬರುತ್ತಾರೆ. ಕಾರಣ ಅವರಿಗೆ ಅನುಕೂಲವಾದ ನೀರು ಮತ್ತು ಹುಲ್ಲು ಇಲ್ಲಿನ ಪರಿಸರದಲ್ಲಿ ಹೇರಳವಾಗಿ ದೊರೆಯುತ್ತದೆ. ಅದೇ ರೀತಿ ಬೇಟೆಯಾಡಲು ಅನುಕೂಲವಾದ ಅರಣ್ಯ ಪ್ರದೇಶ ಹಾಗೂ ಪ್ರಾಣಿವರ್ಗ ಇಲ್ಲಿ ಹೆಚ್ಚಾಗಿದ್ದುದರಿಂದ ಬೇಡ, ಅಡವಿಚೆಂಚ, ಮ್ಯಾಸಬೇಡ, ಹಕ್ಕಿಪಿಕ್ಕಿ, ಕೊರಚ ಮುಂತಾದ ಬುಡಕಟ್ಟು ಸಮುದಾಯಗಳು ಮತ್ತು ಪಶುಪಾಲಕ ಸಮುದಾಯದವರು ಈ ಪ್ರದೇಶದಲ್ಲಿ ಬಹು ಹಿಂದಿನಿಂದ ನೆಲೆ ನಿಂತಿದ್ದಾರೆ. ಇದಕ್ಕೆ ಇಲ್ಲಿನ ಭೌಗೋಳಿಕ ಪರಿಸರವೇ ಮುಖ್ಯ ಕಾರಣವಾಗಿದೆ.

**ಟಿಪ್ಪಣಿಗಳು**

೧. ಸದಾಶಿವ ಕೆ., ಸಮಗ್ರ ಭಾರತದ ಇತಿಹಾಸ, ಪು.ಸಂ.೨.

೨. ನೋಡಿ: ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ್

೩. Census of India 2011: Data from the 2011 Census, including cities, villages and towns (Provisional), Census Commission of India. Archive

೪. ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲೆಯ ಕೋಟೆಗಳು, ಪು.ಸಂ.೧,೨-೩

೫. Gazetteer of India, Bellary District. P.No.8

೬. South Indian Inscriptions, Vol.IX-Part-I-Chalukyas of Kalyani, Retrieved ೨೦೦೬-೧೦-೧೮

೭. ಈ ಕುರಿತಂತೆ ಐದು ಶಾಸನಗಳು ಉಲ್ಲೇಖಿಸಿವೆ. ಹೆಚ್ಚಿನ ಮಾಹಿತಿಗೆ ನೋಡಿ: ಏವೂರಿನ ಶಾಸನ(ಕ್ರಿ.ಶ.೧೦೭೭), ಹೂವಿನ ಹಡಗಲಿ ಶಾಸನ(ಕ್ರಿ.ಶ.೧೦೯೦) ಮತ್ತು ಕೊಟ್ನೆಕಲ್ ಶಾಸನ (ಕ್ರಿ.ಶ.೧೧೪೮), ಯೇಣಗಿ ಶಾಸನ(ಕ್ರಿ.ಶ.೧೨೫೫) ಹಾಗೂ ಆಲೂರ ಶಾಸನ (ಕ್ರಿ.ಶ.೧೦೯೧).

೮. South Indian Inscriptions, Vol IX – Part-I-Yadavas.

೯. ಕ.ವಿ.ವಿ.ಶಾಸನ ಸಂಪುಟ-೧, ಹಡಗ-೧೩, ಕ್ರಿ.ಶ.೧೧೦೪

೧೦. ಅದೇ, ಹಡಗ-೮೩, ಕ್ರಿ.ಶ.೧೦೯೦

೧೧. Source: Census of India, 2001 census of India 2011. Primary Census Abstarct, Karnataka Series 30. Directorate of Census Operation, Karnataka.

೧೨. ಚಂದ್ರಶೇಖರ ಟಿ.ಆರ್., ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು, ಪು.೪೭-೪೮.

೧೩. Gazetteer of India, Bellary District, ಪೂರ್ವೋಕ್ತ.

೧೪. ಚಂದ್ರಶೇಖರ ಟಿ.ಆರ್., ಪೂರ್ವೋಕ್ತ.

೧೫. Subba Rao B., Stone age Culture of Bellary and Sankalia H.D.Mesolithic and premesolithic Industries from Excavations at Sanganakalu, Bellary.

೧೬. Gazetteer of India, Bellary District, ಪೂರ್ವೋಕ್ತ.

೧೭. ಚಂದ್ರಶೇಖರ ಟಿ.ಆರ್., ಪೂರ್ವೋಕ್ತ.

೧೮. Gazetteer of India, Bellary District, ಪೂರ್ವೋಕ್ತ.

೧೯. ಚಂದ್ರಶೇಖರ ಟಿ.ಆರ್., ಪೂರ್ವೋಕ್ತ.

□□

ಅಧ್ಯಾಯ : ಮೂರು

# ಐತಿಹಾಸಿಕ ವಿಶ್ಲೇಷಣೆ

## ಪೀಠಿಕೆ

ಭಾರತದ ಇತಿಹಾಸದಲ್ಲಿ ಕರ್ನಾಟಕವು ಅತ್ಯಂತ ಪ್ರಾಚೀನ ಮತ್ತು ಭವ್ಯವಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಭರತಖಂಡದಲ್ಲಿ ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಬಹಳ ದೊಡ್ಡದು ಮತ್ತು ವಿಶಿಷ್ಟವಾದುದು. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ, ಧಾರ್ಮಿಕ ದರ್ಶನದ ದಿವ್ಯದೃಷ್ಟಿಯಲ್ಲಿ ಸಾಹಿತ್ಯ ಸೃಷ್ಟಿಯ ರಸಮಾರ್ಗದಲ್ಲಿ, ಶಿಲ್ಪ ಸಂಗೀತಾದಿಗಳ ಕಲೋಪಾಸನೆಗಳಲ್ಲಿ ಹೀಗೆ ಜೀವನದ ಎಲ್ಲ ರಂಗಗಳಲ್ಲಿಯೂ ಕರ್ನಾಟಕದ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಕರ್ನಾಟಕದ ಪ್ರಾಚೀನ ಇತಿಹಾಸವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಆದರೂ ಕ್ರಿ.ಶ.ದ ಪ್ರಾರಂಭದಲ್ಲಿ ಶಾತವಾಹನರು ಪ್ರಬಲವಾದ ರಾಜಕೀಯ ಶಕ್ತಿಯಾಗಿ ಕನ್ನಡ ರಾಜ್ಯವನ್ನು ಆಳಿ ಈ ಸಂಸ್ಕೃತಿಯನ್ನು ಬೆಳೆಸಲು ಕಾರಣರಾದರು. ಕರ್ನಾಟಕವನ್ನು ಆಳಿದ ಮೊಟ್ಟಮೊದಲ ಪ್ರಮುಖ ರಾಜವಂಶ ಇದು. ಇವರು ಕ್ರಿ.ಶ. ಒಂದನೇ ಶತಮಾನದಿಂದ ಮೂರನೇ ಶತಮಾನದವರೆಗೆ ಆಳಿದರು. ಇವರ ಮೂಲನಿವಾಸ 'ಸಾತಾಹನಿಹಾರ'. ಅಂದರೆ ಅದು ಈಗಿನ ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳ ಭಾಗ. ಕ್ರಿ.ಶ. ನಾಲ್ಕನೆಯ ಶತಮಾನದ ಕಾಲಕ್ಕೆ ಕರ್ನಾಟಕದಲ್ಲಿ ಎರಡು ರಾಜ್ಯಗಳು ಸ್ಥಾಪನೆಯಾದವು. ಕರ್ನಾಟಕದ ಉತ್ತರ ಭಾಗದ ಬಹಳಷ್ಟು ಪ್ರದೇಶಗಳನ್ನೊಳಗೊಂಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಬನವಾಸಿಯನ್ನು ರಾಜಧಾನಿಯನ್ನಾಗಿಸಿಕೊಂಡು ಸ್ಥಾಪಿತವಾದ ಕದಂಬ ರಾಜ್ಯ ಒಂದಾದರೆ, ಇನ್ನೊಂದು ಕರ್ನಾಟಕದ ದಕ್ಷಿಣ ಭಾಗವನ್ನು ಒಳಗೊಂಡ ತಲಕಾಡನ್ನು ರಾಜಧಾನಿಯನ್ನಾಗಿಸಿಕೊಂಡ ಗಂಗರಾಜ್ಯ. ಈ ಎರಡೂ ರಾಜ್ಯಗಳು ಕನ್ನಡದ ಸಂಸ್ಕೃತಿ ಬೆಳೆಯಲು ಭದ್ರವಾದ ತಳಹದಿಯನ್ನು ಹಾಕಿದವು. ಮುಂದೆ ಆರನೇ ಶತಮಾನದ ಹೊತ್ತಿಗೆ ಚಾಲುಕ್ಯ ಅರಸರಿಂದ ವಿಸ್ತರಿಸಲ್ಪಟ್ಟ ರಾಷ್ಟ್ರಕೂಟ ಅರಸ ನೃಪತುಂಗ ಹೇಳಿದ "ಕಾವೇರಿಯಿಂದಮಾ ಗೋದಾವರಿಮಿರ್ದ ನಾಡದಾ ಕನ್ನಡ" ಎಂದು ಕನ್ನಡ ನಾಡಿನ ಗಡಿಯನ್ನು ಗುರುತಿಸಲಾಗಿದೆ. ಹಾಗೆಯೇ ಕನ್ನಡ ನಾಡಿನ ಜನರ ಬಗೆಗೂ ಅನೇಕ ಶಾಸನಗಳಲ್ಲಿ ತಿಳಿಸಲಾಗಿದೆ. "ಪದನರಿದು ನುಡಿಯಲುಂ ನುಡಿದುದ ನರಿಯದಾರಯಲು ಮಾರ್ಪರಾ ನಾಡವರ್ಗಳ್, ಚದುರರ್ ನಿಜದಿಂ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಅಂದರೆ ಕನ್ನಡಿಗರು ಹಿತಮಿತವಾಗಿ ನುಡಿಯುವವರು,

ನುಡಿದುದನ್ನು ಅರ್ಥೈಸಲು ಬಲ್ಲವರು, ಅನಕ್ಷರಸ್ಥರಾದರೂ ಕಾವ್ಯ ರಚನೆಯಲ್ಲಿ ಪ್ರವೀಣರು ಎಂದು ಹೇಳಿರುವ ಶ್ರೀವಿಜಯನ ಈ ನುಡಿಗಳು ಕನ್ನಡಿಗರ ಸಹಜ ಗುಣ ಮತ್ತು ಜಾಣ್ಮೆಗಳನ್ನು ಎತ್ತಿ ತೋರಿಸುತ್ತವೆ.[೧]

ಹೀಗೆ ಕರ್ನಾಟಕ ಮತ್ತು ಕನ್ನಡದ ಜನತೆಯ ಕುರಿತು ಹಲವಾರು ಮಾಹಿತಿಗಳು ದೊರೆತಿವೆ. ಶಾತವಾಹನರಿಂದ ಆರಂಭಗೊಂಡು ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ ಹೀಗೆ ಹಲವಾರು ರಾಜಮನೆತನಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಧರ್ಮ ಮತ್ತು ಸಂಸ್ಕೃತಿ ಮುಂತಾದವುಗಳನ್ನು ಸಮೃದ್ಧಿಗೊಳಿಸಿದರು. ಇಂದು ಕರ್ನಾಟಕವು ೩೦ ಜಿಲ್ಲಾ ಕೇಂದ್ರಗಳನ್ನು ಒಳಗೊಂಡಿದೆ. ಈ ಎಲ್ಲ ಕೇಂದ್ರಗಳೂ ತಮ್ಮದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿವೆ. ಹಾಗೆಯೇ ರಾಜ್ಯದ ಒಂದು ಜಿಲ್ಲಾ ಕೇಂದ್ರವಾದ ಬಳ್ಳಾರಿಯೂ ಸಹ ಐತಿಹಾಸಿಕವಾಗಿ ರಾಜಕೀಯ ಮಹತ್ವವನ್ನು ಪಡೆದುಕೊಂಡಿದೆ. ಈ ಪ್ರದೇಶವು ಕ್ರಿ.ಶ. ಮೂರನೇ ಶತಮಾನದಿಂದ ಕ್ರಮವಾಗಿ ಮೌರ್ಯ, ಶಾತವಾಹನ, ಪಲ್ಲವ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಪಶ್ಚಿಮದ ಚಾಲುಕ್ಯ, ಚೋಳ, ಕಲಚೂರ, ಹೊಯ್ಸಳ, ನೊಳಂಬ, ವಿಜಯನಗರ ಸಾಮ್ರಾಜ್ಯ, ಬಹಮನಿ ಸಾಮ್ರಾಜ್ಯ, ಪಾಳೆಯಗಾರ, ಮರಾಠ, ನಿಜಾಮ ಮತ್ತು ಹೈದರ್ ಆಲಿ ಹಾಗೂ ಟಿಪ್ಪುಸುಲ್ತಾನನವರೆಗೆ ಎಲ್ಲ ರಾಜವಂಶಸ್ಥರಿಂದ ಆಳ್ವಿಕೆಗೆ ಒಳಪಟ್ಟಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಈ ಪ್ರದೇಶವು ಅಶೋಕನ ಕಾಲಕ್ಕೆ ಮೌರ್ಯ ಸಾಮ್ರಾಜ್ಯದ ದಕ್ಷಿಣ ತುದಿಯ ಧರ್ಮಪ್ರಸಾರದ ಪ್ರಮುಖ ಘಟಕವಾಗಿತ್ತೆಂದು ಈ ಜಿಲ್ಲೆಯಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ತಿಳಿದುಬರುತ್ತದೆ. ಈ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಉದೆಗೋಳ ಮತ್ತು ನಿಟ್ಟೂರುಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಹಾಗೆಯೇ ಬಳ್ಳಾರಿಯ ಹತ್ತಿರವಿರುವ ಆಂಧ್ರದ ಆದೋನಿ ತಾಲೂಕಿಗೆ ಸೇರಿದ ಮ್ಯಾಕಡೋಣಿಯಲ್ಲಿ ಈತನ ಶಾಸನ ದೊರೆತಿದೆ. ಇದರ ನಂತರ ಹಿರೇಹಡಗಲಿ ಶಾಸನದ ಪಲ್ಲವ ಶಿವಸ್ಕಂದವರ್ಮನವರೆಗೆ ಯಾವುದೇ ಶಾಸನ ದೊರೆಯುವುದಿಲ್ಲ. ಮುಂದೆ ಸ್ವಲ್ಪಮಟ್ಟಿಗೆ ಚಾಲುಕ್ಯ ಮತ್ತು ರಾಷ್ಟ್ರಕೂಟರ ಶಾಸನಗಳು ದೊರೆತಿವೆ. ೧೧ನೇ ಶತಮಾನದ ನಂತರ ಕಲ್ಯಾಣ ಚಾಲುಕ್ಯರ ಕಾಲದಿಂದೀಚೆಗೆ ಶಾಸನಗಳು ಹೆಚ್ಚಾಗಿ ಕಂಡುಬಂದಿವೆ. ದೊರೆತಿರುವ ಶಾಸನಗಳಲ್ಲಿ ದಾನಶಾಸನಗಳೇ ಅಧಿಕವಾಗಿವೆ. ಬಳ್ಳಾರಿ ಜಿಲ್ಲೆಯು ಒಟ್ಟು ೭ ತಾಲೂಕು ಕೇಂದ್ರಗಳನ್ನು ಒಳಗೊಂಡಿದೆ. ಇದರಲ್ಲಿ ಹಡಗಲಿಯೂ ಒಂದು. ಹಡಗಲಿಯು ಕೂಡ ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ಮುಖ್ಯವಾಗಿ ಪಲ್ಲವ, ಕಲ್ಯಾಣದ ಚಾಲುಕ್ಯ, ಹೊಯ್ಸಳ, ಯಾದವ ಮತ್ತು ವಿಜಯನಗರದ ಅರಸರು ಮುಂತಾದ ಅರಸು ಮನೆತನಗಳ ಆಳ್ವಿಕೆಗೆ ಹಡಗಲಿಯು ಒಳಪಟ್ಟಿದ್ದಿತು. ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ಹೂವಿನಹಡಗಲಿಯ ಐತಿಹಾಸಿಕ ಹಿನ್ನೆಲೆಯನ್ನು ಗುರುತಿಸುವುದರ ಮೂಲಕ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಬಹುದಾಗಿದೆ.

## ೩.೧. ರಾಜಕೀಯ ಸ್ಥಿತಿಗತಿ

ಇತಿಹಾಸದ ಪುನರ್‌ನಿರ್ಮಾಣಕ್ಕೆ ಇರುವ ಅತಿ ಪ್ರಮುಖವಾದ ಆಧಾರಗಳೆಂದರೆ ಶಾಸನಗಳು. ಕರ್ನಾಟಕದ ರಾಜಕೀಯ ಚರಿತ್ರೆಯು ಒಂದು ರೀತಿಯಲ್ಲಿ ಅರಸುಮನೆತನಗಳ ಮೇಲಾಟದಂತೆ ಕಂಡುಬರುತ್ತದೆ. ಇದು ಕರ್ನಾಟಕಕ್ಕೆ ಮಾತ್ರವಲ್ಲದೆ ಇಡೀ ದೇಶಕ್ಕೆ ಅನ್ವಯಿಸುತ್ತದೆ. ಒಂದೊಂದು ಕಾಲದಲ್ಲಿ ಒಂದೊಂದು ರಾಜವಂಶ ಮತ್ತು ಅದರಲ್ಲಿ ಕೆಲವು ರಾಜರು ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಮೇಲಕ್ಕೇರಿರುವುದು. ಅವರ ಶಕ್ತಿ ಮತ್ತು ಮನೋಧರ್ಮಕ್ಕನುಗುಣವಾಗಿ ರಾಜ್ಯದಲ್ಲಿ ಬದಲಾವಣೆಗಳಾಗಿರುವುದು. ಇವು ಪ್ರಾಚೀನ ರಾಜಕೀಯದಲ್ಲಿ ಕಂಡುಬರುವ ನಿರಂತರ ಕ್ರಿಯೆಗಳು. ಹಾಗಾಗಿ ಯಾವ ರಾಜನೇ ಅಧಿಕಾರಕ್ಕೆ ಬಂದರೂ ಜನಜೀವನದ ನಿರಂತರ ಪ್ರವಾಹ ಏಕಪ್ರಕಾರವಾಗಿ ವಿಕಸನಗೊಳ್ಳಬೇಕಾದುದು ಅವಶ್ಯಕ. ಪ್ರಬಲವಾದ ಧರ್ಮಿಷ್ಠನಾದ, ಸುಸಂಸ್ಕೃತನಾದ ರಾಜ ಬಂದಾಗ ಅದರ ಫಲವಾಗಿ ಪ್ರಜೆಗಳ ಜೀವನ ಹೆಚ್ಚು ನೆಮ್ಮದಿಯಿಂದ ಕೂಡಿರುತ್ತದೆ ಎಂದು ಹೇಳಬಹುದು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು ಹಲವಾರು ಘಟ್ಟಗಳನ್ನು ಕಂಡಿದೆ. ಈ ತಾಲೂಕಿನ ರಾಜಕೀಯ ಇತಿಹಾಸವನ್ನು ಐತಿಹಾಸಿಕವಾಗಿ ಅಧ್ಯಯನ ಮಾಡಲು ಶಾಸನಗಳೇ ಮೂಲಾಧಾರಗಳಾಗಿವೆ. ಮೊದಲು ಮೌರ್ಯರು ಹಡಗಲಿಯನ್ನು ಆಳ್ವಿಕೆ ಮಾಡಿದ ಬಗ್ಗೆ ಅನುಮಾನಗಳಿವೆ. ಆದರೆ ಮೌರ್ಯರ ಆಡಳಿತದ ವ್ಯಾಪ್ತಿಗೆ ಈ ಪ್ರದೇಶ ಸೇರಿತ್ತೆಂಬುದು ಸಮೀಪದ ಕೊಪ್ಪಳ, ಸಿರುಗುಪ್ಪ ಮುಂತಾದ ಪ್ರದೇಶಗಳಲ್ಲಿ ದೊರೆತ ಮೌರ್ಯರ ಶಾಸನಗಳಿಂದ ತಿಳಿದುಬರುತ್ತದೆ. ಶಾತವಾಹನರ ಕಾಲಕ್ಕೆ ಈ ಪ್ರದೇಶ ಸೇರಿದೆ ಎಂದು ಹೇಳಲಾಗುತ್ತದೆಯಾದರೂ ಅವರು ಹಾಕಿಸಿರುವ ಶಾಸನಗಳಾವುವೂ ಇದುವರೆಗೆ ಇಲ್ಲಿ ದೊರೆತಿಲ್ಲ. ಆದರೆ ಪಲ್ಲವರಿಗೆ ಸಂಬಂಧಿಸಿದ ಹಿರೇಹಡಗಲಿಯ ಪ್ರಾಕೃತ ಶಾಸನದಲ್ಲಿ 'ಶಾತವಾಹನೀರಠ್ಠ' ಎಂಬ ಉಲ್ಲೇಖವಿದೆ. ಶಾತವಾಹನೀ ರಾಷ್ಟ್ರದ ಚಿಲ್ಲರೇಕಕೋಂಡುಂಕೇ ಎಂಬ ಗ್ರಾಮವನ್ನು ಪಲ್ಲವ ರಾಜನು ದತ್ತಿಯಾಗಿ ನೀಡಿರುವಂತೆ ಹೇಳಿರುವುದರಿಂದ ಪಲ್ಲವರ ಕಾಲಕ್ಕೆ ಈ ಪ್ರದೇಶವು ಅವರ ಸಾಮ್ರಾಜ್ಯಕ್ಕೆ ಸೇರಿದ್ದರೂ ಪಲ್ಲವರು ತಮ್ಮ ಸಾಮ್ರಾಜ್ಯದ ಭಾಗಗಳನ್ನು ಗುರುತಿಸುವಾಗ ಈ ಭಾಗವನ್ನು 'ಶಾತವಾಹನೀರಠ್ಠ' ಎಂಬ ಹೆಸರಿನಿಂದಲೇ ಕರೆದಿರುತ್ತಾರೆ.

ಹಿರೇಹಡಗಲಿಯ ಚನ್ನಪ್ಪ ಎಂಬ ವ್ಯಾಪಾರಸ್ಥರ ವಶದಲ್ಲಿದ್ದ ಶಾಸನವು ೮ ಹಲಗೆಗಳಲ್ಲಿದ್ದು ಮುದ್ರೆಯಲ್ಲಿ 'ಶಿವಸ್ಕನ್ದವರ್ಮಣಃ' ಎಂಬ ಬರಹವಿದೆ. ಕಾಲ ನಮೂದಿಲ್ಲದ ಪ್ರಾಕೃತ ಭಾಷೆಯ ಈ ಶಾಸನವು ಕಾಂಚಿಯ ಪ್ರಾಚೀನ ಪಲ್ಲವರ ಕಾಲಕ್ಕೆ ಸೇರಿದೆ. ಪಲ್ಲವರ ದೊರೆ ಶಿವಸ್ಕಂದವರ್ಮನು ತನ್ನ ೮ನೇ ವರ್ಷದ ಆಳ್ವಿಕೆಯ, ವರ್ಷಋತುವಿನ ೬ನೇ ಭಾಗದ ೫ನೆಯ ದಿನದ ಆಳ್ವಿಕೆಗೆ ಸೇರಿದೆ. ಚಿಲ್ಲರೇಕಕೊಂಡುಕೇ ಗ್ರಾಮವು ಸಾತಹನಿರಠ್ಠ(ಸಾತವಾಹನಿ ರಾಷ್ಟ್ರ)ದಲ್ಲಿತ್ತು ಎಂಬುದು ಸಿಕ್ಕಂತಹ ೮ ಹಲಗೆಗಳಲ್ಲಿನ ೪ನೆಯ ಹಲಗೆಯ ಹಿಂಭಾಗದಲ್ಲಿ ಇದರ ಉಲ್ಲೇಖವಿದೆ. ಈ ಶಾಸನದ ಪಾಠ ಈ ಕೆಳಗಿನಂತಿದೆ.

"ಪರಿಮಿತಸ ಪತೀಭಾಗೋ ೧ ನಾಗನಂದಿಸ ಪತೀಭಾಗೋ ೧ ಗೋಲಿಸ ಪತಿಭಾಗೋ ೧ ಖಂದಸಮಸ ಪತಿಭಾಗೋ ೧ ಸಾಮೀಜಸ ಪತಿಭಾಗೋ ೧ ಏತೇಸಿ ಬಂಬಣಾಣಂ ಅಗಿಸಮಜ ಪಮುಖಾಣಂ ಸಾತಹನಿರಠ್ಠೇ ಗಾಮೇ ಚಿಲ್ಲರೇಕಕೋಂಡುಂಕೇ ದಖಿಣ ಸೀಮಂ ಪುವ್ವದತ್ತಂ"[೨]

ಈ ಶಾಸನದ ಪಾಠವು ಶಾತವಾಹನರದ್ದಲ್ಲ. ಬದಲಾಗಿ ಪಲ್ಲವರ ಕಾಲಕ್ಕೆ ಸೇರಿದೆ. ಆದರೂ ಶಾತವಾಹನೀರಠ್ಠ ಎಂಬುದು ಪಲ್ಲವರ ಸಾಮ್ರಾಜ್ಯದ ಭಾಗವಾಗಿತ್ತು ಎಂಬುದು ಇದರಿಂದ ವೇದ್ಯವಾಗುತ್ತದೆ. ಕಾಲಸೂಚಿ ಇಲ್ಲದ ಈ ಶಾಸನದ ಆಧಾರದ ಮೇಲೆ ಪಲ್ಲವರು ಹಡಗಲಿಯಲ್ಲಿ ತಮ್ಮ ಆಡಳಿತವನ್ನು ನಡೆಸಿದ್ದರು ಎಂಬುದು ತಿಳಿಯುತ್ತದೆ.

### ಕಲ್ಯಾಣದ ಚಾಲುಕ್ಯರು

ಹೂವಿನಹಡಗಲಿಯು ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿದ್ದಷ್ಟು ಕಾಲ ಬೇರೆ ಯಾರ ಆಡಳಿತದಲ್ಲೂ ಇರಲಿಲ್ಲವೆಂದು ತೋರುತ್ತದೆ. ಚಾಲುಕ್ಯ ಅರಸ ಎರಡನೆಯ ಜಯಸಿಂಹನಿಂದ ಹಿಡಿದು ಎರಡನೇ ಜಗದೇಕಮಲ್ಲನವರೆಗೆ ಈ ತಾಲೂಕು ಕೇಂದ್ರ ಆಡಳಿತಕ್ಕೆ ಒಳಪಟ್ಟಿದ್ದಿತು. ಮುಖ್ಯವಾಗಿ ಕಲ್ಯಾಣ ಚಾಲುಕ್ಯರು ಹಡಗಲಿಯಲ್ಲಿ ನೇರವಾಗಿ ಆಳ್ವಿಕೆ ಮಾಡಲಿಲ್ಲ. ಬದಲಾಗಿ ಇವರ ಸಾಮಂತರು, ಮಾಂಡಲಿಕರು ಆಳ್ವಿಕೆ ನಡೆಸಿದ್ದು ಶಾಸನಗಳಿಂದ ತಿಳಿದುಬರುತ್ತದೆ. ಚಾಲುಕ್ಯರು ಬಾದಾಮಿ ಚಾಲುಕ್ಯರ ವಂಶಜರೆಂದು ತಮ್ಮನ್ನು ತಾವು ಕರೆದುಕೊಂಡಿದ್ದಾರೆ. ಇವರು ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದರು. ರಾಷ್ಟ್ರಕೂಟರ ಅರಸನಾದ ಕರ್ಕನು ತುಂಬಾ ಅಸಮರ್ಥನಾಗಿದ್ದನು. ಇದನ್ನು ಅರಿತ ಇಮ್ಮಡಿ ತೈಲಪನು ಇನ್ನಿತರ ಮಾಂಡಲಿಕ ಅರಸರ ಸಹಾಯದೊಂದಿಗೆ ಕರ್ಕನನ್ನು ಸೋಲಿಸಿ ಕಲ್ಯಾಣ ಚಾಲುಕ್ಯ ರಾಜ್ಯ ಸ್ಥಾಪನೆ ಮಾಡಿದನು. ಈ ವಂಶದ ಸ್ಥಾಪಕನಾದ ೨ನೇ ತೈಲಪನು ಕ್ರಿ.ಶ.೯೭೩ರಲ್ಲಿ ಪಟ್ಟಕ್ಕೆ ಬಂದ ವಿಷಯ ಆರನೇ ವಿಕ್ರಮಾದಿತ್ಯನ ಗದಗ ಶಾಸನದಿಂದ ತಿಳಿಯುತ್ತದೆ.[೩] ಈ ಸಾಮ್ರಾಜ್ಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಹಲವು ಭಾಗಗಳನ್ನೊಳಗೊಂಡಿತ್ತು. ಇವರು ಮೊದಲು ಮಾನ್ಯಖೇಟದಲ್ಲಿಯೇ ರಾಜ್ಯಭಾರ ಮಾಡುತ್ತಿದ್ದರು. ಅನಂತರ ಬೀದರ್ ಜಿಲ್ಲೆಯ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಆದುದರಿಂದ ಈ ಮನೆತನಕ್ಕೆ ಕಲ್ಯಾಣ ಚಾಲುಕ್ಯರು ಎಂದು ಹೆಸರು ಬಂದಿತು.

ಹೂವಿನಹಡಗಲಿಯನ್ನು ಆಡಳಿತಕ್ಕೆ ಒಳಪಡಿಸಿಕೊಂಡ ಕಲ್ಯಾಣ ಚಾಲುಕ್ಯರ ರಾಜರಲ್ಲಿ ಇಮ್ಮಡಿ ಜಯಸಿಂಹ ಮೊದಲಿಗನಾಗಿದ್ದಾನೆ. ಇಮ್ಮಡಿ ತೈಲಪನು ೨೪ ವರ್ಷಗಳ ಕಾಲ(ಕ್ರಿ.ಶ.೯೭೩ ರಿಂದ ೯೯೭ರವರೆಗೆ) ರಾಜ್ಯವಾಳಿದ. ನಂತರ ಕ್ರಿ.ಶ.೯೯೭ ಸುಮಾರಿಗೆ ಈತನ ಹಿರಿಯ ಮಗ ಸತ್ಯಾಶ್ರಯನು ಪಟ್ಟಕ್ಕೆ ಬಂದನು. ಈತನು ಕ್ರಿ.ಶ.೯೯೭ ರಿಂದ ಕ್ರಿ.ಶ.೧೦೦೮ರವರೆಗೆ ರಾಜ್ಯವಾಳಿದನು. ಸತ್ಯಾಶ್ರಯನಿಗೆ ಗಂಡುಮಕ್ಕಳಿಲ್ಲದ ಕಾರಣ ಆತನ ಉತ್ತರಾಧಿಕಾರಿಯಾಗಿ ದಶವರ್ಮನ ಮಗನಾದ

ಐದನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೦೮ರಲ್ಲಿ ಪಟ್ಟಕ್ಕೆ ಬಂದನು. ಈತನ ನಂತರ ಈತನ ತಮ್ಮನಾದ ಅಣ್ಣಯ್ಯನು ಪಟ್ಟಕ್ಕೆ ಬಂದನು. ಆದರೆ ಈತನ ಆಳ್ವಿಕೆಯ ಬಗೆಗೆ ಯಾವುದೇ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಆದರೆ ವಿಕ್ರಮಾದಿತ್ಯನ ತಂಗಿಯು ಇಮ್ಮಡಿ ಜಯಸಿಂಹನ ಅಕ್ಕನೂ ಆಗಿದ್ದ ಅಕ್ಕಾದೇವಿ ಅಯ್ಯಣನ ತರುವಾಯ ರಾಜ್ಯವಾಳಿದ್ದಾಳೆಂದು ಅನೇಕ ಶಾಸನಗಳು ಉಲ್ಲೇಖಿಸಿವೆ. ನಂತರ ಇಮ್ಮಡಿ ಜಯಸಿಂಹನು ಅಧಿಕಾರಕ್ಕೆ ಬಂದನು. ಈತನು ಜಗದೇಕಮಲ್ಲನೆಂದು ಪ್ರಸಿದ್ಧನಾಗಿದ್ದಾನೆ. ಮುಖ್ಯವಾಗಿ ಈತನ ಆಳ್ವಿಕೆಯಲ್ಲಿ ಹಲವಾರು ಜನ ಸಾಮಂತರು, ಮಾಂಡಲಿಕರು, ಮಹಾಮಂಡಲೇಶ್ವರರು ಹಡಗಲಿಯನ್ನು ಆಳಿರುವುದು ಕಂಡುಬರುತ್ತದೆ. ಅವುಗಳು ಈ ಕೆಳಗಿನಂತಿವೆ. ಹಡಗಲಿಯ ಕತ್ತೆಬೆನ್ನೂರು ಎಂಬ ಗ್ರಾಮದಲ್ಲಿ ಉಡಚಲವ್ವ ದೇವಾಲಯದ ಬಳಿ ಬಿದ್ದಿರುವ ಕಲ್ಲಿನ ಕಂಬದಲ್ಲಿನ ಶಾಸನದಲ್ಲಿ "ಕ್ರಿ.ಶ.೧೦೨೫ರಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲನ(ಇಮ್ಮಡಿ ಜಯಸಿಂಹ) ಆಳ್ವಿಕೆಯಲ್ಲಿ ಮಧುವರ್ಮದೇವನು ಬೆಣ್ಣೆವೂರು-೧೨ನ್ನು ಆಳುತ್ತಿದ್ದಂತೆ" ಉಲ್ಲೇಖವಿದೆ.[೪] ಈತನ ಇನ್ನೊಬ್ಬ ಮಾಂಡಲಿಕನಾದ ನೊಳಂಬ ಪಲ್ಲವಪೆರ್ಮನಡಿಯು ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦, ಕೋಗಳಿ-೫೦೦ನ್ನು ಆಳುತ್ತಿದ್ದ ಉಲ್ಲೇಖವು ಮಾನ್ಯರಮಸಲವಾಡ ಎಂಬ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ ತಿಳಿಸುತ್ತದೆ.[೫] ಅಯ್ಯಣಭೀವ ಜೋಗರಸ, ಮಾರಗಾವುಂಡ ಮತ್ತಿತರರು ಕೋಗಳಿ-೫೦೦ರಲ್ಲಿದ್ದ ಮೊಸಳೆಮಡುವನ್ನು ಗುರುದೇವನು ಆಳುತ್ತಿರುವುದನ್ನು ಸಹ ಈ ಶಾಸನ ಉಲ್ಲೇಖಿಸಿದೆ. ಮಲ್ಲಯ್ಯನ ಗುಡ್ಡದ ಕ್ರಿ.ಶ.೧೦೧೭ರ ಶಾಸನದ ಕಾಲಕ್ಕೆ ನೊಳಂಬರು ಇವನ ಸಾಮಂತರಾಗಿ ನೊಳಂಬವಾಡಿ-೩೨೦೦೦, ಕದಂಬಳಿಗೆ-೧೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುದಿಯಹರವಿ-೭೦, ಕರಿವಿಡಿ-೩೦ನ್ನು ಆಳುತ್ತಿದ್ದರು ಎಂಬುದು ಸಿರುಗುಪ್ಪದಲ್ಲಿ ದೊರೆತಿರುವ ಶಾಸನದಿಂದ ತಿಳಿಯುತ್ತದೆ. ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ಹೊರಗಡೆ ಇರುವ ಶಾಸನದಲ್ಲಿ ಚಾಳುಕ್ಯ ದೊರೆ ಜಗದೇಕಮಲ್ಲದೇವನ ಆಳ್ವಿಕೆಯಲ್ಲಿ ಉದಯಾದಿತ್ಯನು ಕೆಲವು ನಾಡುಗಳನ್ನು(ಹೆಸರು ಅಸ್ಪಷ್ಟ) ಆಳುತ್ತಿರುವಾಗ ಜಗದೇಕಮಲ್ಲ ನಿರ್ಮಾಡಿ ನೋ(ಳಂಬ)ನು ಮಾಸೆಯವಾಡಿ ೧೪೦ನ್ನು ಆಳುತ್ತಿರುವುದನ್ನು ಉಲ್ಲೇಖಿಸಲಾಗಿದೆ.[೬] ಹೀಗೆ ಕರ್ನಾಟಕದಲ್ಲಿ ಇಮ್ಮಡಿ ಜಯಸಿಂಹನ ಆಳ್ವಿಕೆಯ ಸಂದರ್ಭದಲ್ಲಿ ಹಡಗಲಿಯಲ್ಲಿ ಈತನ ಸಾಮಂತರು ಕೆಲವು ಭಾಗಗಳಲ್ಲಿ ಆಳ್ವಿಕೆ ನಡೆಸಿರುವುದನ್ನು ಶಾಸನಗಳಿಂದಲೇ ತಿಳಿದುಬರುತ್ತದೆ.

ಹೀಗೆ ಇವರಲ್ಲದೆ ಇಮ್ಮಡಿ ಜಯಸಿಂಹನ ಪ್ರಮುಖ ಮಂಡಲೇಶ್ವರರು ಮತ್ತು ಅಧಿಕಾರಿಗಳೂ ಕೂಡ ಇದ್ದರು. ಅವರೆಂದರೆ ೧. ಗೋವೆಯ ಕದಂಬ ವಂಶದ ಚಟ್ಟಯ್ಯ ಅಥವಾ ಚಟಲದೇವ, ೨. ಕ್ರಿ.ಶ.೧೦೧೯ರಲ್ಲಿ ಬನವಾಸಿ ೧೨೦೦೦, ಸಾಂತಲಿಗೆ ೧೦೦೦ ಮತ್ತು ಹವ್ಯೆ ೫೦೦ ಇವುಗಳನ್ನಾಳುತ್ತಿದ್ದ ಮಹಾಮಂಡಳೇಶ್ವರ ಕುಂದಮರಸ (ಈತನು ಸತ್ತಿಗನ ಚಟ್ಟನೆಂದೂ ಇರಿವ ಬೆಡಂಗದೇವನ ಮಗನೆಂದು ಕರೆಯಲ್ಪಡುತ್ತಿದ್ದ, ೩. ಸಿಂಧಿನಗರ ಇಲ್ಲವೆ ನಾಸಿಕ ಜಿಲ್ಲೆಯ ಸಿನ್ನೇರದಿಂದ ತನ್ನ ಆನುವಂಶಿಕ ಪ್ರದೇಶವನ್ನಾಳುತ್ತಿದ್ದ ಸೇವುಣ ವಂಶದ ಯಾದವರ ಮಹಾಸಾಮಂತ

ಮುಮ್ಮಡಿ ಬಿಲ್ಲಮ, ೪. ಕ್ರಿ.ಶ.೧೦೩೪ರಲ್ಲಿ ಪಾನುಂಗಲ್ ೫೦೦ನ್ನು ಆಳುತ್ತಿದ್ದ ಹಾನಗಲ್ಲು ಕದಂಬ ರಾಜಮನೆತನದ ಮಹಾಮಂಡಳೇಶ್ವರ ಇಮ್ಮಡಿ ಮಯೂರವರ್ಮ, ೫. ಕ್ರಿ.ಶ.೧೦೩೭ರಲ್ಲಿ ಬನವಾಸಿ ೧೨೦೦೦ ಮತ್ತು ಪಾನುಂಗಲ್ ೫೦೦ನ್ನು ಆಳುತ್ತಿದ್ದ ಮಹಾಮಂಡಳೇಶ್ವರ ತೋಯಿಮದೇವ[೭] ಇವರೆಲ್ಲರೂ ಪ್ರಮುಖ ಸಾಮಂತ ಅರಸರು, ಮಹಾಮಂಡಳೇಶ್ವರರು ಮತ್ತು ಸೇನಾನಿಗಳು ಸಹ ಆಗಿದ್ದರು ಎಂದು ಹೇಳಬಹುದು. ಮುಖ್ಯವಾಗಿ ಇವರ ಮಾಂಡಲಿಕರಲ್ಲಿ ನೊಳಂಬರು ಪ್ರಭಾವಿಗಳಾಗಿದ್ದರು. ಇವರೆಲ್ಲರ ಶ್ರಮದಿಂದಾಗಿ ಬನವಾಸಿ, ಬೆಳ್ವತಿ, ಪುಲಿಗೆರೆ, ಗೋವಾ, ಕಲ್ಯಾಣ, ಶಿವಮೊಗ್ಗ, ತುಮಕೂರು, ಕಡಪ, ಅನಂತಪುರ ಮೊದಲಾದ ಪ್ರದೇಶಗಳು ಇಮ್ಮಡಿ ಜಯಸಿಂಹನ ಕಲ್ಯಾಣ ಚಾಲುಕ್ಯ ರಾಜ್ಯದಲ್ಲಿ ವಿಲೀನವಾಗಿದ್ದವು.

ಹಡಗಲಿ ತಾಲೂಕಿನ ಕತ್ತೆಬೆನ್ನೂರು, ಮಾನ್ಯರಮಸಲವಾಡ ಮತ್ತು ಸೋಗಿ ಗ್ರಾಮಗಳಲ್ಲಿ ದೊರೆತ ಶಾಸನಗಳನ್ನಾಧರಿಸಿ ಇಮ್ಮಡಿ ಜಯಸಿಂಹನ ಮಾಂಡಲಿಕರು ಹಡಗಲಿಯಲ್ಲಿ ತಮ್ಮ ಆಳ್ವಿಕೆಯನ್ನು ನಡೆಸಿದ್ದರು ಎಂದು ತಿಳಿದುಬರುತ್ತದೆ. ಇಮ್ಮಡಿ ಜಯಸಿಂಹನಿಗೆ ಸುಗ್ಗಲದೇವಿ ಎಂಬ ಹೆಂಡತಿಯಿದ್ದಳು. ಈಕೆ ವೀರಶೈವ ಶರಣ ದೇವರದಾಸಿಮಯ್ಯನ ಭಕ್ತೆಯಾಗಿದ್ದಳು. "ದೇವರದಾಸಿಮಯ್ಯನ ಪುರಾಣ"ದಲ್ಲಿ ದೇವರದಾಸಿಮಯ್ಯನು ಇಮ್ಮಡಿ ಜಯಸಿಂಹನನ್ನು ಲಿಂಗಾಯತ ಮತಕ್ಕೆ ಮತಾಂತರಗೊಳಿಸಿದನೆಂದೂ ಉಲ್ಲೇಖಿಸಲಾಗಿದೆ.[೮] ಇಮ್ಮಡಿ ಜಯಸಿಂಹನ ಹಲವಾರು ಶಿಲಾಶಾಸನಗಳು, ತಾಮ್ರಪಟಗಳು ಉಪಲಬ್ಧವಿದ್ದು ಅವು ಕ್ರಿ.ಶ. ಏಪ್ರಿಲ್, ಮೇ ೧೦೧೮ರಿಂದ ಅಕ್ಟೋಬರ್, ನವಂಬರ್ ೧೦೪೨ರವರೆಗಿನವುಗಳಾಗಿವೆ. ಈತನ ನಂತರ ಈತನ ಮಗನಾದ ಮೊದಲನೆಯ ಸೋಮೇಶ್ವರ ಪಟ್ಟಕ್ಕೆ ಬಂದನು.

ತ್ರೈಲೋಕ್ಯಮಲ್ಲ, ಆಹವಮಲ್ಲ ಎಂದು ಬಿರುದಾಂಕಿತನಾದ ಮೊದಲನೆಯ ಸೋಮೇಶ್ವರನ ಆಳ್ವಿಕೆಯ ಕಾಲದ ಹಲವಾರು ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಲಭ್ಯವಾಗಿವೆ. ಇವನು ಕ್ರಿ.ಶ.೧೦೪೨ರಲ್ಲಿ ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಯ ಕಾಲದಲ್ಲಿ ಶಾಸನಗಳಲ್ಲಿ ಈತನ ನಾಲ್ವರು ಹೆಂಡತಿಯರ ಹೆಸರುಗಳು ಉಲ್ಲೇಖಗೊಂಡಿವೆ. ಇಮ್ಮಡಿ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ ಮತ್ತು ಮುಮ್ಮಡಿ ಜಯಸಿಂಹ ಇವರ ತಾಯಿಯಾದ ಬಾಚಲದೇವಿ ಮೊದಲ ಹೆಂಡತಿ ಇರಬೇಕು(ಗದಗಿನ ತ್ರಿಕೂಟೇಶ್ವರ ದೇವಾಲಯದ ಕ್ರಿ.ಶ.೧೧೦೨ರ ಶಾಸನ ಚಾಲುಕ್ಯ ವಿಕ್ರಮ ಕಾಲದ ೨೭ನೆಯ ವರುಷ). ಅದೇ ಸ್ಥಳದ ಕ್ರಿ.ಶ.೧೯೮ರ ಇನ್ನೊಂದು ಶಾಸನವು ಸೋಮೇಶ್ವರ ಮತ್ತು ವಿಕ್ರಮಾದಿತ್ಯರು ಬಾಚಲದೇವಿಯ ಮಕ್ಕಳೆಂದು ಉಲ್ಲೇಖಿಸಿದೆ.[೯] ಚಂದಲಾದೇವಿ ಇಲ್ಲದೆ ಚಂದ್ರಿಕಾದೇವಿ ಎಂಬುವಳು 'ಪಿರಿಯರಸಿ' ಎಂದು ಕರೆಯಲ್ಪಟ್ಟಿದ್ದಾಳೆ.[೧೦] ಮೈಳಾಲದೇವಿ ಎಂಬುವಳನ್ನು 'ಪಿರಿಯರಸಿ'ಯೆಂದು ತಿಳವಳ್ಳಿಯಲ್ಲಿ ದೊರೆತ ಶಾಸನದಿಂದ ತಿಳಿಯುತ್ತದೆ.[೧೧] ಕೊನೆಯದಾಗಿ ನಾಲ್ಕನೆಯವಳು ಕೇತಲದೇವಿ.[೧೨] ಜೊತೆಗೆ ಕೆಲವು ಗ್ರಂಥಗಳಲ್ಲಿ ಮೊದಲನೆಯ ಸೋಮೇಶ್ವರನಿಗೆ ಎಂಟು ಜನ ಪತ್ನಿಯರಿದ್ದರು. ಅವರೆಂದರೆ ಚಾಚಲದೇವಿ, ಚಂದಲಕಬ್ಬೆ,

ಮೈಳಲದೇವಿ, ಕೇತಲದೇವಿ, ಲೀಲಾದೇವಿ, ಲಚ್ಚಲದೇವಿ, ಹೊಯ್ಸಳದೇವಿ ಮತ್ತು ಚಾಮಲದೇವಿ ಎಂದು ಗುರುತಿಸುತ್ತಾರೆ.[೧೩]

ಮೊದಲನೆಯ ಸೋಮೇಶ್ವರನು ಹಲವಾರು ಜನ ಮಾಂಡಲಿಕರು ಮತ್ತು ಅಧಿಕಾರಿ ವರ್ಗದವರನ್ನು ಇಟ್ಟುಕೊಂಡೇ ಆಳ್ವಿಕೆಯನ್ನು ನಡೆಸಿದನು. ಈತನ ಪ್ರಮುಖ ಮಾಂಡಲಿಕರೆಂದರೆ ೧. ಕ್ರಿ.ಶ.೧೦೩೪ ಮತ್ತು ಕ್ರಿ.ಶ.೧೦೪೪ರಲ್ಲಿ ಪಾನುಂಗಲ್ ೫೦೦ನ್ನು ಆಳುತ್ತಿದ್ದ ಹಾನಗಲ್ಲು ಕದಂಬ ವಂಶದ ಮಹಾಮಂಡಳೇಶ್ವರ ಇಮ್ಮಡಿ ಮಯೂರವರ್ಮ. ೨. ಕ್ರಿ.ಶ.೧೦೪೫ರಲ್ಲಿ ಕಿಸುಕಾಡು-೭೦, ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ಗಳನ್ನಾಳುತ್ತಿದ್ದ ಮಹಾಮಂಡಳೇಶ್ವರ ಸಿಂಗಣ ದೇವರಸ, ೩. ಕ್ರಿ.ಶ.೧೦೪೫ ಮತ್ತು ೧೦೬೨ರಲ್ಲಿ ಬನವಾಸಿ-೧೨೦೦೦ವನ್ನು ಬಳ್ಳಿಗಾವೆಯಿಂದ ಆಳುತ್ತಿದ್ದ ಮಹಾಮಂಡಳೇಶ್ವರ ಚಾವುಂಡರಾಯ, ೪. ಕ್ರಿ.ಶ. ೧೦೪೫ರಲ್ಲಿ ಕೊಂಕಣದ ಕೆಲಭಾಗ ತಲಕಾಡು ಮತ್ತು ಶಾವಿಮಲೆಗಳನ್ನು ಆಳುತ್ತಿದ್ದ ಹೊಯ್ಸಳ ಮಹಾಮಂಡಳೇಶ್ವರ ವಿನಯಾದಿತ್ಯ, ೫. ಕ್ರಿ.ಶ.೧೦೫೨-೫೩ರಲ್ಲಿ ಕೊಂಕಣದಲ್ಲಿ ತನ್ನ ಅನುವಂಶಿಕ ಪ್ರದೇಶವನ್ನು ಆಳುತ್ತಿದ್ದ ಗೋವೆಯ ಕದಂಬ ವಂಶದ ಮೊದಲನೆಯ ಜಯಕೇಶಿ.[೧೪] ಇವರ ಜೊತೆಗೆ ಈ ಮಹಾಮಂಡಳೇಶ್ವರರಲ್ಲದೆ ತನ್ನ ಕುಟುಂಬದ ಸದಸ್ಯರನ್ನು ತನ್ನ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ರಾಜ್ಯಪಾಲರನ್ನಾಗಿ ಮತ್ತು ಇತರ ಅಧಿಕಾರಿಗಳನ್ನಾಗಿ ನೇಮಿಸಿದ್ದನು. ಈತನಿಗೆ ಸಂಬಂಧಿಸಿದ ಶಾಸನಗಳಲ್ಲಿ ಕೆಲವು ಶಾಸನಗಳು ಹಡಗಲಿಯಲ್ಲಿಯೂ ದೊರೆತಿವೆ. ಮುಖ್ಯವಾಗಿ ಹಡಗಲಿಗೆ ಸೇರಲ್ಪಡುವ ಮೈಲಾರ ಎಂಬ ಗ್ರಾಮದಲ್ಲಿನ ಸೋಮೇಶ್ವರ ದೇವಾಲಯದ ಮುಖ್ಯ ದ್ವಾರದ ಬಳಿ ಇರುವ ಶಾಸನವು ಸುಮಾರು ಕ್ರಿ.ಶ.೧೦೪೮ರ ಕಾಲಾವಧಿಗೆ ಒಳಪಟ್ಟಿದ್ದು. ಇದು ಮೊದಲನೆಯ ಸೋಮೇಶ್ವರನ ಮಹಾಮಂಡಲೇಶ್ವರನಾದ (ಗಂಡರಾ)ದಿತ್ಯರಸನು ಸಿಂಧವಾಡಿ-೧೦೦೦ ಅಗ್ರಹಾರ ನರಗುಂದ ಮತ್ತು ಬೆಣ್ಣೆವೂರುಗಳನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.[೧೫]

ತಳಕಲ್ಲು ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿ ನಿಲ್ಲಿಸಿರುವ ಶಾಸನವು ಕ್ರಿ.ಶ.೧೦೫೨ರ ಕಾಲಾವಧಿಯದ್ದಾಗಿದೆ. ಈ ಶಾಸನದಲ್ಲಿ ಮೊದಲನೇ ಸೋಮೇಶ್ವರನ ಸಾಮಂತನಾದ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾನಡಿದೇವನು ಕೋಗಳಿ-೫೦೦, ಬಲ್ಲಕುಂದೆ-೩೦೦ ಮತ್ತು ಕದಂಬಳಿಗೆ-೧೦೦೦ಗಳನ್ನು ಆಳುತ್ತಿದ್ದನೆಂದು ಮತ್ತು ಆತನ ಅಧೀನ ಅಧಿಕಾರಿ ಬಮ್ಮದೇವನು ತೊಣಂಕಲಿ, ನಿಟ್ಟೂರು ಮತ್ತು ಬಸಿಕೋಡುಗಳನ್ನು ಆಳುತ್ತಿದ್ದನೆಂದು ಉಲ್ಲೇಖಿಸಲಾಗಿದೆ.[೧೬] ಹಿರೇಹಡಗಲಿಯ ಕಲ್ಲೇಶ್ವರ ದೇವಸ್ಥಾನದ ಆವರಣದಲ್ಲಿ ನಿಲ್ಲಿಸಿದ ಶಾಸನವು ಕ್ರಿ.ಶ.೧೦೫೭ರ ಕಾಲಾವಧಿಯದ್ದಾಗಿದೆ. ಈ ಶಾಸನದಲ್ಲಿ ಆಹವಮಲ್ಲನ ಮಗ ಯುವರಾಜ ವಿಕ್ರಮಾದಿತ್ಯ ಗಂಗ-ಪೆರ್ಮಾಡಿಯು ಗಂಗವಾಡಿ-೯೬೦೦೦, ಬನವಾಸಿ-೧೨೦೦೦ ಮತ್ತು ನೊಳಂಬವಾಡಿ-೩೨೦೦೦ ಪ್ರಾಂತ್ಯಗಳನ್ನು ಆಳುತ್ತಿದ್ದನೆಂಬುದಾಗಿ ತಿಳಿಸುತ್ತದೆ.[೧೭] ತ್ರೈಲೋಕ್ಯಮಲ್ಲದೇವನ ಆಡಳಿತದಲ್ಲಿ ವಿಷ್ಣುವರ್ಧನ ವಿಜಯಾದಿತ್ಯನು ವೆಂಗಿ ಮತ್ತು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನೆಂದು ಹೂವಿನ

ಹಡಗಲಿಯ ಪಾಂಡುರಂಗ ದೇವಸ್ಥಾನದ ಆವರಣದ ಬಳಿ ಕಲ್ಲಿನ ಮೇಲಿರುವ ಇನ್ನೊಂದು ಶಾಸನ ತಿಳಿಸುತ್ತದೆ.[೧೮] ಮೊದಲಘಟ್ಟದ ತುಂಗಭದ್ರಾ ಅಣೆಕಟ್ಟಿನ ಅಸಿಸ್ಟೆಂಟ್ ಇಂಜಿನಿಯರ್ ಕಛೇರಿಯ ಪ್ರವೇಶದ್ವಾರದ ಹತ್ತಿರ ಶಾಸನವಿದೆ. ಆದರೆ ಇದು ಸ್ಪಷ್ಟವಾಗಿಲ್ಲ. ಆದರೂ ಸಹ ಈ ಶಾಸನ ತ್ರೈಲೋಕ್ಯಮಲ್ಲ ಮೊದಲನೆಯ ಸೋಮೇಶ್ವರನ ಕಾಲದ್ದು ಎಂದು ಗುರುತಿಸಲಾಗಿದೆ. ಈ ಶಾಸನದಲ್ಲಿ ಕಣಮೂರ್ಖ(?) ವಂಶದ ಮಹಾಸಾಮಂತ ಮನ್ನೆಯ ಅಜ್ಜರಸ ಮತ್ತು ಕಿಸುಕಾಡು-೭೦....,....-೭೦, ತೇರಗಲೆ...ಯವಾಡಿ-೧೪೦ ಮತ್ತು ಇತರ ವಿಭಾಗಗಳನ್ನು ಆಳುತ್ತಿದ್ದ ಒಬ್ಬ ಸಾಮಂತನ ಉಲ್ಲೇಖವಿದೆ. ಹಾಗೆಯೇ ಪನ್ನಾಳೆಯ ಕೋಟೆ ಮತ್ತು ಕೊಂಕಣ ದೇಶವನ್ನು ಸಹ ಉಲ್ಲೇಖಿಸಿರುವುದು ಕಂಡುಬರುತ್ತದೆ.[೧೯] ಹೀಗೆ ಹಡಗಲಿಯಲ್ಲಿ ಮೊದಲನೆಯ ಸೋಮೇಶ್ವರನ ಆಡಳಿತಕ್ಕೆ ಸಂಬಂಧಿಸಿದಂತೆ ಶಾಸನಗಳು ದೊರೆತಿದ್ದು ಆತನ ಆಡಳಿತದಲ್ಲಿನ ಸಾಮಂತರ ಉಲ್ಲೇಖ ದೊರೆಯುತ್ತದೆ. ಈ ಹಿಂದೆಯೇ ಹೇಳಿದಂತೆ ಈತನ ಕುಟುಂಬದವರೂ ಸಹ ರಾಜ್ಯದ ಕೆಲವು ಭಾಗಗಳಲ್ಲಿ ಆಳ್ವಿಕೆಯನ್ನು ನಡೆಸುತ್ತಿರುವುದು ಶಾಸನಗಳಿಂದ ತಿಳಿಯುತ್ತದೆ. ಅದರಲ್ಲಿಯೂ ಮೊದಲನೇ ಸೋಮೇಶ್ವರನ ರಾಣಿಯರೂ ರಾಜ್ಯಗಳನ್ನು ಆಳುತ್ತಿದ್ದರು ಎಂಬುದಕ್ಕೆ ಆಧಾರಗಳು ದೊರೆತಿವೆ. ಈತನ ಹೆಂಡತಿಯಾದಂತಹ ಮೈಳಾಲದೇವಿ ಬನವಾಸಿ ೧೨೦೦೦ನ್ನು ಆಳುತ್ತಿದ್ದಳೆಂದು ಕ್ರಿ.ಶ.೧೦೫೩-೫೪ರ ತಿಳವಳ್ಳಿಯ ಶಾಸನವೊಂದರಲ್ಲಿ ಉಕ್ತವಾಗಿದೆ. ಈತನ ಇನ್ನೊಬ್ಬ ಹೆಂಡತಿಯಾದ ಕೇತಲದೇವಿ ಕ್ರಿ.ಶ. ೧೦೫೪ರಲ್ಲಿ 'ತ್ರಿಭೋಗ್ಯಾಭ್ಯಂತರ ಸಿದ್ಧಿ'ಯ ಪ್ರಕಾರ ಪೊನ್ನವಾಡ ಎಂಬ ಅಗ್ರಹಾರವನ್ನು ಆಳುತ್ತಿದ್ದಳು. ಇವನ ಹಿರಿಯ ಮಗ ಇಮ್ಮಡಿ ಸೋಮೇಶ್ವರನು ಕ್ರಿ.ಶ.೧೦೫೦ರಲ್ಲಿ ಬೆಳವೊಲ-೩೦೦೦ ಮತ್ತು ಪುಲಿಗೆರೆ ೩೦೦ಗಳನ್ನಾಳುತ್ತಿದ್ದ. ಇವನ ಎರಡನೆಯ ಮಗ ೬ನೇ ವಿಕ್ರಮಾದಿತ್ಯ ಕ್ರಿ.ಶ.೧೦೫೫-೫೬ರಲ್ಲಿ ಗಂಗವಾಡಿ ೯೬೦೦೦ ಮತ್ತು ಬನವಾಸಿ ೧೨೦೦೦ಗಳ ಒಡೆಯನಾಗಿದ್ದ. ಈತನ ಮೂರನೆಯ ಮಗ ಮುಮ್ಮಡಿ ಜಯಸಿಂಹನು ಕ್ರಿ.ಶ.೧೦೬೪ರಲ್ಲಿ ತರ್ದವಾಡಿ ೧೦೦೦ವನ್ನಾಳುತ್ತಿದ್ದನು. ಇವನ ನಾಲ್ಕನೆಯ ಮಗ ವಿಷ್ಣುವರ್ಧನ ವಿಜಯಾದಿತ್ಯನು ಕ್ರಿ.ಶ.೧೦೬೪ರಲ್ಲಿ ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದನು.[೨೦]

ಮೊದಲನೆಯ ಸೋಮೇಶ್ವರನು ಅಧಿಕಾರಕ್ಕೆ ಬಂದ ಕೂಡಲೇ ಚಾಲುಕ್ಯರ ರಾಜಧಾನಿಯನ್ನು ಮಾನ್ಯಖೇಟದಿಂದ ಕಲ್ಯಾಣಕ್ಕೆ ವರ್ಗಾಯಿಸಿದನು(ಇಂದಿನ ಬೀದರ್ ಜಿಲ್ಲೆ). ಕಲ್ಯಾಣ ನಗರವನ್ನು ಈತನೇ ನಿರ್ಮಿಸಿದನು ಮತ್ತು ಅತ್ಯಂತ ಸೌಂದರ್ಯಭರಿತ ಪಟ್ಟಣವನ್ನಾಗಿ ಮಾಡಿದ್ದನು. "ಅಂತಹ ಇನ್ನೊಂದು ನಗರವು ಹಿಂದೆ ಎಂದೂ ಇರಲಿಲ್ಲ. ಮುಂದೆ ಎಂದೂ ಇರುವುದಿಲ್ಲ" ಎಂದು ಬಿಲ್ಹಣನು ನಗರದ ಅಲಂಕಾರವನ್ನು ಕುರಿತು ಉದ್ಗರಿಸಿದ್ದಾನೆ.[೨೧] ಆದರೆ ಇಂತಹ ಸುಂದರ ನಗರವನ್ನು ನಿರ್ಮಿಸಿದ ಮೊದಲನೆಯ ಸೋಮೇಶ್ವರನು ಉತ್ಕಟವಾದ ದಾಹ, ಜ್ವರಬಾಧೆಯಿಂದ ನರಳುತ್ತಿದ್ದನು. ತನ್ನ ಅಂತ್ಯ ಸಮೀಪಿಸುತ್ತಿದ್ದುದನ್ನು ಮನಗಂಡು ಬಳ್ಳಾರಿ ಜಿಲ್ಲೆಯ ತುಂಗಭದ್ರಾ ತೀರದ ಪವಿತ್ರ ಕ್ಷೇತ್ರವೆನಿಸಿದ್ದ ಕುರುವತ್ತಿಗೆ ಬಂದು ಶೈವಧರ್ಮದ

ಶ್ರದ್ಧೆಗನುಸಾರವಾಗಿ ಆ ಪವಿತ್ರ ನದಿಯಲ್ಲಿ ಮುಳುಗಿ ಜಲಸಮಾಧಿ ಹೊಂದಿದನು ಎಂದು ಬಿಲ್ಹಣ ಕವಿ ಹೇಳಿದ್ದಾನೆ. ಈ ಹೇಳಿಕೆಯನ್ನು ಬಳ್ಳಿಗಾವೆಯ ಶಾಸನ ದೃಢಪಡಿಸುತ್ತದೆ. ಒಟ್ಟಾರೆಯಾಗಿ ಕ್ರಿ.ಶ.೧೦೪೨ರಿಂದ ಕ್ರಿ.ಶ.೧೦೬೮ರವರೆಗೆ ಮೊದಲನೆಯ ಸೋಮೇಶ್ವರನು ಆಡಳಿತ ನಡೆಸಿದ್ದು ಈತನ ಆಡಳಿತದ ವ್ಯಾಪ್ತಿಗೆ ಬಳ್ಳಾರಿ ಜಿಲ್ಲೆಯ ಹಡಗಲಿಯೂ ಒಳಪಟ್ಟಿತ್ತು ಎಂಬುದು ಈ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ.

ಮೊದಲನೆಯ ಸೋಮೇಶ್ವರನ ಮರಣದ ನಂತರ ಈತನ ಹಿರಿಯ ಮಗನಾದ ಎರಡನೆಯ ಸೋಮೇಶ್ವರನು ಕ್ರಿ.ಶ.೧೦೬೮ರ ಏಪ್ರಿಲ್ ೧೧ರಂದು ಅಧಿಕಾರಕ್ಕೆ ಬಂದನು. ಈತನು ಸುಮಾರು ೭ ವರ್ಷಗಳ ಕಾಲ ರಾಜ್ಯವಾಳಿ 'ಭುವನೈಕಮಲ್ಲ'ನೆಂದು ಬಿರುದಾಂಕಿತನಾಗಿದ್ದನು. ಈತನಿಗೆ ಸಂಬಂಧಿಸಿದಂತೆ ಕ್ರಿ.ಶ.೧೦೬೯ರ ಜುಲೈ–ಆಗಸ್ಟ್‌ನಿಂದ ೧೦೫೬ರ ಆಗಸ್ಟ್, ಸೆಪ್ಟೆಂಬರ್‌ವರೆಗೆ ಶಾಸನಗಳು ದೊರೆಯುತ್ತವೆ.[೨೨] ಈತನೂ ಕೂಡ ಹಲವಾರು ಮಾಂಡಲಿಕ ರಾಜರು ಮತ್ತು ಅಧಿಕಾರಿ ವರ್ಗದವರನ್ನಿಟ್ಟುಕೊಂಡೇ ಆಡಳಿತವನ್ನು ನಡೆಸಿದ್ದನು. ಜೊತೆಗೆ ಇವನ ತಮ್ಮಂದಿರಾಗಿದ್ದ ಜಯಸಿಂಹ ಮತ್ತು ೬ನೆಯ ವಿಕ್ರಮಾದಿತ್ಯರು ಚಾಲುಕ್ಯ ಸಾಮ್ರಾಜ್ಯದ ಕೆಲಭಾಗಗಳನ್ನು ಆಳುತ್ತಿದ್ದರು. ಜಯಸಿಂಹನಿಗೆ ನೊಳಂಬವಾಡಿಯ ಆಡಳಿತಾಧಿಕಾರವನ್ನು ಒಪ್ಪಿಸಲಾಗಿದ್ದು ಈತನು ಕ್ರಿ.ಶ.೧೦೭೨ರಲ್ಲಿ ಆ ಪ್ರಾಂತ್ಯವನ್ನು ಗೌಡವಾಡಿಯಿಂದ ಆಳುತ್ತಿದ್ದನು. ಮುಖ್ಯವಾಗಿ ಹಡಗಲಿಯನ್ನು ಜಯಸಿಂಹನೇ ಆಡಳಿತ ನಡೆಸಿದ್ದನು ಎಂಬುದು ಇದರಿಂದ ತಿಳಿದುಬರುತ್ತದೆ. ಹಡಗಲಿಯಲ್ಲಿ ಎರಡನೇ ಸೋಮೇಶ್ವರನ ಕಾಲಕ್ಕೆ ಸಂಬಂಧಪಟ್ಟ ಶಾಸನವು ಹೊಳಲು ಗ್ರಾಮದ ವೀರಭದ್ರ ದೇವಸ್ಥಾನದ ಪಶ್ಚಿಮ ಗೋಡೆಯ ಹತ್ತಿರ ನಿಲ್ಲಿಸಿದ ಶಾಸನವು ದಾನಕ್ಕೆ ಸಂಬಂಧಿಸಿದ ಮಾಹಿತಿಯನ್ನು ನೀಡುತ್ತದೆ. ಈ ಶಾಸನದ ಹೊರತಾಗಿ ಬೇರೆ ಯಾವ ಶಾಸನವೂ ಹಡಗಲಿಯಲ್ಲಿ ದೊರೆತಿಲ್ಲ. ಆದರೂ ಹಡಗಲಿಯು ಈತನ ಆಳ್ವಿಕೆಗೆ ಒಳಪಟ್ಟಿದ್ದಿತು ಎಂಬುದು ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ. ಇಮ್ಮಡಿ ಸೋಮೇಶ್ವರನು ಅಧಿಕಾರದ ಲಾಲಸೆಯಿಂದ ಉನ್ಮತ್ತನಾಗಿ ಪ್ರಜಾಕಲ್ಯಾಣವನ್ನು ಕಡೆಗಣಿಸಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ.[೨೩] ಇದರಿಂದ ಬೇಸತ್ತ ೬ನೇ ವಿಕ್ರಮಾದಿತ್ಯನು ಈತನನ್ನು ಯುದ್ಧದಲ್ಲಿ ಸೋಲಿಸಿ ಅಧಿಕಾರವನ್ನು ವಹಿಸಿಕೊಂಡನು.

ಆರನೆ ವಿಕ್ರಮಾದಿತ್ಯನು ಕಲ್ಯಾಣ ಚಾಲುಕ್ಯರ ಅರಸರಲ್ಲಿಯೇ ಅತ್ಯಂತ ಶ್ರೇಷ್ಠ ಚಕ್ರವರ್ತಿಯಾಗಿದ್ದಾನೆ. ಕ್ರಿ.ಶ.೧೦೭೬ರಲ್ಲಿ ಕಲ್ಯಾಣ ನಗರದಲ್ಲಿ ಪಟ್ಟಾಭಿಷಿಕ್ತನಾದ ನಂತರ ಅದೇ ವರ್ಷದ ಮಾರ್ಚ್ ೯ನೆಯ ದಿನಾಂಕದಂದು ತನ್ನದೊಂದು ಶಕವನ್ನೇ ಪ್ರಾರಂಭಿಸಿದನು. ಕವಿ ಬಿಲ್ಹಣನು 'ವಿಕ್ರಮಾಂಕದೇವ ಚರಿತ'ದಲ್ಲಿ ಈತನನ್ನು 'ಪರಮರ್ದಿ' ಎಂದು ಕರೆಯುತ್ತಾನೆ. ಈತನು ಕ್ರಿ.ಶ.೧೦೭೬ರಿಂದ ೧೧೨೬ರವರೆಗೆ ಸುಮಾರು ೫೦ ವರುಷಗಳ ಕಾಲ ರಾಜ್ಯಭಾರ ಮಾಡಿದನು.[೨೪] ೬ನೇ ವಿಕ್ರಮಾದಿತ್ಯನು ಮೊದಲನೇ ಸೋಮೇಶ್ವರನ ಪ್ರೀತಿಯ ಪುತ್ರನಾಗಿದ್ದ. ತನ್ನ ತಂದೆಯ ಜೀವಿತಾವಧಿಯಲ್ಲೇ ಅನೇಕಾನೇಕ ಯುದ್ಧಗಳನ್ನು ಮಾಡಿ ವೀರನೆನಿಸಿದ್ದನು. ಜೊತೆಗೆ

ಕ್ರಿ.ಶ.೧೦೫೫–೫೬ರಲ್ಲಿ ವಿಕ್ರಮಾದಿತ್ಯನು ಗಂಗವಾಡಿ ೯೬೦೦೦ ಮತ್ತು ಬನವಾಸಿ ೧೨೦೦೦ಗಳ ಆಡಳಿತವನ್ನು ಹಾನಗಲ್ಲು ಕದಂಬವಂಶದ ಹರಿಕೇಸರಿಯೆಂಬ ಮಂಡಳೇಶ್ವರನೊಂದಿಗೆ ನಿರ್ವಹಿಸಿದ್ದನು. ಈತನು ಕರ್ನಾಟಕದ ಅರಸರಲ್ಲಿಯೇ ರಾಷ್ಟ್ರಮಟ್ಟದ ಗೌರವ ಗಳಿಸಿದ ಚಕ್ರವರ್ತಿಗಳಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುತ್ತಾನೆ. ಅತ್ಯಧಿಕ ಶಾಸನಗಳನ್ನು ಬರೆಯಿಸಿ, ಯುದ್ಧ ಕಾರ್ಯ ಕೈಗೊಂಡು ಮತ್ತು ಬಹುಕಾಲ ಸಮರ್ಥ ಆಡಳಿತ ನಡೆಸಿದ್ದಾನೆ. ಇಂತಹ ರಾಜನ ಜೀವನೇತಿಹಾಸವನ್ನು ತಿಳಿಯಲು ಸಾಕಷ್ಟು ಸಂಖ್ಯೆಯ ಶಾಸನಗಳು, ಕವಿ ಬಿಲ್ಹಣನ 'ವಿಕ್ರಮಾಂಕದೇವ ಚರಿತ', ಮೂರನೇ ಸೋಮೇಶ್ವರನ 'ವಿಕ್ರಮಾಂಕಾಭ್ಯುದಯಂ' ಎಂಬ ಕಾವ್ಯಗಳು ಪ್ರಮುಖ ಆಧಾರಗಳಾಗಿವೆ. ವಿಕ್ರಮಾದಿತ್ಯನು ಪಟ್ಟಾಭಿಷಿಕ್ತನಾದ ಮೇಲೆ ಆತನು ಕೈಗೊಂಡ ಮೊಟ್ಟಮೊದಲ ಕಾರ್ಯವೆಂದರೆ ಶಕವರ್ಷಕ್ಕೆ ಬದಲಾಗಿ ಚಾಲುಕ್ಯ ವಿಕ್ರಮಕಾಲ ಅಥವಾ ಚಾಲುಕ್ಯ ವಿಕ್ರಮವರ್ಷವನ್ನು ಆರಂಭಿಸಿದನು. ಈ ಹೊಸ ಮನ್ವಂತರದ ಮೊದಲ ವರ್ಷ ಆತನ ಆಳ್ವಿಕೆಯ ಮೊದಲ ವರ್ಷವಾಗಿದೆ. ಅದು ಕ್ರಿ.ಶ.೧೦೭೬–೭೭(ಚೈತ್ರ, ಶುಕ್ಲ ಪ್ರತಿಪದೆ, ನಳ ಸಂವತ್ಸರ ಶಕ ೯೯೮). ಈತನು ಶಕವರ್ಷವನ್ನು ಅಳಿಸಿ 'ವಿಕ್ರಮವರ್ಷ'ದ ರೂಪದಲ್ಲಿ ತನ್ನ ಹೆಸರನ್ನು ಪ್ರಕಟಿಸಿದನು.[೨೫]

ವಿಕ್ರಮಾದಿತ್ಯನ ಶಾಸನಗಳು ಅಗಣಿತವಾಗಿದ್ದು ಬಹುವಿಸ್ತಾರವಾದ ಪ್ರದೇಶದಲ್ಲೆಲ್ಲ ಹರಡಿವೆ. ಈತನಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿಯೂ ಬಹಳಷ್ಟು ಶಾಸನಗಳು ದೊರೆತಿವೆ. ಅದರಲ್ಲಿ ಮುಖ್ಯವಾಗಿ ಹಡಗಲಿಯಲ್ಲಿ ಈತನ ಸಾಮಂತರು, ಮಹಾಮಂಡಳೇಶ್ವರ, ಮಂಡಳೇಶ್ವರ ಮುಂತಾದವರು ಆಳ್ವಿಕೆ ನಡೆಸಿರುವ ಉಲ್ಲೇಖಗಳು ದೊರೆಯುತ್ತವೆ. ಅಂದರೆ ಹಡಗಲಿಯೂ ಸಹ ಆರನೆ ವಿಕ್ರಮಾದಿತ್ಯನ ಆಡಳಿತಕ್ಕೆ ಒಳಪಟ್ಟಿದ್ದಿತು ಎಂಬುದು ಇಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ಹೂವಿನಹಡಗಲಿಯಲ್ಲಿನ ಕೇಶವಸ್ವಾಮಿ ದೇವಸ್ಥಾನದಲ್ಲಿ ಪಶ್ಚಿಮ ದ್ವಾರದ ಹತ್ತಿರ ನಿಲ್ಲಿಸಿದ ಶಾಸನದ ಪ್ರಾರಂಭದಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ–೩೨೦೦೦ ಮತ್ತು ಮಾಸವಾಡಿ–೧೪೦ಗಳನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ನಂತರ ಅರಸನ ಬ್ರಾಹ್ಮಣ ಸೈನ್ಯಾಧಿಕಾರಿ ರವಿ ದಂಡನಾಯಕನ ಸ್ತುತಿ ಇರುವುದನ್ನು ಕಾಣುತ್ತೇವೆ.[೨೬] ಅಂದರೆ ಪಾಂಡ್ಯದೇವನು ಆರನೆ ವಿಕ್ರಮಾದಿತ್ಯನ ಮಾಂಡಲಿಕ ಅರಸನಾಗಿದ್ದನು. ಈತನ ಆಡಳಿತದಲ್ಲಿ ಶೂರ ಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟೂರಾದ ಪೂವಿನ ಪೊಸವಡಂಗಿಲೆಯಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ದೇವಸ್ಥಾನಕ್ಕೆ ಭೂಮಿಯನ್ನು ದಾನ ನೀಡಿರುವ ಉಲ್ಲೇಖವಿದೆ. ಈ ಶಾಸನವು ಕ್ರಿ.ಶ.೧೯೦ರ ಕಾಲಮಾನದ್ದಾಗಿದೆ. ಮಹಾ ಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ–೩೨೦೦೦ವನ್ನು ಆಳುತ್ತಿರುವುದನ್ನು ಕ್ರಿ.ಶ.೧೧೧೦ರಲ್ಲಿ ಹೂವಿನಹಡಗಲಿಯ ಪಾಂಡುರಂಗ ದೇವಸ್ಥಾನದಲ್ಲಿ ದೊರೆತ ಶಾಸನವು ಉಲ್ಲೇಖಿಸಿರುವುದನ್ನು ಕಾಣುತ್ತೇವೆ.[೨೭] ಜೊತೆಗೆ ಸೋಗಿಯ ಗ್ರಾಮದ ಕೇಶವ ದೇವಸ್ಥಾನದ ಮುಂದಿನ ಶಾಸನದಲ್ಲೂ ಮಹಾಮಂಡಳೇಶ್ವರ ತ್ರಿಭುವನಮಲ್ಲ–ಪಾಂಡ್ಯದೇವನು ನೊಳಂಬವಾಡಿ–

೩೨೦೦೦ವನ್ನು ಮತ್ತು ಮಹಾಮಂಡಲೇಶ್ವರ ಘಟ್ಟಿಯರಸನು ಕೋಗಳಿ-೫೦೦ನ್ನು ಆಳುತ್ತಿದ್ದನು ಎಂದು ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ.ಶ.೧೧೨೧ ಆಗಿದೆ. ಬೇರೆ ಬೇರೆ ಕಾಲಾವಧಿಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ದೊರೆತಿರುವ ಶಾಸನಗಳು ಪಾಂಡ್ಯದೇವನ ಆಳ್ವಿಕೆಯನ್ನು ಗಟ್ಟಿಗೊಳಿಸುತ್ತವೆ. ಹೊಳಗುಂದಿ ಎಂಬ ಗ್ರಾಮದಲ್ಲಿನ ಬಲ್ಲೇಶ್ವರ ದೇವಸ್ಥಾನದಲ್ಲಿ ಒಂದು ಶಾಸನ ದೊರೆತಿದ್ದು, ಈ ಶಾಸನವು ಕ್ರಿ.ಶ.೧೦೯೭ರ ಕಾಲಮಾನದ್ದಾಗಿದೆ. ಇದರಲ್ಲಿ ಮಹಾಸಾಮಂತ ಚಾವುಂಡರಸನ ಮಗ ಮಹಾಮಂಡಳೇಶ್ವರ ಗಂಗರಸನು ತನ್ನ ತಂದೆ ಕಟ್ಟಿಸಿದ ದೇವಸ್ಥಾನಕ್ಕೆ ಭೂಮಿಯನ್ನು ದಾನ ಮಾಡಿದ್ದನ್ನು ದಾಖಲಿಸುತ್ತದೆ. ಗಂಗರಸನು ತನ್ನ ತಂದೆಯ ಮರಣದ ನಂತರ ಮಾಸವಾಡಿ-೧೪೦, ಪೊಳಲ್‌ಗುಂದೆ, ಏಳೂವರೆ ಲಕ್ಷ(ಪ್ರದೇಶ)ದಲ್ಲಿ ಅಂಕಗದ್ಯಾಣ ಮತ್ತು ಅರಮನೆಯ ಸೇವಕರ(ಅರಮನೆಯ ಅಂಕ) ಭೂಮಿ ಆಸ್ತಿಯ(ಜೀವಿಲ್) ಮೇಲಿನ ದಸವಂದವನ್ನು ಅನುಭವಿಸುತ್ತಿದ್ದ ಎಂದು ತಿಳಿಸುತ್ತದೆ.[೨೮] ಈ ಶಾಸನವು ಅಲ್ಲಲ್ಲಿ ತ್ರುಟಿತವಾಗಿದೆ. ಇಲ್ಲಿ ಗಂಗರಸನು ಮಾಸವಾಡಿ-೧೪೦, ಪೊಳಲ್‌ಗುಂದೆ ಪ್ರದೇಶಗಳನ್ನು ಆಳುತ್ತಿರುವುದು ತಿಳಿಯುತ್ತದೆ.

ಆರನೆ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಸುರೇಶ ಪಂಡಿತದೇವನು ಬೆಣ್ಣೆವೂರು-೧೨ನ್ನು ಆಳುತ್ತಿದ್ದನೆಂದು ಕುರುವತ್ತಿಯ ಕಲ್ಲೇಶ್ವರ ದೇವಸ್ಥಾನದಲ್ಲಿ ದೊರೆತಿರುವ ಶಾಸನದಿಂದ ತಿಳಿಯುತ್ತದೆ.[೨೯] ಅದೇ ಗ್ರಾಮದಲ್ಲಿನ ದೇವಸ್ಥಾನದಲ್ಲಿನ ನಿಲ್ಲಿಸಿರುವ ಒಂದು ಶಾಸನದಲ್ಲಿ ಗಂಡರಾದಿತ್ಯನ ಹೊಳಲು ಗ್ರಾಮದ ಮಹಾಜನರು ಚಕ್ರವರ್ತಿಯ ಹತ್ತಿರ ಹೋಗಿ ಮನ್ನೆಯ ಬೊಪ್ಪಯ್ಯನು ಹೊಳಲು ಗ್ರಾಮವನ್ನು ವಶಪಡಿಸಿಕೊಂಡು ಗ್ರಾಮವನ್ನು ಕೊಳ್ಳೆ ಹೊಡೆದು, ಬ್ರಾಹ್ಮಣರನ್ನು ಕೊಲ್ಲುತ್ತಿರುವ ವಿಷಯವನ್ನು ತಿಳಿಸಲು, ಚಕ್ರವರ್ತಿಯು ಮನ್ನೆಯನನ್ನು ಕರೆಯಿಸಿ ಆತನಾಗಲಿ, ಆತನ ವಂಶ ದವರಾಗಲೀ ಹೊಳಲು ಗ್ರಾಮದ ಮನ್ನೆಯವರಾಗುವ ಹಕ್ಕಿಲ್ಲ ಎಂದು ಆತನಿಂದ ಬರೆಯಿಸಿ ಕೊಂಡಿದ್ದುದನ್ನು ತಿಳಿಸುತ್ತದೆ. ಬೊಪ್ಪಯ್ಯನು ಬೆಣ್ಣೆವೂರು-೧೨, ನಿರುಗುಂದ, ಎರಡು ಹಡಂಗಿಲೆಗಳು, ಮಾಂಗೋಳ, ಬಿದಿರಹಳ್ಳಿ, ಹಹನೂರು, ಹೊನ್ನವಳ್ಳಿ, ಕುರುವತ್ತಿ ಮತ್ತು ಬಾಳ್ಗುಳಿಗಳನ್ನೊಳಗೊಂಡ ೩೨೦೦೦ ಪ್ರಾಂತದ ಮಹಾಜನರ ಸಮಕ್ಷಮದಲ್ಲಿ ತ್ರಿಪುರಾಂತಕ ದೇವರ ದೇವಸ್ಥಾನದಲ್ಲಿ ನೀರು ಕುಡಿದು ಈ ಕಲ್ಲನ್ನು ನಿಲ್ಲಿಸಿದನು[೩೦] ಎಂದು ಈ ಶಾಸನ ತಿಳಿಸುತ್ತದೆ. ಈ ಶಾಸನವು ೧೧೦೪ರಲ್ಲಿ ರಚಿತಗೊಂಡಿದೆ. ಇಲ್ಲಿ ಮುಖ್ಯವಾಗಿ ಆಡಳಿತ ಪ್ರಾಂತಗಳ ಮೇಲಿನ ಹಕ್ಕಿನ ವಿಚಾರವಾಗಿ ಎದ್ದಿರುವ ಸಮಸ್ಯೆಯನ್ನು ಬಗೆಹರಿಸಿರುವುದನ್ನು ಕಾಣುತ್ತೇವೆ. ಹಡಗಲಿ ತಾಲೂಕಿನ ರಂಗಾಪುರ ಎಂಬ ಗ್ರಾಮದಲ್ಲಿನ ನರಸಿಂಹಸ್ವಾಮಿ ದೇವಾಲಯದಲ್ಲಿನ ಒಂದು ಶಾಸನದಲ್ಲಿ ಚಾಲುಕ್ಯರಾಜ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ರಾಣಿ ಪದುಮಲದೇವಿಯು ಮಾಂಗೋಳ ಎಂಬ ಅಗ್ರಹಾರವನ್ನು ಆಳುತ್ತಿದ್ದಳು. ಶೂರರು, ಧರ್ಮಾಭಿಮಾನಿಗಳು ಮತ್ತು ವಿದ್ಯಾವಂತರಾದ ೨೦೦ ಮಹಾಜನಗಳು ಆಕೆಯ ಆಳ್ವಿಕೆಯಲ್ಲಿ ಸುಖಸಂತೃಪ್ತಿಯನ್ನು ಪಡೆದಿದ್ದರು ಎಂದು ಉಲ್ಲೇಖಿಸಿದೆ.[೩೧] ಇಲ್ಲಿ ಮುಖ್ಯವಾಗಿ ರಾಣಿಯು ಸಮರ್ಥವಾಗಿ ಆಡಳಿತವನ್ನು ನಡೆಸಿದ್ದಳು ಎಂಬುದು ಈ ಶಾಸನದಿಂದ ವೇದ್ಯವಾಗುತ್ತದೆ.

ಜೊತೆಗೆ ವಿಕ್ರಮನಿಗೆ ಆರು ಜನ ರಾಣಿಯರಿದ್ದರೆಂದು ಇವರೆಲ್ಲರೂ ರಾಜ್ಯಾಡಳಿತದ ವಿವಿಧ ಭಾಗಗಳಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದರು ಎಂದು ಮತ್ತು ಈ ರಾಣಿಯರ ಆಡಳಿತದಲ್ಲಿ ಮಹಾ ಮಂಡಳೇಶ್ವರರು ಆಡಳಿತ ನಡೆಸುತ್ತಿದ್ದರು ಎಂಬುದು ಆಧಾರಗಳಿಂದ ತಿಳಿದುಬರುತ್ತದೆ. ಸಾವಲದೇವಿ ಎಂಬ ರಾಣಿಯು ಮಹಾಮಂಡಳೇಶ್ವರ ಜೋಗಮರಸನ ಮಗಳಾಗಿದ್ದಳು. ಈತನು ಮಂಗಲವಾಡದ ಮಹಾಮಂಡಳೇಶ್ವರನಾಗಿದ್ದ. ಕ್ರಿ.ಶ.೧೦೭೭–೭೮ರಲ್ಲಿ ಸಾವಲದೇವಿ ತನ್ನ ಅಂಗಭೋಗಕ್ಕೋಸ್ಕರ ನೀಡಿದ್ದ ನರೆಯಂಗಲ್ಲ ಅಗ್ರಹಾರದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು. ಲಕ್ಷ್ಮೀದೇವಿಯು ಪಿರಿಯರಸಿಯಾಗಿದ್ದಳು. ಅಂದರೆ ಪ್ರಧಾನ ರಾಣಿಯಾಗಿದ್ದಳು. ಕ್ರಿ.ಶ.೧೦೮೪–೮೫ರಲ್ಲಿ ಡಂಬಳದೊಂದಿಗೆ ಹದಿನೆಂಟು ಅಗ್ರಹಾರಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು.[೩೨] ಹೀಗೆ ಜಕ್ಕಲದೇವಿ, ಮಲ್ಲೆಯ ಮಹಾದೇವಿ ಅಥವಾ ಮಲಯಮತಿದೇವಿ, ಚಂದಲಾದೇವಿ, ಮಾಳಲದೇವಿ ಅಥವಾ ಮಾಲಿಕ ಎಲ್ಲರೂ ಒಂದಿಲ್ಲಾ ಒಂದು ಪ್ರದೇಶವನ್ನು ಆಳುತ್ತಿದ್ದರು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ.

ಆರನೆಯ ವಿಕ್ರಮಾದಿತ್ಯನ ೫೦ ವರ್ಷಗಳ ಆಳ್ವಿಕೆಯಲ್ಲಿ ಕರ್ನಾಟಕದ ಕೀರ್ತಿ ಭಾರತದಲ್ಲೆಲ್ಲ ವ್ಯಾಪಿಸಿತು. ಕಲ್ಯಾಣ ಇವನ ರಾಜಧಾನಿಯಾಗಿದ್ದರೂ ರಾಜನು ಸತತವಾಗಿ ಸುತ್ತಾಡುತ್ತಿದ್ದುದರಿಂದ ತನ್ನ ಆಡಳಿತ ವ್ಯಾಪ್ತಿಗೆ ಒಳಪಟ್ಟ ಪ್ರದೇಶಗಳ ಜನರು ಸುಖ–ಶಾಂತಿಯಿಂದಿದ್ದರು. ಕಲ್ಯಾಣ ಚಾಲುಕ್ಯರಲ್ಲಿಯೇ ಅತ್ಯಂತ ಪ್ರಸಿದ್ಧ ಚಕ್ರವರ್ತಿ ಎಂದೆನಿಸಿಕೊಂಡ ವಿಕ್ರಮಾದಿತ್ಯನು ಕ್ರಿ.ಶ.೧೧೨೭ರಲ್ಲಿ ಪಕ್ವವಾದ ವೃದ್ಧಾಪ್ಯದಲ್ಲಿ ನಿಧನ ಹೊಂದಿದನು. ಈತನ ನಂತರ ೬ನೇ ವಿಕ್ರಮಾದಿತ್ಯನ ರಾಣಿ ಚಂದ್ರಲೇಖೆಯ ಮಗನಾದ ಮೂರನೇ ಸೋಮೇಶ್ವರನು ಕ್ರಿ.ಶ.೧೧೨೭ರಲ್ಲಿ ಅಧಿಕಾರಕ್ಕೆ ಬಂದನು. ಈತನಿಗೆ 'ಭೂಲೋಕಮಲ' ಎಂಬ ಬಿರುದಿದ್ದಿತು. ಇಂದು ದಾವಣಗೆರೆ ಜಿಲ್ಲೆಗೆ ಸೇರಿದ, ಇದಕ್ಕೂ ಮೊದಲು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿದ್ದ ಹರಪನಹಳ್ಳಿಯಲ್ಲಿ ೩ನೇ ಸೋಮೇಶ್ವರನಿಗೆ ಸೇರಿದ ಶಾಸನಗಳು ದೊರೆತಿವೆ. ರಾಗಿಮಸಲವಾಡ ಎಂಬ ಗ್ರಾಮವು ಹರಪನಹಳ್ಳಿಗೆ ಸೇರಿದ್ದು ಇಲ್ಲಿ ಈಶ್ವರ ದೇವಾಲಯದ ಬಳಿ ಇರುವ ಶಾಸನದಲ್ಲಿ ಭೂಲೋಕಮಲ್ಲನ ಉಲ್ಲೇಖವಿದೆ. ಈತನ ಆಳ್ವಿಕೆಯಲ್ಲಿ ಇವನ ಮಹಾಸಾಮಂತಾಧಿಪತಿ, ಮಹಾಪ್ರಧಾನ, ಕನ್ನಡ ಸಂಧಿವಿಗ್ರಹಿ, ಸೇನಾಧಿಪತಿ ಭೋಗಭಟ್ಟಯ್ಯನು ಸಾವಾಸಿಗಳ ನಾಯಕನಾಗಿ ಎರಡು ಆರು ನೂರು ಮತ್ತು ಬನವಾಸಿ ೧೨೦೦೦ ನಾಡಿನ ಏಳೂವರೆ ಲಕ್ಷ ವಡ್ಡರಾವುಳದ ಸುಂಕವನ್ನು ಪಡೆದು ಆಳುತ್ತಿರುವುದು ಉಲ್ಲೇಖಗೊಂಡಿದೆ.[೩೩] ಹಾಗೆಯೇ ಬಳ್ಳಾರಿ ಜಿಲ್ಲೆಯ ಬೈಲೂರು ಎಂಬ ಗ್ರಾಮದಲ್ಲಿ ಕ್ರಿ.ಶ.೧೧೩೧ರ ಶಾಸನದಲ್ಲಿ ತ್ರಿಭುವನಮಲ್ಲನ ಉಲ್ಲೇಖಗಳಿವೆ. ಆದರೆ ಮುಂದಿನ ಶಾಸನಗಳು ಭೂಲೋಕಮಲ್ಲನನ್ನು ಹೆಸರಿಸುವುದರಿಂದ ತ್ರಿಭುವನಮಲ್ಲ ಎಂಬುದಾಗಿ ತಪ್ಪಾಗಿ ಬರೆದಿರಬೇಕೆನಿಸುತ್ತದೆ. ಏಕೆಂದರೆ ತ್ರಿಭುವನಮಲ್ಲದೇವನು ಈ ಕಾಲಕ್ಕೆ ಸಿಂಹಾಸನದಲ್ಲಿರಲಿಲ್ಲ.[೩೪] ಆದರೆ ಹಡಗಲಿಯಲ್ಲಿ ಈತನ ಕಾಲದ ಶಾಸನಗಳು ದೊರೆತಿಲ್ಲ. ಆದರೂ ಹಡಗಲಿಯು ಈತನ ಆಳ್ವಿಕೆಗೆ ಒಳಪಟ್ಟಿದ್ದಿತು. ೩ನೇ ಸೋಮೇಶ್ವರನು ರಾಜಕೀಯಕ್ಕಿಂತ ಹೆಚ್ಚಿನ ಒಲವು ಸಾಹಿತ್ಯ, ಕಲೆಗಳ ಕಡೆಗೆ ತೋರಿದ್ದನು. ಈತನು ಘನಪಂಡಿತನಾಗಿದ್ದು ಕ್ರಿ.ಶ.೧೧೩೦ರಲ್ಲಿ 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ

'ಮಾನಸೋಲ್ಲಾಸ' ಎಂಬ ಜ್ಞಾನಕೋಶದ ಉದ್ಗ್ರಂಥವನ್ನು ರಚಿಸಿದ್ದಾನೆ.[೩೫] ಈತನು ಕ್ರಿ.ಶ.೧೧೨೬ರಿಂದ ೧೧೩೮ರವರೆಗೆ ಕಲ್ಯಾಣ ಚಾಲುಕ್ಯ ರಾಜ್ಯವನ್ನಾಳಿದನು. ಈತನ ನಂತರ ಈತನ ರಾಣಿಯಾದ ಎಕ್ಕಲದೇವಿಯ ಮಕ್ಕಳಾದ ಇಮ್ಮಡಿ ಜಗದೇಕಮಲ್ಲ ಮತ್ತು ಮುಮ್ಮಡಿ ತೈಲಪರು ರಾಜ್ಯವನ್ನಾಳಲು ಮುಂದಾದರು.

ಇಮ್ಮಡಿ ಜಗದೇಕಮಲ್ಲನು ಮೂರನೇ ಸೋಮೇಶ್ವರನ ಹಿರಿಯ ಮಗ ಪೆರ್ಮ ಅಥವಾ ಪೆಮ್ಮಾಡಿಯು ಇಮ್ಮಡಿ ಜಗದೇಕಮಲ್ಲನೆಂಬ ಬಿರುದಾಂಕಿತನಾಗಿ ಪಟ್ಟಕ್ಕೆ ಬಂದನು. ಈತನನ್ನು ಶಾಸನಗಳು 'ಪ್ರತಾಪ ಚಕ್ರವರ್ತಿ' ಎಂದು ಬಣ್ಣಿಸಿವೆ. ಈತನ ಆಳ್ವಿಕೆಯ ಎರಡನೇ ವರ್ಷದಲ್ಲಿ ರಚಿತವಾದ ೧೧೩೯ರದ್ದೇ ಈತನ ಮೊತ್ತಮೊದಲ ಶಾಸನವಾಗಿದೆ. ಈತನ ಆಳ್ವಿಕೆಯ ಕಾಲದ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ಬಳ್ಳಾರಿಯ ಸಿಂದಿಗೆರೆ ಎಂಬ ಗ್ರಾಮದಲ್ಲಿನ ಮಲ್ಲೇಶ್ವರ ದೇವಾಲಯದ ಬಳಿ ದೊರೆತ ಶಾಸನದಲ್ಲಿ ಇಮ್ಮಡಿ ಜಗದೇಕಮಲ್ಲನ ಉಲ್ಲೇಖವಿದೆ. ಇದು ೧೧೪೧ರ ಕಾಲಮಾನದ್ದಾಗಿದೆ.[೩೬] ಹಾಗೆಯೇ ಬಳ್ಳಾರಿಯ ಕೋಳೂರು ಗ್ರಾಮದಲ್ಲಿನ ಸೂರ್ಯನಾರಾಯಣ ದೇವಾಲಯದಲ್ಲಿ ದೊರೆತ ಶಾಸನವು ಜಗದೇಕಮಲ್ಲ ಮತ್ತು ಇವನ ಸಾಮಂತರಸ ಫಣಿ ವಂಶದ ರೇವಗಾವುಂಡನನ್ನು ಉಲ್ಲೇಖಿಸುತ್ತದೆ. ಇದು ದಾನ ಶಾಸನವಾಗಿದೆ. ಹಾಗೆಯೇ ಓರವಾಯಿ ಎಂಬ ಗ್ರಾಮದಲ್ಲಿಯೂ ಈತನ ಶಾಸನ ದೊರೆತಿದೆ. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹೊಳಲು ಗ್ರಾಮದಲ್ಲಿನ ಶಾಸನವು ಇಮ್ಮಡಿ ಜಗದೇಕಮಲ್ಲನನ್ನು ಉಲ್ಲೇಖಿಸುವುದರ ಜೊತೆಗೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೭] ಹಡಗಲಿಯ ಕೊಟ್ನಕಲ್ಲು ಗ್ರಾಮದಲ್ಲಿನ ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿರುವ ಕಲ್ಲಿನಲ್ಲಿರುವ ಶಾಸನವು ಬೇರೆ ಬೇರೆ ಕಾಲಗಳಲ್ಲಿ ಚಾಲುಕ್ಯ ಅರಸರು ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ. ಈ ಉಲ್ಲೇಖದಲ್ಲಿ ಎರಡನೇ ಜಗದೇಕಮಲ್ಲನ ಸಾಮಂತನಾದ ವೀರಪಾಂಡ್ಯನನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ; ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿನ ನರಸಿಂಹದೇವರ ದೇವಸ್ಥಾನದ ಹತ್ತಿರದ ಶಾಸನವು ತುಂಬಾ ಹಾಳಾಗಿದ್ದು ಇದು ಇಮ್ಮಡಿ ಜಗದೇಕಮಲ್ಲನ ಕಾಲಕ್ಕೆ ಸೇರಿದ್ದಿರಬಹುದೆಂದು ಊಹಿಸಲಾಗಿದೆ.

ಉತ್ತಂಗಿಯ ಶಂಕರೇಶ್ವರ ದೇವಾಲಯದಲ್ಲಿ ದೊರೆತಿರುವ ಶಾಸನವು ಕ್ರಿ.ಶ.೧೧೫೦ರ ಕಾಲಮಾನದ್ದಾಗಿದೆ. ಇದು ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುವ ಇಮ್ಮಡಿ ಜಗದೇಕಮಲ್ಲನ ಅಂತ್ಯಕಾಲದ ಶಾಸನವಾಗಿದೆ. ಇದು ಬಸವಯ್ಯ ಎಂಬ ಹೆಸರಿನ ವ್ಯಕ್ತಿಯ ಹೆಸರು ಮತ್ತು ಆತನು ತನ್ನ ಹೆಸರಿನಲ್ಲಿ ಕಟ್ಟಿಸಿದ ಬಸವೇಶ್ವರ ದೇವಾಲಯದ ಉಲ್ಲೇಖ ಈ ಶಾಸನದಲ್ಲಿದೆ. ಎರಡನೇ ಜಗದೇಕ ಮಲ್ಲನ ಮರಣದ ನಂತರವೂ ಹರಪನಹಳ್ಳಿಯ ಬಾಗಳಿ ಎಂಬ ಗ್ರಾಮದಲ್ಲಿನ ಶಾಸನವು ಕ್ರಿ.ಶ.೧೧೬೦ರ ಕಾಲಮಾನದ್ದಾಗಿದ್ದು, ಇದರಲ್ಲಿ ಈತನನ್ನು ಉಲ್ಲೇಖಿಸಿದೆ. ಹಾಗೆಯೇ ಹರಪನಹಳ್ಳಿಯ ಮಾಡಲಗೆರೆ ಶಾಸನ(ಕ್ರಿ.ಶ.೧೧೬೧), ಕ್ರಿ.ಶ.೧೧೬೩ರ ಬಾಡದ ಶಾಸನಗಳು

ಜಗದೇಕಮಲ್ಲನನ್ನು ಉಲ್ಲೇಖಿಸಿವೆ. ನಂತರ ಹತ್ತು ವರ್ಷಗಳ ಕಾಲ ಕಲ್ಯಾಣ ಚಾಲುಕ್ಯರ ಶಾಸನಗಳು ಜಿಲ್ಲೆಯಲ್ಲಿ ದೊರೆಯುವುದಿಲ್ಲ. ಕ್ರಿ.ಶ.೧೧೮೩ರಲ್ಲಿ ಹಡಗಲಿಯ ಮಾನ್ಯರಮಸಲವಾಡದ ಕಲ್ಲೇಶ್ವರ ದೇವಾಲಯದ ಬಳಿ ಚಾಲುಕ್ಯ ದೊರೆ ಜಗದೇಕಮಲ್ಲದೇವನು(ಈ ಕಾಲಕ್ಕೆ ಬಹು ಹಿಂದೆಯೇ ಈತ ಮರಣಿಸಿದ್ದನು) ಕಲ್ಯಾಣದಿಂದ ಆಳುತ್ತಿದ್ದಾಗ ಕಲಚೂರ್ಯ ದೊರೆ ರಾಯನಾರಾಯಣ ಆಹವಮಲ್ಲದೇವನ ಮಾಂಡಲಿಕನಾದ ವಿಜಯ ಪಾಂಡ್ಯದೇವನು ಕೋಗಳಿ-೫೦೦, ನೊಳಂಬವಾಡಿ-೩೨೦೦೦ ಆಳುತ್ತಿದ್ದನು ಎಂದು ಉಲ್ಲೇಖಿಸಿದೆ.[೩೮] ಎರಡನೇ ಜಗದೇಕಮಲ್ಲನ ತರುವಾಯ ಮುಮ್ಮಡಿ ತೈಲಪನು ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಯ ಕಾಲದ ಯಾವುದೇ ಶಾಸನಗಳು ಹಡಗಲಿಯಲ್ಲಿ ದೊರೆತಿಲ್ಲ. ಬದಲಾಗಿ ಬಳ್ಳಾರಿ ಜಿಲ್ಲೆಯ ಒಂದು ಭಾಗವಾಗಿರುವ ಕೂಡ್ಲಿಗಿಯಲ್ಲಿ ದೊರೆತಿದೆ. ಈತನು ಕ್ರಿ.ಶ.೧೧೫೦ರಲ್ಲಿ ಸಿಂಹಾಸನವೇರಿದ. ಈತನಿಗೆ ತೈಲಪ ಮತ್ತು ನೂರ್ಮಡಿ ತೈಲಪನೆಂದು ಹೆಸರುಗಳಿದ್ದವು. ಒಟ್ಟಾರೆಯಾಗಿ ಚಾಲುಕ್ಯ ಅರಸರು ಕ್ರಿ.ಶ.೯೭೩ರಿಂದ ವಿಜೃಂಭಿಸಿದ್ದು ಕೆಲವೇ ವರ್ಷಗಳಲ್ಲಿಯೇ ಪತನವನ್ನು ಕಂಡರು. ಇವರ ನಂತರ ಕಲಚೂರ್ಯರು, ನೊಳಂಬರು, ಮಹಾಬಲಿ ವಂಶೀಯರು, ಬ್ರಹ್ಮದಿಯರು, ಮೈದುಂಬರು ಬಳ್ಳಾರಿ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ಒಳಪಡಿಸಿ ಕೊಂಡಿದ್ದರು. ಬಳ್ಳಾರಿಯ ಹರಪನಹಳ್ಳಿ, ಸಿರುಗುಪ್ಪ, ಬಳ್ಳಾರಿ, ಹಗರಿ ಮುಂತಾದ ಕಡೆಗಳಲ್ಲಿ ಇವರಿಗೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ. ನಂತರ ಗುತ್ತ ವಂಶದ ಇಮ್ಮಡಿ ವಿಕ್ರಮಾದಿತ್ಯನ ಎರಡು ಶಾಸನಗಳು ಹಡಗಲಿಯ ಕುರುವತ್ತಿ ಎಂಬ ಗ್ರಾಮದಲ್ಲಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ದೊರೆಯುತ್ತವೆ. ಇವರ ನಂತರ ಕೊಟ್ಟೂರಿನ ಕದಂಬರು, ಸಿಂಧರು ಆಳ್ವಿಕೆ ನಡೆಸಿರುವುದಕ್ಕೆ ಜಿಲ್ಲೆಯಲ್ಲಿ ದೊರೆತ ಶಾಸನಗಳೇ ಸಾಕ್ಷಿಗಳಾಗಿವೆ. ಹಾಗೆಯೇ ಪಾಂಡ್ಯರಿಗೆ ಸಂಬಂಧಿಸಿದ ಶಾಸನಗಳು ಹರಪನಹಳ್ಳಿ, ಸಿರುಗುಪ್ಪ, ಹಗರಿ ಮುಂತಾದ ಕಡೆಗಳಲ್ಲಿ ಮಾತ್ರವಲ್ಲದೆ ಹಡಗಲಿಯಲ್ಲಿಯೂ ದೊರೆತಿವೆ. ಹಡಗಲಿ, ಉತ್ತಂಗಿ, ಸೋಗಿ, ಹೊಳಗುಂದಿ ಮುಂತಾದ ಪ್ರದೇಶಗಳಲ್ಲಿ ವಿಜಯ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು ಎಂಬುದಾಗಿ ತಿಳಿಸುತ್ತವೆ. ಪಾಂಡ್ಯರ ನಂತರ ಹೊಯ್ಸಳರು ಅಧಿಕಾರಕ್ಕೆ ಬಂದರು.

### ಹೊಯ್ಸಳರು

ಕಲ್ಯಾಣ ಚಾಲುಕ್ಯರ ರಾಜ್ಯಭಾರ ಕೊನೆಗೊಳ್ಳುವುದಕ್ಕಿಂತ ಪೂರ್ವದಲ್ಲಿಯೇ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೊಯ್ಸಳರು ರಾಜ್ಯಭಾರ ನಡೆಸಿದ್ದರು. ಆರಂಭದಲ್ಲಿ ಇವರು ಗಂಗರ ಮಾಂಡಲಿಕರಾಗಿದ್ದರು. ನಂತರ ಕಲ್ಯಾಣ ಚಾಲುಕ್ಯರ ಮಾಂಡಲಿಕರಾದರು. ಇವರು ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಕಾಲಾವಧಿಯಲ್ಲಿ ಸ್ವತಂತ್ರರಾಗಲು ಹವಣಿಸಿದರೂ ಇದು ಕೈಗೂಡಲಿಲ್ಲ. ವಿಕ್ರಮಾದಿತ್ಯನಂತಹ ಬಲಶಾಲಿ ರಾಜನ ಮುಂದೆ ಇವರ ಪ್ರಯತ್ನ ವಿಫಲವಾಯಿತು. ಮುಂದೆ ಕಲಚೂರಿಗಳು ಕಲ್ಯಾಣ ಚಾಲುಕ್ಯರನ್ನು ಕೆಲಕಾಲ ಮೂಲೆಗುಂಪು ಮಾಡಿ ತಾವೇ ರಾಜ್ಯಭಾರ ಮಾಡತೊಡಗಿದಾಗ ದಕ್ಷಿಣದಲ್ಲಿ ಹೊಯ್ಸಳರು ಸ್ವತಂತ್ರರಾಗಲು ಪ್ರಯತ್ನಿಸಿದರು.

ಆದರೆ ಬಿಜ್ಜಳನ ದಂಡಯಾತ್ರೆಯ ಕಾರಣದಿಂದ ಈ ಪ್ರಯತ್ನವನ್ನು ನಿಲ್ಲಿಸಿದರು. ೧೨ನೆಯ ಶತಮಾನದ ಆರಂಭದ ವೇಳೆಗೆ ಚೋಳರು ಮತ್ತು ಹೊಯ್ಸಳರ ನಡುವೆ ಪರಮಾಧಿಕಾರಕ್ಕಾಗಿ ಯುದ್ಧಗಳು ಸಂಭವಿಸಿದವು. ಈ ಸಂದರ್ಭದಲ್ಲಿ ಹೊಯ್ಸಳರು ಚೋಳರನ್ನು ತಲಕಾಡಿನಿಂದ ಕಾಲ್ತೆಗೆಯುವಂತೆ ಮಾಡಿದರು. ಆದರೆ ಇವರು ಒಂದು ಶತಮಾನಕ್ಕೂ ಹೆಚ್ಚು ಕಾಲ ಪಶ್ಚಿಮದ ಚಾಲುಕ್ಯರ ಸಾಮಂತರಾಗಿಯೇ ಉಳಿದಿದ್ದರು. ವಿನಯಾದಿತ್ಯನಿಂದ ಹಿಡಿದು ಎರಡನೆಯ ವೀರಬಲ್ಲಾಳನ ವರೆಗಿನ ಹೊಯ್ಸಳ ಶಾಸನಗಳಲ್ಲೆಲ್ಲ ಅವರು ಚಾಲುಕ್ಯರ ಅಧೀನರಾಗಿ ನಡೆದುಕೊಂಡು ಬಂದ ಅಂಶವೇ ವಿಧಿತವಾಗುತ್ತದೆ.

ಹೊಯ್ಸಳರ ರಾಜ್ಯದ ಉದಯದ ಬಗ್ಗೆ ಶಾಸನಗಳಲ್ಲಿ ಕೆಲವು ಸಾಂಪ್ರದಾಯಿಕ ಉಲ್ಲೇಖಗಳು ಕಂಡುಬರುತ್ತವೆ. ಅವರು ಸೊಸೆವೂರನ್ನು(ಸಂಸ್ಕೃತ ಲೇಖಕರು ಹೇಳಿರುವ ಶಶಕಪುರ) ತಮ್ಮ ಜನ್ಮಸ್ಥಳವೆಂದು ಹೇಳಿಕೊಂಡಿದ್ದಾರೆ. ಈ ಸ್ಥಳ ಚಿಕ್ಕಮಗಳೂರು ಜಿಲ್ಲೆಗೆ ಸೇರಿದ ಮೂಡಿಗೆರೆ ತಾಲೂಕಿನ ಅಂಗಡಿ ಎಂಬುದಾಗಿ ಗುರುತಿಸಲಾಗಿದೆ. ಇದು ಸಳ ಮತ್ತು ಹುಲಿಗೆ ಸಂಬಂಧಿಸಿದ ಘಟನೆಯ ಸ್ಥಳವೆಂದೂ ಅದರಿಂದಲೇ ಸಳನು 'ಪೊಯ್-ಸಳ' ಅಥವಾ ಹೊಯ್ಸಳ ರಾಜವಂಶದ ಸ್ಥಾಪಕನಾದನೆಂದೂ ಹೇಳಲಾಗಿದೆ.[೩೯] ಹೊಯ್ಸಳರ ಮೂಲದ ಬಗ್ಗೆ ಬಹಳಷ್ಟು ಗೊಂದಲಗಳಿವೆ. ಹಾಗಾಗಿ ಇವರ ಮೂಲದ ಕುರಿತು ಸಾಕಷ್ಟು ಕಥೆಗಳು ಶಾಸನಗಳಲ್ಲಿ ಕಂಡುಬರುತ್ತವೆ. ವಿಷ್ಣುವರ್ಧನನ ಕ್ರಿ.ಶ.೧೧೧೭ರ ಬೇಲೂರು ಶಾಸನದಲ್ಲಿ ಹೇಳಿರುವಂತೆ ಈ ವಂಶದ ಮೂಲ ಪುರುಷ ಮತ್ತು ಸಾಮ್ರಾಜ್ಯ ಸ್ಥಾಪಕ ಸಳ. ಈತನನ್ನು 'ಯದುವಂಶದ ಆಭರಣ'ವೆಂದು ವರ್ಣಿಸಲಾಗಿದೆ. ಯದುವಂಶೋಜ್ವಲ ತಿಲಕನಾದ ಸಳನು ಶಶಕಪುರದ ತನ್ನ ಮನೆದೇವರಾದ ವಾಸಂತಿಕಾ ದೇವಾಲಯಕ್ಕೆ ಪೂಜೆಗೆ ಹೋಗಿದ್ದಾಗ ದೇವಿಯನ್ನು ಗಂಧ, ಪುಷ್ಪ, ಪರಿಮಳಗಳಿಂದ ಅರ್ಚಿಸಿದ ನಂತರ ತನ್ನ ಗುರು ವರ್ಧಮಾನ ಸುದತ್ತಾಚಾರ್ಯರ ಬಳಿ ಧರ್ಮೋಪದೇಶ ಕೇಳಲು ಹೋಗಿದ್ದನು. ಪ್ರವಚನ ಕೇಳುತ್ತಿದ್ದಾಗ ಒಂದು ಹುಲಿ ಕಾಡಿನಿಂದ ಅಲ್ಲಿಗೆ ಬಂದಿತು. ಅಪಾಯದ ಮುನ್ಸೂಚನೆಯನ್ನು ಅರಿತ ಮುನಿ ಸಳನಿಗೆ ತನ್ನ ಕುಂಚವನ್ನು ಕೊಟ್ಟು 'ಪೊಯ್‌ಸಳ' ಎಂದು(ಹೊಡೆ ಸಳ) ಹೇಳಿದನು. ಆಗ ಹುಲಿಯ ಸಂಹಾರವಾಯಿತು. ಅಂದಿನಿಂದ ಯದುವಂಶದ ರಾಜರಿಗೆ ಪೊಯ್ಸಳ ಎಂಬ ಹೆಸರು ಬಂದಿತು. ಈ ಸನ್ನಿವೇಶದಿಂದ ಪ್ರೇರಿತನಾದ ಸಳ ಹುಲಿಯನ್ನು ಸಂಹರಿಸುತ್ತಿರುವ ವೀರನ ಚಿತ್ರವನ್ನೇ ತನ್ನ ಲಾಂಛನವನ್ನಾಗಿ ಮಾಡಿಕೊಂಡನು ಎಂದು ಶಾಸನದಲ್ಲಿ ತಿಳಿಸಲಾಗಿದೆ. ಹೊಯ್ಸಳರಲ್ಲಿ ವಿಷ್ಣುವರ್ಧನನು ಶ್ರೇಷ್ಠ ದೊರೆಯಾಗಿದ್ದಾನೆ. ಈತನ ನಂತರ ಅಧಿಕಾರಕ್ಕೆ ಬಂದ ಅರಸರಲ್ಲಿ ವೀರಬಲ್ಲಾಳ ಹಾಗೂ ಇಮ್ಮಡಿ ನರಸಿಂಹರು ಪ್ರಖ್ಯಾತರು. ಈ ಹೊಯ್ಸಳರಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಹಲವು ಭಾಗಗಳಲ್ಲಿ ಅಂದರೆ ಹಡಗಲಿ, ಹರಪನಹಳ್ಳಿ, ಸಂಡೂರು, ಬಳ್ಳಾರಿ ಮುಂತಾದ ತಾಲೂಕು ಪ್ರದೇಶಗಳಲ್ಲಿ ಹಲವಾರು ಶಾಸನಗಳು ಲಭ್ಯವಾಗಿವೆ. ಕ್ರಿ.ಶ.೧೨೦೫ರಲ್ಲಿ ರಚಿತವಾದ ಶಾಸನವು ಹಡಗಲಿಯ ಕುರುವತ್ತಿ ಎಂಬ ಗ್ರಾಮದಲ್ಲಿನ ಮಲ್ಲಿಕಾರ್ಜುನ ದೇವಸ್ಥಾನದ ದಕ್ಷಿಣದ ಪ್ರವೇಶ ದ್ವಾರದ ಎಡಗಡೆ

ಗೋಡೆಯ ಮೇಲೆ ದೊರೆತಿದೆ. ಈ ಶಾಸನದಲ್ಲಿ ಹೇಳಿರುವಂತೆ ವೀರಬಲ್ಲಾಳನ ರಾಣಿ ಪದುಮಲದೇವಿ ಈ ಪ್ರದೇಶವನ್ನು ಆಳುತ್ತಿದ್ದು ಆಕೆಯ ಕೈಕೆಳಗೆ ಸೋವರಸನು ಮಹಾಪ್ರಧಾನ ಭಂಡಾರಿಯಾಗಿದ್ದನು ಎಂದು ತಿಳಿಸುತ್ತದೆ.[೪೦] ಈ ಕಾಲಕ್ಕೆ ಹೊಯ್ಸಳರ ರಾಜಗುರುವಾಗಿದ್ದ ಲೋಕಾಭರಣ ಪಂಡಿತರು ಪ್ರಭಾವಿಯಾಗಿದ್ದರು. ಇವರಿಗೆ ಸಂಬಂಧಿಸಿದಂತೆ ಹಡಗಲಿಯಲ್ಲಿ ಅನೇಕ ಶಾಸನಗಳು ದೊರೆತಿವೆ. ಮುಖ್ಯವಾಗಿ ಇವೆಲ್ಲವೂ ದಾನಶಾಸನಗಳಾಗಿವೆ. ಹರಪನಹಳ್ಳಿ ತಾಲೂಕಿನ ಬಾಗಳಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಆವರಣದಲ್ಲಿನ ಶಾಸನವು ಕ್ರಿ.ಶ.೧೧೯೩ರ ಕಾಲದ್ದಾಗಿದ್ದು ಇದು ಹೊಯ್ಸಳ ಚಕ್ರವರ್ತಿ ವೀರಬಲ್ಲಾಳದೇವನು ಬಾಳ್ಗುಳಿಯ ನೆಲೆವೀಡಿನಲ್ಲಿದ್ದಾಗ ಎಂದು ಹೇಳುವುದರ ಮೂಲಕ ಈತನು ಬಾಗಳಿಗೆ ಬಂದಿದ್ದ ವಿಷಯವನ್ನು ತಿಳಿಸುತ್ತದೆ.

ಹಡಗಲಿಯ ಮಾಗಳ ಸೂರ್ಯನಾರಾಯಣ ದೇವಾಲಯದ ಶಾಸನವು ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ)ನು ಗಂಗವಾಡಿ–೯೬೦೦೦, ನೊಣ(ಳ)ಂಬವಾಡಿ–೩೨೦೦೦, ಬನವಸೆ–೧೨೦೦೦, ಹುಲಿಗೆರೆ–೩೦೦, ಎರಡು ಬೆಳುವಳಗಳು ಮತ್ತು ಮಾಸವಾಡಿಯಿಂದ ಹೆರ್ದೊರೆವರೆಗೆ ಆಳುತ್ತಿದ್ದನು ಎಂದು ಉಲ್ಲೇಖಿಸಿದೆ. ಈ ಶಾಸನವು ಕ್ರಿ.ಶ.೧೨೯೮ರ ಕಾಲಮಾನದ್ದಾಗಿದೆ.[೪೧] ಕ್ರಿ.ಶ.೧೨೧೨ರ ಹಿರೇಹಡಗಲಿಯ ಶಾಸನದಲ್ಲಿ ವೀರಬಲ್ಲಾಳನು ನೊಳಂಬವಾಡಿ–೩೨೦೦೦, ಬನವಾಸಿ–೧೨೦೦೦, ಹುಲಿಗೆರೆ–೩೦೦, ಹೆದ್ದೊರೆವರೆಗಿನ ಎರಡು ಬೆಳುವಲ ಮತ್ತು ಮಸವಾಡಿಗಳನ್ನು ತನ್ನ ನೆಲೆವೀಡು ಹಳ್ಳವೂರ ಅಥವಾ ವಿಜಯಸಮುದ್ರದಿಂದ ಆಳುತ್ತಿದ್ದನೆಂದು ಮತ್ತು ಈತನ ರಾಣಿ ಪಟ್ಟದರಸಿ ಪದುಮಲದೇವಿ ಹೊಸಹಡಂಗಿಲೆಯನ್ನು ಆಳುತ್ತಿದ್ದಳು ಎಂದು ಉಲ್ಲೇಖಿಸುತ್ತದೆ.[೪೨] ಕ್ರಿ.ಶ.೧೨೧೪, ಕ್ರಿ.ಶ.೧೨೧೫ರಲ್ಲಿ ವೀರಬಲ್ಲಾಳನ ಉಲ್ಲೇಖಗಳು ಶಾಸನಗಳಲ್ಲಿ ಬರುತ್ತವೆ.

ಕ್ರಿ.ಶ.೧೨೨೫ರ ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿನ ಶಾಸನವು ಪೊಲಾಳ್ವದಂಡನಾಥನು ಉತ್ಥಾನ ದ್ವಾದಶಿಯಂದು ನರಸಿಂಹದೇವರಿಗೆ ದಾನ ನೀಡಿದ ಉಲ್ಲೇಖವನ್ನು ಸೂಚಿಸುತ್ತದೆ. ನರಸಿಂಹನ ಆಡಳಿತದಲ್ಲಿ ಈ ಪ್ರದೇಶದಲ್ಲಿದ್ದ ಮಹಾಪ್ರಧಾನ ಸೋಮಣ ದಂಡನಾಯಕ, ಗೋಪರಸ, ಹೆಗ್ಗಡೆ ದೇವಯ್ಯ, ಹೆಗ್ಗಡೆ ಹರಿಯಣ್ಣ, ಮಹಾಪ್ರಧಾನ ಪಾವರಸಯ್ಯನ ಮಗ ಅಮಿತಯ್ಯ ದಂಡನಾಯಕ ಮೊದಲಾದವರ ಉಲ್ಲೇಖಗಳು ಬರುತ್ತವೆ.[೪೩] ಕ್ರಿ.ಶ.೧೨೬೫ರವರೆಗೆ ಹೊಯ್ಸಳರ ಶಾಸನಗಳು ಈ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಕ್ರಿ.ಶ.೧೨೬೮ರ ಶಾಸನದಲ್ಲಿ ಕೋಗಳಿ ಬಸದಿಗೆ ದಾನ ನೀಡಿದ್ದು ಅದರಲ್ಲಿ ರಾಮನಾಥನನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ.೧೨೮೨, ಕ್ರಿ.ಶ.೧೨೯೮ರ ಶಾಸನಗಳಲ್ಲಿ ಈತನ ಉಲ್ಲೇಖ ಬಂದಿದೆ. ಕ್ರಿ.ಶ.೧೨೯೧ರ ಅವಧಿಯಲ್ಲಿನ ಶಾಸನದಲ್ಲಿ ವೀರಸಿಂಹನ ಉಲ್ಲೇಖ ಬಂದಿದೆ. ಹೀಗೆ ಹೊಯ್ಸಳರಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಹಲವಾರು ಶಾಸನಗಳು ದೊರೆತಿವೆ. ಅದರಲ್ಲಿಯೂ ಮುಖ್ಯವಾಗಿ ಹಡಗಲಿಯಲ್ಲಿ ಇವರ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಇವರ ನಂತರ ಬಳ್ಳಾರಿಯಲ್ಲಿ ದೇವಗಿರಿಯ ಯಾದವರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ.

## ದೇವಗಿರಿಯ ಯಾದವರು

ಯಾದವರು ಕಲ್ಯಾಣ ಚಾಲುಕ್ಯರ ತರುವಾಯ ಅಧಿಕಾರಕ್ಕೆ ಬಂದರು. ಇವರು ಕರ್ನಾಟಕದ ಬಹುಭಾಗವನ್ನು ಆಳಿದರು. ದೇವಗಿರಿಯು ಮಹಾರಾಷ್ಟ್ರ ರಾಜ್ಯಕ್ಕೆ ಸೇರಿದೆ. ಇದಕ್ಕೆ ಇಂದಿನ ಹೆಸರು ದೌಲತಾಬಾದ್. ಹಾಗಾಗಿ ಇವರ ಇತಿಹಾಸವು ಕರ್ನಾಟಕ ಇತಿಹಾಸದ ವ್ಯಾಪ್ತಿಗೆ ಹೊರತೆಂದು ಬಹುಶಃ ಪರಿಗಣಿತವಾಗಬಹುದು. ಆದರೆ ಇವರು ದೋರಸಮುದ್ರದ ಹೊಯ್ಸಳರೊಂದಿಗೆ ತೀವ್ರ ಹೋರಾಟವನ್ನು ನಡೆಸುತ್ತಿದ್ದುದರಿಂದ ಅವರ ರಾಜ್ಯದ ಎಲ್ಲೆಯು ಆಗಾಗ ಬದಲಾಗುತ್ತಿತ್ತು. ಹಾಗಾಗಿ ಯಾದವರು ಕರ್ನಾಟಕದೊಂದಿಗೆ ಬಹಳ ಸಂಬಂಧವನ್ನು ಹೊಂದಿದ್ದರು. ಇವರು ದಕ್ಷಿಣ ಭಾರತದಲ್ಲಿ ೧೩-೧೪ನೇ ಶತಮಾನಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ನಹುಷನ ಮಗ ಯಯಾತಿಯ ಐವರು ಮಕ್ಕಳಲ್ಲಿ ಒಬ್ಬನಾದ ಯದುವಿನಿಂದ ತಮ್ಮ ವಂಶಾವಳಿಯನ್ನು ಹೇಳಿಕೊಳ್ಳುತ್ತಾರೆ. ಈ ವಂಶದ ರಾಜನಾದ ಮಹದೇವನ ಮಂತ್ರಿ ಹೇಮಾದ್ರಿ ರಚಿಸಿರುವ 'ವ್ರತಖಂಡ'ದ ಪ್ರಸ್ತಾವದಲ್ಲಿ ವಂಶಾವಳಿಯ ವಿಷಯವನ್ನು ತಿಳಿಸಲಾಗಿದೆ. ಸಿಂಘಣನು ಈ ವಂಶದ ಅತ್ಯಂತ ದೊಡ್ಡ ಅರಸನಾಗಿದ್ದಾನೆ. ಬಳ್ಳಾರಿ ಜಿಲ್ಲೆಯು ಇವರ ಆಡಳಿತಕ್ಕೆ ಒಳಪಟ್ಟಿದ್ದವು ಎಂಬುದಕ್ಕೆ ಇಲ್ಲಿ ದೊರೆತ ಕೆಲವು ಶಾಸನಗಳು ಪುಷ್ಟಿ ಕೊಡುತ್ತವೆ. ಮುಖ್ಯವಾಗಿ ಯಾದವ ಸಿಂಘಣನ ಕಾಲದಿಂದ ಅಂದರೆ ಸುಮಾರು ಕ್ರಿ.ಶ.೧೨೦೦ರಿಂದ ಈಚೆಗೆ ಕಾಣಸಿಗುತ್ತದೆ. ಕ್ರಿ.ಶ.೧೨೦೫ರ ಹಡಗಲಿ ತಾಲೂಕಿನ ಕುರುವತ್ತಿಯಲ್ಲಿನ ಶಾಸನವು ಯಾದವ ಸಿಂಘಣನನ್ನು ಉಲ್ಲೇಖಿಸುತ್ತದೆ. ಸಿಂಘಣನ ಕಾಲದಲ್ಲಿ ಯಾದವ ರಾಜ್ಯವು ವಿಸ್ತಾರವಾಯಿತು. ಸಿಂಘಣನ ತರುವಾಯ ಇವನ ಮೊಮ್ಮಕ್ಕಳಾದ ಕೃಷ್ಣ ಮತ್ತು ಮಹಾದೇವ ಇವರು ಸಾಮ್ರಾಜ್ಯವನ್ನು ವ್ಯವಸ್ಥೆಯಲ್ಲಿಟ್ಟುಕೊಂಡರು. ಮಹಾದೇವನು ಹೊಯ್ಸಳರಿಂದ ತುಂಗಭದ್ರೆಯ ಆಚೆಯ ಕೆಲವು ಪ್ರದೇಶಗಳನ್ನು ಮತ್ತು ಕೊಂಕಣದ ಉತ್ತರ ಭಾಗವನ್ನು ಪಡೆದುಕೊಂಡನು. ಹಾಗಾಗಿ ಮಹಾದೇವನಿಗೆ ಸಂಬಂಧಿಸಿದ ಒಂದೆರಡು ಶಾಸನಗಳು ಹಡಗಲಿ ತಾಲೂಕಿನಲ್ಲಿ ದೊರೆತಿವೆ.

ಹಡಗಲಿ ತಾಲೂಕಿನ ಕೊಟ್ನಕಲ್ಲು ಗ್ರಾಮದ ಕೋಟೇಶ್ವರ ದೇವಸ್ಥಾನದ ಗೋಡೆಯಲ್ಲಿರುವ ಶಾಸನದಲ್ಲಿ ಯಾದವ ದೊರೆ ಮಹಾದೇವರಾಯನ ಉಲ್ಲೇಖವಿದೆ. ಹಾಗೆಯೇ ಹ್ಯಾರಡ ಗ್ರಾಮದ ಆಗ್ನೇಯ ದಿಕ್ಕಿಗಿರುವ ಒಂದು ಹೊಲದಲ್ಲಿ ಬಿದ್ದಿರುವ ನಂದಿಕಂಬದ ಮೇಲೆ ಯಾದವ ದೊರೆ ಮಹಾದೇವರಾಯನ ಆಳ್ವಿಕೆ ಮತ್ತು ಶ್ರೀಪರ್ವತದಲ್ಲಿನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗಾಗಿ ಹೆರಡ ಗ್ರಾಮವನ್ನು ಮಹಾಪಸಾಯಿತ ದಳವಯ್ಯ.... ಸೋಯಿದೇವನು ದಾನ ಮಾಡಿದನು ಮತ್ತು ಬೆಣ್ಣೆವೂರ-೧೨ನ್ನು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೪೪] ಮುಂದೆ ಕ್ರಿ.ಶ.೧೨೭೮ರಲ್ಲಿನ ಶಾಸನವು ಮೈಲಾರ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿ ದೊರೆತಿದೆ. ಈ ಶಾಸನವು ಯಾದವ ದೊರೆ ವೀರರಾಮಚಂದ್ರದೇವನ ಆಳ್ವಿಕೆಯಲ್ಲಿ ಜನ್ನುವ ನಾಯಕನು ಗುಂಗುರಾಜಂದದಲ್ಲಿ ಕಲಿನಾಥದೇವರ ಮುಂದೆ ನಂದಿಕೇಶ್ವರನನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ. ಕೆ.ವೀರಾಪುರದ

ಹೊರಗಡೆ(ತುಂಬಿಗೇರಿ ತಾಂಡದಿಂದ ಹೊರಗೆ) ಶಿಬಾರಕಟ್ಟೆಯ ಕಂಬದ ಮೇಲಿನ ಶಾಸನವು ಯಾದವರ ಕಾಲಕ್ಕೆ ಸೇರಿದೆ.[೪೫] ಮುಖ್ಯವಾಗಿ ದೇವಗಿರಿಯ ಯಾದವರ ಕಾಲದ ಶಾಸನಗಳು ಹಡಗಲಿ, ಕೂಡ್ಲಿಗಿ ಮತ್ತು ಹರಪನಹಳ್ಳಿಗಳಲ್ಲಿ ದೊರೆತಿವೆ. ಕ್ರಿ.ಶ.೧೨೯೭ರ ಕಾಲದ ಶಾಸನವು ಹಡಗಲಿ ತಾಲೂಕಿನ ಮಾನ್ಯರಮಸಲವಾಡ ಗ್ರಾಮದಲ್ಲಿ ದೊರೆತಿದೆ. ಈ ಶಾಸನವು ಯಾದವ ದೊರೆಯಾದ ರಾಮಚಂದ್ರದೇವನ ಆಳ್ವಿಕೆಗೆ ಸೇರಿದ್ದು ಇದು ದಾನಶಾಸನವಾಗಿದೆ. ಈ ಶಾಸನವೇ ಬಳ್ಳಾರಿ ಜಿಲ್ಲೆಯಲ್ಲಿ ಯಾದವರ ಕುರಿತಾದ ಶಾಸನಗಳಲ್ಲಿ ಅಂತ್ಯದ ಶಾಸನವಾಗಿದೆ. ಇವರ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಅಷ್ಟಾಗಿ ಕಂಡುಬರಲಿಲ್ಲ. ಕಾರಣ ತುಂಗಭದ್ರಾ ನದಿ ಅಡ್ಡವಾಗಿದ್ದುದರಿಂದಲೂ ಹೊಯ್ಸಳರು ಅದರಲ್ಲಿ ಮುಖ್ಯವಾಗಿ ವೀರಬಲ್ಲಾಳನ ಕಾಲದಿಂದೀಚೆಗೆ ಈ ಪ್ರದೇಶದ ಮೇಲೆ ತಮ್ಮ ಹಿಡಿತವನ್ನು ಬಲಪಡಿಸಿದ್ದು ಆಗಿದೆ. ಒಟ್ಟಾರೆಯಾಗಿ ಯಾದವರು ಸಹ ಬಳ್ಳಾರಿ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ವಶಪಡಿಸಿಕೊಂಡಿದ್ದರು ಎಂಬುದು ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ಇವರು ವಿಜಯನಗರ ಸಾಮ್ರಾಜ್ಯದ ಹುಟ್ಟಿಗೆ ಕಾರಣರಾದರು.

### ವಿಜಯನಗರ ಸಾಮ್ರಾಜ್ಯ

ಬಳ್ಳಾರಿ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ತವರು ಜಿಲ್ಲೆಯಾಗಿದೆ. ಇವರ ಆಳ್ವಿಕೆಗೆ ಸಂಬಂಧಿಸಿದಂತೆ ಅನೇಕ ಶಾಸನಗಳು ದೊರೆತಿವೆ. ಈ ಸಾಮ್ರಾಜ್ಯವನ್ನು ಮುಖ್ಯವಾಗಿ ನಾಲ್ಕು ವಂಶಸ್ಥರು ಆಳಿದ್ದಾರೆ. ಇವರಲ್ಲಿ ಸಂಗಮ ವಂಶದ ಶಾಸನಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಈ ವಂಶದ ನಂತರದಲ್ಲಿ ಸಾಳುವ ವಂಶ ಅಧಿಕಾರಕ್ಕೆ ಬರುತ್ತದೆ. ಈ ವಂಶದ ಶಾಸನಗಳೂ ಕೂಡ ಇಲ್ಲಿ ಹೆಚ್ಚಾಗಿ ಕಂಡುಬಂದಿಲ್ಲ. ನಂತರದಲ್ಲಿ ತುಳುವ ವಂಶ ಅಧಿಕಾರಕ್ಕೆ ಬಂದಿತು. ಈ ವಂಶದ ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯನ ಕಾಲಾವಧಿಯಲ್ಲಿನ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಸಾಮ್ರಾಜ್ಯದ ಮೊಟ್ಟಮೊದಲ ಶಾಸನ ದೊರೆಯುವುದು ಹಡಗಲಿಯಲ್ಲಿ. ಕ್ರಿ.ಶ.೧೩೭೨ರ ಈ ಶಾಸನದ ಅವಧಿ ಬುಕ್ಕರಾಯನ ಕಾಲದ್ದಾಗಿದೆ. ಹಡಗಲಿಯ ಬಸರಕೋಡು ಎಂಬ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಮುಂದೆ ಇರುವಂತಹ ವೀರಗಲ್ಲಿನ ಮೇಲಿನ ಶಾಸನವು ಬುಕ್ಕರಾಯನ ಆಸ್ಥಾನದಲ್ಲಿ ಪ್ರಧಾನಿಯಾಗಿದ್ದ ಕೇಚರಿದೇವನು ಸೈನ್ಯದ ನೇತೃತ್ವವನ್ನು ವಹಿಸಿದ್ದನೆಂದು, ಯುದ್ಧದಲ್ಲಿ ಚಂದಪ್ಪನು ಮರಣ ಹೊಂದಿದನೆಂದು ತಿಳಿಸುತ್ತದೆ. ಇದು ಒಂದು ವೀರಗಲ್ಲಾಗಿರುವುದರಿಂದ ಚಂದಪ್ಪನ ಕುರಿತದ್ದಾಗಿರಬಹುದೇ ಎಂದು ಊಹಿಸಬಹುದಾಗಿದೆ. ಹಡಗಲಿಯ ನಂತರದಲ್ಲಿ ನವಿಲುತೀರ್ಥ, ರಾಮಸಾಗರ ಮುಂತಾದ ಪ್ರದೇಶಗಳಲ್ಲಿ ಬುಕ್ಕರಾಯನ ಕಾಲದ ಶಾಸನಗಳು ದೊರೆಯುತ್ತವೆ. ಈತನ ನಂತರ ಇಮ್ಮಡಿ ದೇವರಾಯ ಅಥವಾ ಪ್ರೌಢದೇವ ರಾಯನ ಕಾಲದ ಶಾಸನಗಳು ದೊರೆಯುತ್ತವೆ. ಈ ದೊರೆಯು ಸಂಗಮ ವಂಶದವರಲ್ಲಿಯೇ ಅತ್ಯಂತ ಶ್ರೇಷ್ಠ ಅರಸ ಎಂದು ಪ್ರಖ್ಯಾತನಾಗಿದ್ದಾನೆ. ಇವರ ಅಧಿಕಾರಾವಧಿಯಲ್ಲಿ ಒರಿಸ್ಸಾದ ಗಜಪತಿಗಳು, ಕೇರಳ, ಸಿಲೋನ್ ಮತ್ತು ಬಹಮನಿ ಅರಸರ ವಿರುದ್ಧ ಹೋರಾಡುವುದರ

ಮೂಲಕ ವಿಜಯನಗರ ಸಾಮ್ರಾಜ್ಯವನ್ನು ಒಂದು ಪ್ರಬಲ ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದನು. ಇಮ್ಮಡಿ ದೇವರಾಯನು ಅನೇಕ ಬಿರುದುಗಳನ್ನು ಹೊಂದಿದ್ದನು. ಶಿವಮೊಗ್ಗ ಜಿಲ್ಲೆಯ ಒಂದು ಶಾಸನದಲ್ಲಿ ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರಪ್ರತಾಪ ದೇವರಾಯ ಮಹಾರಾಯ ಎಂದು ವರ್ಣಿಸುತ್ತದೆ. ಈತನ ವಿಶಿಷ್ಟವಾದ ಬಿರುದೆಂದರೆ 'ಗಜಬೇಂಟೇಕಾರ'. ಇದು ಆನೆಯ ಬೇಟೆಯನ್ನು ಕುರಿತದ್ದಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಇವನಿಗೆ ಸಂಬಂಧಿಸಿದ ಶಾಸನಗಳು ಬಹಳಷ್ಟು ಕಂಡುಬರುವುದಿಲ್ಲವಾದರೂ ಹಡಗಲಿಯ ಮೈಲಾರ ಎಂಬ ಗ್ರಾಮದಲ್ಲಿನ ಮೈಲಾರ ದೇವಸ್ಥಾನದ ರಂಗಮಂಟಪದ ಕಂಬದ ಮೇಲೆ ಪ್ರೌಢದೇವರಾಯನ ಆಸ್ಥಾನದಲ್ಲಿ ಮಹಾಪ್ರಧಾನನಾದ ಸಿಂಗಣ್ಣ ದಣ್ಣಾಯಕನು ಮೈಲಾರ ದೇವರ ಭಕ್ತ ಮತ್ತು ಅಧಿಕಾರಿಯಾಗಿದ್ದ ಗಂಗರಸನು ದೇವಸ್ಥಾನದಲ್ಲಿ ರಂಗಮಂಟಪವನ್ನು ಕಟ್ಟಿಸಿದನು ಎಂಬ ಉಲ್ಲೇಖವಿದೆ. ಈ ರಾಜನ ನಂತರದಲ್ಲಿ ಸಮರ್ಥರಾದ ರಾಜರು ಸಂಗಮ ವಂಶದಲ್ಲಿ ಕಂಡುಬರಲಿಲ್ಲ. ಮುಂದೆ ತುಳುವ ವಂಶದ ಕೃಷ್ಣದೇವರಾಯನ ಕಾಲದವರೆಗೆ ಯಾವುದೇ ಶಾಸನಗಳು ದೊರೆಯುವುದಿಲ್ಲ. ಈ ವಂಶದ ಪೂರ್ವದಲ್ಲಿ ಸಾಳುವ ವಂಶ ಅಧಿಕಾರಕ್ಕೆ ಬಂದು ನಾಶ ಹೊಂದಿತ್ತು. ನಂತರದಲ್ಲಿ ತುಳುವ ವಂಶ ಅಧಿಕಾರಕ್ಕೆ ಬಂದಿತು. ಈ ವಂಶದಲ್ಲಿ ಪ್ರಮುಖ ಅರಸ ಕೃಷ್ಣದೇವರಾಯ. ಈತನಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಮೋಕ ಮತ್ತು ಯಾಲ್ಪಿಯಲ್ಲಿ ದೊರೆತಿರುವ ಶಾಸನಗಳೇ ಮೊದಲ ಶಾಸನಗಳಾಗಿವೆ. ಕೂಡ್ಲಿಗಿ, ಹೊಸಪೇಟೆ, ಬಳ್ಳಾರಿ ಮತ್ತು ಹಡಗಲಿಗಳಲ್ಲಿ ಕೃಷ್ಣದೇವರಾಯನ ಕುರಿತಾದ ಶಾಸನಗಳು ದೊರೆತಿವೆ. ಹಡಗಲಿ ತಾಲೂಕಿನ ಸೋಗಿ ಎಂಬ ಗ್ರಾಮದಲ್ಲಿ ಈತನ ಕಾಲಕ್ಕೆ ಸಂಬಂಧಿಸಿದ ಶಾಸನ ದೊರೆತಿದೆ. ಈ ಶಾಸನವು ದಾನ ಶಾಸನವಾಗಿದೆ. ಈ ಶಾಸನವನ್ನು ಹೊರತುಪಡಿಸಿ ಹಡಗಲಿಯಲ್ಲಿ ಬೇರೆಲ್ಲೂ ಶಾಸನಗಳು ದೊರೆತಿಲ್ಲ. ಕೃಷ್ಣದೇವರಾಯನ ನಂತರ ಅಚ್ಯುತರಾಯನ ಶಾಸನವು ಹಡಗಲಿಯ ಮುಸುವನಕಲ್ಲಹಳ್ಳಿ ಎಂಬ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯದ ಹತ್ತಿರ ದೊರೆತಿದೆ. ಈ ಶಾಸನವು ದಾನಶಾಸನವಾಗಿದ್ದು ಅರಸನ ಪ್ರೀತಿಗೆ ಪಾತ್ರನಾದ ಅಣ್ಣಾಜಿಯ ಸಿಂಗಭಟ್ಟನಿಗೆ ಕಲ್ಲಹಳ್ಳಿ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಈತನ ನಂತರದಲ್ಲಿ ಹಡಗಲಿಯಲ್ಲಿ ಕಂಡುಬರುವುದು ಸದಾಶಿವರಾಯನ ಕಾಲದ ಶಾಸನಗಳು. ಹಗರನೂರ, ನಕ್ಕರಹಾಳ, ನಂದಿಹಳ್ಳಿ ಮತ್ತು ತಿಮ್ಮಲಾಪುರ ಎಂಬ ಗ್ರಾಮಗಳಲ್ಲಿ ಈತನ ಶಾಸನಗಳು ದೊರೆತಿವೆ. ಇವುಗಳೆಲ್ಲವೂ ದಾನ ಶಾಸನಗಳಾಗಿವೆ.



### ಹರಪನಹಳ್ಳಿ ಪಾಳೆಯಗಾರರು

ವಿಜಯನಗರದ ಅರಸರ ನಂತರದಲ್ಲಿ ಹರಪನಹಳ್ಳಿ ಪಾಳೆಯಗಾರರ ಆಡಳಿತಕ್ಕೆ ಹಡಗಲಿ ಒಳಪಟ್ಟಿತ್ತು. ದಾದಯ್ಯನಾಯಕನು ಹರಪನಹಳ್ಳಿ ಪಾಳೆಪಟ್ಟನ್ನು ಸ್ಥಾಪಿಸಿದನು. ಇವನು ಮೊದಲಿಗೆ ಬಾಗಳಿಯಲ್ಲಿ ಅಧಿಕಾರ ಪ್ರಾರಂಭಿಸಿದ್ದರಿಂದ ಇವರಿಗೆ ಬಾಗಳಿ ನಾಯಕರೆಂದು ಕರೆಯಲಾಗಿದೆ.

ಹರಪನಹಳ್ಳಿ ಇವರ ಕೇಂದ್ರವಾಗಿತ್ತು. ಇವರ ಕಾಲದ ಶಾಸನಗಳು ದೊಡ್ಡಗೋವಿಂದನಹಳ್ಳಿ, ಹ್ಯಾರಡ ಮತ್ತು ಬಾವಿಹಳ್ಳಿಯಲ್ಲಿ ಕಂಡುಬರುತ್ತವೆ. ದೊಡ್ಡಗೋವಿಂದನಹಳ್ಳಿಯ ಕ್ರಿ.ಶ.೧೭೫೬ರ ಶಾಸನ ಮುಮ್ಮಡಿಬಸಪ್ಪನಾಯಕನ ಕಾಲದ್ದಾಗಿದೆ. ಇನ್ನು ಹ್ಯಾರಡದಲ್ಲಿ ಇವರ ಕಾಲದ ನಾಲ್ಕು ಶಾಸನಗಳು ಇದ್ದು, ಕಾಲದ ಉಲ್ಲೇಖವಿಲ್ಲದ ಎರಡು ಶಾಸನಗಳು ಬಾಗಳಿ ಬಸಪ್ಪನಾಯಕನ ಹೆಸರನ್ನು ಉಲ್ಲೇಖಿಸುತ್ತವೆ. ಹ್ಯಾರಡದ(ಶಾ.ಸಂ.೪೩) ಬಾಗಳಿ ಬಸಪ್ಪನಾಯಕನ ಆಣತಿಯಂತೆ ಮದಪನಾಯಕನು ಹೆರಡದ ಸೇನಭೋವನ ಮಗನಿಗೆ ಭೂದಾನ ಮಾಡಿದ ವಿಷಯ ತಿಳಿಸುತ್ತದೆ. ಅದೇ ಗ್ರಾಮದ ಕ್ರಿ.ಶ.೧೮೫೦ರ ಶಾಸನವು ಬಾಗಳಿ ಬಸವಪ್ಪನಾಯಕ ಮತ್ತು ಸೋಮಶೇಖರ ನಾಯಕರು ಶ್ರೀಗುರುಗಳಿಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಇನ್ನು ಕಾಲ ಉಕ್ತವಿಲ್ಲದ ಮುಮ್ಮಡಿ ಬಸವಪ್ಪನಾಯಕನ ಶಾಸನವು ಬಸವಪ್ಪನಾಯಕನು ತಳವಾರನೊಬ್ಬನು ಬಾವಿ ತೆಗೆದಿದ್ದಕ್ಕೆ ತಳವಾರಿಕೆ ಮಾನ್ಯವಾಗಿ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಬಾವಿಹಳ್ಳಿಯ ಕರಿಬಸವೇಶ್ವರ ಮಠದ ಗರ್ಭಗೃಹದಲ್ಲಿ ಗೋಡೆಗೆ ಸೇರಿಸಿದ ಶಾಸನವು ಬಾಗಳಿ ಬಸಪ್ಪನಾಯಕನ ಹೆಸರನ್ನು ಉಲ್ಲೇಖಿಸಿದೆ.

ಹೀಗೆ ಹಡಗಲಿಯಲ್ಲಿ ದೊರೆತ ಶಾಸನಗಳನ್ನಾಧರಿಸಿ ಹಡಗಲಿಯ ಚಾರಿತ್ರಿಕ ಹಿನ್ನೆಲೆಯ ರಾಜಕೀಯ ಸನ್ನಿವೇಶಗಳನ್ನು ಗುರುತಿಸಲಾಗಿದೆ. ಮುಖ್ಯವಾಗಿ ಈ ಭಾಗವು ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿ ಹೆಚ್ಚಾಗಿ ಒಳಪಟ್ಟಿರುವುದು ತಿಳಿಯುತ್ತದೆ. ನಂತರ ವಿಜಯನಗರದ ಅರಸರ ಕಾಲಕ್ಕೆ ಒಳಪಟ್ಟಿತ್ತಾದರೂ ಹೆಚ್ಚಿನ ಶಾಸನಗಳು ಲಭ್ಯವಾಗಿಲ್ಲ.

ಈ ಹಿಂದೆ ಬಳ್ಳಾರಿ ಜಿಲ್ಲೆಯೂ ಎರಡು ಪ್ರಮುಖ ವಿಭಾಗಗಳಲ್ಲಿ ವಿಂಗಡನೆಗೊಂಡಿತ್ತು. ಒಂದು ಸಿಂದವಾಡಿ ಸಾಸಿರ ಮತ್ತೊಂದು ಕೋಗಳಿ ೫೦೦. ಇವುಗಳು ನೊಳಂಬವಾಡಿ ೩೨೦೦೦ ವಿಭಾಗದ ಉಪವಿಭಾಗಗಳಾಗಿದ್ದವು. ಈ ವಿಭಾಗವು ಬಳ್ಳಾರಿ, ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಜಿಲ್ಲೆಯ ಕೆಲವು ಗ್ರಾಮಗಳನ್ನು, ಆಂಧ್ರಪ್ರದೇಶದ ಅನಂತಪುರ, ಕರ್ನೂಲು ಜಿಲ್ಲೆಯ ಕೆಲವು ಗ್ರಾಮಗಳನ್ನು ಒಳಗೊಂಡಿತ್ತು. ಬಳ್ಳಾರಿ ಜಿಲ್ಲೆಯ ಎಲ್ಲ ಪ್ರದೇಶವು ನೊಳಂಬವಾಡಿ ೩೨೦೦೦ಕ್ಕೆ ಒಳಪಟ್ಟಿತ್ತು. ಬಳ್ಳಾರಿ ಜಿಲ್ಲೆಯ ಪ್ರದೇಶಗಳನ್ನೊಳಗೊಂಡಂತೆ ಈ ವಿಭಾಗದ ಉಪವಿಭಾಗಗಳೆಂದರೆ ಸಿಂದವಾಡಿ–೧೦೦೦, ಕದಂಬಳಿಕೆ–೧೦೦೦ ಮತ್ತು ಕೋಗಳಿ–೫೦೦ ಈ ಗ್ರಾಮಗಳ ಸಂಖ್ಯೆಗಳನ್ನಾಧರಿಸಿ ವಿಭಾಗಗಳ ವಿಂಗಡಣೆ ಪದ್ಧತಿ ರಾಷ್ಟ್ರಕೂಟರ ಕೊಡುಗೆಯಾಗಿದೆ. ಈ ಪದ್ಧತಿಯು ಮುಸಲ್ಮಾನರು ದಕ್ಷಿಣಕ್ಕೆ ದಾಳಿ ಮಾಡುವವರೆಗೂ ಇತ್ತು. ನಂತರ ವಿಜಯನಗರದ ಕಾಲಕ್ಕೆ ಇದರ ಸ್ವರೂಪ ಬೇರೆಯಾಯಿತು.

ರಾಷ್ಟ್ರಕೂಟರ ಕಾಲದಿಂದ ವಿಭಾಗಗಳ ಹೆಸರಿನ ಜೊತೆಗೆ ಆ ವಿಭಾಗ ಒಳಗೊಂಡಿದ್ದ ಗ್ರಾಮಗಳ ಸಂಖ್ಯೆಯನ್ನು ಜೋಡಿಸಿ ಕರೆಯಲಾರಂಭಿಸಿದರು. ಅದರ ಫಲವಾಗಿಯೇ ನೊಳಂಬವಾಡಿ–೩೨೦೦೦ ಬಂದದ್ದು. ನೊಳಂಬವಾಡಿ ಎಂಬುದು ತಮಿಳಿನಲ್ಲಿ ದೊಡ್ಡ ವಿಭಾಗ ಎಂಬುದನ್ನು

ನಿರ್ದೇಶಿಸುತ್ತದೆ. ನೊಳಂಬವಾಡಿ ಎಂಬ ಹೆಸರು ಹೇಗೆ ಬಂದಿತು ಎಂಬುದನ್ನು ಗಮನಿಸಿದಾಗ ಮೊದಲು ನೊಳಂಬವಾಡಿಯನ್ನು ಪಲ್ಲವರು ಆಳುತ್ತಿದ್ದರು. ಗಂಗರು, ರಾಷ್ಟ್ರಕೂಟರು ಮತ್ತು ಚಾಲುಕ್ಯರ ಕಾಲದಲ್ಲಿ ಪಲ್ಲವರನ್ನು ನೊಳಂಬರು, ನೊಣಂಬರು ಎಂದು ಕರೆಯಲಾಗುತ್ತಿತ್ತು. ಇದು ದೊಡ್ಡ ವಿಭಾಗವಾದುದ್ದರಿಂದ ಮತ್ತು ಅದನ್ನು ಆಳುವವರನ್ನು ಅದೇ ಅರ್ಥದಲ್ಲಿ ಕರೆಯುತ್ತಿದ್ದುದರಿಂದ ಈ ವಿಭಾಗಕ್ಕೆ ನೊಳಂಬವಾಡಿ ಎಂಬ ಹೆಸರು ಬಂದಿತು. ಕೋಗಳಿ ೫೦೦, ನೊಳಂಬವಾಡಿ ೩೨೦೦೦ದ ವಿಭಾಗವಾಗಿತ್ತು. ಕೋಗಳಿ-೫೦೦ನ್ನು ಕೇಂದ್ರವನ್ನಾಗಿಸಿಕೊಂಡು ಅಂದರೆ ಅದನ್ನು ರಾಜಧಾನಿಯನ್ನಾಗಿ ಹೊಂದಿ ಅದರ ಸುತ್ತಮುತ್ತಲ ೫೦೦ ಗ್ರಾಮಗಳನ್ನು ಒಳಗೊಂಡ ಪ್ರದೇಶವಾಗಿದೆ. ಕೋಗಳಿಯು ಇಂದು ಹಗರಿಬೊಮ್ಮನಹಳ್ಳಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಆದರೆ ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾದ ನಗರವಾಗಿದ್ದು ೫೦೦ ಗ್ರಾಮಗಳಿಗೆ ರಾಜಧಾನಿಯಾಗಿತ್ತು. ಈ ವಿಭಾಗವು ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಕೂಡ್ಲಿಗಿ ಮತ್ತು ಹರಪನಹಳ್ಳಿ ತಾಲೂಕಿನ ಗ್ರಾಮಗಳನ್ನು ಒಳಗೊಂಡಿತ್ತು. ಈ ವಿಭಾಗದಲ್ಲಿ ಕೆಲವು ಉಪವಿಭಾಗಗಳು ಇದ್ದವು. ಅವುಗಳೆಂದರೆ ಹಾಲ್ವೊಳ ೧೨, ಹಲುವಾಗಿಲು ೧೨, ಬೆಣ್ಣೆವೂರು ೧೨, ಥುಲರಯಿ ೧೨, ಮೊಸಳೆವಾಡ ೧೨, ಮೊಸಘಮುಡ ೧೨, ಮುತ್ತಗೆ ೩೦, ಕೊಟ್ಟೂರ ೧೨, ಬೆಣ್ಣೆಕಲ್ಲು ೧೨, ಸುಂದವತ್ತಿ ೧೨, ಸೋಗಿ ೧೨, ಮಾಂಗೋಳ ೧೨ ಎಂಬುವುಗಳಾಗಿವೆ.

ಹಾಲ್ವೊಳ ೧೨ ಇಂದಿನ ಹಡಗಲಿ ತಾಲೂಕಿನ ಹಾರ್ವಾಳ(ಅರಿವಾಳ) ಗ್ರಾಮವಾಗಿದೆ. ಇದರ ಸುತ್ತಲಿನ ೧೧ ಗ್ರಾಮಗಳು ಇದರ ವ್ಯಾಪ್ತಿಗೆ ಒಳಪಟ್ಟಿದ್ದವು. ಇದರ ಉಲ್ಲೇಖ ಹೂವಿನ ಹಡಗಲಿ ಶಾಸನದಲ್ಲಿ ಕಂಡುಬರುತ್ತದೆ. ಕ್ರಿ.ಶ.೧೧೭೭ರ ಕಲ್ಯಾಣ ಚಾಲುಕ್ಯ ಅರಸ ತ್ರಿಭುವನಮಲ್ಲನ ಕಾಲದ ಶಾಸನವಾಗಿದ್ದು ಇಲ್ಲಿ 'ಕೋಗಳಿ ಅಯ್ನೂರರ ಬಳಿಯ ಕಂಪಣಂ ಹಾಲ್ವೊಳಂ ಪನ್ನೆರಡರೊಳಗಣ ಕೊಟಿಗನೂರಂ' ಎಂದಿದೆ. ಅಂದರೆ ಅರಸನು ದಂಡನಾಯಕ ಚಿದ್ದಯ್ಯನ ಮೇಲೆ ವಿಜಯ ಸಾಧಿಸಿದ ನಂತರ ಗೋವಿಂದವಾಡಿಯನ್ನು ಆಳುತ್ತಿದ್ದನು. ಅರಸನ ಬಳಿಗೆ ಆತನನ್ನು ಆಶೀರ್ವದಿಸಲು ಹೋಗಿದ್ದ ಗ್ರಾಮದ ಮಹಾಜನರ ಮನವಿಯ ಮೇರೆಗೆ ಅರಸನು ಕೋಗಳಿ-೫೦೦ರ ಉಪವಿಭಾಗವಾದ ಹಾಲ್ವೊಳ-೧೨ರಲ್ಲಿಯ ಕೊಟಿಗನೂರು ಗ್ರಾಮವನ್ನು ಪೂವಿನ ಪಡಂಗಿಲೆಯ ಕಲಿದೇವರ ಸೇವೆಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೬೬] ಇದರ ನಂತರ ಬೆಣ್ಣೆವೂರು ೧೨ರ ಉಲ್ಲೇಖ ಕಂಡುಬರುವುದು ಕುರುವತ್ತಿಯಲ್ಲಿ ದೊರೆತ ಶಾಸನವು ಕ್ರಿ.ಶ.೧೧೯೯ರ ಕಾಲದ ಚಾಲುಕ್ಯ ದೊರೆ ತ್ರಿಭುವನಮಲ್ಲನ ಕಾಲದ್ದಾಗಿದೆ. ಈ ಗ್ರಾಮವು ಸುರೇಶ್ವರ ಪಂಡಿತನು ಆಳುತ್ತಿದ್ದ ಬೆಣ್ಣೆವೂರು-೧೨ಕ್ಕೆ ಸೇರಿತ್ತು ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಕತ್ತೆಬೆನ್ನೂರು ಶಾಸನವು ಮಧುವರ್ಮ ದೇವನು ಬೆಣ್ಣೆವೂರು-೧೨ನ್ನು ಆಳುತ್ತಿದ್ದುದನ್ನು ಹೇಳುತ್ತದೆ.[೬೭] ಹಡಗಲಿ ತಾಲೂಕಿನ ಕುರುವತ್ತಿಯ ಕ್ರಿ.ಶ.೧೧೯೪ರ ಶಾಸನದಲ್ಲಿ ವೀರಬಲ್ಲಾಳನು ಆಹವಮಲ್ಲೇಶ್ವರ ದೇವರಿಗೆ ಬೆಣ್ಣೆವೂರು-೧೨ರ ಬಳಿಯ ಬಾಡ ಮುಕರಬ್ಬೆಯನ್ನು ದಾನ ಬಿಟ್ಟಿದುದನ್ನು ಹೇಳಲಾಗಿದೆ. ಅದೇ

ಗ್ರಾಮದ ಇನ್ನೊಂದು ಶಾಸನದಲ್ಲಿ 'ಬೆಂಣೆಯೂರ್ಪ್ವಂ(೦)ನ್ನೆರಡರ ಬಳಿಯ ಬಾಡಂ ಹರುಹೆಯಿಂ' ಎಂದು ತಿಳಿಸುತ್ತದೆ.[೪೮]

ಕಂಪಣ ಪೊಗೆ-೧೨ ಇದು ಕೋಗಳಿ-೫೦೦ರ ಉಪವಿಭಾಗವಾಗಿದ್ದು, ಇದರ ಉಲ್ಲೇಖವು ಹಡಗಲಿ ತಾಲೂಕಿನ ತಳಕಲ್ಲು ಗ್ರಾಮದಲ್ಲಿನ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ ಶಾಸನ ತ್ರುಟಿತವಾಗಿರುವುದರಿಂದ ಸ್ಪಷ್ಟವಾಗಿ ಗೋಚರಿಸುತ್ತಿಲ್ಲ. ತಳಕಲ್ಲು ಗ್ರಾಮದಲ್ಲಿ ದೊರೆತ ಇನ್ನೊಂದು ಶಾಸನದಲ್ಲಿ ಕೋಗಳಿ ೫೦೦ರ ಉಪವಿಭಾಗಗಳಾದ x ಉರಯಿ ೧೨ ಮತ್ತು ಮೊಸxಮುಡ೧೨ರ ಉಲ್ಲೇಖಗಳಿರುವುದು ಕಂಡುಬರುತ್ತದೆ. ಮೊಸಳೆವಾಡ ೧೨, ಮುತ್ತಗೆ ೩೦, ಕೊಟೂರ ೧೨, ಬೆಣ್ಣೆಕಲ್ಲು ೧೨ ಮತ್ತು ಸೋಗೆ ೧೨, ಇವೆಲ್ಲ ಉಪವಿಭಾಗಗಳ ಉಲ್ಲೇಖಗಳು ಹರಪನಹಳ್ಳಿ, ಕೂಡ್ಲಿಗಿ ತಾಲೂಕುಗಳಲ್ಲಿನ ಶಾಸನಗಳಲ್ಲಿ ಕಂಡುಬರುತ್ತವೆ. ಕೊನೆಯ ಉಪವಿಭಾಗವಾದ ಸುಂದವತ್ತಿ ೧೨ ಇದು ಹಗರಿಬೊಮ್ಮನಹಳ್ಳಿಯ ಕೋಗಳಿ ಗ್ರಾಮದಲ್ಲಿ ದೊರೆತ ಶಾಸನದಲ್ಲಿ ಉಲ್ಲೇಖವಿದೆ. ನಂತರದಲ್ಲಿ ಕದಂಬಳಿಗೆ ೧೦೦೦, ಇದರ ಉಲ್ಲೇಖವೂ ಶಾಸನಗಳಲ್ಲಿ ದೊರೆತಿದೆ. ಈ ವಿಭಾಗದಲ್ಲಿ ಹಲವಾರು ಉಪವಿಭಾಗಗಳಿವೆ. ಅವುಗಳೆಂದರೆ ಸೂಳ್ಗಲ್ಲು ೭೦, ಕಂಪಣವಯ್ವತ್ತು, ಇಪ್ಪತ್ತು ನಾಲ್ಕು ಬಾಡ, ಉಚ್ಚಂಗಿ ೩೦, ಬೆಳ್ತುರು೧೨ಗಳಾಗಿವೆ. ಇವುಗಳಲ್ಲಿ ಉಚ್ಚಂಗಿ ೩೦ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದೆ.

ಹೀಗೆ ಬಳ್ಳಾರಿ ಜಿಲ್ಲೆಯನ್ನು ಅದರಲ್ಲಿಯೂ ಹಡಗಲಿಯ ರಾಜಕೀಯ ಇತಿಹಾಸವನ್ನು ತಿಳಿಯಲು ಶಾಸನಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಜೊತೆಗೆ ಈ ಭಾಗವನ್ನು ಆಡಳಿತ ಮಾಡಿದ ರಾಜಮನೆತನಗಳೆಲ್ಲವೂ ಆಡಳಿತದ ಅನುಕೂಲಕ್ಕಾಗಿ ವಿಭಾಗಗಳು, ಉಪವಿಭಾಗಗಳನ್ನಾಗಿ ವಿಭಾಗಿಸಿದ್ದರು ಎಂಬುದು ಶಾಸನಗಳಿಂದಲೇ ತಿಳಿಯುತ್ತದೆ. ಒಟ್ಟಾರೆಯಾಗಿ ಹಡಗಲಿಯ ಚರಿತ್ರೆಯನ್ನು ಅಭ್ಯಸಿಸುವಲ್ಲಿ ಅಂದಿನ ರಾಜಕೀಯ ಇತಿಹಾಸವು ಎಷ್ಟೊಂದು ವಿಭಿನ್ನವಾಗಿತ್ತು ಎಂಬುದನ್ನು ಈ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ತಿಳಿಯಲಾಗಿದೆ.

### ೩.೨. ಆರ್ಥಿಕ ಸ್ಥಿತಿಗತಿ

ಒಂದು ದೇಶದ, ರಾಜ್ಯದ, ಗ್ರಾಮದ ಮತ್ತು ವ್ಯಕ್ತಿಯ ಅಭಿವೃದ್ಧಿಯನ್ನು ತಿಳಿಯಬೇಕಾದರೆ ಆರ್ಥಿಕ ಪರಿಸ್ಥಿತಿ ಮುಖ್ಯವಾಗುತ್ತದೆ. ಒಂದು ದೇಶದ ಪ್ರಗತಿಯು ಆ ದೇಶದ ಸಂಪತ್ತನ್ನು ಅವಲಂಬಿಸಿರುತ್ತದೆ. ಆರ್ಥಿಕವಾಗಿ ಸುಭದ್ರವಾಗಿ ಇಲ್ಲದ ದೇಶ ಪ್ರಗತಿ ಹೊಂದಲು ಸಾಧ್ಯವಿಲ್ಲ. ಹಾಗಾಗಿಯೇ ರಾಜ್ಯಗಳು ಮೊದಲು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಭದ್ರವಾಗಿಟ್ಟುಕೊಳ್ಳಲು ಪ್ರಯತ್ನಿಸುತ್ತವೆ. ಕ್ರಿಸ್ತಶಕ ೩ನೇ ಶತಮಾನದಲ್ಲಿ ಚಂದ್ರಗುಪ್ತಮೌರ್ಯನ ಗುರುವಾಗಿದ್ದ ವಿಷ್ಣುಗೋಪ ಚಾಣಕ್ಯನು 'ಅರ್ಥಶಾಸ್ತ್ರ' ಎಂಬ ಗ್ರಂಥವನ್ನು ರಚಿಸಿದನು. ಇದು ಆರ್ಥಿಕ ವಿಚಾರವನ್ನು ವಿವರವಾಗಿ ಹೇಳುತ್ತದೆ. ಈ ಗ್ರಂಥವು ಅಂದಿನ ಸಂದರ್ಭದಲ್ಲಿ ಸಂಗ್ರಹಿಸುತ್ತಿದ್ದ ತೆರಿಗೆಗಳು, ತೆರಿಗೆಗಳ ವಿಧಗಳು ಮತ್ತು ಯಾವ ಯಾವ ಕೆಲಸಕ್ಕೆ ಎಷ್ಟು ತೆರಿಗೆಗಳು ಎಂಬಂತಹ ಹಲವಾರು

ವಿವರಗಳನ್ನು ಒಳಗೊಂಡಿದೆ. ಚಾಣಕ್ಯನು ದ್ರವ್ಯವನ್ನು ರಾಜ್ಯದ ಆಡಳಿತದ ಪ್ರಮುಖ ಅಂಗ ಎಂದು ಪರಿಗಣಿಸಿದ್ದಾನೆ. ರಾಜ್ಯದ ಭಂಡಾರವು ತುಂಬಿದ್ದರೆ ಮಾತ್ರ ರಾಜ್ಯದಲ್ಲಿ ಸುಭಿಕ್ಷತೆ, ಶಾಂತಿ ನೆಲೆಸಿರುತ್ತದೆ ಎಂದು ತಿಳಿಸಿದ್ದಾನೆ. ಈ ಗ್ರಂಥ ಬರುವುದಕ್ಕೂ ಪೂರ್ವದಲ್ಲಿಯೂ ಆರ್ಥಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ರಾಜರು ತಮ್ಮದೇ ಆದ ನಿಯಮಗಳನ್ನು ರೂಢಿಸಿಕೊಂಡಿದ್ದರು. ಜೊತೆಗೆ ಹಣಕಾಸಿಗೆ ಸಂಬಂಧಿಸಿದಂತೆಯೂ ಹಲವಾರು ನೀತಿಗಳು ಜಾರಿಯಲ್ಲಿದ್ದವು. ಆದರೆ ಅವು ರಾಜ್ಯಾಡಳಿತದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದವು ಎಂಬುದನ್ನು ಗುರುತಿಸಿರಲಿಲ್ಲ ಎಂದು ಹೇಳಬಹುದು. ಈ ಗುರುತಿಸುವಿಕೆಯನ್ನು ಚಾಣಕ್ಯನು ಮಾಡಿದನು ಎನ್ನಬಹುದು. ಒಟ್ಟಾರೆಯಾಗಿ ರಾಜ್ಯದ ಆರ್ಥಿಕತೆ ಅಲ್ಲಿನ ಸಂಪನ್ಮೂಲಗಳನ್ನು ಅವಲಂಬಿಸಿತ್ತು ಮತ್ತು ಅದರಿಂದಲೇ ರಾಜ್ಯದ ಸ್ಥಿತಿಗತಿಯನ್ನು ಅಳೆಯಬಹುದಾಗಿತ್ತು. ಈ ಹಿನ್ನೆಲೆಯಲ್ಲಿ ಆರ್ಥಿಕ ಸ್ಥಿತಿಗತಿಯನ್ನು ಅಭ್ಯಸಿಸುವುದು ಮುಖ್ಯವಾಗುತ್ತದೆ.

ರಾಜ್ಯದ ಪ್ರಮುಖ ವಿಭಾಗ ಹಣಕಾಸು ವಿಭಾಗವಾಗಿರುವುದರಿಂದ ಇದು ಎರಡು ರೀತಿಯಲ್ಲಿ ಕೆಲಸ ಮಾಡುತ್ತಿತ್ತು. ಮೊದಲನೆಯದಾಗಿ ಆದಾಯವನ್ನು ಸಂಗ್ರಹಿಸುವುದು ಮತ್ತು ಎರಡನೆಯದಾಗಿ ಸಂಗ್ರಹಿಸಿದ ಆದಾಯವನ್ನು ವೆಚ್ಚ ಮಾಡುವುದು. ಆದಾಯವನ್ನು ಹಲವಾರು ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಮುಖ್ಯವಾಗಿ ತೆರಿಗೆಗಳೇ ಇಲ್ಲಿನ ಪ್ರಮುಖ ಆದಾಯವಾಗಿತ್ತು. ಜೊತೆಗೆ ಕಂದಾಯ ಸಂಗ್ರಹಣೆ ಯುದ್ಧಗಳಲ್ಲಿ ದೊರೆಯುವ ಕಾಣಿಕೆ ಹಾಗೂ ನೈಸರ್ಗಿಕ ಸಂಪತ್ತುಗಳಿಂದ ಹಣದ ಸಂಗ್ರಹಣೆ ಹೀಗೆ ಹಲವಾರು ವಿಧಾನಗಳಲ್ಲಿ ರಾಜ್ಯಕ್ಕೆ ಆದಾಯವನ್ನು ಸಂಗ್ರಹಿಸಲಾಗುತ್ತಿತ್ತು. ಹೀಗೆ ಸಂಗ್ರಹಿಸುತ್ತಿದ್ದ ಆದಾಯವನ್ನು ರಾಜನು ಸಾಮಾನ್ಯವಾಗಿ ರಾಜ್ಯದ ಆದಾಯದಲ್ಲಿ ಒಂದು ಪಾಲನ್ನು ತೆಗೆದಿಟ್ಟುಕೊಂಡು ಉಳಿದ ಹಣವನ್ನು ಅಥವಾ ಆದಾಯವನ್ನು ರಾಜ್ಯದ ಅಭಿವೃದ್ಧಿಗೆ ಉಪಯೋಗಿಸುತ್ತಿದ್ದನು. ಇದಕ್ಕೆ ದಾಖಲೆಗಳಾಗಿ ಅವರು ಅಂದು ನೀಡಿದ ದಾನದತ್ತಿಗಳು, ನಿರ್ಮಿಸಿದ ದೇವಾಲಯಗಳು, ಕೆರೆಕಟ್ಟೆಗಳು ಕಂಡುಬರುತ್ತವೆ. ಇವುಗಳ ಮಾಹಿತಿಯು ಶಾಸನಗಳಿಂದಲೇ ತಿಳಿಯುತ್ತದೆ. ಹಡಗಲಿ ತಾಲೂಕಿನಲ್ಲಿ ಆಳಿದ ರಾಜರ ಕಾಲಾವಧಿಯ ಆರ್ಥಿಕ ಪರಿಸ್ಥಿತಿಯು ಸಹ ಇದಕ್ಕೆ ಹೊರತಾಗಿರಲಿಲ್ಲ. ಈ ಪ್ರದೇಶದಲ್ಲಿ ದೊರೆತ ಶಾಸನಗಳನ್ನು ಆಧರಿಸಿ ಅಂದಿನ ಸಂದರ್ಭದ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ವಿವರಿಸಲಾಗಿದೆ.

**ತೆರಿಗೆಗಳು**

ಕರ್ನಾಟಕದ ಪ್ರಾಚೀನ ಇತಿಹಾಸದಲ್ಲಿ ತೆರಿಗೆಗಳು ರಾಜ್ಯದ ಪ್ರಮುಖ ಮತ್ತು ಮೂಲ ಆದಾಯವಾಗಿದ್ದವು. ಆ ಸಂದರ್ಭದಲ್ಲಿ ಹಲವಾರು ರೀತಿಯ ತೆರಿಗೆಗಳನ್ನು ವಿಧಿಸುತ್ತಿದ್ದರು. ತೆರಿಗೆಗಳನ್ನು ವಿಧಿಸುವ ಸಂದರ್ಭದಲ್ಲೂ ರಾಜರು ಮಾನವೀಯತೆಯನ್ನು ಮೆರೆಯುತ್ತಿದ್ದರು. ಏಕೆಂದರೆ ರಾಜ್ಯದ ಸಂಪತ್ತನ್ನು ಅಭಿವೃದ್ಧಿಪಡಿಸುವುದರ ಜೊತೆಗೆ ಜನರ ಯೋಗಕ್ಷೇಮವೂ

ಮುಖ್ಯವಾಗಿತ್ತು. ಈ ಕಾರಣದಿಂದ ರಾಜನು ತನಗೆ ಇಷ್ಟ ಬಂದ ಹಾಗೆ ತೆರಿಗೆಗಳನ್ನು ಜನರ ಮೇಲೆ ಹೇರುತ್ತಿರಲಿಲ್ಲ. ಬರಗಾಲ ಭೀಕರ ಕ್ಷಾಮ ಉಂಟಾದ ಸಂದರ್ಭದಲ್ಲಿ ಜನರ ಮೇಲಿನ ತರಿಗೆಗಳನ್ನು ಮನ್ನಾ ಮಾಡಿದ ಉದಾಹರಣೆಗಳು ಸಹ ಶಾಸನಗಳಿಂದ ದೊರೆಯುತ್ತವೆ. ಹಿಂದೆ ವಿಧಿಸುತ್ತಿದ್ದ ತೆರಿಗೆಗಳನ್ನು ಗಮನಿಸಿದರೆ ನಮಗೆ ಆಶ್ಚರ್ಯವಾಗದಿರದು. ಏಕೆಂದರೆ ಪ್ರಸ್ತುತದ ತೆರಿಗೆಗಳು ಹಿಂದಿನದಕ್ಕೆ ಹೋಲಿಸಿದರೆ ಕಡಿಮೆಯೇ ಎಂದು ಹೇಳಬೇಕು. 'ಪನ್ನಾಯ, ಉತ್ತಾಯ, ದಂಡಾಯ, ವಸವಂದ, ಕುಳಿಯ ಸುಂಕ, ದವಸಾಯದ ಸುಂಕ, ನೀರುಣಿಸಿದ ಸುಂಕ, ತಿಪ್ಪೆಸುಂಕ, ಪೆರ್ಜುಂಕ, ಮದುವೆಯ ಸುಂಕ, ಅರುವಣ, ಮನ್ನೆವಣ, ಮೇಳಿವಣ, ಮನೆವಣ, ಸೂಳೆವಾಳ ಪಣ, ಸಂತೆವಣ, ಹಂದರವಣ, ಕನ್ನಡಿವಣ, ತಳವಾರಗೂಲಿ, ವಡ್ಡರಾವುಳ, ಕಿರುದೆರೆ, ಡೊಂಬದೆರೆ, ಗಾಣದೆರೆ, ನಾವಿದವಾರಿ, ಅಗಸದೆರೆ, ಕುಂಬಾರದೆರೆ, ಕಸಾಯಿಗತ್ತು, ಒಡ್ಡತೆರೆ, ಅತವಣೆ(ಕಂದಾಯ), ಕುಂದೆರೆ, ಮಗ್ಗದೆರೆ, ಬಂಡಿದೆರೆ ಹೀಗೆ ಹಲವಾರು ರೀತಿಯಲ್ಲಿ ನಮ್ಮ ಕಲ್ಪನೆಗೂ ಸಹ ನಿಲುಕದಂತೆ ತೆರಿಗೆಗಳನ್ನು ವಿಧಿಸುತ್ತಿದ್ದರು'[೨೯] ಇಷ್ಟೆಲ್ಲ ತೆರಿಗೆಗಳನ್ನು ವಿಧಿಸುತ್ತಿದ್ದರು ಎಂದು ಹೇಳುತ್ತಿದ್ದರೂ ಇವುಗಳಲ್ಲಿ ಯಾವ ಸುಂಕ ಅಥವಾ ತೆರಿಗೆ ಯಾರಿಗೆ ಎಷ್ಟು ಸೇರುತ್ತಿತ್ತು ಎಂದು ನಿಖರವಾಗಿ ಹೇಳುವುದು ಕಷ್ಟಸಾಧ್ಯ.

ಬಳ್ಳಾರಿ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ತೆರಿಗೆಗಳನ್ನು ಕುರಿತಂತೆ ವಿವರಿಸುವ ಉಲ್ಲೇಖಗಳು ಕಂಡುಬರುತ್ತವೆ. ಕರಭೂಮಿ, ಹೊಲದೆರೆ ಅಥವಾ ಗೆಯ್ಯದೆರೆ, ಅರುವಣ, ದಸವಂದ, ಮೂರಲೊಂದು ಪಣ ಮೊದಲಾದವು ಭೂಕಂದಾಯವನ್ನು ಸೂಚಿಸುತ್ತವೆ. ಮನೆದೆರೆ, ಬಂಡಿಹೇರು, ಹಾರಿಕಾಯ ಸುಂಕ, ಗಾಣದೆರೆ, ಮಗ್ಗದೆರೆ, ಸಿದ್ದಾಯ, ಸೆಟ್ಟಿದೆರೆ, ಮನ್ನೆಯ ಸಾಮ್ಯ ತೆರಿಗೆ, ಮೂಲಿಗದೆರೆ, ಪಂಚಕರುದೆರೆ, ಕಿರುದೆರೆ, ವಡ್ಡರಾವುಳ, ಬಿಲ್ಕೊಡೆ, ಪನ್ನಾಯ, ಹೆರ್ಜ್ಜುಂಕ, ಸಂತೆಯಾಯ, ಅಂಗಡಿದೆರೆ, ಸೂಳೆದೆರೆ, ಕನ್ನಡಿವಣ[೩೦] ಈ ತೆರಿಗೆಗಳನ್ನು ಸಂಗ್ರಹಿಸಲು ಹಲವಾರು ಅಧಿಕಾರಿಗಳ ವರ್ಗವೇ ಇರುತ್ತಿತ್ತು. ಸುಂಕಪೆರ್ಗಡೆ, ಸುಂಕಾಧಿಕಾರಿ, ವಿಷಯಪತಿ, ಪಟ್ಟಣಸ್ವಾಮಿ, ಗಾವುಂಡ, ಮಹಾಜನಗಳು, ಸೇನಬೋವ, ಕರುಣಿಕ ಎಂಬಿತ್ಯಾದಿ ಅಧಿಕಾರಿ ವರ್ಗವಿರುತ್ತಿತ್ತು. ಇವರು ರಾಜನ ಆಜ್ಞೆಯ ಮೇರೆಗೆ ತೆರಿಗೆಗಳನ್ನು ವಿಧಿಸುತ್ತಿದ್ದರು. ಈ ತೆರಿಗೆಗಳಿಂದ ಬಂದ ಆದಾಯವನ್ನು ಕೆರೆಗಳ ನಿರ್ಮಾಣಕ್ಕೆ, ದುರಸ್ತಿಗೆ, ದೇವಸ್ಥಾನಗಳ ನಿರ್ಮಾಣಕ್ಕೆ ಮತ್ತು ಅವುಗಳ ದುರಸ್ತಿಗೆ ವೆಚ್ಚ ಮಾಡುತ್ತಿರುವುದಕ್ಕೆ ದಾಖಲೆಗಳು ದೊರೆಯುತ್ತವೆ. ಈ ರೀತಿಯ ಉಲ್ಲೇಖಗಳು ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿರುವುದನ್ನು ಕಾಣುತ್ತೇವೆ. ಹಿರೇಹಡಗಲಿ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಅರಸನಾದ ತ್ರೈಲೋಕ್ಯಮಲ್ಲದೇವನ ದಂಡನಾಯಕನಾದ ಮಾಚಿದೇವರು ದೇಮೇಶ್ವರ ದೇವರ ಸೇವೆಗೆ ಸುಂಕದ ಆದಾಯದ ಭಾಗವನ್ನು ದಾನ ನೀಡಿದ್ದನ್ನು ಉಲ್ಲೇಖಿಸಲಾಗಿದೆ.[೩೧]

ಕುರುವತ್ತಿ ಎಂಬ ಗ್ರಾಮದಲ್ಲಿನ ಮಲ್ಲಿಕಾರ್ಜುನ ದೇವಸ್ಥಾನದಲ್ಲಿನ ಒಂದು ತೊಲೆಯ ಮೇಲೆ ಕ್ರಿ.ಶ.೧೨ನೇ ಶತಮಾನದ ಕಾಲದ ಶಾಸನವಿದೆ. ಇದರಲ್ಲಿ ಅಯ್ಯಾವಳೆಯ ಐನೂರು

ಸ್ವಾಮಿಗಳು, ನಾನಾದೇಶಿಗಳು, ಮುಮ್ಮರಿದಂಡಗಳು ಮುಂತಾದವರು ಕುರುವತ್ತಿಯಲ್ಲಿ ಸಭೆ ಸೇರಿ ಅಹವಮಲ್ಲೇಶ್ವರ ದೇವರ ಪೂಜೆಗೆ ಲೋಕಾಭರಣ ಮುನಿಗೆ ಹೆಜ್ಜುಂಕ ತೆರಿಗೆಯ ಒಂದು ಭಾಗವನ್ನು ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.[೫೨]

ಹೊಳಲು ಗ್ರಾಮದಲ್ಲಿನ ವೀರಭದ್ರ ದೇವಸ್ಥಾನದಲ್ಲಿ ದೊರೆತ ಶಾಸನದಲ್ಲಿಯೂ ಸಹ ಐನೂರು ಸ್ವಾಮಿಗಳು, ವಾಣಿಜ್ಯ ಸರಕುಗಳ ಮೇಲಿನ ಕೆಲವು ತೆರಿಗೆಗಳನ್ನು ಸ್ವಸಂತೋಷದಿಂದ ದಾನ ಮಾಡಿದ್ದನ್ನು ತಿಳಿಸುತ್ತದೆ.[೫೩] ಈ ಶಾಸನವು ಕಲ್ಯಾಣ ಚಾಲುಕ್ಯ ಅರಸ ಭುವನೈಕಮಲ್ಲದೇವ (ಸೋಮೇಶ್ವರ ೨) ಈತನ ಕಾಲಕ್ಕೆ ಸೇರಿದ್ದಾಗಿದೆ. ಹಾಗೆಯೇ ಅದೇ ಕಲ್ಲಿನ ಮೇಲೆ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ(೨)ನ ಕಾಲಕ್ಕೆ ಸೇರಿದ ಶಾಸನವೊಂದಿದೆ. ಇದರಲ್ಲಿ ವೀರಪಾಂಡ್ಯದೇವನ ಅಧೀನ ಅಧಿಕಾರಿ ಅಣುಕು ಪಲ್ಲವರಾಯ, ಸಾವಿದೇವ ಮತ್ತು ಆತನ ತಂದೆ ಉಯ್ಯವಂದ ದಂಡನಾಯಕರು ಗಂಡಾರಾದಿತ್ಯನ–ಹೊಳಲ ದೇವಸ್ಥಾನಕ್ಕೆ ಮೂರು ಲಕ್ಷ ಅಡಕೆಯ ಸುಂಕ, ವಡ್ಡರಾವುಳ ಮತ್ತು ಹೆಜ್ಜುಂಕಗಳ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೫೪] ಇಲ್ಲಿ ಐನೂರು ಸ್ವಾಮಿಗಳು, ನಾನಾದೇಶಿಗಳು ಮತ್ತು ಶೆಟ್ಟಿಗಳು ಇವರು ತೆರಿಗೆಯನ್ನು ಸಂಗ್ರಹಿಸುವ ಅಧಿಕಾರಿಗಳಾಗಿದ್ದರು ಎಂದು ತಿಳಿದುಬರುತ್ತದೆ. ಏಕೆಂದರೆ ಇವರು ತೆರಿಗೆಯಿಂದ ಬಂದಂತಹ ಆದಾಯವನ್ನು ದಾನವಾಗಿ ಕೊಡುತ್ತಿದ್ದುದ್ದನ್ನು ಗಮನಿಸಿದರೆ ಇವರು ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿಗಳೇ ಆಗಿದ್ದರು ಎಂದೆನ್ನಬಹುದಾಗಿದೆ.

ಸೋಗಿ ಗ್ರಾಮದಲ್ಲಿನ ದಬ್ಬಗುಡಿಯ ದೇವಸ್ಥಾನದ ಮುಂದೆ ಇರುವ ಶಾಸನದಲ್ಲಿ ಸಾಮಂತ ಗರುಡನ ಸೇವಕನಾದ ಕದಂಬ ವಂಶದ ಮನ್ನೆಯ ಘಟ್ಟಿಯರಸನು ಮದುವೆಯಾದಲ್ಲಿ ಹಂದರ ಹಣ(ತೆರಿಗೆ) ಸ್ವಯಂಭು ಕಲಿದೇವರ ನಂದಾದೀವಿಗೆಗೆ ಬಿಟ್ಟನು. ಜೊತೆಗೆ ಗ್ರಾಮದ ಮುಖ್ಯಸ್ಥನಾದ ಮಾರಸಿಂಗಯ್ಯನ ಉಲ್ಲೇಖವೂ ಇದೆ.[೫೫]

ರಂಗಾಪುರ ಗ್ರಾಮದಲ್ಲಿನ ನರಸಿಂಹ ದೇವಸ್ಥಾನದ ಪ್ರವೇಶ ದ್ವಾರದಲ್ಲಿರುವ ಶಾಸನವು ಚಾಲುಕ್ಯ ಅರಸ ತ್ರಿಭುವನಮಲ್ಲದೇವ ಕಾಲದ್ದಾಗಿದೆ. ಈ ಶಾಸನದಲ್ಲಿ ರಾಣಿ ಪದ್ಮಲದೇವಿಯು ಮಾಂಗೋಳದ ಎರಡು ನೂರು ಮಹಾಜನರ ಕೋರಿಕೆಯ ಮೇರೆಗೆ ತನ್ನ ಅಧೀನ ಅಧಿಕಾರಿ ಪುಳಿಯಮನಾಯಕನ ಮೂಲಕ ತುಂಗಭದ್ರಾ ನದಿಯ ದಕ್ಷಿಣ ದಂಡೆಯ ಮೇಲಿರುವ ನರಸಿಂಘ ದೇವರ ದೇವಸ್ಥಾನಕ್ಕೆ ತೆರಿಗೆರಹಿತ ಭೂಮಿಯನ್ನು ದಾನ ನೀಡಿದಳು. ಇದರಲ್ಲಿ ಇತರ ಭೂಮಿ ಮತ್ತು ಹಣದ ದಾನದ ಉಲ್ಲೇಖವೂ ಇದೆ.[೫೬] ಈ ಶಾಸನವನ್ನು ಗಮನಿಸಿದರೆ ದೇವಸ್ಥಾನಗಳಿಗೆ ತೆರಿಗೆರಹಿತವಾದ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು ಎಂಬುದಾಗಿ, ಆ ಭೂಮಿಯಿಂದ ಯಾವುದೇ ಆದಾಯ ರಾಜ್ಯದ ಬೊಕ್ಕಸಕ್ಕೆ ತೆರಿಗೆ ರೂಪದಲ್ಲಿ ಸೇರುತ್ತಿರಲಿಲ್ಲವೆಂಬುದು ತಿಳಿದುಬರುತ್ತದೆ.

ದೇವಾಲಯಗಳಲ್ಲಿ ನಡೆಯುವ ಪೂಜೆ, ನೈವೇದ್ಯಗಳ ವ್ಯವಸ್ಥೆಗಾಗಿ ಗ್ರಾಮ, ಭೂಮಿ ತೆರಿಗೆ ಮತ್ತು ಹಣದ ದಾನ ನೀಡುತ್ತಿದ್ದುದು ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೆಲವೊಮ್ಮೆ ಈ

ದೇವಾಲಯಗಳಿಗೆ ಸೇರಿದ್ದ ಛತ್ರ, ಮಠಗಳಲ್ಲಿದ್ದ ಬ್ರಾಹ್ಮಣರ, ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಊಟೋಪಚಾರದ ವ್ಯವಸ್ಥೆಗಳನ್ನು ಈ ದಾನಗಳು ಒಳಗೊಂಡಿದ್ದವು. ಹಣದ ದಾನವನ್ನು ಅದರಿಂದ ಬರುವ ಬಡ್ಡಿಯನ್ನು ಮಾತ್ರ ಉಪಯೋಗಿಸಬೇಕೆಂಬ ಕರಾರಿನೊಂದಿಗೆ ನೀಡಲಾಗುತ್ತಿತ್ತು. ಇದಕ್ಕೆ ಉದಾಹರಣೆಯಾಗಿ ಹರಪನಹಳ್ಳಿ ತಾಲೂಕಿನ ಬಾಗಳಿಯಲ್ಲಿ ಕಲ್ಲೇಶ್ವರ ದೇವಾಲಯಕ್ಕೆ ದಾನವಾಗಿ ನೀಡಿದ ಒಂದು ಮನೆಯ ಬಾಡಿಗೆಯು ಕ್ರಿ.ಶ.೧೦೩೫ರಲ್ಲಿ ೨ ಪಣವಾಗಿತ್ತು.[೫೭] ದೇವಾಲಯಗಳಿಗೆ ಬಿಡುವ ದಾನವು ಸಂಪೂರ್ಣವಾಗಿ ತೆರಿಗೆರಹಿತ ದಾನವಾಗಿದ್ದವು. ಇವು ದೇವರ ಸ್ವತ್ತುಗಳಾಗಿದ್ದರಿಂದ ಯಾರೂ ಅವುಗಳನ್ನು ಮುಟ್ಟುತ್ತಿರಲಿಲ್ಲ. ದೇವರ ಹಣವನ್ನು ಅನುಭವಿಸುವುದು ಘೋರವಾದ ಅಪರಾಧ. ಅದು ವಿಷಕ್ಕಿಂತಲೂ ಘೋರವಾದದ್ದು ಎಂಬಂತಹ ನಂಬಿಕೆಗಳು ಇದ್ದುದರಿಂದಾಗಿ ತೆರಿಗೆಗಳನ್ನು ಹೇರುತ್ತಿರಲಿಲ್ಲ. ರಾಜ್ಯದ ಆದಾಯದ ಮೂಲ ತೆರಿಗೆ ಆಗಿದ್ದಿತು. ಅದರಲ್ಲಿ ಮುಖ್ಯವಾಗಿ ಸಾಮಾಜಿಕ ತೆರಿಗೆಗಳು, ವಾಣಿಜ್ಯ ತೆರಿಗೆಗಳು, ವೃತ್ತಿ ತೆರಿಗೆಗಳು, ಆಸ್ತಿಯ ಮೇಲಿನ ತೆರಿಗೆಗಳು ಎಂದು ವಿಂಗಡಿಸಲಾಗಿತ್ತು. ಮನೆಗಳ ಮೇಲೆ ವಿಭಿನ್ನ ರೀತಿಯ ತೆರಿಗೆಗಳನ್ನು ಹಾಕಲಾಗುತ್ತಿತ್ತು. ಇದರ ಕುರಿತಾಗಿ ಹಲವಾರು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ಹಲವಾರು ಮೂಲಗಳಿಂದ ತೆರಿಗೆಗಳನ್ನು ಸಂಗ್ರಹಿಸಲಾಗುತ್ತಿತ್ತು. ಇದೇ ರಾಜ್ಯದ ಮುಖ್ಯ ಆದಾಯವಾಗಿತ್ತು.

**ನಾಣ್ಯಗಳು**

ನಾಣ್ಯಗಳಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಪ್ರಸ್ತಾಪವಿರುವುದು ಈ ಭಾಗದಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಮುಖ್ಯವಾಗಿ ಚಿನ್ನ, ಬೆಳ್ಳಿ, ತಾಮ್ರ ಹಾಗೂ ಸೀಸದ ನಾಣ್ಯಗಳು ಚಲಾವಣೆಯಲ್ಲಿದ್ದವು. ಗದ್ಯಾಣ, ಕಾಸು, ಪಾಗ, ಪಣ, ಪೊನ್ನು, ನವಿಲ, ಪೊನ್, ನವಿಲಷ್ಟಿನ-ಪೊನ್, ತಾರ, ವರಹ, ವೀಸ, ಸುವರ್ಣ, ದ್ರಮ್ಮ, ಸಾಹಣಿಕಾಟ, ಸಲಿಕೆ, ಮಾಡ, ಅಡ್ಡ ಪ್ರತಾಪ, ಧರಣ ಮುಂತಾದ ನಾಣ್ಯಗಳು ಚಲಾವಣೆಯಲ್ಲಿದ್ದವು ಎಂಬುದು ಶಾಸನಗಳಿಂದ ವೇದ್ಯವಾಗುತ್ತದೆ. ಹಡಗಲಿಯಲ್ಲಿ ದೊರೆತ ಶಾಸನಗಳನ್ನಾಧರಿಸಿ ಇವುಗಳನ್ನು ಗುರುತಿಸುವುದಾದರೆ ಹಡಗಲಿಯ ಹಾಳು ತಿಮ್ಮಲಾಪುರ ಗ್ರಾಮದಲ್ಲಿಯ ೨೫೦ ವರಹ ಬೆಲೆಯ ೧೦ ಖಂಡುಗ ಭೂಮಿಯನ್ನು ದಾನವಾಗಿ ನೀಡಿದ್ದನ್ನು ದಾಖಲಿಸುತ್ತದೆ.[೫೮] ಕೊಟ್ನಕಲ್ಲು ಗ್ರಾಮದ ಶಾಸನದಲ್ಲಿ ವಿಜಯಪಾಂಡ್ಯದೇವನು ಕೋಟಿಶಂಕರ ದೇವರ ದೇವಸ್ಥಾನದಲ್ಲಿ ನಡೆಯುತ್ತಿದ್ದ ದಿನನಿತ್ಯದ ಪೂಜೆಗೆ ೩೮೦ ಕಮ್ಮ ತೋಟದ ಭೂಮಿಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೫೯] ಹೊಳಲು ಗ್ರಾಮದ ಅಮೃತೇಶ್ವರ ದೇವಸ್ಥಾನದ ಕಂಬದ ಮೇಲಿನ ಶಾಸನದಲ್ಲಿ ಶಿವಪಾದ ಶೇಖರ, ಕಲಿಯುಗ ವಿಶ್ವಕರ್ಮ ಎಂದೆನಿಸಿಕೊಂಡಿರುವ ಬಮ್ಮೋಜನು ಪ್ರತಿಯೊಂದು ಅಲಂಕಾರ ಸಹಿತ ೨೦ ಗದ್ಯಾಣದಂತೆ ನಾಲ್ಕು ಕಂಬಗಳನ್ನು ೯೦ ಗದ್ಯಾಣಗಳಿಗೆ ಮಾಡಿದನೆಂದು ತಿಳಿಸುತ್ತದೆ.[೬೦] ಮಾಗಳ ಗ್ರಾಮದಲ್ಲಿ ವೇಣುಗೋಪಾಲಸ್ವಾಮಿ ದೇವಸ್ಥಾನದಲ್ಲಿ ದೊರೆತ ಶಾಸನದಲ್ಲಿ ಮಹಾವಡ್ಡ ವ್ಯವಹಾರಿ ವಾಸುದೇವ ನಾಯಕನು ಗೋಪಾಲ

ದೇವರ ಸೇವೆಗೆ ಹೂವಿನ ತೋಟಕ್ಕಾಗಿ ೨ ಗದ್ಯಾಣಗಳನ್ನು ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೬೧] ಸೋಗಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿನ ಶಾಸನದಲ್ಲಿ ಪಾಂಡ್ಯ ನಾಡಿನಲ್ಲಿಯ ಕೋಗಳಿ ನಾಡಿನ ಧಾನ್ಯದ ಆದಾಯದ ೧ ಗದ್ಯಾಣ ಮತ್ತು ೧೦ ಪಣಗಳನ್ನು ಸೋಗೆಯ ಸೋಮನಾಥ ದೇವರ ಪ್ರತಿದಿನದ ಪೂಜೆಗೆ ದಾನ ನೀಡಿದ್ದನ್ನು ಮತ್ತು ಇದೇ ದೇವಸ್ಥಾನದಲ್ಲಿನ ಶಾಸನದಲ್ಲಿ ಮಹಾಪ್ರಧಾನ ಬೊಮ್ಮಯ್ಯ ದಣ್ಣಾಯಕನ ಆಜ್ಞೆಯ ಮೇರೆಗೆ ಸುಂಕಾಧಿಕಾರಿ ಸಿರಿಪಣ್ಣ ಮತ್ತು ಇತರರು ಸೋಗೆಯ ಕಲ್ಲಿನಾಥ ದೇವರಿಗೆ ಪಾಂಡ್ಯನಾಡಿನ ಸುಂಕದ ಆದಾಯದಲ್ಲಿ ಪ್ರತಿವರ್ಷ ೨ ಗದ್ಯಾಣಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೬೨]

ಹೀಗೆ ನಾಣ್ಯಗಳನ್ನು ಗದ್ಯಾಣ, ಪಣ ಎಂದು ಕರೆಯುತ್ತಿರುವುದನ್ನು ಹಡಗಲಿಯಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಇದರ ಜೊತೆಗೆ ಬಳ್ಳಾರಿ ಜಿಲ್ಲೆಯಾದ್ಯಂತ ದೊರೆತ ಶಾಸನಗಳಲ್ಲಿ ನಾಣ್ಯಗಳ ಉಲ್ಲೇಖಗಳು ಕಂಡುಬರುತ್ತವೆ. ಹಾಗೆಯೇ ಒಂದು ನಾಣ್ಯದಿಂದ ಇನ್ನೊಂದು ನಾಣ್ಯವನ್ನಾಗಿ ಪರಿವರ್ತಿಸಲು ಒಪ್ಪಂದಗಳು ನಡೆದಿರುವ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಇಂತಹ ಒಂದು ಉಲ್ಲೇಖ ಬಳ್ಳಾರಿ ತಾಲೂಕಿನ ಕುಡುತಿನಿ ಗ್ರಾಮದಲ್ಲಿನ ಕುಮಾರಸ್ವಾಮಿ ದೇವಸ್ಥಾನದ ಮುಂದೆ ಇರುವ ಶಾಸನದಲ್ಲಿ ಚಾಲುಕ್ಯ ಅರಸ ತ್ರಿಭುವನಮಲ್ಲದೇವನ ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯ ಹಾಗೂ ದಂಡನಾಯಕ ಮಹಾವಿಷ್ಣುವರಸ ವಿಶ್ವರೂಪ ಬ್ರಹ್ಮಚಾರಿ, ನಾನಾದೇಶಿ ಜನ ಮತ್ತು ಐದು ವರ್ಗಗಳು ಸೇರಿ ಎರಣಿಗ ಮಾದೋಜನ ಮಗ ಸಾವಿವೋಜ ಹಾಗೂ ಬೇಚೋಜನ ಮಗ ಚಿಕ್ಕ ಮಾದೋಜನು ಸ್ವಾಮಿದೇವರ ಲೊಕ್ಕಿಚಿನ್ನದ ನಾಣ್ಯವನ್ನು ನವಿಲ ನಾಣ್ಯ(ನವಿಲಚ್ಚಿನ ಪೊನ್)ಗಳನ್ನಾಗಿ ಪರಿವರ್ತಿಸಲು ಒಪ್ಪಂದವನ್ನು ಮಾಡಿಕೊಂಡಿರುವುದು ತಿಳಿಯುತ್ತದೆ.[೬೩] ಒಟ್ಟಾರೆಯಾಗಿ ನಾಣ್ಯಗಳು ರಾಜ್ಯದ ಹಣದ ಅಳತೆಗೋಲುಗಳಾಗಿ ತಮ್ಮದೇ ಆದ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವು ಎಂಬುದು ಶಾಸನಗಳಲ್ಲಿನ ಉಲ್ಲೇಖಗಳಿಂದ ತಿಳಿಯುತ್ತದೆ.

### ಕೃಷಿ ಮತ್ತು ನೀರಾವರಿ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ವ್ಯವಸಾಯವೇ ಅತೀ ಮಹತ್ವವಾದ ಜೀವನೋಪಾಯವಾಗಿತ್ತು. ಜೊತೆಗೆ ದೇಶದ ಅರ್ಥವ್ಯವಸ್ಥೆಯ ಬೆನ್ನುಮೂಳೆಯಾಗಿತ್ತು. 'ಅನ್ನದಾನ ಸಂಪೂರ್ಣರುಂ ಭೂಮಿ ಪುತ್ರಕರು ಮಪ್ಪಚಂದಗೌಡ'[೬೪] ಎನ್ನುವಲ್ಲಿ ತನ್ನ ಗರ್ಭದಲ್ಲಿ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದೂ ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದೂ ಕರೆದಿರುವುದು ಕಂಡುಬರುತ್ತದೆ.[೬೫] ವ್ಯವಸಾಯಕ್ಕೆ ಪೂರಕವಾದಂತಹ ಹಲವಾರು ದಾಖಲೆಗಳು ಶಾಸನಗಳಲ್ಲಿ ದೊರೆಯುತ್ತವೆ. ಏಕೆಂದರೆ ಬಹುತೇಕ ಶಾಸನಗಳು ದಾನಶಾಸನಗಳಾಗಿರುವುದರಿಂದ ಒಂದಲ್ಲ ಒಂದು ರೀತಿಯಲ್ಲಿ ಗದ್ದೆ, ಕೃಷಿ ಭೂಮಿಯ ಬಯಲು, ಕೆರೆಗಳು ಹೀಗೆ ಹಲವಾರು ಉನ್ನತ ಮಟ್ಟದ ಫಲವತ್ತಾದ ಭೂಮಿಯ ವಿವರಗಳು ಕಂಡುಬರುತ್ತವೆ. ಇವುಗಳ ಜೊತೆ ಜೊತೆಗೆ

ಕೃಷಿಗಾಗಿ ಕೆರೆಯನ್ನು ನಿರ್ಮಿಸಿದ ವಿವರ, ಅಣೆಕಟ್ಟು, ಅಚ್ಚುಕಟ್ಟುಗಳನ್ನು ನಿರ್ಮಿಸಿದ ವಿವರಗಳು ಹಾಗೂ ಅಂದು ಬೆಳೆಯುತ್ತಿದ್ದ ಬೆಳೆಗಳ ಉಲ್ಲೇಖಗಳು ಸಹ ಶಾಸನಗಳಲ್ಲಿ ಕಂಡುಬರುತ್ತವೆ. ಅಂದಿನ ಸಂದರ್ಭದಲ್ಲಿ ಕೆರೆಕಟ್ಟೆಗಳನ್ನು ನಿರ್ಮಾಣ ಮಾಡುವುದು ಪುಣ್ಯದ ಕೆಲಸವೆಂದೇ ತಿಳಿಯಲಾಗಿತ್ತು. ಇವುಗಳ ನಿರ್ಮಾಣದಿಂದ ಕೃಷಿ ಚಟುವಟಿಕೆಗಳು ಅಧಿಕಗೊಂಡು ರಾಜ್ಯದಲ್ಲಿ ಬೆಳೆಗಳು ಸಮೃದ್ಧಗೊಂಡು ಹೆಚ್ಚಿನ ಉತ್ಪನ್ನ ದೊರೆಯುತ್ತಿತ್ತು. ಇದರಿಂದ ಉದ್ಯೋಗ, ವ್ಯಾಪಾರ ಹಾಗೂ ಕಂದಾಯ ಇವುಗಳ ಆದಾಯವೂ ಗಣನೀಯವಾಗಿ ಅಧಿಕವಾಗುತ್ತಿತ್ತು. ಹಾಗಾಗಿ ರಾಜರು ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದ್ದರು. ಕಡಿಮೆ ಮಳೆ ಬೀಳುವ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಕೆರೆಗಳನ್ನು ನಿರ್ಮಿಸುತ್ತಿದ್ದರು. ರಾಜರ ಜೊತೆಗೆ ಶ್ರೀಮಂತರು, ಅಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಒಳ್ಳೆಯ ಕಾರ್ಯವೆಂದು ನಂಬಿದ್ದರು. ವಾಸ್ತವವಾಗಿ ನೀರಾವರಿಗೋಸ್ಕರವಾಗಿಯೇ ಒಂದು ಕೆರೆಯನ್ನು ಕಟ್ಟಿಸುವುದು ಬಹುಶ್ರೇಷ್ಠವಾದ ಧರ್ಮಕಾರ್ಯವೆಂದು ಅಂದಿನ ಸಮಾಜವು ಪರಿಗಣಿಸುತ್ತಿದ್ದಿತು. ಹಾಗಾಗಿ ಕೆರೆಗಳನ್ನು ನಿರ್ಮಿಸುವುದು, ಅವುಗಳನ್ನು ದುರಸ್ತಿ ಮಾಡಿಸುವುದರ ಕಡೆಗೆ ಹೆಚ್ಚಿನ ಗಮನವನ್ನು ಕೊಡುತ್ತಿದ್ದರು.

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸು।

ಈ ಪದ್ಯವು ವಿಜಯನಗರದ ಅರಸ ಪ್ರೌಢಪ್ರತಾಪದೇವರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಮಂಟಪದಲ್ಲಿರುವ ಕ್ರಿ.ಶ.೧೪೧೦ರ ಶಾಸನವು ತಿಳಿಸುತ್ತದೆ.[೬೬] ಇದೇ ಶಾಸನವು ದೇವರಾಯನ ಮಂತ್ರಿಗಳಾದ ಮಾದರಸ ಮತ್ತು ಸಾಯಣ್ಣನ ಬಗೆಗೆ ಈ ಕೆಳಕಂಡಂತೆ ಉಲ್ಲೇಖಿಸುತ್ತದೆ.

ತೋಡದ ಬಾವಿಯಿಲ್ಲ ಮರೆಕಟ್ಟದ ಪೆರ್ಗ್ಗರೆಯಿಲ್ಲ ಯಿಂ

ಲೀಲೆಯಂ। ಮಾಡದ ದೇವತಾಭವನಮಿಲ್ಲೊಲವಿಂ ಬಿಡದಗ್ರಹಾರ

ಮಿ।ಲ್ಲಾಡಲದೇನೋ ಭೂ[ಭು]ವನಭುಂಭುಕ ಮಾ

ದು[ದು] ಕೀರ್ತ್ತಿಬಾಪು ನಾ।ಪಾಡಿಯೆ ಸೈಪು ಮಾದರಸ ಸಾಯಣರೆಂಬ ಮಹಾಪ್ರಧಾನರಾ॥

ಈ ಎರಡೂ ಪದ್ಯಗಳನ್ನು ಗಮನಿಸಿದರೆ ಮಧ್ಯಕಾಲೀನ ಭಾರತದಲ್ಲಿ ನೀರಾವರಿ ವ್ಯವಸ್ಥೆಯಡಿಯಲ್ಲಿ ಕೆರೆಯನ್ನು ಕಟ್ಟಿಸುವುದು ಮತ್ತು ಬಾವಿಗಳನ್ನು ತೋಡಿಸುವುದು ಅತೀ ಮುಖ್ಯವಾದ ಕೆಲಸವಾಗಿತ್ತೆಂದು ಸ್ಪಷ್ಟವಾಗುತ್ತದೆ. ಭಾರತದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಮುಖ್ಯವಾಗಿ ತಮಿಳುನಾಡಿನಲ್ಲಿ ಕಂಡುಬರುವ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಘಟ್ಟದಿಂದ ಕೆರೆಯನ್ನು ಕಟ್ಟಿಸಿ ಜಲವನ್ನು ಸಂಗ್ರಹಿಸಿ ಬಳಸಿಕೊಳ್ಳುತ್ತಿದ್ದರೆಂಬುದು ಪುರಾತತ್ವ ಶೋಧಗಳಿಂದ ತಿಳಿದುಬಂದಿದೆ. ಈ ಕಾರ್ಯವು ಶತಶತಮಾನಗಳಿಂದಲೂ ಸಾಗುತ್ತಲೇ ಬಂದಿದೆ. ಇದು ಮಧ್ಯಕಾಲೀನ

ಭಾರತದಲ್ಲಿ ತನ್ನ ಗರಿಷ್ಠ ಮಟ್ಟವನ್ನು ತಲುಪಿತು ಎಂದರೆ ತಪ್ಪಾಗಲಾರದು. ಕರ್ನಾಟಕದಲ್ಲಿ ಕೆರೆಗಳ ನಿರ್ಮಾಣ ಕಾರ್ಯವು ಕಲ್ಯಾಣ ಚಾಲುಕ್ಯರ ಕಾಲದಿಂದ ಭರದಿಂದ ಸಾಗಿತು. ಕೆಲವು ವಿದ್ವಾಂಸರು ಇವರ ಕಾಲವನ್ನು ಕೆರೆಗಳ ಸುವರ್ಣಯುಗವೆಂದು ಅಭಿಪ್ರಾಯಪಟ್ಟಿದ್ದಾರೆ. ಕೆರೆಗಳನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು, ವ್ಯವಸಾಯಕ್ಕೆ ನೀರಾವರಿ ಸೌಲಭ್ಯಗಳನ್ನು ಒದಗಿಸುವುದು– ಈ ರೀತಿಯ ಕಾರ್ಯಗಳನ್ನು ಮಾಡುವುದರಿಂದ ಇಹ ಮತ್ತು ಪರಲೋಕಗಳಲ್ಲಿ ಒಳ್ಳೆಯ ಸದ್ಗತಿ ದೊರಕುವುದೆಂಬ ಬಲವಾದ ನಂಬಿಕೆಯೇ ಕೆರೆಗಳ ನಿರ್ಮಾಣಕ್ಕೆ ಕಾರಣವಾಯಿತು. ಕರ್ನಾಟಕದ ಉತ್ತರ ಭಾಗದಲ್ಲಿರುವ ಪ್ರದೇಶಗಳಲ್ಲಿ ಹೆಚ್ಚು ಮಳೆಯನ್ನೇ ಆಶ್ರಯಿಸಿ ವ್ಯವಸಾಯ ಮಾಡುತ್ತಿದ್ದರು. ಆದರೆ ಮಳೆಯು ಮಾತ್ರ ಕಾಲಕಾಲಕ್ಕೆ ಸರಿಯಾಗಿ ಆಗುತ್ತಿರಲಿಲ್ಲ. ಈ ಕಾರಣದಿಂದಾಗಿ ಕೃತಕ ಜಲಸಂಗ್ರಹಕಗಳ ಅವಶ್ಯಕತೆಯುಂಟಾಯಿತು. ಆದ್ದರಿಂದ ಕೆರೆಗಳ ನಿರ್ಮಾಣ ಕಾರ್ಯ ಆರಂಭ ವಾಯಿತು ಎಂದೆನ್ನಬಹುದು. ಕರ್ನಾಟಕದ ಉತ್ತರ ಭಾಗದಲ್ಲಿರುವ ಜಿಲ್ಲೆಯಾದ ಬಳ್ಳಾರಿಯು ಸಹ ಬಿಸಿಲ ನಾಡು ಎಂದೇ ಪ್ರಸಿದ್ಧಿಯನ್ನು ಪಡೆದಿದೆ. ಹಾಗಾಗಿ ಈ ಭಾಗದಲ್ಲಿ ಹೆಚ್ಚಿನ ಕೆರೆಗಳ ನಿರ್ಮಾಣವಾಗಿದೆ. ಜಿಲ್ಲೆಯ ಪ್ರತಿಯೊಂದು ತಾಲೂಕುಗಳಲ್ಲಿಯೂ ಕೆರೆಗಳಿದ್ದು, ಇವುಗಳಿಗೆ ಸಾವಿರಾರು ವರ್ಷಗಳ ಹಿಂದಿನ ಇತಿಹಾಸ ಇರುವುದನ್ನು ಶಾಸನಗಳ ಆಧಾರದಿಂದಲೇ ತಿಳಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ಹಡಗಲಿ ತಾಲೂಕಿನಲ್ಲಿಯೂ ಕೆರೆಗಳು ಕಂಡುಬರುತ್ತಿದ್ದು ಅವುಗಳ ನಿರ್ಮಾಣ ಕಾರ್ಯ, ದುರಸ್ತಿ ಕಾರ್ಯಗಳಿಗೆ ದಾನ–ದತ್ತಿಗಳನ್ನು ಕೊಟ್ಟಿರುವುದಕ್ಕೆ ಇಲ್ಲಿ ದೊರೆತಿರುವ ಶಾಸನಗಳು ಸಾಕ್ಷಿಯಾಗಿ ನಿಲ್ಲುತ್ತವೆ.

ಹಡಗಲಿಯ ಸೋಗಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದಲ್ಲಿರುವ ಶಾಸನ ಕ್ರಿ.ಶ.೧೦೩೮ರ ಚಾಲುಕ್ಯ ಅರಸ ಜಗದೇಕಮಲ್ಲ ದೇವನ ಕಾಲದ್ದಾಗಿದೆ. ಈ ಶಾಸನವು ಸೋಗೆ ಊರಿನ ಮಹಾಜನರ ಉಪಸ್ಥಿತಿಯಲ್ಲಿ ಒಂದು ತೋಟದ ಜೊತೆಗೆ ೫೦ ಮತ್ತರು ಭೂಮಿಯನ್ನು ದಾನ ಮಾಡಲಾಯಿತು ಎಂದು ಉಲ್ಲೇಖಿಸುತ್ತದೆ.[೬೭] ತಳಕಲ್ಲು ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿನ ಶಾಸನದಲ್ಲಿ ತ್ರೈಲೋಕ್ಯಮಲ್ಲನ ಸಾಮಂತನಾದ ನೊಳಂಬಪಲ್ಲವ ಪೆರ್ಮನಡಿದೇವನ ಅಧೀನ ಅಧಿಕಾರಿಯಾದ ಚಾವುಂಡಯ್ಯನು ಅವರಿಂದ ದುರಸ್ತಿಗೊಂಡ ಗುಂಡಿಯ ಕೆರೆಯ ನಿರ್ವಹಣೆಗೆ ೧೨ ಮತ್ತರು ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೬೮] ಈ ಶಾಸನದಲ್ಲಿ ಹೇಳಿರುವಂತೆಯೇ ಕೆರೆಯ ದುರಸ್ತಿಗಾಗಿ ಭೂಮಿಯನ್ನು ದಾನ ಮಾಡಿದ್ದನ್ನು ಕಾಣುತ್ತೇವೆ. ಅಂದರೆ ಕೆರೆಗಳು ಬಹುಕಾಲ ಉಳಿಯಬೇಕಾದರೆ ಆಗಾಗ್ಗೆ ಅದರ ಯೋಗಕ್ಷೇಮವನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ಕೆರೆಯ ಕಟ್ಟೆ ಒಡೆಯಬಹುದು, ಮರಳಿನಿಂದ ಕೆರೆ ಹೂಳು ತುಂಬಿಕೊಳ್ಳಬಹುದು ಅಥವಾ ತೂಬು ಹಾಳಾಗಬಹುದು. ಆದ್ದರಿಂದ ಇವುಗಳ ದುರಸ್ತಿಗೆ ಭೂಮಿಯ ಜೊತೆಗೆ ಹಣವೂ ಬೇಕಾಗುತ್ತದೆ. ಅದಕ್ಕಾಗಿಯೇ ರಾಜನೋ ಅಥವಾ ಊರಿನ ಜನರೋ ಸೇರಿಕೊಂಡು ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಹೀಗೆ ಬಿಡುವ ಜಮೀನನ್ನು 'ಬಿತ್ತುವಾಡ' ಅಥವಾ 'ಬಿತ್ತುವಟ್ಟ' ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಈ ಜಮೀನಿನಿಂದ ಬರುವ ಆದಾಯವನ್ನು ಕೆರೆಗಾಗಿ ಮೀಸಲಿಡುತ್ತಿದ್ದರು.[೬೯]

ಹಡಗಲಿ ತಾಲೂಕಿನ ಸೋಗಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದ ದಕ್ಷಿಣ ದಿಕ್ಕಿನ ಒಂದು ಮನೆಯ ಮುಂದೆ ನಿಲ್ಲಿಸಿರುವ ಶಾಸನವು ಚಾಲುಕ್ಯ ಅರಸನಾದ ತ್ರಿಭುವನಮಲ್ಲದೇವನ ಕಾಲದ್ದಾಗಿದೆ. ಈ ಶಾಸನವು ದಂಡಾಧಿಪತಿ ಮುದ್ದರಸ ಅಥವಾ ಮುದ್ದರಾಜನು ಸೋಗೆಯ ಹತ್ತಿರದ ನಾಗಸಮುದ್ರ ಕೆರೆಗೆ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೨೦] ಹಾಗೆಯೇ ಹಿರೇಹಡಗಲಿಯ ಕಲ್ಲೇಶ್ವರ ದೇವಸ್ಥಾನದ ಮುಂದೆ ನಿಲ್ಲಿಸಿದ ಶಾಸನದಲ್ಲಿ ಹೊಯ್ಸಳ ಅರಸ ವಿಷ್ಣುವರ್ಧನ-ವೀರ-ಬಲ್ಲಾಳದೇವ(೨)ನ ಹಿರಿಯರಾಣಿ(ಪಟ್ಟದರಸಿ) ಪದುಮಲದೇವಿಯು ಹೊಸ ಹಡಂಗಿಲೆಯನ್ನು ಆಳುತ್ತಿದ್ದ ಸಂದರ್ಭದಲ್ಲಿ ದಾಮಣ್ಣ ಎಂಬ ದಂಡನಾಯಕನು ಹಿರಿಯಕೆರೆ ಮತ್ತು ತುಂಬಿನಕೆರೆ ಎಂಬ ಎರಡು ಕೆರೆಗಳಿಗೆ ಭೂಮಿ ದಾನ ಮಾಡಿದ್ದನ್ನು ತಿಳಿಸಲಾಗಿದೆ. ಈ ಶಾಸನದ ಕಾಲ ಕ್ರಿ.ಶ.೧೨೧೨.[೨೧] ಕ್ರಿ.ಶ.೧೨೫೬ರಲ್ಲಿ ಬಯಕಾರ ರಾಮಪ್ಪಯ್ಯ ಎಂಬುವವನು ಅಚ್ಚುತಮ್ಮಸಮುದ್ರ, ಬಾಚಸಮುದ್ರ, ರಾಮಸಮುದ್ರ, ಅಕ್ಕಸಮುದ್ರ, ಕಾಮಸಮುದ್ರ, ಅಮ್ಮಸಮುದ್ರ, ವೀರಸಮುದ್ರ, ಅಚ್ಯುತೇಂದ್ರ ಸಮುದ್ರ, ವೆಂಕಟೇಂದ್ರ ಸಮುದ್ರ, ಪಿನ-ಲಕ್ಕ ಸಮುದ್ರ, ಚಿಕ್ಕಲಕ್ಕ ಸಮುದ್ರ, ಪೆದ್ದ-ಲಕ್ಕ ಸಮುದ್ರ, ಲಿಂಗಾಲಯತಟಾಕ, ವೆಂಕಟಯ್ಯ ತಟಾಕ, ಪೆದ್ದ-ತಿಮ್ಮಸಮುದ್ರ ಮತ್ತು ಚಿನಬಾಚ-ಸಮುದ್ರ ಎಂಬ ೧೬ ಕೆರೆಗಳನ್ನು ಕಟ್ಟಿಸಿದನು. ಇವುಗಳಲ್ಲಿ ಕೆಲವು ಕೆರೆಗಳು ಪೋತಲಕಟ್ಟಿ, ತಿಮ್ಮಲಾಪುರ, ನಂದಿಬಂಡಿ, ವಂಟಿಗೋಡು, ಚಿಕ್ಕಕೆರೆಯಾಗಿನ ಹಳ್ಳಿ ಮತ್ತು ಮಗಿಮಾವಿನಹಳ್ಳಿಗಳಲ್ಲಿವೆ.[೨೨] ಹಡಗಲಿಯಲ್ಲಿಯೂ ಸಹ ಈತನು ಕಟ್ಟಿಸಿದ ಕೆರೆಯಿದೆ. ಅದು ಕ್ರಿ.ಶ.೧೫೫೪ರ ಕಾಲದ್ದಾಗಿದೆ. ಬಯಕಾರ ರಾಮಪ್ಪಯ್ಯನು ತನ್ನ ಮಗಳು ಕಾಮಮ್ಮನಿಗೆ ಪುಣ್ಯವಾಗಲೆಂದು ಕಾಮಸಮುದ್ರ ಕೆರೆಯನ್ನು ಕಟ್ಟಿಸಿದನೆಂದು ಮಗಿಮಾವಿನಹಳ್ಳಿಯಲ್ಲಿ ದೊರೆತ ಶಾಸನದಲ್ಲಿ ಉಲ್ಲೇಖಿತಗೊಂಡಿದೆ.[೨೩] ಹಗರನೂರು ಕೆರೆಯ ಬಳಿ ಬಯಕಾರ ರಾಮಪ್ಪನಿಗೆ ಸಂಬಂಧಿಸಿದ ಶಾಸನವಿದೆ.

ಹಾಗೆಯೇ ಹಡಗಲಿ ತಾಲೂಕಿನ ನಕ್ಕರಹಾಳ ಎಂಬ ಗ್ರಾಮದ ಆಂಜನೇಯ ದೇವಸ್ಥಾನದ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಗಾಜುಲ್ಲ-ನಾಗಯ್ಯನ ಮಗನೂ ಮತ್ತು ನಗರೆಹಾಳದ ಅಧಿಕಾರಿಯೂ ಆದ ಪೆದಪ ನಗರೆಹಾಳದಲ್ಲಿ ಕಾಲುವೆಗೆ ದಸವಂದ(ತೆರಿಗೆ)ವನ್ನು ಗೊತ್ತುಪಡಿಸಿದ್ದನ್ನು ಮತ್ತು ಸೇನಬೋವ ತಿಮ್ಮರಸ, ಗೌಡ, ತಳವಾರ ಮತ್ತು ಜೋಯಿಸರಿಗೆ ಭೂಮಿಗಳನ್ನು ಮಾನ್ಯವಾಗಿ ನೀಡಿದ್ದನ್ನು ತಿಳಿಸುತ್ತದೆ.[೨೪] ಈ ಶಾಸನವು ವಿಜಯನಗರದ ಅರಸ ಸದಾಶಿವರಾಯರ ಕಾಲದ್ದಾಗಿದೆ. ಹೀಗೆ ಹಡಗಲಿಯಲ್ಲಿ ಕಲ್ಯಾಣ ಚಾಲುಕ್ಯರ, ಹೊಯ್ಸಳರ ಮತ್ತು ವಿಜಯನಗರ ಅರಸರ ಕಾಲದ ಕೆರೆಗಳು, ಕಾಲುವೆಗಳು ಇರುವುದನ್ನು ಶಾಸನಗಳಿಂದ ತಿಳಿಯಬಹುದಾಗಿದೆ. ಮುಖ್ಯವಾಗಿ ಎಲ್ಲಿ ನೀರಿನ ಅಭಾವ ಹೆಚ್ಚಾಗಿದೆಯೋ ಮತ್ತು ವ್ಯವಸಾಯಕ್ಕೆ ಯೋಗ್ಯವಲ್ಲದ ಹಾಗೂ ಒಣಭೂಮಿ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ಕೆರೆಗಳನ್ನು ನಿರ್ಮಿಸುತ್ತಿದ್ದರು. ಜೊತೆಗೆ ಕೆರೆಗೆ ಜಾಗವನ್ನು ಆಯ್ಕೆ ಮಾಡಿಕೊಳ್ಳಬೇಕಾದ ಸಂದರ್ಭದಲ್ಲಿ ತುಂಬಾ ಜಾಗರೂಕರಾಗಿರುತ್ತಿದ್ದರು. ಅಂದರೆ ನೆಲವು ತುಂಬಾ ಗಟ್ಟಿಯಾಗಿರಬೇಕಿತ್ತು. ಮಳೆಯ ನೀರು ಇಳಿಜಾರಿನಲ್ಲಿ ಇಳಿದು ಬರುವಂತಿರಬೇಕು. ಈ ಕೆರೆಗೆ ಹೊಂದಿಕೊಂಡಂತೆ ವ್ಯವಸಾಯದ

ಭೂಮಿಯೂ ಇರಬೇಕಿತ್ತು. ಈ ಗುಣಗಳನ್ನು ಹೊಂದಿರುವಂತಹ ಪ್ರದೇಶಗಳನ್ನು ಕೆರೆ ನಿರ್ಮಾಣಕ್ಕೆ ಆಯ್ಕೆ ಮಾಡಿಕೊಳ್ಳುತ್ತಿದ್ದರು.

ಕೆರೆಯ ನೀರನ್ನು ಬಳಸಿಕೊಂಡು ಜನರು ಹಲವಾರು ಬೆಳೆಗಳನ್ನು ಬೆಳೆಯುತ್ತಿದ್ದರು. ಈ ನೀರು ತೋಟಗಾರಿಕೆ ಬೆಳೆಗಳಿಗೂ ಬಳಕೆಯಾಗುತ್ತಿತ್ತು. ಮುಖ್ಯವಾಗಿ ಎಲೆ, ಅಡಿಕೆ, ತೆಂಗು, ಬಾಳೆ, ಹೂವು ಮುಂತಾದ ತೋಟಗಾರಿಕೆ ಬೆಳೆಗಳ ಜೊತೆಗೆ ಆಹಾರ ಧಾನ್ಯಗಳನ್ನು ಸಹ ಬೆಳೆಯುತ್ತಿದ್ದರು. ಇವುಗಳಿಂದ ಬಂದಂತಹ ಆದಾಯದ ಮೇಲಿನ ತೆರಿಗೆಗಳನ್ನು ದೇವಸ್ಥಾನಗಳ ಜೀರ್ಣೋದ್ಧಾರಕ್ಕಾಗಿ ಬಳಸುತ್ತಿದ್ದರು. ಸಾಮಾನ್ಯವಾಗಿ ಕೆರೆಯನ್ನು ಮತ್ತು ದೇವಾಲಯಗಳನ್ನು ಒಬ್ಬಾತನೇ ಕಟ್ಟಿಸಿದರೆ, ಕೆರೆಯ ಮುಂದಣ ಭೂಮಿಯನ್ನು ಹೊಸದಾಗಿ ಕಟ್ಟಿಸಿದ ದೇಗುಲದ ಸ್ಥಾನಪತಿಗೆ ಬಿಟ್ಟು ಕೊಡುತ್ತಿದ್ದರು. ಭೂಮಿಯನ್ನು ಬಿಟ್ಟುಕೊಡುವ ಉದ್ದೇಶ, ದೇವಾಲಯದ ಪೂಜೆ-ಪುನಸ್ಕಾರಗಳು ಸಾಂಗವಾಗಿ ನಡೆಯುವಂತಾಗಲು ಹಾಗೂ ಅದನ್ನೇ ಉದ್ಯೋಗವನ್ನಾಗಿ ನೆಚ್ಚಿಕೊಂಡವರಿಗೆ ಅವರ ಜೀವನೋಪಾಯಕ್ಕೆ ಆಧಾರವಾಗಲಿ ಎಂಬುದೇ ಆಗಿತ್ತು. ಒಟ್ಟಾರೆಯಾಗಿ ವ್ಯವಸಾಯ ಮತ್ತು ನೀರಾವರಿ ವ್ಯವಸ್ಥೆಯು ಒಂದನ್ನೊಂದು ಅವಲಂಬಿಸಿವೆ. ಕೃಷಿಯನ್ನು ವೃದ್ಧಿಸಲು ನೀರಿನ ಅವಶ್ಯಕತೆ ತುಂಬಾ ಇದೆ. ಹಾಗಾಗಿ ಹಲವಾರು ಕೆರೆ, ಬಾವಿ ಮತ್ತು ಕಾಲುವೆಗಳಲ್ಲಿ ಹೀಗೆ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವ ಪರಿಪಾಠ ಆರಂಭವಾಯಿತು. ಇದರಿಂದಾಗಿ ಒಣಬೇಸಾಯ ಪದ್ಧತಿಯು ಮಾಯವಾಗಿ ನೀರ್ಭೂಮಿಯಾಗಿ ವಿಸ್ತರಿಸಲು ಪ್ರಾರಂಭವಾಯಿತು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನಲ್ಲಿ ಕೆರೆಯ ನಿರ್ಮಾಣ, ನೀರಾವರಿಯ ನಿರ್ವಹಣೆ ಮತ್ತು ವ್ಯವಸಾಯ ಎಲ್ಲವೂ ಒಂದಕ್ಕೊಂದು ಪೂರಕ ಬೆಳವಣಿಗೆಯಾಗಿವೆ.

## ವ್ಯಾಪಾರ ಮತ್ತು ಉದ್ಯಮ

ವ್ಯಾಪಾರ ಮತ್ತು ಉದ್ಯಮಕ್ಕೆ ಸಂಬಂಧಿಸಿದಂತೆ ವಿಪುಲವಾದ ಮಾಹಿತಿಯು ಶಾಸನಗಳಲ್ಲಿ ದೊರೆಯುವುದಿಲ್ಲ. ಪ್ರಾಚೀನ ಕಾಲದಲ್ಲಿ ವ್ಯಾಪಾರಕ್ಕೆಂದು ಹಲವಾರು ಸಂಘ ಸಂಸ್ಥೆಗಳಿದ್ದವು. 'ಸಾರ್ಥವಹ' ಎಂದು ಕರೆಯಲ್ಪಡುವ ವರ್ತಕರ ಗುಂಪು ಪ್ರಾಚೀನ ಕಾಲದಲ್ಲಿ ದೇಶವ್ಯಾಪಿಯಾಗಿ ವರ್ತಕರ ಸಂಘಗಳನ್ನು ಹೊಂದಿತ್ತು. ಅದೇ ರೀತಿಯಾಗಿ ಕರ್ನಾಟಕದಲ್ಲಿ 'ಐಹೊಳೆ ೫೦೦' ಎಂಬುದು ದೊಡ್ಡದಾದ ವ್ಯಾಪಾರಿ ಸಂಸ್ಥೆಯಾಗಿತ್ತು. ಜೀವನೋಪಾಯಕ್ಕಾಗಿ ವೃತ್ತಿಯನ್ನೇ ಅವಲಂಬಿಸಿ ವ್ಯಾಪಾರವನ್ನೇ ತಮ್ಮ ಮುಖ್ಯ ಕಸುಬನ್ನಾಗಿಸಿಕೊಂಡವರನ್ನು ವರ್ತಕರು ಎಂದು ಕರೆಯಲಾಗಿದೆ. ಭಾರತದಲ್ಲಿ ವೈದಿಕ ಸಾಹಿತ್ಯಕ್ಕಿಂತಲೂ ಮುಂಚೆಯೇ ಇತಿಹಾಸದುದ್ದಕ್ಕೂ ವರ್ತಕರ ಉಲ್ಲೇಖವಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಕ್ರಿಸ್ತಶಕ ೭-೮ನೇ ಶತಮಾನದಿಂದ ಇವರ ಕುರಿತ ಉಲ್ಲೇಖಗಳು ಕಂಡುಬರುತ್ತವೆ. ವರ್ತಕರು ವಿನಿಮಯ ವೃತ್ತಿಯವರಾಗಿದ್ದರು. ವರ್ತಕರು ಹಲವಾರು ಸಂಘಗಳನ್ನು ಹೊಂದಿದ್ದರು. ಅಯ್ಯಾವಳೆ ಐನೂರ್ವರು, ತಂಬುಲಿಗ ಸಾಸಿರ್ವರು, ಹಂಜ ಮಾನಗಳು ವಿನಿಮಯ (ವರ್ತಕ) ಸಂಘಗಳಾಗಿಯೂ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ

ನಾಲ್ವತ್ತೊಕ್ಕಲು, ತೋಟಿಗರ್ೈನೂರ್ವರು, ಸಾಲೆಸಾಸಿರ್ವರು ಅಥವಾ ಸಮಯ ಸಾಸಿರ್ವರು, ಜಿಪ್ಪಿಗ ಗೊತ್ತಳಿ, ಸುರುಬಸೇಣಿ, ಕಂಚಗಾರ ಗೊತ್ತಳಿಗಳು, ಉತ್ಪಾದಕ-ವಿನಿಮಯ ಸಂಘಗಳಾಗಿಯೂ ಶಾಸನಗಳಲ್ಲಿ ಕಂಡುಬರುತ್ತವೆ. ಹಡಗಲಿಯ ಶಾಸನಗಳಲ್ಲಿ ಅಯ್ಯಾವಳೆ ಐನೂರ್ವರು, ತೆಲ್ಲಿಗರೈವ ತ್ತೊಕ್ಕಲು ಮತ್ತು ಮಾಲೆಗಾರ ನಾಲ್ವತ್ತೊಕ್ಕಲು ಎಂಬ ವರ್ತಕ ಸಂಘಗಳ ಉಲ್ಲೇಖಗಳು ಶಾಸನಗಳಲ್ಲಿರುವುದನ್ನು ಕಾಣುತ್ತೇವೆ. ಮುಖ್ಯವಾಗಿ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಈ ವರ್ಗಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಚರ್ಚಿಸಲಾಗಿದೆ.

**೩.೩. ಧಾರ್ಮಿಕ ಸ್ಥಿತಿಗತಿ**

ಭಾರತವು ಹಲವಾರು ಧರ್ಮಗಳ ನೆಲೆವೀಡು. ಇಲ್ಲಿ ಕಂಡುಬರುವ ಭಕ್ತಿ, ದೇವತೋಪಾಸನೆ, ವೃತ್ತಿ, ಸಂಗೀತ, ಶಿಲ್ಪಕಲೆ ಇವುಗಳೆಲ್ಲದಕ್ಕೂ ಉಗಮಸ್ಥಾನ ಧರ್ಮವೇ. ಧರ್ಮವು ಸಂಸ್ಕೃತಿಯ ವಾಹಕವೂ ಆಗಿದೆ. ಇದರ ಮೂಲಕ ಜನರ ಬದುಕಿಗೆ ಸುಸಂಬದ್ಧವಾದ ನೆಲೆಗಟ್ಟನ್ನು ಧರ್ಮವು ಒದಗಿಸಿಕೊಡುತ್ತದೆ. ಧರ್ಮದ ಮೂಲವನ್ನು ಹಿಡಿದು ಹೊರಟರೆ ಮೊದಲಿಗೆ ನಮಗೆ ದೊರೆಯುವ ಆಧಾರವೆಂದರೆ ಅದು ಕ್ರಿಸ್ತಪೂರ್ವದ ಶಿಲಾಯುಗದ ಜನತೆಯಲ್ಲಿ. ಉತ್ಖನನದಲ್ಲಿ ದೊರೆತ ಕೆಲವು ಮೂರ್ತಿಗಳಿಂದ ಶಿಲಾಯುಗದ ಜನತೆಯಲ್ಲಿ ಧಾರ್ಮಿಕ ಕಲ್ಪನೆಗಳು ನೆಲೆಗೊಂಡಿದ್ದವು ಎಂಬುದಕ್ಕೆ ಸಾಕ್ಷಿಗಳು ದೊರೆಯುತ್ತವೆ. ಮುಖ್ಯವಾಗಿ ಸಾವಳದ ಸಂಸ್ಕೃತಿಯಲ್ಲಿ ದೊರೆತ ಸುಮಾರು ೩ ಸೆಂಟಿ ಮೀಟರ್ ಎತ್ತರದ ವರ್ತುಲಾಕಾರದ ಲಿಂಗಾಕೃತಿಯು ಅಂದಿನ ಧಾರ್ಮಿಕ ಪರಿಸರವನ್ನು ಸಾಕ್ಷೀಕರಿಸುತ್ತದೆ. ಧರ್ಮವು ಮಾನವ ಜನಾಂಗದ ಒಂದು ಜೀವನ ವಿಧಾನ. ವ್ಯಕ್ತಿ ಮತ್ತು ಸಮಾಜಗಳ ಒಂದು ಗುಂಪು ಧರ್ಮ. ಭಾರತೀಯರ ಸಾಂಸ್ಕೃತಿಕ ಬದುಕಿಗೆ ಧರ್ಮವೇ ಮಾರ್ಗದರ್ಶಿ. ಕ್ರಿಸ್ತಪೂರ್ವದಿಂದಲೂ ಧರ್ಮವು ತನ್ನ ಸ್ವರೂಪದಲ್ಲಿ ಬದಲಾವಣೆಯನ್ನು ತಂದುಕೊಳ್ಳುತ್ತಾ, ಹಲವು ಆಚಾರ ವಿಚಾರಗಳು ಪರಿವರ್ತನೆಗೊಂಡು ಅನೇಕ ಧರ್ಮಗಳಾಗಿ ಪರಿಣಮಿಸಿದವು. ಹೀಗೆ ಆಚರಣೆಗಳಿಗೆ ಅನುಗುಣವಾಗಿ ಹಲವಾರು ಧರ್ಮಗಳು ಕಾಲಕಾಲಕ್ಕೆ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನ ಪಲ್ಲಟಗೊಳ್ಳುತ್ತ ಬಂದಿವೆ. ಆಯಾ ಕಾಲದ ರಾಜಕೀಯ ಸ್ಥಿತಿಗತಿಯು ಧರ್ಮದ ಸ್ಥಾನಮಾನವನ್ನು ನಿರ್ಧರಿಸಿದೆ.

ಕರ್ನಾಟಕವು ಧರ್ಮಗಳ ಸಮನ್ವಯತೆಯಿಂದ ಕೂಡಿದ ನಾಡಾಗಿದೆ. ವೇದ ಉಪನಿಷತ್ತುಗಳು, ಆಗಮ, ಶಾಸ್ತ್ರಗಳು, ಸ್ಮೃತಿಗಳು, ಇತಿಹಾಸ, ಪುರಾಣಗಳು ನಿರೂಪಿಸಿದ ಮತ್ತು ರೂಪಿಸಿದ ಭಾರತೀಯ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿ ಬೆಳೆಯಿತು. ಪ್ರಾಕೃತಿಕ ಸಂಪತ್ತನ್ನು ಹೊಂದಿರುವ ಇದು ಎಲ್ಲ ಧರ್ಮಗಳನ್ನು ಆಕರ್ಷಿಸಿತು. ಮುಖ್ಯವಾಗಿ ವೇದಗಳ ಕಾಲಕ್ಕಿಂತಲೂ ಪ್ರಾಚೀನವಾದ ಧರ್ಮವೆಂದರೆ 'ನಾಗಧರ್ಮ'. ಈ ಧರ್ಮದಿಂದ ಹಿಡಿದು ಕಾಲಕಾಲಕ್ಕೆ ಬಂದ ಎಲ್ಲ ಧರ್ಮಗಳು ಇಲ್ಲಿ ಆಶ್ರಯ ಪಡೆದವು. ನಾಡಿನ ಇತಿಹಾಸದ ಪ್ರಾರಂಭದಲ್ಲಿಯೇ ಜೈನ ಧರ್ಮ ರಕ್ಷಣೆಯನ್ನು ಪಡೆದು ಬೆಳೆಯಿತು. ಅಶೋಕನ ಬೌದ್ಧ ಧರ್ಮ ಪ್ರಚಾರಕ್ಕೆ ಇದು

ಕೇಂದ್ರವಾಗಿತ್ತು. ನಂತರದಲ್ಲಿ ಶೈವ ಧರ್ಮ ಪ್ರಾಬಲ್ಯಕ್ಕೆ ಬಂದಿತು. ಶ್ರೀರಾಮಾನುಜರಿಗೆ ಆಶ್ರಯವನ್ನಿತ್ತು ವೈಷ್ಣವ ಧರ್ಮವನ್ನು ಸ್ವಾಗತಿಸಿತು. ಹೀಗೆ ಎಲ್ಲ ಧರ್ಮಗಳನ್ನು ಸಮಾನ ಭಾವನೆಯಿಂದ ಕಾಣುವ ಸಮನ್ವಯ ಸಂಸ್ಕೃತಿ ಕರ್ನಾಟಕದ ಸಹಜ ಗುಣ. ಧರ್ಮಸಹಿಷ್ಣುತೆಯನ್ನು ಅನುಸರಿಸಿದ ಕರ್ನಾಟಕದ ಅರಸುಮನೆತನಗಳು ಧರ್ಮದ ಅನುಯಾಯಿಗಳಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದ್ದವು. ಧರ್ಮಸಮನ್ವಯತೆ ಆ ಕಾಲದ ರಾಜ್ಯದ ಆಡಳಿತದ ಮುಖ್ಯ ಲಕ್ಷಣವಾಗಿತ್ತು. ಸ್ವಧರ್ಮ ರಕ್ಷಣೆ ಮತ್ತು ಪರಧರ್ಮ ಸಹಿಷ್ಣುತೆ ಎನ್ನುವುದು ಅಂದಿನ ಅರಸರ ಧ್ಯೇಯವಾಗಿತ್ತು. ಹೀಗೆ ಕರ್ನಾಟಕದಲ್ಲಿ ಧರ್ಮವು ತನ್ನದೇ ಆದ ಮಹತ್ತರವಾದ ಸ್ಥಾನವನ್ನು ಸಂಪಾದಿಸಿಕೊಂಡಿರುವ ಸಂಸ್ಥೆಯಾಗಿದೆ. ಈ ಧರ್ಮದ ಕುರಿತಾಗಿ ಹಲವಾರು ವಿದ್ವಾಂಸರು ತಮ್ಮದೇ ಆದ ವ್ಯಾಖ್ಯೆಗಳನ್ನು ನೀಡಿದ್ದಾರೆ.

೧. ಮತಧರ್ಮವು ಮನಸ್ಸಿನ ಒಂದು ಧೀಶಕ್ತಿ ಅಥವಾ ಮನೋಧರ್ಮವಾಗಿದ್ದು, ಮಾನವ ಅನಂತವನ್ನು ಗ್ರಹಿಸಲು ಸಾಧ್ಯವಾಗಿಸುತ್ತದೆ(ಮ್ಯಾಕ್ಸ್‌ಮುಲ್ಲರ್–ಸೈನ್ಸ್ ಆಫ್ ರಿಲಿಜನ್).

೨. ಚೈತನ್ಯ ವಸ್ತುಗಳಲ್ಲಿರುವ ಒಂದು ನಂಬಿಕೆ(ಟೇಲರ್ ಇ.ಬಿ.–ಪ್ರಿಮಿಟಿವ್ ಕಲ್ಚರ್).

೩. ಮತಧರ್ಮವು ಸಂಕಲ್ಪದ ಒಂದು ಗುರಿ. ಅದು ದೇವತ್ವದ ಕಲ್ಪನೆಗೆ ಅನುಗುಣವಾಗಿರುತ್ತದೆ (ಫ್ಲೀಡರ್–ರಿಲಿಜಿಯಸ್ ಫಿಲಾಸಪಿ).

೪. ವ್ಯಕ್ತಿ ತನ್ನ ಏಕಾಂತತೆಯಲ್ಲಿ ಏನು ಮಾಡುತ್ತಾನೆ ಎಂಬುದೇ ಧರ್ಮ(ವೈಟ್‌ಹೆಡ್ ಎ.ಎನ್. –ರಿಲಿಜನ್ ಇನ್ ದಿ ಮೇಕಿಂಗ್).

೫. ಧರ್ಮವು ಒಂದು ಬಗೆಯ ಜೀವನ ಅಥವಾ ಅನುಭವ. ಈ ಅನುಭವ ಒಂದು ಭಾವನಾತ್ಮಕವಾದ ಪುಳಕವಲ್ಲ, ಮಾನಸಿಕ ಭ್ರಾಂತಿಯಲ್ಲ. ಅದು ಪರವಸ್ತುವಿನೊಂದಿಗೆ ಒಟ್ಟು ವ್ಯಕ್ತಿತ್ವದ ಅಖಂಡ ಆತ್ಮಾನುಸಂಧಾನ.[೬೫] (ಎಸ್.ರಾಧಾಕೃಷ್ಣನ್–ಹಿಂದೂ ವ್ಯೀವ್ ಆಫ್ ಲೈಫ್).

ಹೀಗೆ ಧರ್ಮದ ಕುರಿತಾಗಿ ಹಲವಾರು ವ್ಯಾಖ್ಯೆಗಳು ಕಂಡುಬರುತ್ತವೆ. 'ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಧರ್ಮವೆಂದರೆ ನಾಗಗಳ ಪೂಜೆ.'[೬೬] ಇದು ಆರ್ಯರಿಗಿಂತ ಹಿಂದೆಯೇ ಭಾರತಕ್ಕೆ ಬಂದ ಸಿಥಿಯನ್ ಗುಂಪಿನ ಜನರ ಧರ್ಮವಾಗಿರಬೇಕೆಂದು ಊಹಿಸಲಾಗಿದೆ. ನಾಗಾಗಳ ಪೂಜೆಯು ಅತ್ಯಂತ ಪ್ರಾಚೀನ ಧರ್ಮವಾಗಿದ್ದರೂ ಸಹ ತದನಂತರದ ಕಾಲಘಟ್ಟಗಳಲ್ಲಿ ಉದಯಿಸಿದ ಧರ್ಮಗಳಿಗೆ ಕರ್ನಾಟಕವು ಆಶ್ರಯವನ್ನು ನೀಡಿತು. ಕ್ರಿಸ್ತಶಕದ ಆರಂಭದ ಮೊದಲಿನ ಪಂಥಗಳಾದ ಬೌದ್ಧ, ಜೈನ, ವೈಷ್ಣವ, ಶೈವ ಧರ್ಮಗಳಲ್ಲಿ ಯಾವುದು ಮೊದಲು, ಯಾವುದು ನಂತರ ಎಂದು ಗುರುತಿಸುವುದು ಸ್ವಲ್ಪ ಕಷ್ಟವೇ. ಆದರೆ ಶೈವಪಂಥವನ್ನು ಸಿಂಧೂ ಸಂಸ್ಕೃತಿಯಷ್ಟು ಪ್ರಾಚೀನ ಕಾಲದಲ್ಲಿಯೇ ಪ್ರಚಾರದಲ್ಲಿತ್ತೆಂದು ತರ್ಕಿಸಲಾಗಿದೆ. ಅದೇನೇ ಇರಲಿ

ಕರ್ನಾಟಕದ ಇತಿಹಾಸದಲ್ಲಿ ಧರ್ಮಕ್ಕೆ ತನ್ನದೇ ಆದ ಸ್ಥಾನವಿದೆ. ಹಲವಾರು ಅರಸುಮನೆತನಗಳು ಧರ್ಮಗಳಿಗೆ ಆಶ್ರಯವನ್ನು ನೀಡುವುದರೊಂದಿಗೆ ಅವುಗಳ ಬೆಳವಣಿಗೆಗೂ ಕಾರಣವಾಗಿವೆ. ಈ ನಾಡಿನಲ್ಲಿ ಧಾರ್ಮಿಕ ಸಮನ್ವಯತೆ ಹಾಗೂ ಅಂದಿನ ಧಾರ್ಮಿಕ ಸ್ಥಿತಿಗತಿಯನ್ನು ಸ್ಪಷ್ಟವಾಗಿ ಮತ್ತು ನಿಖರವಾಗಿ ಗುರುತಿಸಲು ಇಲ್ಲಿ ದೊರೆತ ಶಾಸನಗಳು ಸಹಾಯಕವಾಗಿ ನಿಲ್ಲುತ್ತವೆ. ಬೇಲೂರಿನ ಶಾಸನದಲ್ಲಿರುವ ಈ ಕೆಳಗಿನ ಒಂದು ಪದ್ಯ. ಧಾರ್ಮಿಕ ರಂಗದಲ್ಲಿರಬೇಕಾದ ವಿಶಾಲ ದೃಷ್ಟಿಗೆ ಚಿರಂತನವಾದ ಆದರ್ಶವನ್ನು ಒದಗಿಸಿದೆ.

"ಯಂ ಶೈವಾಸ್ಸಮುಪಾದತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯ್ಯಾಯಿಕಾಃ॥
ಅರ್ಹನ್ನಿತ್ಯಥ ಜೈನ ಶಾಸನ ರತಾಃ ಕರ್ಮೇತಿ ಮೀಮಾಂಸಕಾಃ।
ಸೋಽಯಂ ವೋ ವಿಧಧಾತು ವಾಂಛಿತ ಫಲಂ ಶ್ರೀಕೇಶವೇಶಸ್ಸದಾ॥"

ಶಿವ, ವಿಷ್ಣು, ಜಿನ, ಬುದ್ಧ ಈ ಮೊದಲಾದ ಅನಂತ ನಾಮರೂಪಗಳನ್ನುಳ್ಳ ಆ ವಿಶ್ವಚೈತನ್ಯ ಶಕ್ತಿ ಒಂದೇ ಎಂಬುದನ್ನು ಹೀಗೆ ಹೇಳಿದುದು ಮಾತ್ರವಲ್ಲದೆ ಅದನ್ನು ಅಳವಡಿಸಿಕೊಂಡು ಮುನ್ನಡೆದ ಧಾರ್ಮಿಕ ಜೀವನದ ಚಿತ್ರ ಕನ್ನಡದ ಶಾಸನಗಳಲ್ಲಿ ಮೂಡಿದೆ.[೭೭] ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಶಾಸನಗಳ ಆಧಾರದ ಮೇಲೆ ಮತ್ತು ಪರೋಕ್ಷವಾದ ಮಾಹಿತಿಗಳನ್ನು ಒದಗಿಸುವ ಶಾಸನೇತರ ಆಕರಗಳ ಆಧಾರಗಳಿಂದ ಅಂದಿನ ಕಾಲದ ಧಾರ್ಮಿಕ ಅಂಶಗಳನ್ನು ಸ್ಪಷ್ಟಪಡಿಸಬಹುದಾಗಿದೆ. ಈ ಆಧಾರದ ಮೇಲೆಯೇ ಜಿಲ್ಲೆಯ ಧಾರ್ಮಿಕ ಸ್ಥಿತಿಗತಿಯನ್ನು ಚರ್ಚಿಸಲಾಗಿದೆ. ಅದರಲ್ಲೂ ಮುಖ್ಯವಾಗಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿಗೆ ಸಂಬಂಧಿಸಿದಂತೆ ವಿಷಯಗಳನ್ನು ವಿಶ್ಲೇಷಿಸಲಾಗಿದೆ.

ಸಾಂಪ್ರದಾಯಿಕ ಧರ್ಮಗಳಾದ ಶೈವ, ವೈಷ್ಣವ ಮತ್ತು ಜೈನ ಧರ್ಮಗಳು ಈ ಪ್ರದೇಶದಲ್ಲಿ ಆಚರಣೆಯಲ್ಲಿದ್ದವು. ಇವುಗಳಲ್ಲಿ ಶೈವ ಧರ್ಮ ಹೆಚ್ಚು ಆಚರಣೆಯಲ್ಲಿತ್ತು. ಈ ಮೂರು ಧರ್ಮಗಳ ಹೊರತಾಗಿ ತೆಕ್ಕಲಕೋಟೆ, ಉದಯಗೋಳಂ ಮತ್ತು ಇದಕ್ಕೆ ಹೊಂದಿಕೊಂಡಂತೆ ಬ್ರಹ್ಮಗಿರಿ, ಸಿದ್ಧಾಪುರ, ಜಟ್ಟಿಂಗರಾಮೇಶ್ವರ, ಕೊಪ್ಪಳ, ಮಸ್ಕಿಗಳಲ್ಲಿ ದೊರೆತ ಅಶೋಕನ ಶಾಸನಗಳನ್ನು ಆಧರಿಸಿದಂತೆ ಇಲ್ಲಿ ಬೌದ್ಧ ಧರ್ಮ ಪ್ರಚಲಿತದಲ್ಲಿತ್ತೆಂದು ಹೇಳಬಹುದು. ಆದರೆ ಆಚರಣೆಯಲ್ಲಿತ್ತೆಂದು ತಿಳಿದುಬರುವುದಿಲ್ಲ. ಜೊತೆಗೆ ಯಾವ ರಾಜನ ಆಶ್ರಯದಲ್ಲಿ ಈ ಪ್ರದೇಶದಲ್ಲಿ ಬೌದ್ಧ ಧರ್ಮ ಇತ್ತೆಂಬುದಕ್ಕೆ ಆಧಾರಗಳು ದೊರೆತಿಲ್ಲ. ಹಾಗಾಗಿ ಬಳ್ಳಾರಿ ಜಿಲ್ಲೆಯಲ್ಲಿನ ಹಡಗಲಿ ತಾಲೂಕಿನಲ್ಲಿ ಬೌದ್ಧ ಧರ್ಮದ ಬಗ್ಗೆ ಯಾವುದೇ ಮಾಹಿತಿ ದೊರೆತಿಲ್ಲ.

### ಜೈನ ಧರ್ಮ

ಚಂದ್ರಗುಪ್ತ ಮೌರ್ಯ ಭದ್ರಬಾಹುವಿನೊಡನೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದಾಗಿನಿಂದ ಇದರ ಪ್ರಾಚೀನತೆಯನ್ನು ಗುರುತಿಸಲಾಗಿದೆ. ೧೨ನೆಯ ಶತಮಾನಕ್ಕಾಗಲೇ ಅನೇಕ ದೇವಾಲಯಗಳನ್ನು

ನಿರ್ಮಿಸುವುದರ ಮೂಲಕ ಮತ್ತು ಆಚರಣೆಗಳ ಮೂಲಕ ಜೈನ ಧರ್ಮ ಕನ್ನಡ ನಾಡಿನ ಅರಸು ಮನೆತನಗಳ ರಾಜಾಶ್ರಯವನ್ನು ಪಡೆದುಕೊಂಡಿತು. ಬಳ್ಳಾರಿ ಜಿಲ್ಲೆಯಲ್ಲಿ ಮುಖ್ಯವಾಗಿ ಬಲ್ಲಕುಂದೆ, ಕುಡುತಿನಿ, ಹಂಪೆ, ಸಿಂದವಾಳ, ಹೊಳಗುಂದಿ, ಕೋಗಳಿ, ಬಾಗಳಿಗಳಲ್ಲಿ ಜೈನಬಸದಿಗಳು ಕಂಡುಬರುತ್ತವೆ. ಬಾಗಳಿ, ಕೋಗಳಿ ಮತ್ತು ಮೋರಿಗೆರೆ ಜೈನರ ಪವಿತ್ರ ಕ್ಷೇತ್ರಗಳಾಗಿದ್ದವು. ಕಾಲಕ್ರಮೇಣ ಈ ಧರ್ಮವು ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತಿದ್ದಂತೆ ಕುಡುತಿನಿ, ಸಿಂದವಾಳ, ಸಿರಿಗೇರಿ, ಹೊಳಗುಂದಿ, ಬಾಗಳಿ ಮೊದಲಾದೆಡೆ ಬಸದಿಗಳು ಶೈವಪರಂಪರೆಗೆ ಪರಿವರ್ತನೆಗೊಂಡವು.[೭೮] ಹಡಗಲಿ ತಾಲೂಕಿನ ಹೊಳಗುಂದಿಯಲ್ಲಿನ ಸೋಮನಾಥ ದೇವಾಲಯದಲ್ಲಿ ಒಳಗಡೆ ಇರುವ ಶಾಸನವು ಜೈನ ಶಾಸನವಾಗಿದೆ. ಈ ಶಾಸನದ ಕಾಲ–೧೧೮೬. ಪಾಂಡ್ಯ ದೊರೆ ವಿಜಯಪಾಂಡ್ಯದೇವ ಆತನ ಮಾಂಡಲಿಕ ನೊಳಂಬವಾಡಿ–೩೨೦೦೦ವನ್ನು ಆಳುತ್ತಿದ್ದ. ವಿಜಯಪೆರ್ಮಾನಡಿ ಆತನ ಮನ್ನೆಯ ನಾಚಿದೇವನ ಹೆಸರನ್ನು ಸೂಚಿಸುತ್ತದೆ. ಹೊಳಗುಂದಿಯನ್ನು ಆಳಿದ ಮಲ್ಲಿನಾಥನನ್ನು ಹೊಗಳಿದೆ. ಅವನು ಮಲ್ಲಿನಾಥ ದೇವರಿಗೆ ಬಸದಿಯನ್ನು ಕಟ್ಟಿಸಿ ಮೂಲಸಂಘ ಸೂರಸ್ತಗಣದ ಚಿತ್ರಕೋಃಖ್ಯೆಗಚ್ಚಕ್ಕೆ ಸೇರಿದ ನಾಗಚಂದ್ರ ಭಟ್ಟಾರಕನ ಎದುರಿನಲ್ಲಿ ದೇವರ ಸೇವಾಕಾರ್ಯಗಳಿಗಾಗಿ ಭೂಮಿ ದಾನ ಮಾಡಿದ್ದನ್ನು ಸೂಚಿಸುತ್ತದೆ.[೭೯]

ಮಾನ್ಯರ ಮಸಲವಾಡದಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಶಾಸನದಲ್ಲಿ ಉಲ್ಲೇಖವಿದೆ. ಈ ಶಾಸನವು ಊರಿನ ಮಠದ ಒಂದು ಪಾಳು ನಿವೇಶನದಲ್ಲಿ ದೊರೆತಿದೆ. ಇದು ಯಾದವ ದೊರೆ ರಾಮಚಂದ್ರದೇವನ ಆಳ್ವಿಕೆಗೆ ಸಂಬಂಧಿಸಿದೆ. ಸಾವಂತ ಪಂಡಿತನ ಮಗನಾದ ಕೇಶವ ಪಂಡಿತನು ಮೊಸಳೆವಾಡದ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದಾಗ ವೈಷ್ಣವ ಭಕ್ತನಾದ ಮಹಾಮಂಡಲೇಶ್ವರ ಭೈರವ ದೇವರಸನು ಕೆಲವು ಗೌಡರೊಡಗೂಡಿ ಈ ದಾನವನ್ನು ಮಾಡಿದನು. ಎಂಟು ಹಿಟ್ಟು ಮತ್ತು ಗ್ರಾಮದ ಜನರು ಮತ್ತು ಹಗರನೂರಿನ ಮುಖ್ಯಸ್ಥ ಪಾರಿಸಗೌಡನು ಪಾರ್ಶ್ವನಾಥ ದೇವಾಲಯಕ್ಕೆ ಭೂದಾನವನ್ನು ಮಾಡಿದರು. ಮೊಸಳವಾಡದ ಈ ಪಾರ್ಶ್ವನಾಥ ದೇವಾಲಯವನ್ನು ಕೇಶವಪಂಡಿತನ ತಾಯಿ ಕನ್ನಾಯಿ ಎಂಬುವವಳು ಮಾಡಿಸಿದಳು.[೮೦] ಹಡಗಲಿಯಲ್ಲಿ ಜೈನಬಸದಿಗಳು ವಿರಳವಾಗಿ ಕಂಡುಬಂದರೂ ಆಯಾ ಬಸದಿಗಳನ್ನು ಆಚಾರ್ಯರು ನೋಡಿ ಕೊಳ್ಳುತ್ತಿದ್ದರು. ಹೊಳಗುಂದಿ ಶಾಸನ ಅಲ್ಲಿಯ ಆಚಾರ್ಯನನ್ನು 'ಸಾರ್ದುದ ಗಾಧಬಾಧವೊಳ ಸಾರ್ದುದು ದುರ್ಮ್ಮಾತದೇಳ್ಗೆ ದುರ್ಯ್ಯಶಃಕರ್ದ ಮಲಿಪ್ತ ಮಲ್ತೆನೆಯಶಃ ಪ್ರಭನಿಳ್ದುದು ಚಿತ್ತವೃತ್ತಿ ಸೌಹಾರ್ದ್ದಮ್ಮನಾಳ್ದುದಾಶ್ರೀತವಿನಯ ಮನೋರಥ ವಾದುದಾವಗಂ(ಹೇ) ಚಂದ್ರಮುನೀಂದ್ರನೆಂದೂ ಮಾರಮದೇಭ ಕೇಸರಿಗಳಾಗಮ ಕೋವಿದರಾತ್ಮತತ್ವ ವಿಸ್ತಾರವಿಶಾರದರ್ಸಕಳ ಸಂಯಮಸಾರರ ಶೇಷ ಭವ್ಯ ನಿಸ್ತಾರಕರೆಂದು ಕೂಡೆ ಸಲೆಬಣ್ಣಿಸುತ್ತಿರ್ಪ್ಪುದು ನಾಗಚಂದ್ರಭಟ್ಟಾರಕ ದೇವರಂ ಎಂದಿದೆ.[೮೧] ಜೈನ ಧರ್ಮದ ಶಾಖೆಗಳಾದ ದಿಗಂಬರ ಮತ್ತು ಶ್ವೇತಾಂಬರ ಎಂಬುವುಗಳಲ್ಲಿ ಗಣ, ಗಚ್ಚ, ಅನ್ವಯ, ಬಳಿ ಎಂಬ ಭೇದಗಳಿದ್ದವು. ಆಚಾರ್ಯ ಅರ್ಹದ್ಬಲಿ ಎಂಬುವವನು ಈ

ಮೂಲಸಂಘವನ್ನು ಸೇನ, ನಂದಿ, ದೇವ, ಸಿಂಹ ಎಂದು ನಾಲ್ಕು ಶಾಖೆಗಳನ್ನು ಮಾಡಿರುವುದು ಶ್ರವಣಬೆಳಗೊಳ ಶಾಸನದಲ್ಲಿ ತಿಳಿದುಬರುತ್ತದೆ. ಇಂದ್ರನಂದಿ ಇವುಗಳನ್ನು ನಾಲ್ಕು ಸಂಘಗಳೆಂದು ಕರೆದು ಅವುಗಳಲ್ಲಿ ಗಣ, ಗಚ್ಚಗಳೆಂಬ ಒಳಪಂಗಡಗಳನ್ನು ಹೆಸರಿಸಿದ್ದಾನೆ. ಇಲ್ಲಿಯ ಶಾಸನಗಳು ಇವುಗಳನ್ನು ಉಲ್ಲೇಖಿಸುತ್ತವೆ. ನಂದಿಬೇವೂರಿನ ದೇವಗಣದ ಅಷ್ಟೋಪಾಸಿ ಭಳಾರರೆಂದೂ, ಬಲ್ಲಕುಂದೆಯ ಕುಂದ ಕುನ್ದಾನ್ವಯದ ನಂದಿಸಂಘದ ದೇಸಿಗಣದ ವೀರನಂದಿ ಮುನೀಂದ್ರನೆಂದೂ, ಹೊಳಗುಂದಿಯ ಮೂಲಸಂಘ ಸೂರಸ್ತಗಣದ ಚಿತ್ರಕೋಟ್ಯೆಗಚ್ಚಕ್ಕೆ ಸೇರಿದ ನಾಗಚಂದ್ರಭಟಾರಕನೆಂದೂ, ಮೊಸಳೆವಾಡದ ಮುಸ್ತಕಗಚ್ಚ ದೇಸಿಗಣದ ಮೂಲಸಂಘದ ನೇಮಿಚಂದ್ರ ರಾವುಳನ ಶಿಷ್ಯ ವಿನಯ ಚಂದ್ರದೇವನೆಂದೂ ಉಲ್ಲೇಖಿಸಿವೆ.[೨೨] ಕತ್ತೆಬೆನ್ನೂರಿನ ಪಾಳುಬಿದ್ದ ಜೈನ ಬಸದಿಯ 'ಧಾರಾವಟ್ಟ'ವನ್ನು ಹನುಮಂತ ದೇವರ ದೇವಾಲಯವನ್ನು ಕಟ್ಟಲಿಕ್ಕೆ ಬಳಸಿಕೊಂಡಿರುವುದು ಕಾಲ ಉಕ್ತವಿಲ್ಲದ ಶಾಸನ ಸಂಖ್ಯೆ ೪೯ರಲ್ಲಿ ಕಂಡುಬರುತ್ತದೆ. ಹೀಗೆ ಹಡಗಲಿಯಲ್ಲಿನ ಕೆಲವು ಗ್ರಾಮಗಳಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಉಲ್ಲೇಖಗಳು ದೊರೆಯುತ್ತವೆ. ಕಾಲಕ್ರಮೇಣ ಈ ಜೈನಬಸದಿಗಳು ಶೈವ ಧರ್ಮದ ಕೇಂದ್ರಗಳಾಗಿ ಮಾರ್ಪಟ್ಟವು. ಕ್ರಿಸ್ತಶಕ ೧೧ನೇ ಶತಮಾನದ ಮಧ್ಯಭಾಗದಿಂದಲೇ ಜೈನ ಧರ್ಮ ಕರ್ನಾಟಕದಲ್ಲಿ ಇಳಿಮುಖವಾದುದನ್ನು ಕಾಣಲಾಗುತ್ತದೆ. ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಹೊಳಲು, ಕತ್ತೆಬೆನ್ನೂರು, ಉತ್ತಂಗಿ, ತಳಕಲ್, ಮಾಗಳ, ಇಟಗಿ ಮುಂತಾದ ಪ್ರದೇಶಗಳಲ್ಲಿ ಜೈನರಿದ್ದರು. ಆದರೆ ಪ್ರಸ್ತುತ ಶೈವ ಧರ್ಮದವರು ಕಂಡುಬರುತ್ತಿದ್ದಾರೆ.

### ವೈಷ್ಣವ ಧರ್ಮ

ರಾಮಾನುಜಾಚಾರ್ಯರು ೧೨ನೇ ಶತಮಾನದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದು ನೆಲೆಸಿದರು. ಇವರ ಆಗಮನ ಮತ್ತು ಬೆಂಬಲದಿಂದಾಗಿ ಶ್ರೀವೈಷ್ಣವ ಧರ್ಮ ಕ್ರಮೇಣ ವೃದ್ಧಿಸುತ್ತ ಬಂದಿತು. ಇದು ೧೨-೧೩ನೇ ಶತಮಾನದಲ್ಲಿ ಜನಪ್ರಿಯ ಧರ್ಮಗಳಲ್ಲೊಂದಾಗಿತ್ತು. ಈ ಧರ್ಮ ಪ್ರಚಾರಕ್ಕೆ ಮಧ್ವಾಚಾರ್ಯರೂ ಕೂಡ ಕೈ ಜೋಡಿಸಿದರು. ಇವರು ಮತಪ್ರಚಾರ ಕೈಗೊಂಡ ನಂತರ ವೈಷ್ಣವ ಮತದ ಹಲವಾರು ಶಾಖೆಗಳು ತೆರೆದವು. ಕ್ರಿ.ಶ. ಆರಂಭದ ಮೊದಲೇ ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮದ ಪ್ರಭಾವ ಕಂಡುಬರುತ್ತದೆ. ವೈಷ್ಣವ ಧರ್ಮದ ಪ್ರಾಚೀನತೆಯನ್ನು ಭಾರತದ ಪವಿತ್ರಗ್ರಂಥಗಳಲ್ಲಿ ಸಾಕಷ್ಟು ಕಾಣಬಹುದು. ಋಗ್ವೇದದಲ್ಲಿ ವಿಷ್ಣುವೂ ಕೂಡ ಒಬ್ಬ ದೇವತೆಯಾಗಿ ಕಾಣಿಸಿಕೊಳ್ಳುತ್ತಾನೆ. ಕ್ರಿಸ್ತಶಕ ೬ನೇ ಶತಮಾನಕ್ಕಾಗಲೇ ಇದು ಹೆಚ್ಚು ವ್ಯಾಪಿಸಿತು. ಬಾದಾಮಿಯಲ್ಲಿ ಪ್ರಸಿದ್ಧ ವೈಷ್ಣವ ದೇವಾಲಯ ನಿರ್ಮಾಣವಾಗಿದೆ. ಇದು ಬಾದಾಮಿ ಚಾಲುಕ್ಯರ ಕಾಲದ್ದಾಗಿದೆ. ಮುಖ್ಯವಾಗಿ ಶೈವ ಧರ್ಮಕ್ಕೆ ಹೊಂದಿಕೊಂಡಂತೆ ಅಂದರೆ ಶೈವ ಧರ್ಮದೊಂದಿಗೆ ಬೆರೆತುಕೊಂಡು ಬೆಳವಣಿಗೆಯನ್ನು ಹೊಂದಿತು.

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿನ ಕೇಶವ ದೇವಾಲಯವನ್ನು ಕಟ್ಟಿಸಿದುದರ ಉಲ್ಲೇಖ ಆ ದೇವಸ್ಥಾನದ ಪಶ್ಚಿಮ ದ್ವಾರದ ಹತ್ತಿರ ನಿಲ್ಲಿಸಿದ ಕಲ್ಲಿನ ಮೇಲಿರುವ ಶಾಸನದಲ್ಲಿದೆ.

ಇದು ಚಾಲುಕ್ಯರ ಕಾಲದ್ದಾಗಿದ್ದು, ತ್ರಿಭುವನಮಲ್ಲ ಪಾಂಡ್ಯದೇವನ ಬ್ರಾಹ್ಮಣ ಸೇನಾಧಿಕಾರಿಯಾಗಿದ್ದ ರವಿ ದಂಡನಾಯಕನ ಹೆಂಡತಿಯಾದ ರೆಬ್ಬಣಬ್ಬೆ ಅಥವಾ ರೆಬ್ಬಲದೇವಿಯು ಪೂವಿನ ಪಡಂಗಿಲೆಯಲ್ಲಿ ಕೇಶವ ದೇವರ ದೇವಸ್ಥಾನವನ್ನು ಕಟ್ಟಿಸಿ, ದೇವರ ಸೇವೆಗೆ ಭೂಮಿ ದಾನ ಮಾಡಿರುವ ಉಲ್ಲೇಖ ದೊರೆಯುತ್ತದೆ.[೮೩] ಮೈಲಾರ ಶಾಸನವು 'ವೇದವಿದರ್ವ್ವೈಷ್ಣವ ಧರ್ಮೋದಯರ ಕಳಂಕ ಚರಿತರಿನ್ನೂರ್ವ್ವರು ಮತ್ಯಾದರದಿ ಶಿವಾಲಯದೀ ಮೇದಿನಿ ಸರ್ವ್ವ ಮಾನ್ಯಾದಿಂ ಪಾಲಿಸುವರ್' ಎಂದಿದೆ.[೮೪] ಹಾಗೆಯೇ ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ನರಸಿಂಹದೇವರ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಕೆಲವು ಶಾಸನಗಳು ದೊರೆತಿವೆ. ಈ ದೇವಸ್ಥಾನದ ಒಂದು ಶಾಸನದಲ್ಲಿ ಮಾಂಗೋಳದ ಮಹಾಜನರು ನರಸಿಂಹದೇವರ ಸೇವೆಗೆ ೨೩ ಮತ್ತರು ಭೂಮಿಯನ್ನು ದಾನ ಮಾಡಿರುವುದನ್ನು ತೋರಿಸುತ್ತದೆ.[೮೫] ಅದೇ ರೀತಿ ಅದೇ ದೇವಸ್ಥಾನದ ಪ್ರವೇಶ ದ್ವಾರದಲ್ಲಿ ನಿಲ್ಲಿಸಿದ ಎರಡನೆಯ ಕಲ್ಲಿನ ಮೇಲಿರುವ ಶಾಸನವು ರಾಣಿ ಪದುಮಲದೇವಿಯ ಮಾಂಗೋಳದ ಎರಡು ನೂರು ಮಹಾಜನರ ಕೋರಿಕೆಯ ಮೇರೆಗೆ ತುಂಗಭದ್ರಾ ನದಿಯ ದಕ್ಷಿಣ ದಂಡೆಯ ಮೇಲಿರುವ ನರಸಿಂಹದೇವರ ದೇವಸ್ಥಾನಕ್ಕೆ ತೆರಿಗೆರಹಿತ ಭೂಮಿಯನ್ನು ದಾನ ನೀಡಿರುವುದನ್ನು ತಿಳಿಸುತ್ತದೆ.[೮೬] ಇಲ್ಲಿ ಮುಖ್ಯವಾಗಿ ೧೧ ಮತ್ತು ೧೨ನೇ ಶತಮಾನದಲ್ಲಿ ರಂಗಾಪುರದಲ್ಲಿಯೇ ಎರಡು ವೈಷ್ಣವ ದೇವಾಲಯಗಳು ನಿರ್ಮಾಣಗೊಂಡಿರುವುದನ್ನು ಕಾಣುತ್ತೇವೆ. ತದನಂತರದಲ್ಲಿ ೧೨ನೇ ಶತಮಾನದಲ್ಲಿ ಹೂವಿನಹಡಗಲಿಯಲ್ಲಿ ಯೋಗನಾರಾಯಣ ದೇವಾಲಯ, ಕಾಗನೂರು ಗ್ರಾಮದಲ್ಲಿ ಲಕ್ಷ್ಮೀನಾರಾಯಣ ದೇವಾಲಯ ಮತ್ತು ಕತ್ತೆಬೆನ್ನೂರಿನಲ್ಲಿ ನಾರಾಯಣ ದೇವಾಲಯಗಳು ನಿರ್ಮಾಣಗೊಂಡಿವೆ. ಈ ದೇವಾಲಯಗಳನ್ನು ಕಲ್ಯಾಣ ಚಾಲುಕ್ಯರೇ ನಿರ್ಮಿಸಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ೧೩ನೇ ಶತಮಾನದಲ್ಲಿ ಇವರ ಆಡಳಿತದ ಅವಧಿಯಲ್ಲಿಯೇ ಮಾಗಳದಲ್ಲಿ ಸೂರ್ಯನಾರಾಯಣ ದೇವಾಲಯ ನಿರ್ಮಾಣಗೊಂಡಿದೆ. ಹಾಗೆಯೇ ಕ್ರಿ.ಶ.೧೨೧೫ರಲ್ಲಿನ ಹೊಯ್ಸಳ ಅರಸ ವಿಷ್ಣುವರ್ಧನ ಎರಡನೇ ವೀರಬಲ್ಲಾಳನ ಕಾಲದ ಶಾಸನವು ವೇಣುಗೋಪಾಲ ದೇವಸ್ಥಾನದ ಹತ್ತಿರ ದೊರೆತಿದೆ.[೮೭] ಅಂದರೆ ಮಾಗಳ ಗ್ರಾಮದಲ್ಲಿ ಎರಡು ವೈಷ್ಣವ ದೇವಾಲಯಗಳಿರುವುದು ಕಂಡುಬರುತ್ತದೆ. ಹಡಗಲಿಯ ನಕ್ಕರಹಾಳು ಎಂಬ ಗ್ರಾಮದಲ್ಲಿ ಆಂಜನೇಯ ದೇವಾಲಯ ನಿರ್ಮಾಣವಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಕ್ರಿ.ಶ.೧೫೬೨ರ ವಿಜಯನಗರ ಅರಸ ಸದಾಶಿವರಾಯನ ಕಾಲಾವಧಿಯ ಶಾಸನವಿರುವುದು ತಿಳಿದುಬರುತ್ತದೆ.

ಹೀಗೆ ಬಳ್ಳಾರಿ ಜಿಲ್ಲೆಯ ಹಡಗಲಿಯಲ್ಲಿ ವೈಷ್ಣವ ದೇವಾಲಯಗಳು ಇರುವುದನ್ನು ಕಾಣಬಹುದು. 'ಮುಖ್ಯವಾಗಿ ವೈಷ್ಣವ ಧರ್ಮವು ಕ್ರಿ.ಶ.ಕ್ಕಿಂತಲೂ ಪೂರ್ವದಲ್ಲಿಯೇ ದಕ್ಷಿಣ ಭಾರತವನ್ನು ಪ್ರವೇಶಿಸಿದ್ದಿತೆಂದು ನಾನಾಘಾಟ್ ಶಾಸನದಿಂದ ತಿಳಿದುಬರುತ್ತದೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ

ಆರಂಭವಾಗುತ್ತದೆ.’[೮೮] ಒಟ್ಟಾರೆಯಾಗಿ ವೈಷ್ಣವ ಧರ್ಮವು ದಕ್ಷಿಣ ಭಾರತದಲ್ಲಿ ತನ್ನ ಪಾರಂಪರೆಯನ್ನು ವೃದ್ಧಿಗೊಳಿಸಿದ್ದು ಕಂಡುಬರುತ್ತದೆ. ಹಡಗಲಿಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಲ್ಲಿನ ವಿಷಯಗಳನ್ನಾಧರಿಸಿ ಇವರ ಕಾಲಾವಧಿಯಲ್ಲಿಯೇ ಹೆಚ್ಚಾಗಿ ವೈಷ್ಣವ ದೇವಾಲಯಗಳು ತಲೆ ಎತ್ತಿದವು ಎಂದು ಹೇಳಬಹುದು. ಇವರ ಆಡಳಿತಾವಧಿಯಲ್ಲಿ ವೈಷ್ಣವ ಧರ್ಮಕ್ಕೂ ಹೆಚ್ಚಿನ ಪ್ರೋತ್ಸಾಹ ದೊರೆತಿರುವುದು ಶಾಸನಗಳಿಂದ ತಿಳಿದುಬರುತ್ತದೆ.

## ಶೈವ ಧರ್ಮ

ಭಾರತ ದೇಶದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಶೈವ ಧರ್ಮವೂ ಒಂದು. ಶಿವನ ಆರಾಧನೆಯ ಚರಿತ್ರೆಯು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಇದರ ಪ್ರಾಚೀನ ಇತಿಹಾಸವು ಹರಪ್ಪ ಮೆಹೆಂಜೋದಾರೋಗಳ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಹರಪ್ಪ–ಮೆಹೆಂಜೊದಾರೋಗಳ ಸೈಂಧವ ಸಂಸ್ಕೃತಿಯಲ್ಲಿ(ಸು.ಕ್ರಿ.ಪೂ.೩೨೫೦–೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳು, ಲಿಂಗಗಳು ದೊರೆಕಿವೆ. ಇದನ್ನು ಪರಿಶೀಲಿಸಿ ಆ ವಿಗ್ರಹವು ಹಿಂದೂ ಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಂದು ಸರ್ ಜಾನ್‌ಮಾರ್ಷಲ್ಲರು ಅಭಿಪ್ರಾಯಪಡುತ್ತಾರೆ.[೮೯] ಶೈವ ಧರ್ಮವು ಕರ್ನಾಟಕದ ಪ್ರಮುಖ ಧರ್ಮವೂ ಹೌದು. ದಕ್ಷಿಣ ಭಾರತದಲ್ಲಿ ಇತಿಹಾಸಪೂರ್ವ ಕಾಲದಿಂದಲೇ ರೂಢಿಯಲ್ಲಿತ್ತೆಂದು ಈ ಪ್ರದೇಶದಲ್ಲಿನ ಜೇವರಗಿ, ಆಂದೋಲಗಳಲ್ಲಿ ದೊರೆತ ಗಂಟೆ, ದೀಪದ ಹಣತೆ, ತ್ರಿಶೂಲಗಳಿಂದ ಊಹಿಸಬಹುದಾಗಿದೆ.[೯೦] ಕರ್ನಾಟಕದ ಅರಸುಮನೆತನಗಳಲ್ಲಿ ಹೊಯ್ಸಳ, ರಾಷ್ಟ್ರಕೂಟ, ಚಾಲುಕ್ಯ ದೊರೆಗಳು ಶೈವ ಧರ್ಮಕ್ಕೆ ಹೆಚ್ಚಿನ ರೀತಿಯಲ್ಲಿ ಪ್ರೋತ್ಸಾಹವನ್ನು ನೀಡಿದ್ದಾರೆ. ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿದ ಈ ದೊರೆಗಳು ದೇವಾಲಯಗಳನ್ನು ನಿರ್ಮಿಸುವುದು, ದಾನ–ದತ್ತಿಗಳನ್ನು ನೀಡುವ ಕಾರ್ಯಗಳಿಂದಾಗಿ ಶೈವ ಧರ್ಮವನ್ನು ಉನ್ನತ ಮಟ್ಟಕ್ಕೆ ಏರಿಸಿದ್ದಾರೆ. ಮುಖ್ಯವಾಗಿ ಇಲ್ಲಿ ಕಂಡುಬರುವ ಶಾಸನಗಳಲ್ಲಿ ದೇವಾಲಯಗಳ ಪೂಜೆ, ದೇವರ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ ಹೀಗೆ ಹಲವಾರು ವಿಷಯಗಳಿಗಾಗಿ ದಾನ ನೀಡಿದ ವಿವರಗಳು ಹೆಚ್ಚಾಗಿ ಕಂಡುಬರುತ್ತವೆ. ಇವುಗಳಿಗೆ ಮುಖ್ಯವಾಗಿ ರಾಜರು, ಮಹಾಜನರು, ವರ್ತಕರು, ಶಾನುಭೋಗರು, ಸಾಮಾನ್ಯ ಜನರು, ಇನ್ನಿತರರು ದಾನ–ದತ್ತಿಗಳನ್ನು ಬಿಟ್ಟಿರುವುದು ಕಂಡುಬರುತ್ತದೆ.

ಶೈವ ಧರ್ಮದಲ್ಲಿ ಕಾಪಾಲಿಕರು, ಪಾಶುಪತ ಕಾಳಾಮುಖರು ಎಂಬ ಎರಡು ವರ್ಗಗಳಿವೆ. ಕರ್ನಾಟಕದಲ್ಲಿ ಕಾಪಾಲಿಕರ ಸಂಖ್ಯೆ ಕಡಿಮೆ. ಪಾಶುಪತ ಕಾಳಾಮುಖರು ಹೆಚ್ಚಾಗಿ ಕಂಡುಬಂದಿದ್ದಾರೆ.[೯೧] ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ ಹೆಚ್ಚಿನ ಶೈವ ದೇವಾಲಯಗಳು ನಿರ್ಮಾಣವಾಗಿದ್ದು ಈ ದೇವಾಲಯಗಳ ವ್ಯವಸ್ಥೆಯನ್ನು ನೋಡಿಕೊಳ್ಳಲು ಪ್ರತ್ಯೇಕವಾದ ಅಧಿಕಾರಿ ವರ್ಗವೇ ಇರುತ್ತಿತ್ತು. ಇಲ್ಲಿ ಮುಖ್ಯವಾಗಿ ಸ್ಥಾನಾಚಾರ್ಯರು ಎಂದು ಕರೆಯಿಸಿಕೊಳ್ಳುತ್ತಿದ್ದ ಸಮುದಾಯದವರು ದೇವಾಲಯದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ಇವರು ಮುಖ್ಯವಾಗಿ ದೇವಾಲಯದ

ಪೂಜೆ–ಪುನಸ್ಕಾರ, ಪರ್ವ ಪವಿತ್ರಗಳೊಂದಿಗೆ, ಆಹಾರ–ವಸತಿಯ ಮೇಲ್ವಿಚಾರಣೆಯನ್ನು ಸಹ ನೋಡಿಕೊಳ್ಳುತ್ತಿದ್ದರು. ಸ್ಥಾನಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದರು. ಇವರು ಕಟ್ಟುನಿಟ್ಟಿನ ಆಚರಣೆಗಳನ್ನು ಮಾಡುತ್ತಿದ್ದರು. ಸ್ಥಾನಾಚಾರ್ಯರು ಏನಾದರೂ ಹಾದಿ ತಪ್ಪಿದರೆ ಅವರನ್ನು ಜನರು ಎಚ್ಚರಿಸುತ್ತಿದ್ದರು. ಇದು ಶಾಸನಗಳಿಂದಲೇ ವೇದ್ಯವಾಗುತ್ತದೆ. ಹಡಗಲಿಯ ಮೈಲಾರ ಗ್ರಾಮದಲ್ಲಿಯ ಸೋಮಲಿಂಗೇಶ್ವರ ದೇವಾಲಯದ ಮುಖದ್ವಾರದ ಬಳಿ ಇರುವ ಶಾಸನದಲ್ಲಿ 'ಜನಂ ಬ್ರಹ್ಮಚರ್ಯಮುಳ್ಳ ತಪಸ್ವಿಯಂ ನಿಲಿಸುವರ್ ಬ್ರಹ್ಮಚರ್ಯಮಿಲ್ಲದನನೀರ್ದೋಡಿಸಿ ಕಳೆವರ್'[೧೨] ಎಂದಿದೆ. ಅಂದರೆ ದೇವಾಲಯದಲ್ಲಿ ಬ್ರಹ್ಮಚಾರಿಯಾದ ತಪಸ್ವಿಯನ್ನು ನಿಲ್ಲಿಸಬೇಕೆಂದೂ ಅಲ್ಲದವನನ್ನು ಓಡಿಸಬೇಕೆಂದು ಹೇಳುತ್ತದೆ. ಈ ರೀತಿಯ ಹೇಳಿಕೆ ಮೋರಿಗೇರಿ ಶಾಸನಗಳಲ್ಲಿಯೂ ದೊರೆಯುತ್ತದೆ. ಹಗರಿಬೊಮ್ಮನಹಳ್ಳಿ ತಾಲೂಕಿಗೆ ಸೇರಿದ ಮೋರಗೇರಿಯ ಉದ್ದಿಬಸವಣ್ಣನ ಗುಡಿಯಲ್ಲಿ ಇರುವ ಶಾಸನದಲ್ಲಿ

> ಇನ್ತಿ ಪರಿಗ್ರಹವೆಲ್ಲಂ ದೇವರ್ಗ್ಗಂ ತಪೋಧನರ್ಗ್ಗಂ ಬೆಸಕೆಯ್ದುಣ್ಬರಲ್ಲಿ ದುಷ್ಟರಂ
> ತಪೋಧನರ್ದ್ದಣ್ಡಿಸಿ ನಡೆಯಿಸುವರ್
> ಇದು ನೈಷ್ಠಿಕ ಸ್ಥಾನಮಿಲ್ಲಿ ನೈಷ್ಠಿಕರಲ್ಲದ ತಪೋಧನಮಿರಲಾಗದು ಬ್ರಹ್ಮಚರ್ಯದಿಂ
> ಕೆಟ್ಟು ನಡೆವ ತಪೋಧನ
> ರಂ ನಾಡನಾಳ್ವರಸುಂ ಮಂನೆಯನು ಮೋರಿಂಗೆರೆಯ ಪನ್ನಿರ್ವರೂರೊಡೆಯರು
> ವಿರ್ದು ಪೊರಮಡಿಸಿಯವರ
> ಸಂತತಿಯ ನೈಷ್ಠಿಕರ ನಿರಿಸುವರಿದನು ಪೇಕ್ಷೆಗೇಯ್ದುವರ್ಗ್ಗೀ ಧರ್ಮ್ಮಮನಳಿದ
> ದೊಷಮಕ್ಕು। ಆಚಾರ ಗೆಟ್ಟು ಪೋಗದೆ,

ಎಂದು ಉಲ್ಲೇಖಿಸಲ್ಪಟ್ಟಿದೆ. ಅಂದರೆ ನೈಷ್ಠಿಕರಲ್ಲದ ತಪೋಧನರನ್ನು ನಾಡರಸರು ಮೋರಗೇರಿಯ ೧೨ ಮಹಾಜನರು ಸೇರಿ ಮಠದಿಂದ ಓಡಿಸಬೇಕೆಂದು ಹೇಳುತ್ತದೆ.[೧೩] ನೈಷ್ಠಿಕ ಬ್ರಹ್ಮಚರ್ಯರು ಯಮನಿಯಮ, ಆಸನ, ಪ್ರಣಾಮ, ಪ್ರತ್ಯಹಾರ, ಧ್ಯಾನಧಾರಣ, ಜಪಸಮಾಧಿಶೀಲ ಸಂಪನ್ನರೂ, ಜಪ ಹೋಮಾದಿ ಅನುಷ್ಠಾನರೂ ಆಗಿರುತ್ತಿದ್ದರು. ದೇವಾಲಯಕ್ಕೆ ದಾನ ದತ್ತಿ ಬಿಡುವುದು ಧಾರ್ಮಿಕ ಕಾರ್ಯ ನಡೆಯುವುದು ಸ್ಥಾನಾಚಾರ್ಯ 'ಕಾಲಂಕರ್ಚ್ಚಿ' ಎನ್ನುವುದರಿಂದ ಅವರ ಪಾದಪೂಜೆಯಿಂದಲೇ ಆರಂಭವಾಗುತ್ತಿದ್ದವು. ಇವರಲ್ಲಿ ಕೆಲವರು ಲಾಕುಳಾಗಮಸಮಯ ಸಮುದ್ಧಾರಣರೆಂದೂ, ಇನ್ನು ಕೆಲವರು ಕಾಳಾಮುಖ ಸಮಯಸಮುದ್ದಾರಣರೆಂದೂ ಕರೆದು ಕೊಂಡಿದ್ದಾರೆ.[೧೪]

ಈ ಸ್ಥಾನಾಚಾರ್ಯರನ್ನು ಸ್ಥಾನಪತಿ, ಸ್ಥಾಣ ಒಡೆಯ, ಸ್ಥಾನದಾಚಾರ್ಯ, ಸ್ಥಾನಿಕ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಆದರೆ ಒಂದೊಂದು ಸ್ಥಳದಲ್ಲಿ ಒಂದೊಂದು ರೂಪದಲ್ಲಿ

ಬಳಕೆಯಲ್ಲಿ ಬಂದಿದೆ. ಮುಖ್ಯವಾಗಿ ಈ ಸ್ಥಾನಾಚಾರ್ಯರ ಅವಶ್ಯಕತೆ ಏಕೆ ಉಂಟಾಯಿತು? ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ, ದೇವಾಲಯಗಳು ಬೆಳೆದಂತೆಲ್ಲ ಅದರ ಜವಾಬ್ದಾರಿಗಳೂ ಕೂಡ ಹೆಚ್ಚುತ್ತಾ ಹೋದವು. ಭಕ್ತರ ಸಂಖ್ಯೆಯೂ ಹೆಚ್ಚುತ್ತಾ ಹೋಯಿತು. ಈ ಮೊದಲು ಮಾಡಿಸುತ್ತಿದ್ದ ಸಾಮಾನ್ಯ ಪೂಜೆಗಿಂತ ಭಿನ್ನವಾಗಿ ವಿಶೇಷ ಪೂಜೆಗಳು ಆರಂಭವಾದವು. ಇದರಿಂದಾಗಿ ಸೇವಾವಿಧಾನಗಳಲ್ಲಿ ಮಾರ್ಪಾಡುಗಳಾದವು. ಈ ಬದಲಾವಣೆಗಳಿಂದಾಗಿ ದೇವಾಲಯದಲ್ಲಿನ ಕೆಲಸ ಕಾರ್ಯಗಳು, ಅವುಗಳ ನಿರ್ವಹಣಾ ವಿಧಾನ, ಪೂಜಾ ಕೈಂಕರ್ಯಗಳು, ಪೂಜೆ ಮಾಡುವ ಮತ್ತು ಅವರಿಗೆ ಸಹಾಯ ಮಾಡುವ ಜನರ ಜೀವನ ನಿರ್ವಹಣೆ, ಪೂಜಾವಿಧಿಯಲ್ಲಿ ಸೇರಿಕೊಂಡ ಸಂಗೀತ ಸೇವೆ, ನೃತ್ಯ ಸೇವೆ, ದೇವಾಲಯಗಳು ಶಿಥಿಲವಾಗುವುದನ್ನು ತಡೆಯಲು ಆಗಬೇಕಿದ್ದ ಖಂಡಸ್ಫುಟಿತ ಜೀರ್ಣೋದ್ಧಾರ ಇತ್ಯಾದಿ ಕಾರ್ಯಗಳ ವ್ಯವಸ್ಥೆ ಮತ್ತು ನಿರ್ವಹಣೆ ಮುಂತಾದ ಜವಾಬ್ದಾರಿಗಳನ್ನು ಗಂಭೀರವಾಗಿ ಪರಿಗಣಿಸಬೇಕಾಯಿತು. ಇದರಿಂದಾಗಿ ದೇವಾಲಯದ ಆಡಳಿತಾತ್ಮಕ ಜವಾಬ್ದಾರಿಯನ್ನು ಒಬ್ಬ ವ್ಯಕ್ತಿಯು ನಿರ್ವಹಿಸುವುದು ಅನಿವಾರ್ಯವಾಯಿತು. ಹೀಗೆ ದೇವಾಲಯಗಳ ವ್ಯವಸ್ಥೆಯ ಜವಾಬ್ದಾರಿ ಹೊತ್ತ ಮುಖ್ಯಸ್ಥನೇ 'ಸ್ಥಾನಪತಿ' ಅಥವಾ 'ಸ್ಥಾನಾಚಾರ್ಯ'.[೫]

ಸ್ಥಾನಪತಿಗಳಲ್ಲಿ ಎರಡು ವಿಧಗಳಿದ್ದವು. ೧. ಸಸ್ತ್ರೀಕ ೨. ನಿಸ್ತ್ರೀಕ. ಇಲ್ಲಿ ಗೃಹಸ್ಥ ಸ್ಥಾನಪತಿಯು ಸಸ್ತ್ರೀಕ. ನೈಷ್ಠೀಕನಾದ ಸ್ಥಾನಪತಿಯು ನಿಸ್ತ್ರೀಕ. ೧೦-೧೨ನೆಯ ಶತಮಾನಗಳ ಅವಧಿಯಲ್ಲಿ ಸಾಮಾನ್ಯವಾಗಿ ನೈಷ್ಠಿಕ ಸ್ಥಾನಪತಿಗಳ ಸಂಖ್ಯೆಯೇ ಅಧಿಕವಾಗಿತ್ತು. ನೈಷ್ಠಿಕ ಸ್ಥಾನಗಳಲ್ಲಿ ಬಹುಪಾಲು ಶಿವಸ್ಥಾನಗಳೇ ಆಗಿದ್ದು, ಅವುಗಳಲ್ಲಿ ತಪೋಧನರು ಇರುತ್ತಿದ್ದರು.[೬] ಹಡಗಲಿ ತಾಲೂಕಿನ ತುಂಬಿಗೇರಿ ಗ್ರಾಮದಲ್ಲಿನ ಈಶ್ವರ ದೇವಾಲಯದ ಬಳಿ ಇರುವ ಶಾಸನದಲ್ಲಿ ತುಂಬಿಗೇರಿಯ ಮೂಲಸ್ಥಾನ ದೇವರಿಗೆ ೪೦೦ ಕಮ್ಮ ಗದ್ದೆಯನ್ನು ಅಲ್ಲಿಯ ಮಠದ ನೈಷ್ಠಿಕ ತಪೋಧನರಿಗೆ ದಾನ ಮಾಡಿದುದನ್ನು ಉಲ್ಲೇಖಿಸಿದೆ.[೭] ಆದ್ದರಿಂದ ಇಲ್ಲಿ ನೈಷ್ಠಿಕ ಸ್ಥಾನಗಳೇ ಮಠಗಳೆಂದು ತಿಳಿಯಬಹುದಾಗಿದೆ. ನೈಷ್ಠಿಕ ಸ್ಥಾನಗಳಿದ್ದೆಡೆಯಲ್ಲಿ ದೇವಸ್ಥಾನದ ಜೊತೆಗೆ ಮಠಗಳು ಇರುತ್ತಿದ್ದವು. ನೈಷ್ಠಿಕ ತಪೋಧನರೇ ನೈಷ್ಠಿಕ ಸ್ಥಾನಪತಿಗಳಾಗಿ, ದೇವಸ್ಥಾನದ ಜೊತೆಗೆ ಇರುತ್ತಿದ್ದ ಮಠಗಳ ಜವಾಬ್ದಾರಿಯನ್ನು ವಹಿಸಿಕೊಂಡಿರುತ್ತಿದ್ದರು. ಮಠಮಿದು ನೈಷ್ಠಿಕ ಮಠಮಿ ಮಠದೊಡೆಯಂ ಬ್ರಹ್ಮಚರ್ಯಮಿಲ್ಲದೊಡಂದೀ ಮಠದೀಂ ಪೊರಮಡಿಸುವುದೀಮಠ ಅರಸೀಕೆರೆಯ ನೊಣಂಬೇಶ್ವರದ 'ಮಠದ ಸನ್ತತಿಯ ಮಠ' ಎಂದು ಮಾಯಿತಮ್ಮನ ಮುಚ್ಚಡಿಯ ಒಂದು ಶಾಸನವು ಉಲ್ಲೇಖಿಸಿದೆ.[೮] ಹೀಗೆ ದೇವಾಲಯಗಳು ಮತ್ತು ಮಠಗಳು ಒಟ್ಟಿಗೆ ಇರುತ್ತಿದ್ದ ಉದಾಹರಣೆಗಳು ದೊರೆಯುತ್ತವೆ.

ಬಳ್ಳಾರಿ ಜಿಲ್ಲೆಯಲ್ಲಿನ ಸ್ಥಾನಾಚಾರ್ಯರ ತಪೋಧನಾಪತಿಗಳ ಪರಂಪರೆ ಹೊಳಗುಂದಿ, ಮೋರಗೇರಿ, ಕುರುವತ್ತಿ, ಹಡಗಲಿ, ಬೆಣ್ಣೆಕಲ್ಲು, ಓರವಾಯಿ, ಸಿರಿವಾರ, ಕುಡುತಿನಿಗಳಲ್ಲಿ ಬೆಳೆದು ಬಂದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಶಾಸನಗಳಲ್ಲಿ ಕಾಳಾಮುಖ ಪಾಶುಪತಕ್ಕೆ ಸೇರಿದ

ಯತಿಗಳನ್ನು ಸಿಂಹಪರ್ಷೆಯ ಅಭಿನವ ಪಾಶುಪತ ಮಠ, ಅಭಿನವ ಪಾಶುಪತ ಸನ್ತಾನ, ಅಭಿನವ ಪಾಶುಪತ ಸಮಯ, ಏಳುಕೋಟಿ ಸಮಯ, ಪರ್ವತದಗಸ್ತೇಶ್ವರರ ಸನ್ತತಿ ಮಠ, ಕಾಶ್ಮೀರ ಸನ್ತಾನ ಎಂದು ಕರೆದಿವೆ.[೯೯] ಕರ್ನಾಟಕದಲ್ಲಿ ಸಿಂಹಪರ್ಷೆಯನ್ನು ಉಲ್ಲೇಖಿಸಿದ ಅತ್ಯಂತ ಪ್ರಾಚೀನ ಶಾಸನವೆಂದರೆ ಕ್ರಿ.ಶ.೧೦೪೫ರ ಮೋರಗೇರಿಯ ಶಾಸನ. ಹೂವಿನಹಡಗಲಿ, ಬೆಣೆಕಲ್ಲು ಶಾಸನಗಳು ಮುದಿನೀರತೀರ್ಥದ ರಾಮೇಶ್ವರದ ಮಲೆಯಾಳ ಪಂಡಿತನೆಂದು ಹೇಳುವುದರಿಂದ ಈ ಪರಂಪರೆಯ ಮೂಲವ್ಯಕ್ತಿ ಮುದಿನೀರಿನವನೆಂಬುವುದು ತಿಳಿಯುತ್ತದೆ. ಈ ಮುದಿನೀರು ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಮುದನೂರು ಗ್ರಾಮ.[೧೦೦]

ಹಡಗಲಿಯಲ್ಲಿ ಸ್ಥಾನಾಚಾರ್ಯರ ಸಂಖ್ಯೆ ಹೆಚ್ಚಾಗಿದ್ದು, ಇವರ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಹಡಗಲಿಯ ಹೊಳಗುಂದಿ ಗ್ರಾಮದಲ್ಲಿನ ಬಲ್ಲೇಶ್ವರ ದೇವಾಲಯದಲ್ಲಿರುವ ಶಾಸನವು ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಚಾವುಂಡರಸನ ಮಗ ಮಹಾಮಂಡಲೇಶ್ವರ ಗಂಗರಸನು ಬಾಳೇಶ್ವರ ದೇವರ ಸೇವಾಕಾರ್ಯಗಳಿಗೆ ಭೂದಾನವನ್ನು ಮಾಡಿದನು. ಈ ದಾನವನ್ನು ಲಕುಲೀಶ ಪಂಥದ ಮಲಯಾಳ ಪಂಡಿತನ ಶಿಷ್ಯ, ಜ್ಞಾನೇಶ್ವರ ಪಂಡಿತ, ಆತನ ಶಿಷ್ಯ ಸೋಮೇಶ್ವರ ಪಂಡಿತ, ಆತನ ಶಿಷ್ಯ ಸಾಂತರಾಸಿ ಪಂಡಿತ, ಆತನ ಶಿಷ್ಯ ಖಳೇಶ್ವರ ಪಂಡಿತನ ಕಾಲು ತೊಳೆದು ರಾಜನ ಒಪ್ಪಿಗೆ ಪಡೆದು ಈ ದಾನ ಮಾಡಿದನು ಎಂದು ಉಲ್ಲೇಖಿಸಿದೆ.[೧೦೧] ಇಲ್ಲಿ ಮುಖ್ಯವಾಗಿ ಗುರುಶಿಷ್ಯರ ಪರಂಪರೆಯನ್ನು ಅನುಕ್ರಮವಾಗಿ ಶಾಸನದಲ್ಲಿ ಉಲ್ಲೇಖಿಸಿರುವುದನ್ನು ಕಾಣಲಾಗುತ್ತದೆ. ಹೀಗೆ ಈ ರೀತಿಯ ಉಲ್ಲೇಖಗಳು ಮೋರಗೇರಿ,[೧೦೨] ಹಡಗಲಿ,[೧೦೩] ಬೆಣ್ಣೆಕಲ್ಲು[೧೦೪]ಗಳಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ಲಕುಳೀಶ ಪರಂಪರೆಯನ್ನು ಶಾಸನ ಈ ರೀತಿ ಹೇಳುತ್ತದೆ.

ಲಕುಳೀಶ ಪರಂಪರೆಯ ಮಲೆಯಾಳ ಪಂಡಿತ

ಜ್ಞಾನೇಶ್ವರ ಪಂಡಿತ

ಸೋಮೇಶ್ವರ ಪಂಡಿತ

ಸಾಂತರಾಸಿ ಪಂಡಿತ

ಖಳೇಶ್ವರ ಪಂಡಿತ

ಈ ಖಳೇಶ್ವರ ಪಂಡಿತನ ನಂತರ ವಾಮಶಕ್ತಿ ಪಂಡಿತ ಆ ಹುದ್ದೆ ವಹಿಸಿಕೊಂಡನು. ಸೋಗೆಯ ಖಳೇಶ್ವರ ಪಂಡಿತರ ಶಿಷ್ಯನೆಂದು ಹೇಳಿಕೊಂಡಿರುವ ವಾಮದೇವ ಪಂಡಿತ ಕ್ರಿ.ಶ.೧೧೧೩ರಲ್ಲಿ ತಳಕಲ್ಲಿನ ಸ್ವಯಂಭುದೇವರ ಮತ್ತು ಅಲಬೂರಿನ ಸ್ವಯಂಭುದೇವರ ಸ್ಥಾನಾಚಾರ್ಯನಾಗಿದ್ದನು.[೧೦೫]

ಹಡಗಲಿ ತಾಲೂಕಿನ ಮೈಲಾರ ಗ್ರಾಮದಲ್ಲಿನ ಸೋಮಲಿಂಗೇಶ್ವರ ದೇವಾಲಯದ ಮುಖ್ಯ ದ್ವಾರದ ಬಳಿ ಇರುವ ಶಾಸನದಲ್ಲಿ ಸ್ವಯಂಭುದೇವರ ಮತ್ತು ಮೂಲಸ್ಥಾನ ದೇವರ ಸ್ಥಾನಾಚಾರ್ಯರಾದ

ಮೇಳಿಮಡುವಿನ ತೇಜೋರಾಶಿ ಪಂಡಿತನ ಶಿಷ್ಯರಾದಂತಹ ಚಿಲ್ಲುಕಾಚಾರ್ಯರನ್ನು ಹೆಸರಿಸುತ್ತದೆ.[೧೦೬] ಹಾಗೆಯೇ ಮಾನ್ಯರಮಸಲವಾಡ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವು ಕಲಿದೇವರ ಸ್ಥಾನಾಚಾರ್ಯರಾದ ಕಲ್ಯಾಣಶಕ್ತಿ ಪಂಡಿತರನ್ನು ಉಲ್ಲೇಖಿಸುತ್ತದೆ.[೧೦೭] ಕುರುವತ್ತಿಯ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವು ಸೋಮೇಶ್ವರ ದೇವರ ಸ್ಥಾನಾಚಾರ್ಯರಾದ ಲಕುಲೀಶ ಪಂಡಿತರನ್ನು ಉಲ್ಲೇಖಿಸಿದೆ ಮತ್ತು ದಂಡನಾಯಕ ಕಾಳಿದಾಸಯ್ಯನ ವಂಶಪರಂಪರೆ, ಕುರುವತ್ತಿಯ ಇನ್ನೂರು ಬ್ರಾಹ್ಮಣರನ್ನು ಈ ಶಾಸನವು ಕಾವ್ಯಮಯವಾಗಿ ವರ್ಣಿಸಿದೆ.[೧೦೮] ಹಾಗೆಯೇ ಇದೇ ಊರಿನ ಮಲ್ಲಿಕಾರ್ಜುನ ದೇವಾಲಯದ ದಕ್ಷಿಣ ದ್ವಾರದ ಬಲಗೋಡೆಯ ಮೇಲಿರುವ ಶಾಸನವು ಜ್ಞಾನೇಶ್ವರ ಪಂಡಿತರನ್ನು ಕಾಳಾಮುಖ ಸರಸ್ವತಿ ಕರ್ಣ್ಣಾವತಂಸನೆಂದು ಕರೆದಿದೆ.[೧೦೯] ಹೀಗೆ ಹಡಗಲಿಯಲ್ಲಿ ಸ್ಥಾನಾಚಾರ್ಯರು ಕಂಡುಬರುವುದನ್ನು ಶಾಸನಗಳಿಂದಲೇ ಕಾಣುತ್ತೇವೆ.

ಸ್ಥಾನಾಚಾರ್ಯರು ಮುಖ್ಯವಾಗಿ ದೇವರಿಗೆ, ದೇವಾಲಯಕ್ಕೆ, ಮಠಕ್ಕೆ ನೀಡಲ್ಪಟ್ಟ ದಾನಗಳನ್ನು ಸ್ವೀಕರಿಸುವ ಅಧಿಕಾರವನ್ನು ಪಡೆದಿದ್ದರು. ದಾನಿಗಳಿಂದ ಪಡೆದ ದಾನವನ್ನು ವಿನಿಯೋಗಿಸುವ ಆರ್ಥಿಕ ಜವಾಬ್ದಾರಿಯೂ ಅವನಿಗೆ ಸೇರಿತ್ತು. ತುರ್ತು ಸಂದರ್ಭಗಳ ಹೊರತಾಗಿ ಯಾವ ಸಮಯದಲ್ಲಿಯೂ ಸ್ಥಾನಾಚಾರ್ಯರು ದೇವಾಲಯದ ಆಸ್ತಿಪಾಸ್ತಿಗಳನ್ನು ಮಾರುವ ಅಥವಾ ಒತ್ತೆ ಇಡುವ ಕೆಲಸವನ್ನು ಮಾಡುವಂತಿರಲಿಲ್ಲ. ದೇವಸ್ಥಾನಗಳಿಗೆ ಸಂಬಂಧಿಸಿದಂತೆ ಸ್ಥಾನಾಚಾರ್ಯರದೇ ಪ್ರಥಮಾಧಿಕಾರವಾಗಿತ್ತು. ಈತನು ಶೈವ ಅಥವಾ ವೈಷ್ಣವ ಗುರುವೂ ಆಗಿ ತಪೋಧನನೂ ಆಗಿರುತ್ತಿದ್ದುದರಿಂದ ಗುರು ಅಥವಾ ಆಚಾರ್ಯ ಸ್ಥಾನವೂ ಜೊತೆಗೂಡಿ, ದೇವಸ್ಥಾನವೇ ಅವನ ಮಾತುಗಳಿಗೆ ಬದ್ಧವಾಗಿರುತ್ತಿತ್ತು. ಹೀಗೆ ಸ್ಥಾನಾಚಾರ್ಯರು ದೇವಸ್ಥಾನದ ವಿಷಯಗಳಿಗೆ ಸಂಬಂಧಿಸಿ ದಂತೆ ಪ್ರಮುಖ ಸ್ಥಾನದಲ್ಲಿದ್ದರು.

ಒಟ್ಟಾರೆಯಾಗಿ ಹಡಗಲಿಯಲ್ಲಿ ಶೈವ ದೇವಾಲಯಗಳು ಹೆಚ್ಚಾಗಿ ಕಂಡುಬರುತ್ತವೆ. ಇವುಗಳಲ್ಲಿ ಹೆಚ್ಚಾಗಿ ಕಲ್ಯಾಣ ಚಾಲುಕ್ಯರ ಆಡಳಿತಾವಧಿಯಲ್ಲಿಯೇ ಕಟ್ಟಲ್ಪಟ್ಟಿವೆ. ಕೆಲವು ಜೀರ್ಣೋದ್ಧಾರಗೊಂಡು ಅಭಿವೃದ್ಧಿಯನ್ನು ಹೊಂದಿವೆ. ಮುಂದೆ ವಿಜಯನಗರದ ಅರಸರ ಆಡಳಿತದ ಸಂದರ್ಭದಲ್ಲಿಯೂ ಶೈವ ದೇವಾಲಯಗಳು ನಿರ್ಮಾಣಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ಇಟಗಿ ಮತ್ತು ಬೂದನೂರು ಗ್ರಾಮಗಳಲ್ಲಿ ಕಲ್ಲೇಶ್ವರ ದೇವಾಲಯ, ಬೂದನೂರು, ಮಾಗಳ, ಮಾನ್ಯರಮಸಲವಾಡ, ಸೋಗಿಗಳಲ್ಲಿ ವೀರಭದ್ರೇಶ್ವರ ದೇವಾಲಯಗಳು, ಹೊಳಗುಂದಿಯಲ್ಲಿ ಮರುಳಸಿದ್ಧೇಶ್ವರ ದೇವಾಲಯ ಮತ್ತು ಮೈಲಾರದಲ್ಲಿ ಮೈಲಾರಲಿಂಗೇಶ್ವರ ದೇವಾಲಯ. ಹೀಗೆ ವಿಜಯನಗರದ ಅರಸರು ತಮ್ಮ ಕಾಲಾವಧಿಯಲ್ಲಿ ಶೈವ ಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿರುವುದನ್ನು ಕಾಣುತ್ತೇವೆ.

ಹಡಗಲಿಯಲ್ಲಿ ಶರಣ ಧರ್ಮವೂ ಪ್ರಚಲಿತದಲ್ಲಿತ್ತು ಎಂಬುದಕ್ಕೆ ಶಾಸನಗಳು ಮಾಹಿತಿಯನ್ನು ನೀಡಿವೆ. ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಕಾಯಕಜೀವಿಗಳು ಶರಣ ಧರ್ಮವನ್ನು ಹುಟ್ಟುಹಾಕಿದರು. ಬಳ್ಳಾರಿ ಪರಿಸರದಲ್ಲಿ ಕುರುಗೋಡು ಸಿಂಧರ ಕಾಲಕ್ಕೆ ಶರಣ ಧರ್ಮ ಹೆಚ್ಚು ಪ್ರಚಾರಕ್ಕೆ ಬಂದಿತು. ಇಲ್ಲಿಯ ಸಿಂಧ ಅರಸರು ಮತ್ತು ವ್ಯಾಪಾರಿಗಳು ಶರಣ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದರು. ಕುರುಗೋಡು ಶಾಸನ ಮಹಾವಡ್ಡ ವ್ಯವಹಾರಿಯನ್ನು ವಿಭೂತಿ ಕುಲಜಾತನೆಂದು ಕರೆದರೆ, ಕುರುವತ್ತಿಯ ಓಲೆಯ ಭರಿಸೆಟ್ಟಿಯ ಮಕ್ಕಳಾದ ಗುಡಯ್ಯ ಸೆಟ್ಟಿ, ಕರ್ಣಿಸೆಟ್ಟಿಯರು 'ಭಕ್ತಿಗೆ ಸಲ್ಲೋಲಪದಾಭರಣ ಜಂಗಮಲಿಂಗ ಪಾದಪ್ರಸಾದಕರು' ಎಂದು ಹೇಳಿಕೊಂಡಿದ್ದಾರೆ.[೧೧೦] ಹೀಗೆ ಶರಣ ಧರ್ಮವೂ ಕೂಡ ಈ ಪ್ರದೇಶದಲ್ಲಿ ಜನಪ್ರಿಯಗೊಂಡಿತ್ತೆಂದು ತಿಳಿಯಬಹುದಾಗಿದೆ.

ಈ ಹಡಗಲಿ ತಾಲೂಕಿನಲ್ಲಿ ದೊರೆತ ಶಾಸನಗಳ ಮೂಲಕ ಇಲ್ಲಿ ಶೈವ ಧರ್ಮವು ತನ್ನದೇ ಆದ ಒಂದು ನೆಲೆಯನ್ನು ಹೊಂದಿದ್ದು ಹಡಗಲಿ ಪ್ರದೇಶದಲ್ಲಿ ಬಹುಸಂಖ್ಯಾತರ ಧರ್ಮವಾಗಿತ್ತೆಂಬುದು ನಿರ್ವಿವಾದದ ಸಂಗತಿಯಾಗಿದೆ.

ಒಟ್ಟಾರೆಯಾಗಿ ಹಡಗಲಿಯ ಪ್ರಾಚೀನ ಸಂಸ್ಕೃತಿಯಲ್ಲಿ ಜೈನ, ವೈಷ್ಣವ ಮತ್ತು ಶೈವ ಧರ್ಮಗಳು ರಾಜಾಶ್ರಯ ಪಡೆದು ಬೆಳವಣಿಗೆ ಹೊಂದಿದವು. ಹಾಗೆಯೇ ಧಾರ್ಮಿಕವಾಗಿ ಸಂಪದ್ಭರಿತ ನಾಡಾಗಿತ್ತು ಎಂಬುದು ಇಲ್ಲಿನ ದೇವಾಲಯಗಳಿಂದ ಮತ್ತು ಧಾರ್ಮಿಕ ಸ್ಥಿತಿಗತಿಯನ್ನು ಪರಿಶೀಲಿಸಿದಾಗ ನಮಗೆ ಗೋಚರವಾಗುತ್ತದೆ.

### ೩.೪. ಸಾಮಾಜಿಕ ಸ್ಥಿತಿಗತಿ

ಅರಸರ ಮತ್ತು ಅರಸುಮನೆತನಗಳ ಆಗು-ಹೋಗುಗಳನ್ನು, ವೀರಕೃತ್ಯ ಮತ್ತು ಉದಾತ್ತ ಗುಣಗಳನ್ನು ಬಣ್ಣಿಸುವುದರೊಂದಿಗೆ ಆ ಕಾಲದ ರಾಜಕೀಯ ಚರಿತ್ರೆಯನ್ನು ವಿವರಿಸಲಾಗುತ್ತದೆ. ಆದರೆ ಆ ಕಾಲದ ಚರಿತ್ರೆ ಕೇವಲ ರಾಜರ ಚರಿತ್ರೆಯನ್ನು ಕಟ್ಟಿಕೊಡುವುದೊಂದೇ ಅಲ್ಲ. ಬದಲಾಗಿ ಆಯಾ ಕಾಲದ ಸಾಮಾನ್ಯ ಜನಜೀವನದ ಸಾಮಾಜಿಕ ಸ್ಥಿತಿಗತಿಗಳ ನಿರೂಪಣೆಯೂ ಕೂಡ ಚರಿತ್ರೆಯಲ್ಲಿ ಅಡಕವಾಗಿರಬೇಕು. ಅಂದಾಗ ಮಾತ್ರ ಒಂದು ರಾಜ್ಯದ ಒಟ್ಟಾರೆ ಚರಿತ್ರೆಯನ್ನು ಸಂಪೂರ್ಣವಾಗಿ ಕಟ್ಟಿಕೊಡಬಹುದಾಗಿದೆ. ಪ್ರತಿಯೊಂದು ಸಮಾಜವೂ ತನ್ನದೇ ಆದ ಒಂದು ಸಂಸ್ಕೃತಿಯನ್ನು ಹೊಂದಿರುತ್ತದೆ. ಜೊತೆಗೆ ಸಮಾಜ ಜೀವನವು ಒಂದು ವ್ಯವಸ್ಥೆಯ ನೆಲೆಯಲ್ಲಿಯೇ ಮುಂದುವರೆದಾಗ ಸಮಾಜವು ಮೌಲ್ಯಯುತವಾಗಿರುತ್ತದೆ ಎಂಬ ವಿಶ್ವಾಸ ಹೊಂದಿರುತ್ತದೆ. ಸಮಾಜದಲ್ಲಿರುವಂತಹ ಸಂಬಂಧಗಳು ಮಾನವನ ಒಟ್ಟಾರೆ ಜೀವನಕ್ಕೆ ಸಂಬಂಧಿಸಿರುತ್ತವೆ. ಮುಖ್ಯವಾಗಿ ಸಮಾಜವು ಮಾನವರೆಲ್ಲರನ್ನು ಕೂಡ ಒಂದುಗೂಡಿಸಿ ಸಮಾನತೆಯ ಆಧಾರದ ಮೇಲೆ ನಿಲ್ಲಿಸುವ ನಿರಂತರ ಪ್ರಯತ್ನ ಮಾಡುತ್ತದೆ. 'ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ

ಪ್ರಜ್ಞೆಯು ಎಚ್ಚೆತ್ತಿದ್ದಿತು ಎಂಬುದನ್ನು ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೆ ಇತರರಿಗಾಗಿಯೂ ಬಾಳಬೇಕೆಂಬ ಅರಿವು ಅವನಿಗೆ ಸಂಪೂರ್ಣವಾಗಿ ಇದ್ದಿತೆಂಬುದನ್ನು ತೋರಿಸುವುದೇ ಆಗಿದೆ.'[೧೧೧] ಈ ರೀತಿಯ ಆದರ್ಶವು ಪ್ರಾಚೀನ ಕರ್ನಾಟಕದಿಂದಲೂ ಮುಂದುವರೆದುಕೊಂಡು ಬಂದಿದೆ. ಭೌತಿಕ ಮತ್ತು ಭಾವನಾತ್ಮಕ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪಿತಗೊಳ್ಳುವ ಸಮಾಜವು ಮಾನವ ಕುಲದ ಸಾಂಸ್ಕೃತಿಕ ವಿಕಾಸಕ್ಕೆ ಅಗತ್ಯವಾದ ಬುನಾದಿಯನ್ನು ಕಲ್ಪಿಸಿಕೊಡುತ್ತದೆ. ಸಮಾಜವು ಮಾನವನಲ್ಲಿಯ ಮಾನವೀಯ ಮೌಲ್ಯಗಳನ್ನು ಜಾರಿಗೆ ತಂದು ಜನರನ್ನು ಒಂದುಗೂಡಿಸುವ ಕೆಲಸ ಮಾಡುತ್ತದೆ. ಒಂದು ಕುಟುಂಬವು ತನಗೆ ಏನು ಬೇಕು, ಏನು ಬೇಡ ಎಂಬುವುಗಳನ್ನು ಅರಿತುಕೊಂಡು ಅವುಗಳನ್ನು ಪೂರೈಸುವ ಮತ್ತು ನಿಯಂತ್ರಿಸುವ ಕೆಲಸ ಮಾಡಿದರೆ, ಸಮಾಜವು ಇಂತಹ ಹಲವು ಕುಟುಂಬಗಳ ಅಗತ್ಯತೆಗಳನ್ನು ನಿಯಂತ್ರಿಸುವ ಶಕ್ತಿಯಾಗಿ ಕಂಡುಬರುತ್ತದೆ. ಅಂದರೆ 'ಜನತೆಯ ಪರಸ್ಪರ ಸಂಬಂಧವುಳ್ಳ ಸುವ್ಯವಸ್ಥೆಯ ಸಮೂಹವನ್ನು ಸಮಾಜವೆನ್ನಬಹುದು.'[೧೧೨]

ಕರ್ನಾಟಕವು ಪ್ರಾಚೀನ ಕಾಲದಿಂದಲೂ ಒಂದು ಸುವ್ಯವಸ್ಥಿತ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡೇ ಬಂದಿದೆ. ಇಲ್ಲಿನ ಸಾಮಾಜಿಕ ವ್ಯವಸ್ಥೆ ಮತ್ತು ಆರ್ಥಿಕ ಜೀವನದ ಕುರಿತು ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣಗಳ ಕರ್ತೃವಾದ ಪಂಪನು ಬನವಾಸಿಯ ಜನಸಾಮಾನ್ಯರನ್ನು ಹೀಗೆ ಬಣ್ಣಿಸುತ್ತಾನೆ. 'ತ್ಯಾಗ, ಭೋಗ, ಪಾಂಡಿತ್ಯ, ಸಂಗೀತ, ಸಂಸ್ಕೃತಿ, ವಿದ್ವದ್ಗೋಷ್ಠಿ ಇತ್ಯಾದಿಗಳಿಗೆ ಆಗರವೆನಿಸಿರುವ ಜನ ಅಲ್ಲಿಯವರು. ಅಲ್ಲಿ ಮನುಷ್ಯರಾಗಿ ಹುಟ್ಟುವುದೇ ಕಠಿಣ; ಅದು ಅಸಾಧ್ಯವೆನಿಸಿದಲ್ಲಿ, ಕೊನೆಯ ಪಕ್ಷಕ್ಕೆ ಮರಿದುಂಬಿಯಾಗಿ, ಕೋಗಿಲೆಯಾಗಿಯಾದರೂ ಬನವಾಸಿ ದೇಶದಲ್ಲಿರುವ ಆ ನಂದನದಲ್ಲಿ ಹುಟ್ಟಬೇಕು.'[೧೧೩] ಇದು ಕೇವಲ ಆ ಕಾಲದ ಅಂದರೆ ಪಂಪನ ಕಾಲದ ಆದರ್ಶ ಮಾತ್ರವಲ್ಲ, ಬದಲಾಗಿ ಒಟ್ಟಾರೆ ಕನ್ನಡಿಗರ ಆದರ್ಶವೂ ಆಗಿದೆ. ಕರ್ನಾಟಕದ ಮತ್ತು ಇತರ ಭಾರತೀಯ ಜನಸಾಮಾನ್ಯರಿಗೆ ಚೈತನ್ಯವಿತ್ತ ಮಹೋನ್ನತ ಆದರ್ಶಗಳನ್ನು ಪಂಪನು ಇಲ್ಲಿ ಸಾರಾಂಶದ ರೂಪದಲ್ಲಿ ಹೇಳಿದ್ದಾನೆ ಎನ್ನಬಹುದು.

ಒಂದು ರಾಜ್ಯದ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳು ಸರಿಯಾದ ಕ್ರಮದಲ್ಲಿ ಸಾಗಬೇಕಾದರೆ ಅಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿನ ಕಾರ್ಯಚಟುವಟಿಕೆಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಸಾಮಾಜಿಕ ಸಂಘಟನೆಯು ಮಾನವನ ಸರ್ವತೋಮುಖ ಅಭಿವೃದ್ಧಿಗೆ ಪ್ರಮುಖ ಕಾರಣವಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಗ–ವರ್ಣ, ಕುಟುಂಬ, ಸಂಘ–ಸಂಸ್ಥೆಗಳು, ಅಲ್ಲಿನ ಜನರ ಆಚಾರ–ವಿಚಾರಗಳು, ಸಾಂಸ್ಕೃತಿಕ ಆಚರಣೆ, ಸಂಪ್ರದಾಯಗಳು ಇತ್ಯಾದಿ ಮುಖ್ಯ ಅಂಶಗಳು ಕಂಡುಬರುತ್ತವೆ. ಅಂದಿನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿನ ನಂಬಿಕೆಗಳು, ಆಚಾರ ವಿಚಾರಗಳು, ಸಂಪ್ರದಾಯಗಳು ಅಂದಿನ ಕಾಲಕ್ಕೆ ಒಪ್ಪಿತವಾಗಿರುತ್ತವೆ. ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಅವು ಬಹುಮುಖ್ಯ ಚರ್ಚೆಗೆ ಒಳಗಾಗುತ್ತಿವೆ. ಆದರೆ ಆ ಸಂಪ್ರದಾಯಗಳು

ಇಂದಿಗೂ ರೂಢಿಯಲ್ಲಿರುವುದನ್ನು ಕಾಣಲಾಗುತ್ತದೆ. ಜೊತೆಗೆ ಅಂದಿನ ರಾಜ್ಯವ್ಯವಸ್ಥೆಯ, ಸರ್ವಾಧಿಕಾರದ ಸಮಾಜದಲ್ಲಿ ಈ ಪದ್ಧತಿಗಳು ಅನಿವಾರ್ಯವಾಗಿದ್ದವು. ಈ ರೀತಿಯಾಗಿ ಅಂದಿನ ಕಾಲದ ಜನರ ಜೀವನ ಬಗ್ಗೆ ಬೆಳಕು ಬೀರಬಲ್ಲ ಪ್ರಮುಖ ಆಧಾರಗಳೆಂದರೆ ಅವು ಶಾಸನಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನಲ್ಲಿ ದೊರೆತ ಶಾಸನಗಳು ಆ ಭಾಗದ ಜನಜೀವನದ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಹೇಳುವ ಸಾಧನಗಳಾಗಿವೆ. ಇವು ಅಂದಿನ ಸಮಾಜ, ಜನಾಂಗ, ಧಾರ್ಮಿಕ ನಂಬಿಕೆಗಳು, ಆಚಾರ, ವಿಚಾರಗಳು ಹಾಗೂ ಜೀವನಕ್ರಮದ ಮೇಲೆ ಬೆಳಕು ಚೆಲ್ಲುತ್ತವೆ. ಒಟ್ಟಾರೆಯಾಗಿ ಸಾಮಾಜಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಹಡಗಲಿಯಲ್ಲಿ ದೊರೆತ ಶಾಸನಗಳನ್ನು ಆಧರಿಸಿ ಈ ಕೆಳಕಂಡ ಅಂಶಗಳನ್ನು ಚರ್ಚಿಸಲಾಗಿದೆ.

**ವರ್ಣ–ವರ್ಗ–ಜಾತಿ**

ಪ್ರಾಚೀನ ಕಾಲದ ಸಮಾಜವು ವರ್ಣಾಶ್ರಮದ ಮೇಲೆ ಬೆಳೆದದ್ದು ಎಂದು ಹೇಳಲು ಆಧಾರಗಳಿವೆ. ಆದರೆ ವರ್ಣವ್ಯವಸ್ಥೆ ಮೊದಲು ಹುಟ್ಟಿಕೊಂಡಿತೋ ಅಥವಾ ಜಾತಿವ್ಯವಸ್ಥೆ ಮೊದಲು ಹುಟ್ಟಿಕೊಂಡಿತೋ ಎಂಬುದಕ್ಕೆ ಹಲವಾರು ಜಿಜ್ಞಾಸೆಗಳಿವೆ. ವರ್ಣ ಎಂಬ ಶಬ್ದವು ಭಾಷೆ, ಮತ, ಧರ್ಮ, ಬಣ್ಣ, ಆಕಾರಗಳನ್ನು ಸೂಚಿಸುವ ಪದವಾಗಿದೆ. ವೈದಿಕ ಸಾಹಿತ್ಯದಲ್ಲಿ ವರ್ಣವ್ಯವಸ್ಥೆಯ ಉಗಮದ ಬಗ್ಗೆ ವಿವರವಿದೆ. ಋಗ್ವೇದದ ಪುರುಷಸೂಕ್ತದಲ್ಲಿ ಸಮಷ್ಟಿ ರೂಪನಾದ ಪುರುಷನ (ಪರಮಾತ್ಮನ) ಬಾಯಿಯಿಂದ ಬ್ರಾಹ್ಮಣ, ಭುಜಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದದಿಂದ ಶೂದ್ರರು ಜನಿಸಿದರೆಂದಿದೆ.[೧೧೪] ಇಲ್ಲಿ ಬ್ರಾಹ್ಮಣರು ಮುಖ್ಯವಾಗಿ ವೇದಾಧ್ಯಯನ, ಪಾಠ ಪ್ರವಚನದಲ್ಲಿ ತೊಡಗಬೇಕು, ಕ್ಷತ್ರಿಯ, ರಾಜನು ತನ್ನ ಶಕ್ತಿಯುಕ್ತಿಗಳಿಂದ ಪ್ರಜೆಗಳ, ರಾಜ್ಯದ ಸಂರಕ್ಷಣೆಯಲ್ಲಿ ತೊಡಗಬೇಕು. ವೈಶ್ಯರು, ವ್ಯಾಪಾರಿ ವರ್ಗದವರಾದ್ದರಿಂದ ಅವರ ಮುಖ್ಯ ಕಸುಬು ವ್ಯಾಪಾರ, ವಹಿವಾಟಿನಲ್ಲಿ ತೊಡಗಿರಬೇಕು. ಕೊನೆಯದಾಗಿ ಶೂದ್ರರು ವ್ಯವಸಾಯ, ಕೃಷಿ ಹಾಗೂ ಆಹಾರ ಉತ್ಪನ್ನಗಳನ್ನು ಬೆಳೆಯುವ ಕೆಲಸಗಳನ್ನು ಮಾಡಬೇಕೆಂದು ಹೇಳಲಾಗಿದೆ. ಇಲ್ಲಿ ಅವರವರ ಕಸುಬುಗಳ ಆಧಾರದ ಮೇಲೆ ಅವರವರ ಆಚಾರಗಳು ನಿರ್ಮಾಣವಾಗಿದ್ದವು. ಇಲ್ಲಿ ಮುಖ್ಯವಾಗಿ ಶೂದ್ರರನ್ನು ಹೊರತುಪಡಿಸಿ ಮಿಕ್ಕ ಮೂರು ವರ್ಗದವರು ತಮ್ಮ ವೃತ್ತಿಗಳನ್ನು ಬದಲಾಯಿಸಬಹುದಾಗಿತ್ತು. ಅಂದರೆ ಬ್ರಾಹ್ಮಣರು ರಾಜ್ಯಭಾರ ಮಾಡಬಹುದಾಗಿತ್ತು. ಅದೇ ರೀತಿ ಕ್ಷತ್ರಿಯರು ಕೂಡ. ವೈಶ್ಯರು ರಾಜಕೀಯದಲ್ಲಿ ಕಾರ್ಯನಿರ್ವಹಿಸಿದ ಉದಾಹರಣೆಗಳೂ ನಮಗೆ ಸಿಗುತ್ತವೆ. ಹೀಗೆ ಮಾಡಿಕೊಂಡಿರುವುದರ ಉದ್ದೇಶ ಮಾನವನ ವ್ಯಕ್ತಿತ್ವಕ್ಕೆ ಅನುಗುಣವಾಗಿ ಸಮಾಜದ ಏಳಿಗೆಯಾಗಿತ್ತು ಎನ್ನಬಹುದು. ಆದರೆ ಕಸುಬುಗಳು ಎಷ್ಟೇ ಬದಲಾದರೂ ಮೂಲಧರ್ಮಕ್ಕೆಂದೂ ಧಕ್ಕೆಯಾಗುತ್ತಿರಲಿಲ್ಲ. ಸಾಮಾಜಿಕ ವ್ಯವಸ್ಥೆಯನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಉನ್ನತ ವರ್ಗ, ಎರಡನೆಯದು ಮಧ್ಯಮ ವರ್ಗ ಮತ್ತು ಮೂರನೆಯದು ಕೆಳವರ್ಗ. ಇಲ್ಲಿ ಉನ್ನತ ವರ್ಗದಲ್ಲಿ ಪುರೋಹಿತರು, ರಾಜರು ಹಾಗೂ ವಿವಿಧ ಅಧಿಕಾರಿಗಳು ಹಾಗೆಯೇ ಮಹಾಜನರು, ಸ್ಥಾನಾಚಾರ್ಯರು, ರಾಜಗುರುಗಳು ಮತ್ತು ಜಿನಮುನಿಗಳು

ಕಂಡುಬರುತ್ತಾರೆ. ಮಧ್ಯಮ ವರ್ಗದಲ್ಲಿ ವ್ಯಾಪಾರಿ ವರ್ಗದವರು ಕಂಡುಬರುತ್ತಾರೆ. ಕೊನೆಯದಾಗಿ ಕೆಳವರ್ಗದಲ್ಲಿ ಶ್ರಮಿಕ ವರ್ಗ ಮತ್ತು ಅನೇಕ ವೃತ್ತಿಗಳನ್ನು ಒಳಗೊಂಡ ಜನಸಾಮಾನ್ಯರು ಕಂಡುಬರುತ್ತಾರೆ. ಮುಖ್ಯವಾಗಿ ಇಲ್ಲಿ ವ್ಯಾಪಾರಿ ವರ್ಗವು ಮೇಲ್ವರ್ಗ ಮತ್ತು ಕೆಳವರ್ಗಗಳ ನಡುವೆ ಸಮತೋಲನವನ್ನು ಕಾಯ್ದುಕೊಂಡು ಬಂದಿದೆ. ಮೊದಲನೆಯದಾಗಿ ಮೇಲ್ವರ್ಗದಲ್ಲಿನ ಮತ್ತು ಸಾಮಾಜಿಕ ಸಂಘಟನೆಯಲ್ಲಿ ಉನ್ನತ ಸ್ಥಾನದಲ್ಲಿ ಗುರುತಿಸಿಕೊಂಡಿರುವ ಮಹಾಜನರು, ಸ್ಥಾನಾಚಾರ್ಯರು, ರಾಜಗುರುಗಳು ಮತ್ತು ಜಿನಮುನಿಗಳ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ.

**ಮಹಾಜನರು**

ಸಮಾಜ ವ್ಯವಸ್ಥೆಯಲ್ಲಿ ಮಹಾಜನರು ಹೆಚ್ಚಿನ ಗೌರವ ಹಾಗೂ ಸಾಮಾಜಿಕ ಸೌಲಭ್ಯಗಳನ್ನು ಅನುಭವಿಸುತ್ತಿದ್ದರು. ಇವರು ಇತರ ಜಾತಿಯವರಿಗಿಂತ ಹೆಚ್ಚಿನ ಅಂತಸ್ತಿನವರು ಮತ್ತು ಅಗ್ರಸ್ಥಾನವನ್ನು ಹೊಂದಿದವರು ಎಂದು ಪರಿಗಣಿಸಲ್ಪಟ್ಟಿದ್ದರು. ಇವರು ಬ್ರಾಹ್ಮಣರಾಗಿದ್ದರು. ಆದಿಕವಿ ಪಂಪನು ತನ್ನ ಪಂಪಭಾರತದಲ್ಲಿ 'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರ ಕುಲಂಗೆ ನಂಬಲೇ! ಮಾತೊ ಜಿನೇಂದ್ರ ಧರ್ಮವೆವಲಂ ದೊರೆ ಧರ್ಮದೊಳೆಂದು ತ! ಜಾತಿಯನುತ್ತರೋತ್ತರಮ ಮಾಡಿ ನೆಗಳ್ಚಿದನಿಂತಿರಾತ್ಮವಿ। ಖ್ಯಾತಿಯನಾಂತನಾತನ ಮಗಂ ನೆಗಳ್ದಂ ಕವಿತಾಗುಣಾರ್ಣವಂ॥' ಒಟ್ಟಾರೆಯಾಗಿ ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂಬುದು ಪಂಪನ ಹೇಳಿಕೆಯಾಗಿದೆ.[೧೧೫] ಇವರು ವಿದ್ಯಾಕ್ಷೇತ್ರದಲ್ಲಿ ಅಪರಿಮಿತವಾದ ಸಾಧನೆಯನ್ನು ಮಾಡಿದ್ದರು. ಯಜನ, ಯಾಜನ, ಪೂಜೆ ಪುನಸ್ಕಾರ, ಅಧ್ಯಯನ–ಅಧ್ಯಾಪನ, ಪ್ರತಿಗ್ರಹಣ ಇವು ಅವರ ಮುಖ್ಯ ಕರ್ತವ್ಯಗಳಾಗಿದ್ದವು. ಯಾಗವನ್ನು ಮಾಡುವುದು, ಮಾಡಿಸುವುದು, ಜೀವಿಸುವುದು, ಓದುವುದು, ದಾನ ಮಾಡುವುದು ಮತ್ತು ಸ್ವೀಕರಿಸುವುದು ಅವುಗಳನ್ನು ಷಟ್ಕರ್ಮಗಳೆಂದು ಕರೆಯಲಾಗಿದೆ.[೧೧೬] ಹಾಗಾಗಿ ಬ್ರಾಹ್ಮಣರನ್ನು ಶಾಸನಗಳು 'ಷಟ್ಕರ್ಮನಿರತರು'[೧೧೭] ಎಂದು ಬಣ್ಣಿಸುತ್ತವೆ. ಹೊಳಲು ಗ್ರಾಮದ ವೀರಭದ್ರ ದೇವಸ್ಥಾನದ ಆವರಣದೊಳಗೆ ನಿಲ್ಲಿಸಿರುವ ಶಾಸನವು ಗಂಡರಾದಿತ್ಯ ಪೊಳಲ ಗ್ರಾಮದ ಮಹಾಜನರು ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದರು ಎಂಬುದಾಗಿ ತಿಳಿಸುತ್ತದೆ.[೧೧೮] ಬ್ರಾಹ್ಮಣರಿಗೆ ಊರುಗಳನ್ನು ಅಗ್ರಹಾರಗಳನ್ನಾಗಿ ಮಾಡಿ ದಾನ ಕೊಡುತ್ತಿದ್ದರು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನಲ್ಲಿ ಹಿರೇಹಡಗಲಿ, ಹೂವಿನಹಡಗಲಿ, ಕುರುವತ್ತಿ, ಹೊಳಲು ಮತ್ತು ಮಾಗಳ ಗ್ರಾಮಗಳು ಅಗ್ರಹಾರಗಳಾಗಿದ್ದವು. ಮಗಿಮಾವಿನಹಳ್ಳಿ ಗ್ರಾಮದಲ್ಲಿನ ವೀರಣ್ಣ ದೇವಸ್ಥಾನದ ಮುಂದಿನ ಶಾಸನವು ಅಳಿಯ ರಾಮರಾಜನ ಮಗಳಾದ ತಿರುಮಲ್ಲಮ್ಮನಿಗೆ ಪುಣ್ಯವಾಗಲೆಂದು ಹೊಸ ಗ್ರಾಮವಾದ ಚಿಕ್ಕ–ತಿಮ್ಮಾಪುರ ಅಗ್ರಹಾರವನ್ನು ಸ್ಥಾಪಿಸಿದ್ದನ್ನು ತಿಳಿಸುತ್ತದೆ.[೧೧೯] ಇದು ವಿಜಯನಗರ ಅರಸರ ಕಾಲದ್ದಾಗಿದೆ. ರಾಜರು ತಮ್ಮ ಮಕ್ಕಳಿಗೆ ಪುಣ್ಯ ದೊರೆಯಲೆಂದು ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಹಾಗೆಯೇ ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ ತಿಮ್ಮಾಪುರ ಎಂಬ ಅಗ್ರಹಾರದ ಪ್ರಮುಖ ನಿವಾಸಿಯಾದ ಉಪ್ಪಾರ ಗೋವಿಂದಯ್ಯನನ್ನು

ಉಲ್ಲೇಖಿಸುತ್ತದೆ.[೧೨೦] ನಂದಿಹಳ್ಳಿ ಗ್ರಾಮದ ಹೊಲದಲ್ಲಿ ನಿಲ್ಲಿಸಿರುವ ಶಾಸನವು ಕೊಟೂರ-ಸೀಮೆಯಲ್ಲಿರುವ ಗೋಪಿನಾಥಪುರವೆಂದು ಉಪನಾಮ ಹೊಂದಿರುವ ವೊಳಲಗುಂದಿ ಭಯಿರಾಪುರ ಗ್ರಾಮವನ್ನು ಬಯಕಾರ ರಾಮಪ್ಪಯ್ಯನು ಸ್ಥಾಪಿಸಿದ ತಿಮಲಾಪುರ ಅಗ್ರಹಾರದ ಉಲ್ಲೇಖವಿದೆ.[೧೨೧] ರಂಗಾಪುರದ ನರಸಿಂಹ ದೇವಸ್ಥಾನದಲ್ಲಿನ ಶಾಸನವು ರಾಣಿ ಪದುಮಲದೇವಿಯು ಮಾಂಗೋಳ ಅಗ್ರಹಾರವನ್ನು ಆಳುತ್ತಿದ್ದಳು ಎಂಬ ಉಲ್ಲೇಖವನ್ನು ಹೊಂದಿದೆ.[೧೨೨] ಹೂವಿನಹಡಗಲಿಯ ಪಾಂಡುರಂಗ ದೇವಾಲಯದ ಆವರಣದಲ್ಲಿರುವ ಶಾಸನವು ವಿಷ್ಣುವರ್ಧನ ವಿಜಯಾದಿತ್ಯನು ಕಲಿದೇವರ ಸೇವೆಗಾಗಿ ದಾನ ನೀಡಿದ್ದನ್ನು ತಿಳಿಸುತ್ತದೆ. ವಿಜಯಾದಿತ್ಯನ ಆಳ್ವಿಕೆಯಲ್ಲಿ ಆತನ ಮಾಂಡಲಿಕ ಘಟ್ಟಿಯರಸ ಮತ್ತು ಮಲ್ಲಪ್ಪರಸನು ಪೂಲಿಯಕೆರೆಯ ಮನ್ನೆಯವನ್ನು ಕಲಿದೇವರಿಗೆ ಬಿಟ್ಟುಕೊಟ್ಟನು.[೧೨೩] ಹಾಗೆಯೇ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿನ ಮೋರಗೇರಿ, ಅಂಬಳಿಗಳು ಮತ್ತು ಹರಪನಹಳ್ಳಿ ತಾಲೂಕಿನ ಬಾಗಳಿ, ಬೆಣ್ಣೆಹಳ್ಳಿ, ತೆಲಗಿಗಳು ಪ್ರಮುಖ ಅಗ್ರಹಾರಗಳಾಗಿದ್ದವು. ಬ್ರಾಹ್ಮಣರು ವೇದಾಧ್ಯಯನದಲ್ಲಿ ನಿರತರಾಗಲು ಬ್ರಹ್ಮಪುರಿಗಳಿದ್ದವು. ಕುರುವತ್ತಿಯಲ್ಲಿ ಬ್ರಹ್ಮಪುರಿ ಇತ್ತು ಎಂಬುದು ತಿಳಿದುಬರುತ್ತದೆ. ಹಿರೇಹಡಗಲಿಯಲ್ಲಿನ ಶಾಸನವು "ಚಾತುರ್ವ್ವೇದ ಚತುರ್ಮ್ಮುಖ ರ್ಸ್ಸಕಲಶಾಸ್ತ್ರ ಪ್ರೌಢವಾಣಿ ಸಮಸದವಾ ತಂತ್ರರ್ವ್ವರಾದಾಯಕ ಪ್ರಕಟಿತ ಪ್ರಖ್ಯಾತಕೀರ್ತ್ತಿ ದ್ವಜಭ್ರೂರ್ತ ಬ್ರಾತಸುರಕ್ಷಣಾನ್ವಿತಲಸದೃಷ ಪ್ರಭರ್ಮರ್ತ್ಯ ಮಾಂಧಾ ತಸೌಖ್ಯ" ಎಂದು ಕರೆದಿದೆ.[೧೨೪] ಹಡಗಲಿಯ ರಂಗಾಪುರ ಗ್ರಾಮದಲ್ಲಿನ ನರಸಿಂಹ ದೇವಾಲಯದಲ್ಲಿನ ಒಂದು ಶಾಸನದಲ್ಲಿ ಚಾಲುಕ್ಯ ರಾಜ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ರಾಣಿ ಪದುಮಲದೇವಿಯು ಮಾಂಗೋಳ ಅಗ್ರಹಾರವನ್ನು ಆಳುತ್ತಿರುವಾಗ ಶೂರರೂ, ಧರ್ಮಾಭಿಮಾನಿಗಳೂ ಮತ್ತು ವಿದ್ಯಾವಂತರಾದ ೨೦೦ ಮಹಾಜನಗಳು ಆಕೆಯ ಆಳ್ವಿಕೆಯಲ್ಲಿ ಸುಖ ಸಂತೃಪ್ತಿಯನ್ನು ಪಡೆದರು. ಹಾಗೆಯೇ ಬಿದರಪಳ್ಳಿಯ ೧೨೦ ಮಹಾಜನಗಳು ನರಸಿಂಹದೇವರ ಸೇವಾಕಾರ್ಯಕ್ಕಾಗಿ ೨೫ ಗದ್ಯಾಣವನ್ನು ದಾನ ಮಾಡಿದರು ಎಂಬ ಉಲ್ಲೇಖವಿದೆ.[೧೨೫] ಈ ಶಾಸನವು ಕ್ರಿ.ಶ.೧೧೧೬ರ ಕಾಲದ್ದಾಗಿದೆ.

ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಅನೇಕ ಬ್ರಾಹ್ಮಣರು ಆಡಳಿತದಲ್ಲೂ ತಮ್ಮ ಪಾರಮ್ಯವನ್ನು ಮೆರೆದಿದ್ದರು. ಇವರು ಗಾವುಂಡ, ಊರೊಡೆಯ, ಸೇನಾಪತಿ, ದಂಡನಾಯಕ, ಮಹಾಪ್ರಧಾನರಂತಹ ಕಾರ್ಯಗಳನ್ನು ಮಾಡುತ್ತಿದ್ದರು ಮತ್ತು ಆ ಹುದ್ದೆಗಳನ್ನು ಸಮರ್ಥವಾಗಿ ನಿಭಾಯಿಸುತ್ತಿದ್ದರು. ೧೧ನೆಯ ಶತಮಾನದಲ್ಲಿ ಬ್ರಾಹ್ಮಣರು, ವೈಶ್ಯರನ್ನು ತಮಗಾಗಿ ವ್ಯಾಪಾರ ಮಾಡುವಂತೆ ನೇಮಿಸಿ, ಬಟ್ಟೆ ಹಾಗೂ ಅಡಕೆಯ ವ್ಯಾಪಾರವನ್ನು ನಡೆಸುತ್ತಿದ್ದರು. ಬ್ರಾಹ್ಮಣರಿಗೂ, ದೇವಸ್ಥಾನಗಳಿಗೂ ಕೊಟ್ಟ ಭೂದಾನಗಳಲ್ಲಿ ಹಲವಕ್ಕೆ ಕಂದಾಯ ಮಾನ್ಯವಾಗಿತ್ತು. ಮರಣ ದಂಡನೆಯನ್ನು ಬ್ರಾಹ್ಮಣರಿಗೆ ವಿಧಿಸುವಂತಿರಲಿಲ್ಲ. ನ್ಯಾಯವಿಧಿಯ ಉಗ್ರಶಿಕ್ಷೆಯನ್ನು ಅವರಿಗೆ ಕೊಡುತ್ತಿರಲಿಲ್ಲವೆಂಬುದನ್ನು ಮತ್ತು ಬ್ರಹ್ಮಹತ್ಯೆಯು ಮಹಾಪಾತಕವೆಂದು ಪರಿಗಣಿಸಲ್ಪಟ್ಟಿತ್ತು ಎಂಬ ವಿಷಯಗಳನ್ನು ಅಲ್‌ಬರೂನಿ ದೃಢಪಡಿಸಿದ್ದಾನೆ.[೧೨೬] ಹೂವಿನಹಡಗಲಿಯ ಕೇಶವ ದೇವಾಲಯದ

ಪಶ್ಚಿಮ ದಿಕ್ಕಿನ ಪ್ರವೇಶದ್ವಾರದ ಬಳಿ ಇರುವ ಶಾಸನ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ ಶೂರ ಬ್ರಾಹ್ಮಣನಾದ ರವಿಗ ಅಥವಾ ರವಿದೇವನು ಸೇನಾಪತಿಯಾಗಿದ್ದನು. ಈತನು ಬಿಳಿಯ ಛತ್ರಿ, ಚಾಮರ, ಪಾವುಡಂಬರ ಮತ್ತು ಕುರುಳಕೊಂತಗಳೆಂಬ ರಾಜಮರ್ಯಾದೆಗಳನ್ನು ಪಡೆದಿದ್ದನು. ಈತನು ಯಾವ ನಾಯಕನಿಗೂ ಸರಿಸಾಟಿಯಿಲ್ಲದವನಾಗಿದ್ದು ಸಂಧಿವಿಗ್ರಹಿ ಮತ್ತು ಚಾಲುಕ್ಯ ರಾಜ್ಯ ಮೂಲಸ್ತಂಭವಾಗಿ, ಹಿಮಾಲಯ ಮತ್ತು ಸೇತುವಿನ ಮಧ್ಯೆ ರಾಜನ ಆದೇಶವನ್ನು ನೀಡುತ್ತಿದ್ದನು. ನರ್ಮದ, ಗಂಗಾ ಮತ್ತು ಜಮುನಾ ನದಿಯ ದಂಡೆಯ ಮೇಲೆ ಅನೇಕ ಸುರಾಲಯಗಳನ್ನು ಹಾಗೂ ಅಲ್ಲಲ್ಲಿ ಸಂಜೆ ಮಠಗಳನ್ನು ಸ್ಥಾಪಿಸಿದನು ಎಂಬ ಉಲ್ಲೇಖಗಳು ಕಂಡುಬರುತ್ತವೆ.[೧೨೭] ಬ್ರಾಹ್ಮಣರು ದಂಡನಾಯಕರಾಗಿ ಮತ್ತು ಮಂತ್ರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು ಎಂಬುದಕ್ಕೆ ಮಾಗಳದ ವೇಣುಗೋಪಾಲ ದೇವಸ್ಥಾನದಲ್ಲಿನ ಶಾಸನವು ವಿವರ ನೀಡುತ್ತದೆ. ಈ ಶಾಸನವು ಬ್ರಾಹ್ಮಣ ದಂಡನಾಯಕ ಮತ್ತು ಮಂತ್ರಿಯಾದ 'ಮಾಧವ'ನನ್ನು 'ವೀರಯೋಧ'ನೆಂದು ಹೊಗಳಿದೆ.[೧೨೮] ಹಾಗೆಯೇ ಇದೇ ಗ್ರಾಮದ ಸೂರ್ಯ ನಾರಾಯಣ ದೇವಸ್ಥಾನದಲ್ಲಿನ ಶಾಸನವು ರಾಜ್ಯದ ಅರಸನಾದ ಹೊಯ್ಸಳ ದೊರೆ ಎರಡನೇ ವಿಷ್ಣುವರ್ಧನ ವೀರಬಲ್ಲಾಳನ ಭಂಡಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಬ್ರಾಹ್ಮಣ ಸಿಂಗಮಯ್ಯ ಮತ್ತು ಮಾಂಗೋಳದ ಮಹಾಜನರನ್ನು ಉಲ್ಲೇಖಿಸುತ್ತದೆ.[೧೨೯] ಹಾಗೆಯೇ ಮೈಲಾರ ಗ್ರಾಮದ ಮೈಲಾರ ದೇವಸ್ಥಾನದಲ್ಲಿನ ಒಂದು ಶಾಸನವು ಮಯಿಲಾರ ದೇವರ ಭಂಡಾರದ ಅಧಿಕಾರಿಯಾದ ಗಂಗಯ್ಯನನ್ನು ಉಲ್ಲೇಖಿಸುತ್ತದೆ.[೧೩೦] ಕೊಟ್ನಕಲ್ ಗ್ರಾಮದಲ್ಲಿನ ಕೋಟೇಶ್ವರ ದೇವಸ್ಥಾನದಲ್ಲಿನ ಒಂದು ಶಾಸನವು ಕೌರವ ಗ್ರಾಮದಲ್ಲಿ ೫೦೦ ಜನ ಮಹಾಜನರು ಇದ್ದರು ಎಂದು ತಿಳಿಸುತ್ತದೆ. ಕುರುವತ್ತಿ ಶಾಸನವು ೨೦೦ ಮಂದಿ ಮಹಾಜನರು ಇದ್ದರು ಎಂದು ತಿಳಿಸುತ್ತದೆ.[೧೩೧] ಬ್ರಾಹ್ಮಣನು ವೀರ ಸೇನಾಪತಿಯಾಗಿ, ನಾಯಕನಾಗಿ, ಸಂಧಿವಿಗ್ರಹಿಯಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದನು ಎಂದರೆ ಈತನು ಯಾವ ಕೆಲಸಗಳೇ ಇದ್ದರೂ ಅದನ್ನು ನಿರ್ವಹಿಸಬಲ್ಲ ತೀಕ್ಷ್ಣತೆ ಚಾತುರ್ಯ ಪಡೆದಿದ್ದನೆಂಬುದು ತಿಳಿದುಬರುತ್ತದೆ. ಬ್ರಾಹ್ಮಣರಿಗೆ ವಿಶಿಷ್ಟವಾದ ಕುಲಗೋತ್ರಗಳು ಇದ್ದವು. ಋಷಿಗಳಿಂದ ಬಂದ ಇವರ ಗೋತ್ರ ಮೊದಲು ಏಳು, ಅನಂತರ ನಾಲ್ವರು ಋಷಿಗಳಿಂದ ಹದಿನೆಂಟು ಗೋತ್ರಗಳು ಹುಟ್ಟಿಕೊಂಡವು. ಗೋತ್ರಗಳು ಒಂದೇ ಆಗಿದ್ದರೆ ಅವರಲ್ಲಿ ವಿವಾಹವಾಗುತ್ತಿರಲಿಲ್ಲ. ಮುಖ್ಯವಾಗಿ ಬಳ್ಳಾರಿ ಜಿಲ್ಲೆಯಲ್ಲಿನ ಶಾಸನಗಳು ಕಶ್ಯಪ, ಕೌಶಿಕ, ಶಾಂಡಿಲ್ಯ, ವಾಜಿ, ಗೌತಮ, ವತ್ಸ, ಭಾರಧ್ವಾಜ, ವಶಿಷ್ಟ, ವಿಶ್ವಾಮಿತ್ರ, ಅತ್ರೆಯ, ಹರಿತೆ ಮೊದಲಾದ ಗೋತ್ರಗಳನ್ನು ಉಲ್ಲೇಖಿಸುತ್ತವೆ.[೧೩೨]

ಹೀಗೆ ಮಹಾಜನರು ಹಲವಾರು ಧಾರ್ಮಿಕ ಆಚರಣೆಗಳಿಗೆ ತಮ್ಮನ್ನು ತಾವು ತೊಡಗಿಸಿ ಕೊಂಡಿದ್ದರು. ಸಾಮಾಜಿಕವಾಗಿ ಬ್ರಾಹ್ಮಣರು ಎಲ್ಲರಿಂದಲೂ ಗೌರವಿತರಾಗಿದ್ದರು. ಶಾಸನವೊಂದು

ಇವರನ್ನು 'ಕ್ಷತ್ರಿಯ ವೈಶ್ಯ ಶೂದ್ರತಯ ಲಲಾಟ ಘಟಿತರುಂ' ಎಂದು ಕರೆದಿದೆ.[೧೩೩] ದೇವಾಲಯಗಳಿಗೆ ಇತರರು ದಾನ ದತ್ತಿಗಳನ್ನು ನೀಡುವಾಗ ಮಹಾಜನರು ಅವರಿಗೆ ಧರ್ಮದರ್ಶಿಗಳಾಗಿರುತ್ತಿದ್ದರು. ಒಟ್ಟಾರೆ ಇವರು ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿಷ್ಠೆಯನ್ನು ಗೌರವವನ್ನು ಪಡೆದಿದ್ದರು ಎಂಬ ವಿಷಯಗಳು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತವೆ.

ಮಹಾಜನರ ನಂತರದ ಸ್ಥಾನದಲ್ಲಿ ಶೈವ ಸಂಪ್ರದಾಯದಲ್ಲಿನ ಪಾಶುಪತ ಕಾಳಾಮುಖ ಪಂಥಕ್ಕೆ ಸೇರಿದ ದೇವಸ್ಥಾನ ಅಥವಾ ಮಠಗಳ ಆಚಾರ್ಯರಾದ ಸ್ಥಾನಾಚಾರ್ಯರು ಕಂಡುಬರುತ್ತಾರೆ. ಇವರ ವಿಷಯಗಳ ಕುರಿತಾದ ಸಂಪೂರ್ಣವಾದ ಮಾಹಿತಿಯನ್ನು ಈ ಹಿಂದೆಯೇ ನೋಡಲಾಗಿದೆ. ಇವರು ದೇವಾಲಯದ ಪೂಜೆ, ಪುನಸ್ಕಾರ, ಪರ್ವ, ಪವಿತ್ರಗಳೊಂದಿಗೆ ಅಲ್ಲಿ ಓದುವ ತಪೋಧನರ, ಛಾತ್ರರ ವಸತಿ, ಊಟೋಪಚಾರದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಸ್ಥಾನಾಚಾರ್ಯರು ಶೈವ ಮತ್ತು ವೈಷ್ಣವ ಪಂಥದ ದೇವಾಲಯಗಳಿಗೆ ಆಚಾರ್ಯರಾಗಿದ್ದರು. ಹಾಗೆಯೇ ಜೈನಬಸದಿಗಳಿಗೆ ಜಿನಮುನಿಗಳು ಇರುತ್ತಿದ್ದರು. ಇವರಿಗೆ ಸ್ಥಾನಾಚಾರ್ಯರ ನಂತರದ ಸ್ಥಾನವಿರುತ್ತಿತ್ತು. ಆದರೆ ಬಳ್ಳಾರಿ ಪರಿಸರದಲ್ಲಿ ಜೈನಬಸದಿ ಮತ್ತು ಜೈನಮುನಿಗಳ ಉಲ್ಲೇಖವಿರುವ ಶಾಸನಗಳು ತುಂಬಾ ಕಡಿಮೆ. ಆದರೂ ಹಡಗಲಿ ತಾಲೂಕಿನ ಹೊಳಗುಂದಿ ಗ್ರಾಮದಲ್ಲಿನ ಶಾಸನದಲ್ಲಿ ನಾಗಚಂದ್ರ ಭಟಾರಕನು 'ಮಾರಮದೇಭಕೇಸರಿಗಳಾಗಮ ಕೋವಿದರಾತ್ಮ ತತ್ವವಿಸ್ತಾರ ವಿಶಾರದರ್ಸಕಳಸಂಯಮ ಸಾರರಶೇಷಭವ್ಯನಿಸ್ತಾರಕರೆಂದು' ಪ್ರಸಿದ್ಧನಾಗಿದ್ದನು.[೧೩೪] ಹೀಗೆ ಜೈನಮುನಿಗಳ ಬಗ್ಗೆ ಶಾಸನಗಳು ವಿವರಿಸಿರುವುದನ್ನು ಕಾಣುತ್ತೇವೆ. ಆದರೆ ಜೈನರಿಗೆ ಸಂಬಂಧಿಸಿದ ಬಸದಿಗಳು ಕಂಡುಬರುತ್ತಿಲ್ಲ.

ರಾಜ್ಯದ ಹಾಗೂ ದೇಶದ ಒಳಗೆ ಮತ್ತು ಹೊರಗೆ ವಿಪುಲವಾದ ವ್ಯಾಪಾರವನ್ನು ಕೈಗೊಂಡವರು ವೈಶ್ಯರು. ಅವರೇ ವ್ಯಾಪಾರಿ ವರ್ಗದವರು. ಸಾಮಾಜಿಕ ಚಟುವಟಿಕೆಗಳಲ್ಲಿ ಮತ್ತು ಆಡಳಿತ ಯಂತ್ರದಲ್ಲಿ ವರ್ತಕರ ಪಾತ್ರ ಪ್ರಮುಖವಾದುದು. ವರ್ಗವ್ಯವಸ್ಥೆಯಲ್ಲಿ ಇವರದು ಮೂರನೆಯ ವರ್ಗವಾಗಿದೆ. ಈ ವೈಶ್ಯ ಪದಕ್ಕೆ ಸಂವಾದಿಯಾಗಿ 'ಶೆಟ್ಟಿ' ಅಥವಾ 'ಸೆಟ್ಟಿ' ಕೋಮಟಿ, ನಾನಾದೇಶಿ, ವಡ್ಡವ್ಯವಹಾರಿ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಬುದ್ಧಿ, ಚಾತುರ್ಯ, ಕೌಶಲ ಮತ್ತು ಅವರ ನಡತೆ ಹಾಗೂ ವ್ಯಾಪಾರ ಇವುಗಳಿಂದಾಗಿ ಸಮಾಜದಲ್ಲಿ ಅವರಿಗೆ ವಿಶಿಷ್ಟ ಪ್ರಾಮುಖ್ಯತೆ ಇರುತ್ತಿತ್ತು. ಇವರು ಹಲವಾರು ದೇವಾಲಯಗಳಿಗೆ ದಾನಗಳನ್ನು ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಹಡಗಲಿಯ ಹೊಳಲು ಗ್ರಾಮದಲ್ಲಿರುವ ವೀರಭದ್ರ ದೇವಸ್ಥಾನದ ಪಶ್ಚಿಮ ಗೋಡೆಯ ಮೇಲಿರುವ ಶಾಸನದಲ್ಲಿ ಗಂಡರಾದಿತ್ಯನ ಚತುರ್ವೇದಿ ಮಂಗಲ ಗ್ರಾಮದ ೧೨೦ ಮಹಾಜನರು, ತೆಲ್ಲಿಗರು, ಮುಮ್ಮರಿದಂಡಗಳು ಮತ್ತು ಶೆಟ್ಟಿಗಳೊಡಗೂಡಿ ಗವರೇಶ್ವರ ದೇವರ ಸೇವೆಗೆ ಭೂಮಿಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೧೩೫]

ಹೀಗೆ ಹೊಳಲು ಗ್ರಾಮದಲ್ಲಿನ ವೀರಭದ್ರೇಶ್ವರ ದೇವಾಲಯದ ಶಾಸನದಲ್ಲಿ ವ್ಯಾಪಾರಿಗಳು ಗವರೇಶ್ವರ ದೇವರ ದೇವಸ್ಥಾನಕ್ಕೆ ಭೂಮಿ ದಾನ ನೀಡಿದ್ದನ್ನು ದಾಖಲಿಸಲಾಗಿದೆ. ಮಾಗಳದ ವೇಣುಗೋಪಾಲ ದೇವಸ್ಥಾನದಲ್ಲಿನ ಶಾಸನವು ಮಹಾವಡ್ಡ ವ್ಯವಹಾರಿ ವಾಸುದೇವ ನಾಯಕನು ಗೋಪಾಲದೇವರ ಸೇವೆಗೆ ಹೂವಿನ ತೋಟಕ್ಕಾಗಿ ಎರಡು ಗದ್ಯಾಣಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೧೩೬] ಶೆಟ್ಟಿಗಳು ತಾವು ನೀಡುವ ಹೆಜ್ಜುಂಕ ತೆರಿಗೆಯನ್ನು ದಾನವಾಗಿ ನೀಡಿರುವ ಉಲ್ಲೇಖ ಕುರುವತ್ತಿಯ ಶಾಸನದಲ್ಲಿ ದೊರೆಯುತ್ತದೆ. ಕುರುವತ್ತಿಯ ಕಲ್ಲೇಶ್ವರ ದೇವಸ್ಥಾನದ ಒಂದು ತೊಲೆಯ ಮೇಲಿನ ಶಾಸನದಲ್ಲಿ ಅಯ್ಯಾವಳೆ ಐನೂರು ಸ್ವಾಮಿಗಳು, ನಾನಾದೇಶಿಗಳು, ಶೆಟ್ಟಿಗಳು ಮುಂತಾದವರು ಕುರುವತ್ತಿಯಲ್ಲಿ ಸಭೆ ಸೇರಿ ಅಹವಮಲ್ಲೇಶ್ವರ ದೇವರ ಪೂಜೆಗೆ ಲೋಕಾಭರಣ ಮುನಿಗೆ ಹೆಜ್ಜುಂಕ ತೆರಿಗೆಯ ಒಂದು ಭಾಗವನ್ನು ದಾನವಾಗಿ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಹಾಗೆಯೇ ಅದೇ ದೇವಸ್ಥಾನದ ಇನ್ನೊಂದು ತೊಲೆಯ ಮೇಲೆ ಇಬ್ಬರು ಸೆಟ್ಟಿ ಸಹೋದರರಾದ ಗುಡಯ್ಯಸೆಟ್ಟಿ ಮತ್ತು ಕರ್ಣಿಸೆಟ್ಟಿ ಅವರು ಅಹವಮಲ್ಲೇಶ್ವರ ದೇವಸ್ಥಾನಕ್ಕೆ ಭೂಮಿಯನ್ನು ಕ್ರಯಕ್ಕೆ ತೆಗೆದುಕೊಂಡು ದಾನ ನೀಡಿದ್ದನ್ನು ದಾಖಲಿಸುತ್ತದೆ.[೧೩೭] ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಕಂಬದ ಮೇಲಿನ ಶಾಸನದಲ್ಲಿ ನಾನಾದೇಶಿ ಮಲೆಯಾಳ-ಪೊರಯಚ್ಚ ಸೆಟ್ಟಿಯು ತನಗೆ ಮತ್ತು ತನ್ನ ತಮ್ಮ ಕುಮಾರಚ್ಚ ಸೆಟ್ಟಿಗೆ ಪುಣ್ಯವಾಗಲೆಂದು ೭೦೦ ಕಮ್ಮ ಭೂಮಿಯನ್ನು ಕಲಿದೇವರ ದೇವಸ್ಥಾನಕ್ಕೆ ದಾನ ಮಾಡಿದ್ದನ್ನು ತಿಳಿಸುತ್ತದೆ.[೧೩೮] ಹೀಗೆ ಹಡಗಲಿಯಲ್ಲಿ ದೊರೆತ ಶಾಸನಾಧಾರಗಳಿಂದ ಅಂದಿನ ವ್ಯಾಪಾರಿ ವರ್ಗದವರು ಕೇವಲ ವ್ಯಾಪಾರಕ್ಕಷ್ಟೇ ಸೀಮಿತರಾಗದೆ ದೇವಾಲಯಗಳಿಗೆ ದಾನ ನೀಡುವುದರ ಮೂಲಕ ಧಾರ್ಮಿಕ ಸಹಿಷ್ಣುತೆಯ ಮತ್ತು ಸಮಾಜ ಕಾರ್ಯಗಳಲ್ಲಿ ತೊಡಗಿದ್ದರು. ಪ್ರಮುಖವಾಗಿ ಹಡಗಲಿಯ ಹೊಳಲು ಗ್ರಾಮವೊಂದರಲ್ಲಿಯೇ ೫೦೦ ಜನ ವ್ಯಾಪಾರಿಗಳು ವಾಸಿಸುತ್ತಿದ್ದರು. ಹಾಗಾಗಿ ಇದಕ್ಕೆ 'ದಕ್ಷಿಣ ಅಯ್ಯಾವಳೆ' ಎಂಬ ಹೆಸರು ಬಂದಿತ್ತು ಮತ್ತು ಈ ಗ್ರಾಮವು 'ಚಕ್ರವರ್ತಿ' ಎಂಬ ಹೆಸರು ಪಡೆದು ಶ್ರೇಷ್ಠ ಗ್ರಾಮವಾಗಿತ್ತು ಎಂದು ಶಾಸನ ತಿಳಿಸುತ್ತದೆ.[೧೩೯] ಒಟ್ಟಾರೆಯಾಗಿ ಈ ಪ್ರದೇಶದಲ್ಲಿ ವೈಶ್ಯರು ಸಾಮಾಜಿಕ ಕಾರ್ಯಗಳಲ್ಲಿ ತೊಡಗಿ ವ್ಯವಸ್ಥೆಯಲ್ಲಿ ತಮ್ಮದೇ ಆದ ಸ್ಥಾನವನ್ನು ಹೊಂದಿದ್ದರು ಎಂದು ಹೇಳಬಹುದು.

**ಶ್ರಮಿಕ ವರ್ಗ**

ಸಮಾಜದಲ್ಲಿ ಇರುವ ಹಲವಾರು ವೃತ್ತಿಗಳಲ್ಲಿ ತೊಡಗುವ ಈ ವರ್ಗದ ಜನರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅಪಾರವಾದ ಕೊಡುಗೆ ನೀಡಿದ್ದಾರೆ. ಇವರು ವೃತ್ತಿಗಳನ್ನಾಶ್ರಯಿಸಿ ಅದನ್ನೇ ಕುಲಕಸುಬನ್ನಾಗಿಸಿಕೊಂಡವರಾಗಿದ್ದಾರೆ. ಅಕ್ಕಸಾಲಿ, ಕಂಚಗಾರ, ಕಮ್ಮಾರ, ಕಲ್ಲುಕುಟಿಗ (ಶಿಲ್ಪಿ), ಬಡಗಿ ಈ ಎಲ್ಲಾ ಕುಶಲಕರ್ಮಿಗಳನ್ನು ಪಾಂಚಾಳರೆಂದು ಕರೆಯುತ್ತಿದ್ದರು.[೧೪೦] ಚಿನ್ನದ ಕೆಲಸವನ್ನು ಮಾಡುವವರು ಅಕ್ಕಸಾಲಿಗರು, ಕಂಚು ಮತ್ತು ಇತರ ಲೋಹಗಳಿಂದ ಪಾತ್ರೆಗಳನ್ನು

ತಯಾರಿಸುತ್ತಿದ್ದವರು ಕಂಚುಗಾರರು, ಕಬ್ಬಿಣದ ಕೆಲಸಗಳನ್ನು ಮಾಡುತ್ತಿದ್ದವರು ಕಮ್ಮಾರರು, ಕಲ್ಲುಕುಟಿಗರು ದೇವಾಲಯಗಳನ್ನು ನಿರ್ಮಿಸುವುದರಲ್ಲಿ ಪ್ರವೀಣರಾಗಿದ್ದರು. ಇನ್ನು ಮರದ ಕೆಲಸಗಳನ್ನು ಮಾಡುವವರು ಬಡಿಗರಾಗಿದ್ದರು. ಇವರು ಹೆಸರಿಗೆ ತಕ್ಕಂತೆ ಆಯಾ ವರ್ಗದವರು ಅದೇ ಉದ್ಯೋಗವನ್ನು ನಿರ್ವಹಿಸಬೇಕೆಂಬ ಕಟ್ಟಳೆಗಳಿರಲಿಲ್ಲ. ಕೆಲವರು ಈ ಐದೂ ಕ್ಷೇತ್ರಗಳಲ್ಲಿ ವೃತ್ತಿನಿರತರಾಗಿದ್ದರು. ಕುಡುತಿನಿ ಮತ್ತು ಕೊಳಗಲ್ಲುಗಳಲ್ಲಿ ದೊರೆತ ಶಾಸನಗಳು ಐದು ವರ್ಗದವರನ್ನು ಹೆಸರಿಸುತ್ತದೆ.[೧೪೧] ಹಡಗಲಿಯ ಮಾಗಳ ಗ್ರಾಮದಲ್ಲಿನ ಸೂರ್ಯನಾರಾಯಣ ದೇವಸ್ಥಾನದ ಕಂಬದ ಮೇಲಿನ ಶಾಸನವು ವಾಸ್ತುಶಿಲ್ಪಿಯಾದ ಆಚಾರಿ ಬಮ್ಮೋಜನು ಸೋಮನಾಥದೇವರ ದೇವಸ್ಥಾನವನ್ನು ಕಟ್ಟಿಸಿದ್ದುದರ ಉಲ್ಲೇಖ ಸಿಗುತ್ತದೆ.[೧೪೨] ಒಂದು ಮುಖ್ಯವಾದ ಸಂಗತಿಯೆಂದರೆ ಹೊಳಲು ಗ್ರಾಮದಲ್ಲಿನ ಅಮೃತೇಶ್ವರ ದೇವಸ್ಥಾನದ ನವರಂಗ ಮಂಟಪದ ಕಂಬದ ಮೇಲಿನ ಶಾಸನದಲ್ಲಿ ಸೋಗೆಯ ಪದ್ಮೋಜನ ಶಿಷ್ಯ ಬಮ್ಮೋಜನು ಬೋಕೋಜನ ಮಗನು. ಶ್ರೀಕರನಾಗನು ೬೪ ಕಲೆಗಳಲ್ಲಿ, ೬೪ ವಿಧದ ಪ್ರಾಸಾದಗಳನ್ನು(ಪವಿತ್ರ ಕಟ್ಟಡ) ಕಟ್ಟುವುದರಲ್ಲಿ ಮತ್ತು ನಾಗರ, ಕಳಿಂಗ, ದ್ರಾವಿಳ(ದ್ರಾವಿಡ) ಮತ್ತು ವೇಸರ ಎಂಬ ನಾಲ್ಕು ವಿಧದ ದೇವಾಲಯಗಳನ್ನು ಕಟ್ಟುವುದರಲ್ಲಿ ಪರಿಣತನಾಗಿದ್ದನು ಎಂದು ತಿಳಿಸುತ್ತದೆ. ಹಾಗೆಯೇ ಈತನಿಗೆ ಶಿವಪಾದಶೇಖರ, ಕಲಿಯುಗ ವಿಶ್ವಕರ್ಮ ಮುಂತಾದ ಬಿರುದುಗಳು ಇರುವುದನ್ನು ಉಲ್ಲೇಖಿಸುತ್ತದೆ ಅಲ್ಲದೇ ದೇವಸ್ಥಾನದಲ್ಲಿಯ ನಾಲ್ಕು ಕಂಬಗಳಿಗೆ ಅಲಂಕಾರ ಸಹಿತ ಕಟ್ಟಿದ್ದಕ್ಕಾಗಿ ೯೦ ಗದ್ಯಾಣಗಳನ್ನು ಪಡೆದನೆಂದು ಶಾಸನ ತಿಳಿಸುತ್ತದೆ.[೧೪೩] ಇವರು ಕೇವಲ ದೇವಾಲಯಗಳನ್ನು ನಿರ್ಮಿಸಿದುದು ಮಾತ್ರವಲ್ಲದೆ ಅನೇಕ ಶಾಸನಗಳನ್ನು ಸಹ ಕಂಡರಿಸಿದ್ದಾರೆ.

ಹಡಗಲಿಯ ಕೊಟ್ನಕಲ್ಲು ಗ್ರಾಮದಲ್ಲಿನ ಕೋಟೇಶ್ವರ ದೇವಾಲಯದ ಗೋಡೆಯಲ್ಲಿ ಕಂಡರಿಸಲಾಗಿರುವ ಶಾಸನವು "ಸ್ವಸ್ತಿ ಶ್ರೀಮತು ಸೂರಿಲ್ಲಿಯ ಇಂದೋಜನ ಪುತ್ರ ಚಾವೋಜಂ ನೂರಿಪ್ಪದಿಂಬರ ತೊತ್ತು ಶಾಸನಮಂ ಕಂಡರಿಸಿದಾತ, ಸರಸ್ವತಿದೇವಿಯ ವರಪ್ರಸಾದ ಮಂಗಳ ಮಹಾಶ್ರೀ॥" ಎಂದು ಉಲ್ಲೇಖಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ.೧೨೬೨ ಆಗಿದೆ. ಈ ಶಾಸನವನ್ನು ಕೆತ್ತಿದವನು ಇಂದೋಜನ ಮಗ ಚಾವೋಜನು ಎಂದು ಉಲ್ಲೇಖಿಸಿದೆ. ಹಾಗೆಯೇ ಮೈಲಾರ ಗ್ರಾಮದ ಸೋಮಲಿಂಗೇಶ್ವರ ಮುಖ್ಯದ್ವಾರದ ಬಳಿ ಇರುವ ಶಾಸನವು, ಶಾಸನವನ್ನು ಖಂಡರಿಸಿದ ಚಾವುಂಡೋಜನನ್ನು ಮತ್ತು ಈ ಶಾಸನವನ್ನು ರಚಿಸಿದವನು ನಾಗವಾರ, ನಾಗಮ್ಮನೆಂಬುವವನು ಬರೆದ ಎಂಬಂತಹ ಉಲ್ಲೇಖಗಳನ್ನು ದೊರಕಿಸಿ ಕೊಡುತ್ತದೆ. ಕುರುವತ್ತಿಯ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನದಲ್ಲಿ ಶಾಸನವನ್ನು ಕಂಡರಿಸಿದವನು ಕಾಳೋಜ ಮತ್ತು ಶಾಸನವನ್ನು ರಚಿಸಿದಾತ ಶ್ರೀಕಂಠಸೂರಿ ಎಂದು ಉಲ್ಲೇಖಿಸಲ್ಪಟ್ಟಿದೆ.[೧೪೪] ಹೊಳಲು ಗ್ರಾಮದ ಗೌರೀಶ್ವರ ದೇವಾಲಯದಲ್ಲಿನ ಶಾಸನದಲ್ಲಿ ಬರೆದವನು ದೇವಣ್ಣ ಮಾರಿಯೋಜ ಎಂಬುವವನು ಶಾಸನವನ್ನು ಕೆತ್ತಿರುವುದನ್ನು ಕಾಣಲಾಗುತ್ತದೆ.[೧೪೫]

ಕ್ಷೌರದ ಕೆಲಸ ಮಾಡುತ್ತಿದ್ದ ನಾವಿಂದ, ಮಡಿಕೆ ತಯಾರಿಸುತ್ತಿದ್ದ ಕುಂಬಾರ, ಬಟ್ಟೆಯನ್ನು ಮಡಿ ಮಾಡುವ ಅಗಸ, ಬಿದಿರಿನ ವಸ್ತುಗಳನ್ನು ತಯಾರಿಸುತ್ತಿದ್ದ ಮೇದ, ಚರ್ಮದ ವಸ್ತುಗಳನ್ನು ಮಾಡುತ್ತಿದ್ದ ಸಮಗಾರ ಅಥವಾ ಚಮ್ಮಾರರನ್ನು ಶಾಸನಗಳು ಉಲ್ಲೇಖಿಸುತ್ತವೆ. ಹಡಗಲಿಯ ರಂಗಾಪುರ ಗ್ರಾಮದಲ್ಲಿನ ಒಂದು ಶಾಸನವು "ನಾವಿದ ಪದುಮಣ್ಣನು ಭಾಗದ ಮನೆಯ ಮೇಲೆ ಹೊಬxಗೆ ಕೆಲಸಕ್ಕೆ ಧರ್ಮದ ಹೊಂನ್ನು ಗದ್ಯಾಣ ಕೊಟ್ಟಿದ್ದಾನೆ" ಎಂದು ಉಲ್ಲೇಖಿಸುತ್ತದೆ.[೧೪೬]

ಹಿರೇಹಡಗಲಿಯ ಭೀಮೇಶ್ವರ ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನದಲ್ಲಿ "ಸಮುಮಂ ಬಿಟ್ಟರು ಅದರ ಪಡುವ ಬರೆ......ನಾಡಿಂಗೆ ಕೆಳೆಯಂ ಬಿಟ್ಟರು.... ಬಂದು ಪುಗುವ...ವೊಂದು ಬಳ್ಳಮಂ ಬಿಟ್ಟರು ನಂದಾದೀವಿಗೆಗೆವೊಂದು ಗಾಣದ ಮಾನೆಣ್ಣೆಯಂ [ಬಿಟ್ಟರು] ತೆಲ್ಲಿಗರಯ್ವತ್ತೊಕ್ಕಲುಂ ಸೊಂಟಿಗೆ ಯೆಣ್ಣೆಯಂ ಬಿಟ್ಟರು ನರಕ...ಉತ್ತಮಂ ಬಿಟ್ಟರು ಶ್ರೀಮತು ನೂರಿಪ್ಪದಿಂಬರು ದೇವರ್ಗೆ ಬೈದೆನಿವೇದ್ಯ....ಯೊಕ್ಕಲುಂ ಪುಲ್ಲವಡುಗರೊಕ್ಕಲುಂ ಕಲುಕುಟಿಗ ರೊಕ್ಕಲುಂ ಸರ್ವಮಾನ್ಯಮಾಗಿ ಬಿಟ್ಟರು" ಎಂಬ ಉಲ್ಲೇಖವಿದೆ.[೧೪೭] ಇಲ್ಲಿ ತೆಲ್ಲಿಗರಯ್ವ ತ್ತೊಕ್ಕಲು, ಪಲ್ಲವಡುಗರೊಕ್ಕಲು, ಕಲುಕುಟಿಗರೊಕ್ಕಲು ಎಂಬುವು ಜಾತಿವಾರು ಮತ್ತು ವೃತ್ತಿಯಾದಾರಿತ ಸಂಘಗಳಾಗಿವೆ. ಅದೇ ರೀತಿಯಲ್ಲಿ ಹೊಳಗುಂದಿಯ ಬಲ್ಲೇಶ್ವರ ದೇವಾಲಯದ ಶಾಸನದಲ್ಲಿ 'ಗಾವುಂಡ ಅರುವತ್ತೊಕ್ಕಲು' ಎಂಬ ಉಲ್ಲೇಖವಿದೆ.[೧೪೮] ಹೀಗೆ ತಂಬುಲಿಗರು, ತೆಲ್ಲಿಗರು, ಮಾಲೆಗಾರರು, ಉಳಿಗರು, ಉಗುರರು, ತೋಟಿಗರು, ಒಕ್ಕಲಿಗರು ಮುಂತಾದವರು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡಿದ್ದರು ಎಂಬ ಅಂಶಗಳು ಶಾಸನಗಳಿಂದ ದೊರೆಯುತ್ತವೆ. ತೆಲ್ಲಿಗರು ಎಂದರೆ ಗಾಣದಿಂದ ಎಣ್ಣೆ ತೆಗೆಯುವವರು. ದೇವಾಲಯಗಳಲ್ಲಿ ದೇವರ ದೀವಿಗೆಗೆ ಇವರು ಎಣ್ಣೆಯನ್ನು ಒದಗಿಸುತ್ತಿದ್ದರು. ಇವರು ಗಾಣದೊಕ್ಕಲು, ಗಾಣದರವತ್ತೊಕ್ಕಲು, ತೆಲ್ಲಿಗರಯ್ವ ತ್ತೊಕ್ಕಲು ಎಂದು ಕರೆಯಲ್ಪಡುತ್ತಿದ್ದ ತಮ್ಮದೇ ಆದಂತಹ ಸಂಘಗಳನ್ನು ಕಟ್ಟಿಕೊಂಡು ಸಾಮಾಜಿಕ, ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು. ಅದೇ ರೀತಿಯಲ್ಲಿ ಹೊಳಲು ಗ್ರಾಮದಲ್ಲಿನ ಶಾಸನವು 'ಉಗುರುಮುನ್ನೂರ್ವರು' ಎಂಬ ಸಂಘವನ್ನು ಉಲ್ಲೇಖಿಸುತ್ತದೆ.[೧೪೯]

ರಂಗಾಪುರದ ರಾಮೇಶ್ವರ ದೇವಸ್ಥಾನದಲ್ಲಿನ ಒಂದು ಕಂಬದಲ್ಲಿನ ಶಾಸನವು ಮಾಗಳದ ನಾಚರಸನ ಮಗ ಜಕ್ಕರಸನು ರಾಮನಾಥ ದೇವರ ದೀಪಕ್ಕೆ ತೆಲ್ಲಿಗ ರಾಮಿಸೆಟ್ಟಿಯ ಮಗ ಸೋಮಯ್ಯನಿಗೆ ಎರಡು ಗದ್ಯಾಣದ ಭೂಮಿಯನ್ನು ದಾನವಾಗಿ ಕೊಟ್ಟಿರುವುದನ್ನು ತಿಳಿಸುತ್ತದೆ.[೧೫೦] ಹಾಗೆಯೇ ಮಾಗಳದ ತ್ರೈಮೂರ್ತಿ ದೇವಗ್ರೂಗ್ಗರಡೆಯರ ಮಾನೆಣ್ಣೆಯೊತ್ತ ಹೊಳಲಿ ಸೆಟ್ಟಿಯ ಕೇತನ ಗಾಣಕ್ಕೆ ೩ ಗದ್ಯಾಣ, ಗೊನೆಯ ಸೋಮನ ಗಾಣಕ್ಕೆ ೩ ಗದ್ಯಾಣ, ನೊಣಬರ ಚೌಡನ ಗಾಣಕ್ಕೆ ೪ ಗದ್ಯಾಣ ಹೀಗೆ ಒಟ್ಟು ೧೦ ಗದ್ಯಾಣಗಳನ್ನು ನಂದಾದೀಪಕ್ಕೆ ಎಣ್ಣೆಯನ್ನು ಒದಗಿಸಲು ಕೊಡಲಾಗಿದೆ.[೧೫೧] ಹೀಗೆ ತೆಲ್ಲಿಗರು ದೇವರ ಸೇವೆಗಾಗಿ ತಮ್ಮದೇ ಆದ ಸೇವೆಯನ್ನು ನೀಡುತ್ತಿದ್ದರು. ಹೀಗೆ ವ್ಯಾಪಾರಿಗಳು ಎಂದು ಕರೆಯಿಸಿಕೊಳ್ಳುತ್ತಿದ್ದವರು ಸಾಮಾಜಿಕ ಸೇವೆಯಲ್ಲಿಯೂ ಪ್ರಮುಖವಾದ ಪಾತ್ರವನ್ನು ವಹಿಸಿದ್ದರು ಎಂಬುದು ಶಾಸನಗಳಿಂದಲೇ ವೇದ್ಯವಾಗುತ್ತದೆ.

**ಸ್ತ್ರೀಯರ ಸ್ಥಾನಮಾನ**

ಸೃಷ್ಟಿಯ ವಿಸ್ಮಯ ಸ್ತ್ರೀ. ಸ್ತ್ರೀಯರನ್ನು ಆದಿಕಾಲದಿಂದಲೂ ಕುತೂಹಲದಿಂದಲೇ ನೋಡುತ್ತಾ ಬರಲಾಗಿದೆ. ಪ್ರಾಚೀನ ನಾಗರಿಕತೆಗಳಲ್ಲಿ ಸ್ತ್ರೀಯರ ಸಾಮಾಜಿಕ ಬದುಕನ್ನು ಕುರಿತು ಹೆಚ್ಚಿನ ಚಿಂತನೆ ನಡೆದಿಲ್ಲ ಎನ್ನಬಹುದು. ಕುಟುಂಬ ವ್ಯವಸ್ಥೆಯ ಬಗ್ಗೆ ತೀರಾ ಪ್ರಾಚೀನದಲ್ಲಿ ಹೇಗಿತ್ತು ಎಂದು ಆಲೋಚಿಸುತ್ತಿರುವುದು; ಅನ್ವೇಷಿಸುತ್ತಿರುವುದು ತೀರಾ ಇತ್ತೀಚಿನ ಬೆಳವಣಿಗೆಯಾಗಿದೆ. ವೇದಗಳಲ್ಲಿಯೇ ಅತ್ಯಂತ ಪ್ರಾಚೀನವಾದದ್ದು ಮತ್ತು ಬೃಹತ್ತಾದದ್ದು 'ಋಗ್ವೇದ'. ಈ ಕಾಲದಲ್ಲಿ ಮಹಿಳೆಗೆ ಯಾವುದೇ ಕಟ್ಟಳೆಗಳು ಇರಲಿಲ್ಲ. ಆಗಿನ ಜನಮಾನಸದಲ್ಲಿ ಸ್ತ್ರೀಯರ ಬಗ್ಗೆ ಅತ್ಯುತ್ತಮ ಭಾವನೆಗಳಿರುವ ಜೊತೆಗೆ ಸಮಾನ ಭಾವದಿಂದ ಕಾಣುವ ಪ್ರವೃತ್ತಿಯನ್ನು ಕಾಣುತ್ತೇವೆ. ನಂತರದಲ್ಲಿ ಹಲವಾರು ಸಮಸ್ಯೆಗಳಿಗೆ ಮಹಿಳೆ ತುತ್ತಾದಳು. 'ಯತ್ರ ನಾರ್ಯಂತು ಪೂಜ್ಯಂತೆ ರಮಂತೇ ತತ್ರದೇವತಃ' ಎಂಬುದು ಭಾರತೀಯ ಸಮಾಜದಲ್ಲಿ ಸರ್ವಕಾಲದಲ್ಲಿಯೂ ಉದಾಹರಿಸಲ್ಪಡುವ ಒಂದು ಉಕ್ತಿ. ಪ್ರಾಚೀನ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಹೇಗಿದ್ದವು ಎಂದು ನೋಡಿದಾಗ ಅವರು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಹೀಗೆ ಎಲ್ಲ ರಂಗಗಳಲ್ಲಿಯೂ ಸಹಭಾಗಿತ್ವವನ್ನು ಪಡೆದುಕೊಂಡಿದ್ದಳು ಎಂದು ಹೇಳಬಹುದು. ಆದರೆ ಈ ರೀತಿಯ ಸ್ಥಿತಿ ಬಹಳ ಕಾಲದವರೆಗೆ ಚಾಲ್ತಿಯಲ್ಲಿರಲಿಲ್ಲ. ಬದಲಾಗಿ ಪುರುಷಪ್ರಧಾನ ವ್ಯವಸ್ಥೆ ಬಲಿಷ್ಠಗೊಂಡಂತೆಲ್ಲ ಮಹಿಳೆಯರು ಅಧೀನ ನೆಲೆಗೆ ತಳ್ಳಲ್ಪಟ್ಟರು. ಹಾಗಾಗಿ ಅವಳು ಕೇವಲ ಕುಟುಂಬಕ್ಕೆ ಮಾತ್ರ ಸೀಮಿತಳಾದಳು.

ವೈದಿಕ ಯುಗದಲ್ಲಿ ಮಹಿಳೆಯರಿಗೆ ಅತ್ಯಂತ ಗೌರವದ ಸ್ಥಾನಗಳಿದ್ದವು. ಪುರುಷರಂತೆಯೇ ಅವರೂ ಕೂಡ ವಿದ್ಯಾಭ್ಯಾಸಕ್ಕೆ ಅರ್ಹರಾಗಿದ್ದರು. ಋಗ್ವೇದದ ಮಂತ್ರದ್ರಷ್ಟಾರರ ಪಟ್ಟಿಯಲ್ಲಿ ಹಲವು ಮಂದಿ ಸ್ತ್ರೀದ್ರಷ್ಟಾರರ ಹೆಸರುಗಳೂ ಕಂಡುಬರುತ್ತವೆ.(೫೨) ಸ್ತ್ರೀಯರು ಹಲವು ಸಂದರ್ಭಗಳಲ್ಲಿ ಬಲವಾದ ಕಾಲಕ್ಕನುಗುಣವಾಗಿ ಸಾಮಾಜಿಕ ವ್ಯವಸ್ಥೆಯ ಹಲವಾರು ಕಾರ್ಯಗಳಲ್ಲಿ ಭಾಗಿಯಾಗಿ ತನ್ನತನವನ್ನು ಮೆರೆದಿದ್ದಾರೆ. ಶಾಸನಗಳು ಆಯಾ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳ ಕುರಿತು ಹಲವಾರು ಅಂಶಗಳನ್ನು ಒದಗಿಸುತ್ತವೆ. ಇಲ್ಲಿ ಅನೇಕ ರಾಜರು, ಮಾಂಡಲಿಕರು, ಸಾಮಂತರು ತಮ್ಮ ತಮ್ಮ ರಾಣಿಯರಿಗೆ ಹಲವಾರು ರೀತಿಯ ಸ್ವಾತಂತ್ರ್ಯ ನೀಡಿದ್ದು ತಿಳಿದುಬರುತ್ತದೆ. ಸಾಮಾನ್ಯ ಸ್ತ್ರೀಯರೂ ಸಹ ಇದಕ್ಕೆ ಹೊರತಾಗಿರಲಿಲ್ಲವೆಂಬುದನ್ನು ಶಾಸನಗಳು ತಿಳಿಸಿಕೊಡುತ್ತವೆ. ಸ್ತ್ರೀಯರು ತಮ್ಮ ಮಾನವೀಯ ಮೌಲ್ಯಗಳಿಂದಾಗಿ ಅನೇಕ ಶಾಸನಗಳಲ್ಲಿ ಗೌರವಾದರಕ್ಕೆ ಪಾತ್ರರಾಗಿದ್ದಂತೆ ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಸ್ತ್ರೀಯರ ಸ್ಥಾನಮಾನಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಭಾಗಿಯಾಗಿರುತ್ತಿದ್ದರು ಎಂಬುದನ್ನು ಗುರುತಿಸಬಹುದು. ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ಸ್ತ್ರೀಯರ ಜೀವನದ ಬಗ್ಗೆಯಾಗಲೀ ಅಥವಾ ಅವರ ಕುರಿತ ವಿವರಗಳಾಗಲೀ ಸಾಕಷ್ಟು ಮಾಹಿತಿ ಕಂಡುಬರುವುದಿಲ್ಲ. ಕೇವಲ ಕೆಲವು ರಾಣಿಯರ ಮತ್ತು ಸ್ತ್ರೀಯರ ಉಲ್ಲೇಖಗಳು ಮಾತ್ರ ಕಂಡುಬಂದಿವೆ.

ಸ್ತ್ರೀಯರು ಹಲವಾರು ದಾನದತ್ತಿಗಳನ್ನು ನೀಡುವುದರಲ್ಲಿ ಮುಂದಿದ್ದರು ಎಂಬುದಕ್ಕೆ ಶಾಸನಗಳಲ್ಲಿ ದಾಖಲೆಗಳು ದೊರೆತಿವೆ. ಹೂವಿನಹಡಗಲಿ ಗ್ರಾಮದ ಕೇಶವಸ್ವಾಮಿ ದೇವಸ್ಥಾನದಲ್ಲಿ ಪಶ್ಚಿಮದ್ವಾರದ ಹತ್ತಿರ ನಿಲ್ಲಿಸಿದ ಶಾಸನದಲ್ಲಿ ತ್ರಿಭುವನಮಲ್ಲ-ಪಾಂಡ್ಯದೇವನ ಬ್ರಾಹ್ಮಣ ಸೈನ್ಯಾಧಿಕಾರಿಯಾದ ರವಿ ದಂಡನಾಯಕನ ಹೆಂಡತಿಯಾದ ರೆಬ್ಬಣಬ್ಬೆ ಅಥವಾ ರೆಬ್ಬಲದೇವಿಯು ಈ ಗ್ರಾಮದಲ್ಲಿ ಕೇಶವ ದೇವರ ದೇವಸ್ಥಾನವನ್ನು ಕಟ್ಟಿಸಿದ್ದಳು. ಈ ದೇವರ ಸೇವೆಗಾಗಿ ಭೂಮಿಯನ್ನು, ಒಂದು ಹೂವಿನ ತೋಟ, ಒಂದು ಮನೆಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೧೫೩] ಹಾಗೆಯೇ ಇವಳು ಪ್ರತಿಭಾ ಸರಸ್ವತಿ ಎಂದು ಕರೆಯಿಸಿಕೊಂಡಿದುದಲ್ಲದೆ, ಅಜ್ಞಾನವೆಂಬ ಕಲ್ಮಶವನ್ನು ಕಳೆದುಕೊಂಡವಳೆಂದು ಹೊಗಳಿಸಿಕೊಂಡಿದ್ದಾಳೆ(ತಿರಸ್ಕೃತಾಜ್ಞಾನ ಕಾಳಿಕೆ) ಹಾಗೂ ಅವಳನ್ನು ಸರಸ್ವತಿಯ ಕೈಯಲ್ಲಿರುವ ವೀಣೆ ಎಂದು ಶಾಸನವು ಹೊಗಳುತ್ತದೆ.[೧೫೪] ಅದೇ ಕಲ್ಲಿನಲ್ಲಿರುವ ಕ್ರಿ.ಶ.೧೧೨೬ರ ಶಾಸನವು ಬ್ರಾಹ್ಮಿಣಿ ಸೋರಿಕಯ್ವೆ ಕೇಶವ ದೇವರ ಅಂಗಭೋಗಕ್ಕೆ ಗದ್ದೆಯನ್ನು ದಾನ ಮಾಡಿದಳು ಎಂದು ಉಲ್ಲೇಖಿಸುತ್ತದೆ.[೧೫೫] ಅಂದಿನ ಕಾಲದ ಮಹಿಳೆಯರು ಆಡಳಿತ ನಡೆಸುವುದರಲ್ಲಿಯೂ ತಮ್ಮ ನೈಪುಣ್ಯತೆಯನ್ನು ತೋರಿಸಿದ್ದರು ಎಂಬುದಕ್ಕೆ ಶಾಸನಗಳು ಆಧಾರಗಳಾಗಿ ನಿಲ್ಲುತ್ತವೆ. ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿನ ನರಸಿಂಹ ದೇವಸ್ಥಾನದ ಪ್ರವೇಶ ದ್ವಾರದಲ್ಲಿನ ಶಾಸನವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು, ಚಾಲುಕ್ಯ ರಾಜ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ರಾಣಿ ಪದುಮಲದೇವಿಯು ಮಂಗೋಳ ಎಂಬ ಅಗ್ರಹಾರವನ್ನು ಆಳುತ್ತಿದ್ದಳು ಎಂಬುದಾಗಿ ಉಲ್ಲೇಖಿಸುತ್ತದೆ. ಜೊತೆಗೆ ಈಕೆಯ ಆಳ್ವಿಕೆಯಲ್ಲಿ ಶೂರರೂ, ಧರ್ಮಾಭಿಮಾನಿಗಳೂ ಮತ್ತು ವಿದ್ಯಾವಂತರಾದ ೨೦೦ ಮಹಾಜನಗಳು ಸುಖ ಸಂತೃಪ್ತಿಯನ್ನು ಪಡೆದಿದ್ದರು ಎಂಬ ಉಲ್ಲೇಖವಿದೆ.[೧೫೬] ಹಾಗೆಯೇ ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ದಕ್ಷಿಣ ಪ್ರವೇಶ ದ್ವಾರದ ಬಲಗಡೆಯ ಗೋಡೆಯ ಮೇಲಿನ ಶಾಸನದಲ್ಲಿ ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯ ಸಂದರ್ಭದಲ್ಲಿ ಪಟ್ಟಮಹಾದೇವಿಯಾದ ಪದುಮಲದೇವಿಯು ಆಳ್ವಿಕೆ ನಡೆಸುತ್ತಿದ್ದಳು ಎಂಬುದಕ್ಕೆ ಉಲ್ಲೇಖ ದೊರೆಯುತ್ತದೆ.[೧೫೭] ಇವುಗಳಲ್ಲದೆ ಮಹಿಳೆಯರ ಹೆಸರಿನಲ್ಲಿ ದಾನ ನೀಡಿರುವ ಉಲ್ಲೇಖವಿರುವ ಶಾಸನವೂ ಕೂಡ ದೊರೆಯುತ್ತದೆ. ಮಗಿಮಾವಿನಹಳ್ಳಿ ಗ್ರಾಮದ ಹಿರೆಕೆರೆಯ ದಂಡೆಯ ಮೇಲೆ ನಿಲ್ಲಿಸಿರುವ ಶಾಸನದಲ್ಲಿ ಬಯಕಾರ ರಾಮಪ್ಪಯ್ಯನು ತನ್ನ ಮಗಳು ಕಾಮಮ್ಮನಿಗೆ ಪುಣ್ಯವಾಗಲೆಂದು ಕಾಮಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಹಾಗೆಯೇ ಸೋಗಿಯ ಗ್ರಾಮದ ಶಾಂತೀಶ್ವರ ದೇವಸ್ಥಾನದ ತೋಟದಲ್ಲಿನ ಶಾಸನವು ಕೊಟ್ಟೂರಿನ ಪ್ರಧಾನ ಅರುಹ ತಿಮಣನಾಯಕನು, ಇಮ್ಮಡಿ ಬಸವಪ್ಪವೊಡೆಯನ ತಾಯಿಯಾದ ಪಾರ್ವತಿ ಅಮ್ಮನ ಉಲ್ಲೇಖವಿದೆ. ಈ ಶಾಸನದಲ್ಲಿ ತಾಯಿಯ ಆಜ್ಞೆಯ ಮೇರೆಗೆ ಗೋವಿನ ಅರವಟಿಗೆಯ ಧರ್ಮಏತದ ನಿರ್ವಹಣೆಗಾಗಿ ಒಂದು ಗ್ರಾಮವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೧೫೮]

ಹಡಗಲಿ ತಾಲೂಕಿನ ಶಾಸನಗಳನ್ನು ಆಧರಿಸಿ ಪರಿಶೀಲಿಸಿದರೆ ಅಂದಿನ ಸಂದರ್ಭದಲ್ಲಿ ಮಹಿಳೆಯರೂ ಕೂಡ ಆಡಳಿತದಲ್ಲಿ ಪಾಲ್ಗೊಂಡಿದ್ದರು ಎಂಬುದಾಗಿ ತಿಳಿದುಬರುತ್ತದೆ. ಇದು

ಅಲ್ಲದೆ ರಾಣಿಯರಿಗೆ ದಾನ ನೀಡುವ ಸ್ವಾತಂತ್ರ್ಯವೂ ಇರುತ್ತಿತ್ತು ಮತ್ತು ಮಗಳಿಗೆ ಪುಣ್ಯ ದೊರಕಲೆಂದು ಅವಳಿಗಾಗಿ ಅಥವಾ ಅವಳ ಹೆಸರಿನಲ್ಲಿ ಕೆರೆಗಳನ್ನು ಕಟ್ಟಿಸಿ ಸಮಾಜ ಕಾರ್ಯದಲ್ಲಿ ತೊಡಗಿರುವವರನ್ನು ಶಾಸನಗಳಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಹೂವಿನಹಡಗಲಿ ತಾಲೂಕಿನ ಐತಿಹಾಸಿಕ ಹಿನ್ನೆಲೆಯನ್ನು ನೋಡಿದಾಗ ಪಲ್ಲವ, ಕಲ್ಯಾಣದ ಚಾಲುಕ್ಯ, ಹೊಯ್ಸಳ, ಯಾದವ ಮತ್ತು ವಿಜಯನಗರದ ಅರಸರು ಹೀಗೆ ಹಲವಾರು ರಾಜಮನೆತನಗಳು ಹಡಗಲಿಯಲ್ಲಿ ತಮ್ಮ ಆಳ್ವಿಕೆಯನ್ನು ನಡೆಸಿರುವ ದಾಖಲೆಗಳು ಶಾಸನಗಳಿಂದ ಬೆಳಕಿಗೆ ಬಂದಿವೆ. ಅಂದಿನ ಸಂದರ್ಭದಲ್ಲಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅವಲೋಕಿಸಲು ಈ ಶಾಸನಗಳು ಉಪಯುಕ್ತವಾಗಿವೆ. ಹಾಗಾಗಿ ಅಂದಿನ ಸಂದರ್ಭದಲ್ಲಿ ಜನರ ಜೀವನಮಟ್ಟವೂ ಕೂಡ ಉತ್ತಮವಾಗಿತ್ತು ಎಂದು ಹೇಳಬಹುದಾಗಿದೆ.

**ಟಿಪ್ಪಣಿಗಳು**

೧. ಹೂಗಾರ ಬಿ.ಪಿ., ಕರ್ನಾಟಕ ಇತಿಹಾಸ, ಪು.೧

೨. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೫೭, ಕ್ರಿ.ಶ.೩ನೇ ಶತಮಾನ

೩. ಗೋವಿಂದರಾಜು ಸಿ.ಆರ್., ಇತಿಹಾಸ, ಪು.೨೪೩

೪. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೪೭, ಕ್ರಿ.ಶ.೧೦೨೫

೫. ಅದೇ, ಹಡಗ–೬೦, ಕ್ರಿ.ಶ.೧೦೩೬

೬. ಅದೇ, ಹಡಗ–೯೬, ಕ್ರಿ.ಶ.೧೦೩೮

೭. ಕರ್ನಾಟಕ ಪರಂಪರೆ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು.೩೨೭

೮. ಬಸವಪುರಾಣ, ಆಶ್ವಾಸ ೨ ಮತ್ತು ಚೆನ್ನಬಸವಪುರಾಣ ಆಶ್ವಾಸ ೭, ಪ.೧೦ನ್ನು ನೋಡಿ: ಹಿಪ್ಪರಗಿಯ ಶಾಸನದಲ್ಲಿ ಸುಗ್ಗಲದೇವಿಯ ಹೆಸರು ಬಂದಿದೆ.

೯. Indian Antiquary, ಸಂ.II, ಪು.೨೯೭

೧೦. ಪಟ್ಟದರಸಿ, ನಿಂಬರಗಿ ಶಾಸನ, ಕ್ರಿ.ಶ.೧೦೪೭–೪೮ರದ್ದು, Karn Desa Inscr, ಸಂ.I, ಪು.೯೨

೧೧. ತಿಳವಳ್ಳಿ ಶಾಸನ, ಕ್ರಿ.ಶ.೧೦೫೩–೫೪ರದ್ದು, Karn Desa Inscr, ಸಂ.I, ಪು.೧೨೨

೧೨. ಹೊನವಾಡದ ಶಾಸನ, Indian Antiquary, ಸಂ.XIX, ಪು.೨೬೮

೧೩. ಸದಾಶಿವ ಕೆ., ಸಮಗ್ರ ಭಾರತದ ಇತಿಹಾಸ, ಪು.೩೭೯

೧೪. ಗುಡಿಗಟ್ಟಿ ಶಾಸನ, ಸಂಪಗಾಂವ್ ತಾಲೂಕು, ಬೆಳಗಾವಿ ಜಿಲ್ಲೆ

೧೫. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೨೩, ಕ್ರಿ.ಶ.೧೦೪೬

೧೬. ಕುಂಬಾಸ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಪು.೮೩

೧೭. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೫೨, ಕ್ರಿ.ಶ.೧೦೫೭

೧೮. ಅದೇ, ಹಡಗ–೮೬, ಕ್ರಿ.ಶ.೧೦೬೨

೧೯. ಬಳ್ಳಾರಿ ಜಿಲ್ಲೆಯ ಶಾಸನಗಳು, ಸಂ.ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಶಾ.ಸಂ.೧೭೭, ಪು.೫೭

೨೦. ಕರ್ನಾಟಕ ಪರಂಪರೆ, ಸಂಪುಟ–೧, ಪು.೩೨೮

೨೧. ಚಂದ್ರಶೇಖರಪ್ಪ ಟಿ.ಜಿ., ಸಮಗ್ರ ಭಾರತದ ಇತಿಹಾಸ, ಪು.೨೮೮

೨೨. ಕರ್ನಾಟಕ ಪರಂಪರೆ, ಸಂಪುಟ–೧, ಪು.೩೨೯

೨೩. ಗದಗ ಶಾಸನ; ಕ್ರಿ.ಶ.೧೦೯೮, ಡಿ.ಪಿ.೪೪೪ ಮತ್ತು ೪.೬

೨೪. ಕರ್ನಾಟಕ ಪರಂಪರೆ, ಸಂಪುಟ–೧, ಪು.೩೨೯

೨೫. ಕ್ರಿ.ಶ.೧೦೯೯ರ ಗದುಗಿನ ಶಾಸನ, ಕ್ರಿ.ಶ.೧೦೯೪–೯೫ರ ಎಡರಾವೆಯ ಶಾಸನ

೨೬. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೮೩, ಕ್ರಿ.ಶ.೧೦೯೦

೨೭. ಅದೇ, ಹಡಗ–೮೫, ಕ್ರಿ.ಶ.೧೧೧೦

೨೮. ಅದೇ, ಹಡಗ–೯೩, ಕ್ರಿ.ಶ.೧೦೯೭

೨೯. ಅದೇ, ಹಡಗ–೧, ಕ್ರಿ.ಶ.೧೦೯೯

೩೦. ಅದೇ, ಹಡಗ–೧೩, ಕ್ರಿ.ಶ.೧೧೦೪

೩೧. ಅದೇ, ಹಡಗ–೭೧, ಕ್ರಿ.ಶ.೧೧೧೬

೩೨. ಕರ್ನಾಟಕ ಪರಂಪರೆ, ಪು.೩೩೪

೩೩. ಕ.ವಿ.ವಿ.ಶಾಸನ ಸಂಪುಟ–೧, ಹರಪ–೩೪, ಕ್ರಿ.ಶ.೧೧೨೭

೩೪. ಅದೇ, ಬಳ್ಳಾರಿ–೫೯, ಕ್ರಿ.ಶ.೧೧೩೧

೩೫. ಸದಾಶಿವ ಕೆ., ಪ್ರಾಚೀನ ಭಾರತದ ಇತಿಹಾಸ, ಪು.೩೮೨

೩೬. ಕ.ವಿ.ವಿ.ಶಾಸನ ಸಂಪುಟ–೧, ಬಳ್ಳಾರಿ–೬೧, ಕ್ರಿ.ಶ.೧೧೪೧

೩೭. ಅದೇ, ಹಡಗ–೩೬, ಕ್ರಿ.ಶ.೧೧೪೨

೩೮. ಅದೇ, ಹಡಗ–೬೧, ಕ್ರಿ.ಶ.೧೧೮೩

೩೯. ಕರ್ನಾಟಕ ಪರಂಪರೆ, ಸಂ.೧, ಪು.೪೬೭

೪೦. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೫, ಕ್ರಿ.ಶ.೧೨೦೫

೪೧. ಅದೇ, ಹಡಗ–೬೭, ಕ್ರಿ.ಶ.೧೨೦೯

೪೨. ಅದೇ, ಹಡಗ–೫೩, ಕ್ರಿ.ಶ.೧೨೧೨

೪೩. ಕ.ವಿ.ವಿ.ಶಾಸನ ಸಂಪುಟ–೧, ಪು.xxxii

೪೪. ಅದೇ, ಹಡಗ–೪೨, ಕ್ರಿ.ಶ.೧೨೬೩

೪೫. ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲಾ ಪುರಾತತ್ವ ಮತ್ತು ಇತಿಹಾಸ ವಿಚಾರಸಂಕಿರಣದಲ್ಲಿ ಮಂಡಿಸಿದ ಲೇಖನ.

೪೬. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೮೪, ಕ್ರಿ.ಶ.೧೦೭೧

೪೭. ಅದೇ, ಹಡಗ–೪೭, ಕ್ರಿ.ಶ.೧೦೨೫

೪೮. ಅದೇ, ಹಡಗ–೧೪–೧೬, ಕ್ರಿ.ಶ.೧೧೯೪–೧೨೦೧

೪೯. ಜಯತೀರ್ಥ ರಾಜಪುರೋಹಿತ, ಕನ್ನಡ ತೀರ್ಪುಗಳು, ಪುಟ.೯

೫೦. ವಾಸುದೇವ ಬಡಿಗೇರ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ಪರಂಪರೆ, ಭಾಗ–೧, ಪು.೨೫೦–೨೫೧.

೫೧. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೫೨, ಕ್ರಿ.ಶ.೧೦೫೭

೫೨. ಅದೇ, ಹಡಗ–೧೯, ಕಾಲ ಉಲ್ಲೇಖವಿಲ್ಲ.

೫೩. ಅದೇ, ಹಡಗ–೩೭, ಕ್ರಿ.ಶ.೧೦೭೪

೫೪. ಅದೇ, ಹಡಗ–೩೬, ಕ್ರಿ.ಶ.೧೧೪೨

೫೫. ಅದೇ, ಹಡಗ–೧೦೩, ಕ್ರಿ.ಶ.೧೧೨೧

೫೬. ಅದೇ, ಹಡಗ–೭೧, ಕ್ರಿ.ಶ.೧೧೧೬

೫೭. ಅದೇ, ಹರಪ–೯, ಕ್ರಿ.ಶ.೧೦೩೫

೫೮. ಬ.ಜಿ.ಶಾಸನಗಳು, ಪೂರ್ವೋಕ್ತ, ಶಾ.ಸಂ.೯೮, ಪು.೩೨

೫೯. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೮೧, ಕ್ರಿ.ಶ.೧೧೪೮

೬೦. ಅದೇ, ಹಡಗ–೪೧, ಕ್ರಿ.ಶ.೧೨ನೇ ಶತಮಾನ

೬೧. ಅದೇ, ಹಡಗ–೬೬, ಕ್ರಿ.ಶ.೧೨೩೩–೩೪

೬೨. ಅದೇ, ಹಡಗ–೯೭, ಕ್ರಿ.ಶ.೧೨೨೬

೬೩. ಅದೇ, ಬಳ್ಳಾರಿ–೨೦, ಕ್ರಿ.ಶ.೧೧೯೮

೬೪. ಎ.ಕ.ಕಡೂರು, ೨೮, ಕ್ರಿ.ಶ.೧೧೫೩

೬೫. ಚಿದಾನಂದಮೂರ್ತಿ ಎಂ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೬೩, ೩೬೪

೬೬. ವಿಜಯನಗರದ (ಹಂಪೆಯ) ಶಾಸನಗಳು, ಸಂಖ್ಯೆ:೨೧೩, ಕ್ರಿ.ಶ.೧೪೧೦, ಪು.೨೬೭

೬೭. ಕ.ವಿ.ವಿ.ಶಾಸನ ಸಂಪುಟ–೧, ಹಡಗ–೯೬, ಕ್ರಿ.ಶ.೧೦೩೮

೬೮. ಅದೇ, ಹಗರಿ–೪೧, ಕ್ರಿ.ಶ.೧೦೫೨–೫೩

೬೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೫೪

೭೦. ಕ.ವಿ.ವಿ.ಶಾ.ಸಂ–೧, ಹಡಗ–೧೦೧, ಕ್ರಿ.ಶ.೧೧೧೦

೭೧. ಅದೇ, ಹಡಗ–೫೩, ಕ್ರಿ.ಶ.೧೨೧೨

೭೨. ಅದೇ, ಪು.xxxiv

೭೩. ಅದೇ, ಹಗರಿ–೩೯, ಕ್ರಿ.ಶ.೧೫೪೪

೭೪. ಅದೇ, ಹಡಗ–೧೧೧, ಕ್ರಿ.ಶ.೧೫೬೨

೭೫. ರಹಮತ್ ತರೀಕೆರೆ (ಸಂ.), ಧರ್ಮ-ವಿಶ್ವಕೋಶ, ಭಾಗ-೩, ಪು.೧೫೩

೭೬. ತಿಪ್ಪೇರುದ್ರಸ್ವಾಮಿ ಎಚ್., ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಪು.೧೯೩

೭೭. ಅದೇ, ಪು.೨೬೩

೭೮. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರ ಸಾಂಸ್ಕೃತಿಕ ಪರಂಪರೆ, ಪು.೨೬೨

೭೯. ಕ.ವಿ.ವಿ.ಶಾ.ಸಂ.೧, ಹಡಗ್-೯೪, ಕ್ರಿ.ಶ.೧೧೮೬

೮೦. ಅದೇ, ಹಡಗ-೬೨, ಕ್ರಿ.ಶ.೧೨೯೭

೮೧. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೩

೮೨. ಅದೇ, ಪು.೨೬೪

೮೩. ಕ.ವಿ.ವಿ.ಶಾ.ಸಂ.೧, ಹಡಗ-೮೩, ಕ್ರಿ.ಶ.೧೧೯೦

೮೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೫

೮೫. ಕ.ವಿ.ವಿ.ಶಾ.ಸಂ.೧, ಹಡಗ-೭೦, ಕ್ರಿ.ಶ.೧೦೫೮

೮೬. ಅದೇ, ಹಡಗ-೭೧, ಕ್ರಿ.ಶ.೧೧೧೬

೮೭. ಅದೇ, ಹಡಗ-೬೫, ಕ್ರಿ.ಶ.೧೨೧೫

೮೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೮೨

೮೯. ಅದೇ, ಪು.೧೩೮

೯೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೫

೯೧. ಅದೇ, ಪು.೨೬೬

೯೨. ಕ.ವಿ.ವಿ.ಶಾ.ಸಂ.೧, ಹಡಗ-೨೩, ಕ್ರಿ.ಶ.೧೦೪೬

೯೩. ಅದೇ, ಹಗರಿ-೨೪, ಕ್ರಿ.ಶ.೧೦೪೫

೯೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೭

೯೫. ಗೋಪಾಲರಾವ್ ಎಚ್.ಎಸ್., ಕಲ್ಯಾಣ ಚಾಲುಕ್ಯ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಪು.೯೦

೯೬. ಅದೇ, ಪು.೯೨

೯೭. ಕ.ವಿ.ವಿ.ಶಾ.ಸಂ.೧, ಹಡಗ-೫೮, ಕಾಲದ ಉಲ್ಲೇಖವಿಲ್ಲ.

೯೮. ಗೋಪಾಲರಾವ್ ಎಚ್.ಎಸ್., ಪೂರ್ವೋಕ್ತ, ಪು.೯೩

೯೯. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೭-೬೮

೧೦೦. ಅದೇ, ಪು.೨೬೮

೧೦೧. ಕ.ವಿ.ವಿ.ಶಾ.ಸಂ.೧, ಹಡಗ್-೯೩, ಕ್ರಿ.ಶ.೧೦೯೭

೧೦೨. ಅದೇ, ಹಗರಿ-೨೪, ಕ್ರಿ.ಶ.೧೦೪೫

೧೦೩. ಅದೇ, ಹಡಗ–೮೩, ಕ್ರಿ.ಶ.೧೯೯೦

೧೦೪. ಅದೇ, ಹಗರಿ–೨, ಕ್ರಿ.ಶ.೧೨೨೬

೧೦೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೬೯

೧೦೬. ಕ.ವಿ.ವಿ.ಶಾ.ಸಂ.೧, ಹಡಗ–೨೩, ಕ್ರಿ.ಶ.೧೦೪೬

೧೦೭. ಅದೇ, ಹಡಗ–೬೧, ಕ್ರಿ.ಶ.೧೧೮೩

೧೦೮. ಅದೇ, ಹಡಗ–೧, ಕ್ರಿ.ಶ.೧೯೯೯

೧೦೯. ಅದೇ, ಹಡಗ–೭, ಕ್ರಿ.ಶ.೧೦೮೭

೧೧೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೨೭೮

೧೧೧. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೫೪

೧೧೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೩

೧೧೩. ಕರ್ನಾಟಕ ಪರಂಪರೆ, ಸಂ.೧, ಪು.೨೧೧

೧೧೪. ನಂಜಮ್ಮಣ್ಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ಪು.೮೪

೧೧೫. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೮೧

೧೧೬. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೪

೧೧೭. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೮೨

೧೧೮. ಕ.ವಿ.ವಿ.ಶಾ.ಸಂ.೧, ಹಡಗ–೩೬, ಕ್ರಿ.ಶ.೧೧೪೨

೧೧೯. ಅದೇ, ಹಗರಿ–೪೦, ಕ್ರಿ.ಶ.೧೫೪೪

೧೨೦. ಬ.ಜಿ.ಶಾಸನಗಳು, ಪೂರ್ವೋಕ್ತ, ಶಾ.ಸಂ.೧೫೫, ಪು.೫೨

೧೨೧. ಕ.ವಿ.ವಿ.ಶಾ.ಸಂ.೧, ಹಡಗ–೯೫, ಕಾಲದ ಉಲ್ಲೇಖವಿಲ್ಲ.

೧೨೨. ಅದೇ, ಹಡಗ–೭೧, ಕ್ರಿ.ಶ.೧೧೧೬

೧೨೩. ಅದೇ, ಹಡಗ–೮೬, ಕ್ರಿ.ಶ.೧೦೬೨

೧೨೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೫

೧೨೫. ಕ.ವಿ.ವಿ.ಶಾ.ಸಂ.೧, ಹಡಗ–೭೧, ಕ್ರಿ.ಶ.೧೧೧೬

೧೨೬. ಕರ್ನಾಟಕ ಪರಂಪರೆ, ಸಂ.೧, ಪು.೩೯೩–೩೯೪

೧೨೭. ಕ.ವಿ.ವಿ.ಶಾ.ಸಂ.೧, ಹಡಗ–೮೩, ಕ್ರಿ.ಶ.೧೯೯೦

೧೨೮. ಅದೇ, ಹಡಗ–೬೫, ಕ್ರಿ.ಶ.೧೨೧೫

೧೨೯. ಅದೇ, ಹಡಗ–೬೭, ಕ್ರಿ.ಶ.೧೨೦೯

೧೩೦. ಅದೇ, ಹಡಗ–೨೮, ಕ್ರಿ.ಶ.೧೪೪೩

೧೩೧. ಅದೇ, ಹಡಗ–೧, ಕ್ರಿ.ಶ.೧೯೯೯

೧೩೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೬

೧೩೩. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೮೪

೧೩೪. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೭

೧೩೫. ಕ.ವಿ.ವಿ.ಶಾ.ಸಂ.೧, ಹಡಗ-೩೭, ಕ್ರಿ.ಶ.೧೦೭೪

೧೩೬. ಅದೇ, ಹಡಗ-೬೬, ಕ್ರಿ.ಶ.೧೨೩೩-೩೪

೧೩೭. ಅದೇ, ಹಡಗ-೧೦, ಕ್ರಿ.ಶ.೧೨ನೇ ಶತಮಾನ

೧೩೮. ಅದೇ, ಹಡಗ-೯, ಕ್ರಿ.ಶ.೧೨೧೮

೧೩೯. ಅದೇ, ಹಡಗ-೩೯, ಕ್ರಿ.ಶ.೧೧೭೮

೧೪೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೭

೧೪೧. ಅದೇ, ಪು.೧೭೭

೧೪೨. ಕ.ವಿ.ವಿ.ಶಾ.ಸಂ.೧, ಹಡಗ-೬೯, ಕಾಲ ಉಲ್ಲೇಖವಿಲ್ಲ.

೧೪೩. ಅದೇ, ಹಡಗ-೪೧, ಕ್ರಿ.ಶ.೧೨ನೇ ಶತಮಾನ

೧೪೪. ಅದೇ, ಹಡಗ-೧, ಕ್ರಿ.ಶ.೧೦೯೯

೧೪೫. ಅದೇ, ಹಡಗ-೩೯, ಕ್ರಿ.ಶ.೧೧೭೮

೧೪೬. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೭೯

೧೪೭. ಕ.ವಿ.ವಿ.ಶಾ.ಸಂ.೧, ಹಡಗ-೫೨, ಕ್ರಿ.ಶ.೧೦೫೭

೧೪೮. ಅದೇ, ಹಡಗ-೯೩, ಕ್ರಿ.ಶ.೧೦೯೭

೧೪೯. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೮೦

೧೫೦. ಕ.ವಿ.ವಿ.ಶಾ.ಸಂ.೧, ಹಡಗ-೭೮, ಕಾಲ ಉಲ್ಲೇಖವಿಲ್ಲ.

೧೫೧. ವಾಸುದೇವ ಬಡಿಗೇರ, ಪೂರ್ವೋಕ್ತ, ಪು.೧೮೦

೧೫೨. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೫೪

೧೫೩. ಕ.ವಿ.ವಿ.ಶಾ.ಸಂ.೧, ಹಡಗ-೮೩, ಕ್ರಿ.ಶ.೧೦೯೦

೧೫೪. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೪೫೮

೧೫೫. ಕ.ವಿ.ವಿ.ಶಾ.ಸಂ.೧, ಹಡಗ-೮೩, ಕ್ರಿ.ಶ.೧೦೯೦

೧೫೬. ಅದೇ, ಹಡಗ-೭೧, ಕ್ರಿ.ಶ.೧೧೧೬

೧೫೭. ಅದೇ, ಹಡಗ-೫, ಕ್ರಿ.ಶ.೧೨೦೫

೧೫೮. ಅದೇ, ಹಡಗ-೧೦೬, ಕ್ರಿ.ಶ.೧೧೫೦

□□

## ಅಧ್ಯಾಯ : ನಾಲ್ಕು

# ಶಾಸನಗಳ ವೈವಿಧ್ಯತೆ

**ಪೀಠಿಕೆ**

ಪ್ರಾಚೀನ ಭಾರತದ ಇತಿಹಾಸದಲ್ಲಿ ಶಾಸನಗಳ ಪಾತ್ರ ತುಂಬಾ ಮಹತ್ವದ್ದಾಗಿದೆ. ಶಾಸನಗಳು ಇತಿಹಾಸದ ರಚನೆಯಲ್ಲಿ ಅಧಿಕೃತ ದಾಖಲೆಗಳಾಗಿವೆ. ಜೊತೆಗೆ ಅಂದಿನ ಕಾಲಘಟ್ಟದ ಸಂದರ್ಭದಲ್ಲಿ ಸಂಭವಿಸಿದ ಘಟನೆಗಳನ್ನು ನಿಖರವಾಗಿ ವಿವರಿಸುತ್ತವೆ. ಸುಮಾರು ೬–೭ನೆಯ ಶತಮಾನಗಳಿಂದ ಈಚೆಗೆ ಭಾರತದ ನಾನಾ ಭಾಗಗಳ ರಾಜವಂಶಗಳ ಶಾಸನಗಳು ವಂಶಸ್ಥಾಪನೆಯಿಂದ ಹಿಡಿದು ಚಾರಿತ್ರಿಕ ವಿವರಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಶಾಸನಗಳು ಸಮಕಾಲೀನ ಸಂದರ್ಭದಲ್ಲಿನ ವ್ಯಕ್ತಿ, ಘಟನೆಗಳನ್ನು ಮಾತ್ರವಲ್ಲದೆ ತಮಗಿಂತ ಹಿಂದಿನ ವ್ಯಕ್ತಿಗಳ ನಡವಳಿಕೆಗಳನ್ನು ನಿರೂಪಿಸುತ್ತವೆ. ಇವು ಯಾವುದೇ ರೀತಿಯ ಕಲ್ಪನೆಯಿಂದ ಅಥವಾ ಊಹೆಗಳಿಂದಾಗಲೀ ಕೂಡಿರುವುದಿಲ್ಲ. ಆಯಾ ಕಾಲಘಟ್ಟದ ಸಂದರ್ಭದಲ್ಲಿ ನಡೆದ ಸಾಂಸ್ಕೃತಿಕ ಚಟುವಟಿಕೆಗಳ ಕುರಿತ ನೈಜಚಿತ್ರಣವನ್ನು ಕಟ್ಟಿಕೊಡುತ್ತವೆ. ಈ ರೀತಿಯ ನೈಜಚಿತ್ರಣವನ್ನು ಕಟ್ಟಿಕೊಡುವ ಶಾಸನಗಳು ಬಹುಕಾಲ ಉಳಿಯುವಂತಹವುಗಳಾಗಿವೆ. ಆದರೆ ಕಲ್ಲಿನ ಮೇಲೆ, ತಾಮ್ರ ಇತ್ಯಾದಿ ಲೋಹ ವಸ್ತುಗಳ ಮೇಲೆ ಲಿಖಿತವಾದ ಬರವಣಿಗೆಯೊಂದನ್ನೇ ಶಾಸನ ಎಂದು ಕರೆಯಲಾಗುವುದಿಲ್ಲ. ಬದಲಾಗಿ ಬರವಣಿಗೆಯನ್ನು ಮಾಧ್ಯಮವನ್ನಾಗಿಸುವ ಎಲ್ಲ ವಸ್ತುಗಳ ಅಂದರೆ ತಾಳೆಗರಿ, ಭೂರ್ಜ್ವಪತ್ರ, ಕಾಗದ ಮೊದಲಾದವುಗಳ ಮೇಲಿನ ಬರವಣಿಗೆಯನ್ನು ಸಹ ಶಾಸನಗಳೆಂದು ಕರೆಯಲಾಗುತ್ತದೆ. ಈಜಿಪ್ಟ್‌ನಲ್ಲಿ ಮರದ ಮೇಲೆ, ಚೀನಾದಲ್ಲಿ ಮೂಳೆಗಳ ಮೇಲೆ, ಮೆಸಪೊಟೋಮಿಯಾ ಮತ್ತು ಕ್ರೇಟೆಗಳಲ್ಲಿ ಹಸಿ ಮಣ್ಣಿನ ಮೇಲೆ ಹೀಗೆ ಹಲವಾರು ವಿಧಗಳಲ್ಲಿ ಬರೆದಿರುವ, ಮುದ್ರೆಗಳನ್ನು ಒತ್ತಿರುವ ಉದಾಹರಣೆಗಳು ಇವೆ.

ಶಾಸನ ಎಂದರೆ ರಾಜಾಜ್ಞೆ ಎಂದರ್ಥ. ರಾಜನು ತಾನು ಕೊಟ್ಟ ದಾನದ ವಿಷಯವಾಗಿಯೇ ಮಾಡಿದ ಧರ್ಮಕಾರ್ಯದ ಬಗ್ಗೆ ಆಜ್ಞೆಯನ್ನು ಹೊರಡಿಸುತ್ತಿದ್ದನು. ಶಾಸನವು 'ಶಾಸ್' ಎಂಬ ಧಾತುವಿನಿಂದ ರೂಪುಗೊಂಡಿದ್ದು ಅದು ಆಜ್ಞಾಪಿಸು, ನಿಯಂತ್ರಿಸು, ಶಿಕ್ಷಿಸು ಎಂಬ ಅರ್ಥವನ್ನು

ಹೊಂದಿದೆ. ಮುಖ್ಯವಾಗಿ ಶಾಸನಗಳೆಂದರೆ ದಾನಶಾಸನಗಳೆಂದೇ ತಿಳಿಯಲಾಗಿತ್ತು. ಆದರೆ ಕಾಲಾನುಕ್ರಮದಲ್ಲಿ ಇವು ವಿಶಾಲವಾದ ಅರ್ಥವನ್ನು ಪಡೆದುಕೊಂಡವು. ಶಾಸನ ಎಂಬುದಕ್ಕೆ ಸಮಾನಾರ್ಥಕವಾಗಿ ಬಳಕೆಯಾಗುತ್ತಿರುವ ಆಂಗ್ಲ ಶಬ್ದ 'Inscription' ಎಂಬ ಪದವು 'Inscribe' ಎಂಬ ಲ್ಯಾಟಿನ್ ಭಾಷೆಯ ಪದದಿಂದ ಬಂದಿದೆ. Inscribe ಎಂದರೆ 'ಮೇಲೆ ಬರೆ' ಎಂಬ ಅರ್ಥವನ್ನು ಹೊಂದಿದೆ. ಹಾಗೆಯೇ Inscription ಎಂಬ ಶಬ್ದಕ್ಕೆ ಸಮಾನಾಂತರವಾಗಿ Epigraphy ಎಂಬ ಪದವೂ ಬಳಕೆಯಲ್ಲಿದೆ. ಇದು epi(ಮೇಲೆ) ಮತ್ತು graphie(ಬರೆ, ಸಂಕೇತ) ಎಂಬ ಎರಡು ಗ್ರೀಕ್ ಪದಗಳಿಂದ ಹುಟ್ಟಿಕೊಂಡಿದೆ. ಇದನ್ನು ಬರಹಗಳ ಅಧ್ಯಯನ ಶಾಸ್ತ್ರವೆಂತಲೂ ಕರೆಯಲಾಗಿದೆ.

ಭಾರತೀಯರು ಶಾಸನ ಎಂಬ ಪದಕ್ಕೆ ವಿಶಾಲಾರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಹೀಗಾಗಿ ಶಾಸನವೆಂಬುದು ಆಜ್ಞೆ, ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ, ಸಂವಿಧಾನ, ನೀತಿ ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತೀರೆಂಬ ಎಚ್ಚರಿಕೆಯ ನೀತಿ ಸಂಹಿತೆಗಳು ಎಂಬ ಅರ್ಥವನ್ನು ಪಡೆದುಕೊಂಡಿತು. ಮಾತ್ರವಲ್ಲದೆ ಅಶೋಕನು ತಾನು ಹಾಕಿಸಿದ ಶಾಸನಗಳನ್ನು ಧರ್ಮಲಿಪಿಗಳೆಂದು ಕರೆದುಕೊಂಡಿದ್ದಾನೆ. ಶಾಸನಗಳ ಕುರಿತು ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

**ಶಾಸನಗಳ ಕುರಿತ ವ್ಯಾಖ್ಯೆಗಳು**

ತಜ್ಞರು ಮತ್ತು ಕೋಶಗಳು ಶಾಸನಗಳನ್ನು ಕುರಿತು ಈ ರೀತಿ ವ್ಯಾಖ್ಯಾನಿಸಿದ್ದಾರೆ.

* ಶಾಸನ ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಹೇಳುತ್ತದೆ–ಕೌಟಿಲ್ಯ ಅರ್ಥಶಾಸ್ತ್ರ

* Document incised on some hard or parmanent meterial in the form of letters or other cenventional sign's, for the purpose of conveying some information or preserving a record. They are therefore, to be distingelished on the one hand from manuscripts or documents written on papysees, parchment, paper or other more or less smooth surface by means of a brush, reed or pen and some coloured fluid.

ತಾಳೆಗರಿ, ಭೂರ್ಜ್ವಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಕೆತ್ತಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು(Encyclopaedia Britannica-XII).

* The inscriptions are redificalsion very frequently of an official character and generally more of less of a public nature which recite facts

simple of complex with or without dates, and were intended to be lasting records of the matters to which they refer.

ಶಾಸನಗಳು ಬಹು ಸಂದರ್ಭದಲ್ಲಿ ಅಧಿಕೃತ ಲಕ್ಷಣವುಳ್ಳ ಸಾಧಾರಣವಾಗಿ ಹೆಚ್ಚು ಕಡಿಮೆ ಸಾರ್ವಜನಿಕ ಸ್ವರೂಪವುಳ್ಳ, ಸರಳವಾದ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಗಬೇಕೆಂದು ಆದ ನಿರ್ದಿಷ್ಟವಾದ ಪ್ರಕಟಣೆಗಳು– Fleet J.F.

* Inscription literally means any writing engraved on some object.

ಶಾಸನವೆಂದರೆ ಯಾವುದಾದರೂ ಒಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ ಅರ್ಥವಾಗುತ್ತದೆ–ಸರ್ಕಾರ್ ಡಿ.ಸಿ.

* ಶಾಸನಗಳು ಸಾಹಿತ್ಯದ ತಲಕಾವೇರಿ–ಚಿದಾನಂದಮೂರ್ತಿ ಎಂ.

* ಶಾಸನ ಎಂಬ ಅರ್ಥಕ್ಕೆ ನಾನಾರ್ಥಗಳಿರುವುದಾದರೂ ಈ ದಾಖಲೆಗಳ ಸಂದರ್ಭದಲ್ಲಿ ಅದಕ್ಕೆ 'ರಾಜಾಜ್ಞೆ' ಎಂಬ ವಿಶಿಷ್ಟಾರ್ಥ ಅನ್ವಯವಾಗುತ್ತದೆ. ಇದನ್ನು ಬರೆಯಿಸಿದವರು ಕೂಡ ಆಗೀಗ ಇವನ್ನು 'ಶಾಸನ' ಎಂದೇ ಹೆಸರಿಸಿದ್ದಾರೆ. ಇದಲ್ಲದೆ ಲಿಪಿ, ಧರ್ಮಲಿಪಿ, ಲೇಖ, ಶಿಲಾಲೇಖ, ಕಲ್ಬರಹ, ತಾಮ್ರಪಟ್ಟಿಕಾ, ತಾಮ್ರಪಟ, ತಾಮ್ರಶಾಸನ ಇತ್ಯಾದಿ ನಾಮಾಂಕಿತಗಳೂ ಶಾಸನಗಳಿಗೆ ಉಂಟು–ನೇಗಿನಹಾಳ ಎಂ.ಬಿ.

* ಶಾಸನಗಳು ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ಮೂಕಸಾಕ್ಷಿಗಳು–ಆರ್.ಸಿ. ಹಿರೇಮಠ, ಕಲಬುರ್ಗಿ ಎಂ.ಎಂ.

* ಶಾಸನಗಳು ಒಂದು ಪ್ರದೇಶದ ಇತಿಹಾಸವನ್ನು, ಸಂಸ್ಕೃತಿಯನ್ನು ತಿಳಿಸುವಲ್ಲಿ ಮೂಕ ಸಾಕ್ಷಿಗಳಾಗಿ ನಿಂತಿವೆ–ನಾಗಯ್ಯ ಜೆ.ಎಂ.

* ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥ ಮಾಡಿಕೊಳ್ಳಲು ಮೂಲ ಸಾಮಗ್ರಿಗಳಾಗಿವೆ–ನಾಗಭೂಷಣ ಸಿ.

**ಬರೆಯುವ ವಸ್ತುಗಳು**

ಶಾಸನಗಳನ್ನು ಬಂಡೆಗಲ್ಲು, ಶಿಲೆ, ಮರದ ಸ್ತಂಭ; ಬಂಗಾರ, ಬೆಳ್ಳಿ, ತಾಮ್ರ, ಕಂಚಿನ ತಗಡುಗಳು; ಇಟ್ಟಿಗೆ, ಶಂಖ, ಮಣ್ಣಿನ ಫಲಕ, ಪಾತ್ರೆ, ಮೃದುವಾದ ಕಲ್ಲು ಮೊದಲಾದ ವಸ್ತುಗಳ ಮೇಲೆ ಕೆತ್ತುತ್ತಿದ್ದರು. ಈ ಶಾಸನಗಳನ್ನು ಅವುಗಳನ್ನು ಬರೆಯಲು ಉಪಯೋಗಿಸಿದ ವಸ್ತುವಿನೊಡನೆ ಸಂಬಂಧ ಕಲ್ಪಿಸಿ ಶಿಲಾಶಾಸನ, ಬಂಡೆಗಲ್ಲು ಶಾಸನ, ತಾಮ್ರ ಶಾಸನ, ಇತ್ಯಾದಿಯಾಗಿ

ಕರೆಯುತ್ತಿದ್ದರೂ ಸಾಮಾನ್ಯವಾಗಿ ಶಿಲಾಶಾಸನ ಮತ್ತು ತಾಮ್ರಶಾಸನ ಎಂಬ ಸ್ಥೂಲವಾದ ಎರಡು ವಿಭಾಗಗಳನ್ನು ಮಾಡುತ್ತಾರೆ. ಶಿಲೆಗಳ ಮೇಲೆ ಮತ್ತು ತಾಮ್ರದ ತಗಡುಗಳ ಮೇಲೆ ಸಿಗುವ ಅಸಂಖ್ಯಾತ ಶಾಸನಗಳು ಇದಕ್ಕೆ ಕಾರಣವೆಂದು ತೋರುತ್ತದೆ.

ಶಾಸನಗಳನ್ನು ಸಿದ್ಧಗೊಳಿಸುವಲ್ಲಿ ಸಾಮಾನ್ಯವಾಗಿ ಮೂವರು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಮೊದಲನೆಯವರು ಕೃತಿಕಾರ, ಎರಡನೆಯವರು ಲಿಪಿಕಾರ ಮತ್ತು ಮೂರನೆಯವರು ಶಿಲ್ಪಿ. ಇಲ್ಲಿ ಕೃತಿಕಾರನು ಒಬ್ಬ ಕವಿಯಾಗಿರುತ್ತಿದ್ದನು ಅಥವಾ ಒಬ್ಬ ಉನ್ನತಾಧಿಕಾರಿಯಾಗಿರುತ್ತಿದ್ದನು. ಈತನು ಶಾಸನದ ವಿಷಯವನ್ನು ತಾಳಪತ್ರ ಅಥವಾ ಭೂರ್ಜ್ವ ಪತ್ರದ ಮೇಲೆ ಬರೆಯುತ್ತಿದ್ದನು. ಈ ವಿಷಯವನ್ನು ಲಿಪಿಕಾರನು ಶಿಲೆಯ ಮೇಲೆ ಅಥವಾ ತಾಮ್ರಪಟದ ಮೇಲೆ ಬಳಪದಿಂದಲೋ ಅಥವಾ ಮಸಿಯಿಂದಲೋ ಬರೆದುಕೊಡುತ್ತಿದ್ದ. ಶಿಲ್ಪಿಯಾದವನು ಅದನ್ನು ಕೊರೆಯುತ್ತಿದ್ದನು. ಹೀಗೆ ಶಿಲಾಶಾಸನಗಳಲ್ಲಿ ಈ ಮೂವರ ಪಾತ್ರ ಪ್ರಮುಖವಾದುದಾಗಿದೆ. ಕೆಲವು ಸಂದರ್ಭದಲ್ಲಿ ಲಿಪಿಕಾರನ ಮತ್ತು ಕೃತಿಕಾರನ ಕೆಲಸಗಳೆರಡನ್ನು ಒಬ್ಬನೇ ಮಾಡುತ್ತಿದ್ದನು. ನಂತರ ಶಿಲ್ಪಿ ಕೆತ್ತುತ್ತಿದ್ದನು. ಹೀಗೆ ಶಾಸನಗಳನ್ನು ತಯಾರಿಸುವುದರಲ್ಲಿ ಅದಕ್ಕೆ ಬೇಕಾಗುವ ಸಿದ್ಧತೆಯೂ ಕೂಡ ಪ್ರಮುಖವಾಗಿದೆ. ಈ ಮೇಲಿನ ಅಂಶಗಳೆಲ್ಲವೂ ಕೂಡ ಶಾಸನಕ್ಕೆ ಸಂಬಂಧಿಸಿದ್ದು ಅವುಗಳ ಕುರಿತ ಸಾಮಾನ್ಯ ಜ್ಞಾನವಾಗಿದೆ.

ಶಾಸನಗಳನ್ನು ಅವುಗಳ ಗುಣಲಕ್ಷಣಗಳಿಗೆ ಅನುಗುಣವಾಗಿ ಕೆಲವು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಪ್ರಶಸ್ತಿ ಶಾಸನಗಳು, ದಾನಶಾಸನ, ವೀರಗಲ್ಲುಗಳು, ನಿಸಿದಿಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ಎಂದು. ಇಲ್ಲಿ ಪ್ರಶಸ್ತಿ ಶಾಸನಗಳೆಂದರೆ ಇವು ರಾಜನ ದಿಗ್ವಿಜಯಗಳನ್ನು ಕೀರ್ತಿಸುವ ಶಾಸನಗಳಾಗಿವೆ. ಈ ಶಾಸನಗಳನ್ನು ಪ್ರಸಿದ್ಧ ಕವಿಗಳು ಮಾತ್ರ ರಚಿಸುತ್ತಿದ್ದರು. ಈ ಶಾಸನಗಳು ಅಂದಿನ ಸಂದರ್ಭದ ನಾಡಿನ ರಾಜಕೀಯ ಇತಿಹಾಸವನ್ನು ಪುನಾರಚಿಸುವಲ್ಲಿ ಬಹುವಾಗಿ ನೆರವಿಗೆ ಬರುತ್ತವೆ. ಮುಖ್ಯವಾಗಿ ಈ ಶಾಸನಗಳಲ್ಲಿ ಗಮನಿಸಬೇಕಾಗಿರುವುದೇನೆಂದರೆ ರಾಜನ ಕುರಿತ ಉತ್ಪ್ರೇಕ್ಷೆ. ಅಂದರೆ ಈ ಶಾಸನಗಳನ್ನು ರಚಿಸಿದವರು ಆಯಾ ರಾಜರ ಆಶ್ರಿತ ರಾಗಿದ್ದುದರಿಂದ ಉತ್ಪ್ರೇಕ್ಷೆ ಸಹಜವಾಗಿಯೇ ಇರುತ್ತದೆ. ಇದು ಹೆಚ್ಚಾಗಿ ಶಿಲಾಶಾಸನಗಳಲ್ಲಿಯೇ ಇರುವುದು ಕಂಡುಬರುತ್ತದೆ. ಇನ್ನು ದಾನಶಾಸನಗಳೆಂದರೆ ವ್ಯಕ್ತಿಗೆ ಅಥವಾ ಸಂಸ್ಥೆಗಳಿಗೆ ಕೊಟ್ಟ ದಾನದ ಕುರಿತದ್ದಾಗಿದೆ. ಇಲ್ಲಿ ವ್ಯಕ್ತಿ ಎಂದರೆ ವೀರನಾಗಿರಬಹುದು ಅಥವಾ ವಿದ್ವಾಂಸನಾಗಿರಬಹುದು. ಇವರಿಗೆ ಕೊಟ್ಟ ದಾನವಾಗಿದೆ. ಇನ್ನು ಸಂಸ್ಥೆ ಎಂದರೆ ದೇವಾಲಯ, ಮಠ, ಮಹಾಜನಗಳಿಗೆ ಬಿಟ್ಟ ದತ್ತಿಗಳು ಸೇರಿಕೊಳ್ಳುತ್ತವೆ. ದಾನಶಾಸನಗಳು ತಾಮ್ರಪಟ ಮತ್ತು ಶಿಲಾಶಾಸನಗಳೆರಡರಲ್ಲೂ ಕಂಡುಬರುತ್ತವೆ. ಮುಖ್ಯವಾಗಿ ದೇವರ ಅಂಗಭೋಗಕ್ಕೆ, ರಂಗಭೋಗಕ್ಕೆ, ತ್ರಿಕಾಲ ನೈವೇದ್ಯಕ್ಕೆ ಬಿಟ್ಟ ದತ್ತಿ ಅಥವಾ ದಾನಗಳು ಹೆಚ್ಚಾಗಿ ಕಂಡುಬರುತ್ತವೆ. ಇನ್ನು ವೀರಗಲ್ಲುಗಳು ಬಹುತೇಕವಾಗಿ ದಾನಗಳೇ ಆಗಿವೆ. ಮಾಸ್ತಿ ಎಂಬುದು ಮಹಾಸತಿಯ ತದ್ಭವ ರೂಪವಾಗಿದೆ. ಗಂಡನು ಮರಣ

ಹೊಂದಿದಾಗ ಅವನ ಜೊತೆ ಚಿತೆ ಏರುತ್ತಿದ್ದವಳನ್ನು ಮಹಾಸತಿ ಎಂದು ಕರೆಯುತ್ತಿದ್ದರು. ಹೀಗೆ ಮಾಸ್ತಿ ಆದವರ ನೆನಪಿಗೆ ನಿಲ್ಲಿಸಿದ ಕಲ್ಲುಗಳೇ ಮಾಸ್ತಿಕಲ್ಲುಗಳು. ಕೊನೆಯದಾಗಿ ನಿಸಿದಿಗಲ್ಲುಗಳೆಂದರೆ ಜೈನಸನ್ಯಾಸಿಗಳು ಮತ್ತು ಗೃಹಸ್ಥರು ಸಲ್ಲೇಖನ ವ್ರತದಿಂದ ಮರಣ ಹೊಂದಿರುವುದನ್ನು ತಿಳಿಸುವ ಶಾಸನಗಳಾಗಿವೆ.

ಭಾರತದಾದ್ಯಂತ ಮತ್ತು ಕರ್ನಾಟಕದಾದ್ಯಂತ ಹಲವಾರು ಶಾಸನಗಳು ದೊರೆಯುತ್ತವೆ. ಸಮುದ್ರಗುಪ್ತನ ಅಲಹಾಬಾದ್ ಶಾಸನ, ಖಾರವೇಲನ ಹಾಥಿಗುಂಫ ಶಾಸನ, ಕಾಕುಸ್ಥವರ್ಮನ ತಾಳಗುಂದ ಶಾಸನ ಹೀಗೆ ಹಲವಾರು ಶಾಸನಗಳು ಪ್ರಶಸ್ತಿ ಶಾಸನಗಳಿಗೆ ಉದಾಹರಿಸಬಹುದು. ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿಯೂ ಹಲವಾರು ಶಾಸನಗಳು ಈ ಪ್ರಕಾರಗಳಿಗೆ ಸೇರಲ್ಪಡುತ್ತವೆ. ಅಂದರೆ ಇಲ್ಲಿ ದಾನಶಾಸನಗಳಿವೆ, ವೀರಗಲ್ಲುಗಳಿವೆ, ಮಹಾಸತಿಗಲ್ಲುಗಳಿವೆ, ನಿಸಿದಿಗಲ್ಲುಗಳಿವೆ. ಹಾಗಾಗಿ ಅಧ್ಯಯನದ ದೃಷ್ಟಿಯಿಂದ ಹಡಗಲಿ ತಾಲೂಕನ್ನು ಆಯ್ಕೆ ಮಾಡಿಕೊಂಡಿದ್ದು ಈ ತಾಲೂಕಿನಲ್ಲಿ ಹಲವಾರು ಶಾಸನಗಳು ಕಂಡುಬಂದಿವೆ. ಈ ಶಾಸನದ ಪ್ರಕಾರಗಳನ್ನು ಹಡಗಲಿ ತಾಲೂಕಿಗೆ ಸಂಬಂಧಿಸಿದಂತೆ ವಿವರಿಸಲಾಗಿದೆ. ಮೊದಲನೆಯದಾಗಿ ದಾನಶಾಸನ.

### ೪.೧. ದಾನಶಾಸನಗಳು

ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ದಾನಶಾಸನಗಳ ಸಂಖ್ಯೆ ಅಧಿಕವಾಗಿದೆ. ಪ್ರಾಚೀನ ಕಾಲದಲ್ಲಿ ದಾನಶಾಸನಗಳನ್ನು ಕೇವಲ ರಾಜರಷ್ಟೇ ಅಲ್ಲದೆ ಮಹಾಮಂಡಳೇಶ್ವರರು, ವ್ಯಾಪಾರಿ ವರ್ಗದವರು, ಗಾವುಂಡರು, ಆಡಳಿತ ವರ್ಗದವರು ಮತ್ತು ಸಾಮಾನ್ಯ ಜನರೂ ಸಹ ಹಾಕಿಸುತ್ತಿದ್ದರು. ದೇವಾಲಯಗಳ ನಿರ್ಮಾಣಕ್ಕೆ, ಕೆರೆ ಕಟ್ಟಲು, ಅಗ್ರಹಾರಗಳನ್ನು ಸ್ಥಾಪಿಸಲು, ವಿದ್ಯಾಕೇಂದ್ರಗಳನ್ನು ನಿರ್ಮಿಸಲು, ಬಾವಿಗಳನ್ನು ತೋಡಿಸಲು, ಅರವಟ್ಟಿಗೆಗಳನ್ನು ನಿರ್ಮಿಸಲು ಮತ್ತು ಅನ್ನಸತ್ರಗಳಿಗೆ ದಾನದ ರೂಪವಾಗಿ ಭೂಮಿಯನ್ನು, ದವಸಧಾನ್ಯಗಳನ್ನು, ಆದಾಯದಿಂದ ಬಂದ ತೆರಿಗೆಗಳನ್ನು ಹೀಗೆ ಹಲವಾರು ರೀತಿಯಲ್ಲಿ ದಾನಗಳನ್ನು ನೀಡುತ್ತಿದ್ದರು. ದಾನವು ಜೀವನದ ಮೌಲ್ಯಗಳಲ್ಲಿ ಒಂದಾಗಿದ್ದು, ಮನುಷ್ಯ ಸತ್ತ ನಂತರ ಮೋಕ್ಷ ದೊರೆಯಬೇಕಾದರೆ ದಾನವನ್ನು ನೀಡಿರಲೇಬೇಕು ಎಂಬ ನಂಬಿಕೆ ಜನರಲ್ಲಿ ಇತ್ತು. ಹೀಗಾಗಿ ದಾನಕ್ಕೆ ಹೆಚ್ಚಿನ ಮಹತ್ವ ದೊರೆಯಿತು. ದಾನ ವ್ಯವಸ್ಥೆಯು ಅಂದಿನ ಸಂದರ್ಭದಲ್ಲಿನ ಆರ್ಥಿಕ ವ್ಯವಸ್ಥೆಯನ್ನು ತಿಳಿಸುತ್ತದೆ. ಕೆಲವು ಸಂದರ್ಭಗಳಲ್ಲಿ ದಾನವು ಪ್ರತಿಷ್ಠೆಯ ಸಂಕೇತವಾಗುತ್ತಿತ್ತು. ಸಮಾಜದಲ್ಲಿ ಯಾರು ಎಷ್ಟು ದಾನ ಮಾಡುತ್ತಾರೋ ಅವರನ್ನು ಶ್ರೇಷ್ಠ ದಾನಿಗಳು ಎಂದು ಕರೆಯಲಾಗುತ್ತಿತ್ತು. ಅಂದರೆ ತಮ್ಮ ತಮ್ಮ ಗೌರವವನ್ನು ಹೆಚ್ಚಿಸಿಕೊಳ್ಳಲು ದಾನವನ್ನು ನೀಡುತ್ತಿದ್ದರು. ಸ್ತ್ರೀಯರೂ ಕೂಡ ದಾನ ನೀಡುವ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಅತ್ತಿಮಬ್ಬೆ. ಈಕೆಯು ತನ್ನ ಒಡೆತನದ ಬಹುಪಾಲು ಸಂಪತ್ತನ್ನು ಅನೇಕ ವಿಧದಲ್ಲಿ ದಾನ ನೀಡಿ "ದಾನ ಚಿಂತಾಮಣಿ" ಎಂಬ ಬಿರುದಿಗೆ ಪಾತ್ರಳಾಗಿದ್ದಳು. ಜನರ ಅಭಿವೃದ್ಧಿಗಾಗಿ ಮತ್ತು ದೇವಾಲಯಗಳ

ಅಭಿವೃದ್ಧಿಗಾಗಿ ಹಲವಾರು ರೀತಿಯ ದಾನಗಳನ್ನು ನೀಡಿರುವುದರ ಕುರುಹುಗಳಾಗಿ ದಾನಶಾಸನಗಳು ಕಂಡುಬರುತ್ತವೆ. ಕೆಲವು ಸಂದರ್ಭಗಳಲ್ಲಿ ಮಕ್ಕಳಿಗೆ ಪುಣ್ಯವಾಗಲೆಂದು ದಾನಗಳನ್ನು ನೀಡಿರುವ ಉದಾಹರಣೆಗಳಿವೆ.

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನಲ್ಲಿ ದೊರೆತಿರುವ ಶಾಸನಗಳಲ್ಲಿನ ದಾನಶಾಸನಗಳನ್ನು ಮುಖ್ಯವಾಗಿ ಪಲ್ಲವರ ಕಾಲದ ಒಂದು ಶಾಸನ ಈ ಭಾಗದಲ್ಲಿ ದೊರೆತಿರುವುದರಿಂದ ಮತ್ತು ಈ ಶಾಸನವು ದಾನಶಾಸನವಾಗಿರುವುದರಿಂದ ಪಲ್ಲವರ ಕಾಲದಿಂದಲೇ ಆರಂಭಿಸುವುದು ಸೂಕ್ತ.

ಹಿರೇಹಡಗಲಿ ಗ್ರಾಮದ ವ್ಯಾಪಾರಿ ಚೆನ್ನಪ್ಪನಲ್ಲಿ ಇದ್ದಂತಹ ಒಂದು ತಾಮ್ರಪಟದಲ್ಲಿನ ಶಾಸನವು ಪಲ್ಲವ ವಂಶದ ಶಿವಸ್ಕಂದವರ್ಮನ ಕಾಲದ್ದಾಗಿದೆ. ಚಿಲ್ಲರೆಕೋಂಡುಂಕ ಗ್ರಾಮದ ಭೋಜಕರಾದ ಅಪಿಟಿಯಲ್ಲಿ ವಾಸಿಸಿದ ಬ್ರಾಹ್ಮಣರಿಗೆ ಈ ಮೊದಲು ನೀಡಲ್ಪಟ್ಟಿದ ದಾನವನ್ನು ಅರಸನು ದೃಢೀಕರಿಸಿದ್ದು ಮತ್ತು ಈ ದಾನವನ್ನು ವೃದ್ಧಿಸಿದ್ದನ್ನು ಸೂಚಿಸುತ್ತದೆ. ಮುಖ್ಯವಾಗಿ ಈ ದಾನವು ಒಂದು ತೇಜ, ಎರಡು ತುಂಡು ಭೂಮಿ ಮತ್ತು ಕೆಲವು ಆಳುಗಳನ್ನು ಒಳಗೊಂಡಿತ್ತು[೧] ಎಂದು ಶಾಸನ ತಿಳಿಸುತ್ತದೆ. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ದಾನವಾಗಿ ಆಳುಗಳನ್ನು ಸಹ ನೀಡುತ್ತಿದ್ದರು ಎಂಬುದನ್ನು. ಇದು ಬ್ರಾಹ್ಮಣರಿಗೆ ನೀಡಿದ ದಾನವಾಗಿರುವುದರಿಂದ ತಮಗಿಂತ ಕೆಳಗಿನ ಜಾತಿಯವರು ಆಳುಗಳನ್ನಾಗಿ ದುಡಿಯುವವರನ್ನು ಒಂದು ವಸ್ತುವಿನ ರೂಪದಲ್ಲಿ ದಾನವಾಗಿ ನೀಡುತ್ತಿದ್ದರು ಎಂಬಂತಹ ಅಂಶವನ್ನು ಗಮನಿಸಬಹುದಾಗಿದೆ.

**ಕಲ್ಯಾಣ ಚಾಲುಕ್ಯರ ಕಾಲದ ದಾನಶಾಸನಗಳು**

ಪಲ್ಲವರ ನಂತರದಲ್ಲಿ ಈ ಪ್ರದೇಶದಲ್ಲಿ ಕಲ್ಯಾಣ ಚಾಲುಕ್ಯರ ಶಾಸನಗಳು ದೊರೆಯುತ್ತವೆ. ಚಾಲುಕ್ಯ ಅರಸ ಜಯಸಿಂಹ II (ಜಗದೇಕಮಲ್ಲ) ಈತನ ಆಡಳಿತದ ಸಂದರ್ಭದಲ್ಲಿ ಮಾನ್ಯರ ಮಸಲವಾಡ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಒಂದು ಶಾಸನದಲ್ಲಿ ಅಯ್ಯಾಣ ಬೀವಜೋಗರಸ, ಮಾರಗಾವುಂಡ ಮತ್ತು ಇತರರು ಮೊಸಳೆಮಡುವಿನ ಕಲಿದೇವರ ದೇವಸ್ಥಾನಕ್ಕೆ ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸಲಾಗಿದೆ.[೨] ಸೋಗಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದ ಹೊರಗಿನ ಕಲ್ಲಿನ ಮೇಲಿನ ಶಾಸನವು ಜಗದೇಕಮಲ್ಲದೇವನು ಉದಯಾದಿತ್ಯ ಮತ್ತು ಜಗದೇಕಮಲ್ಲ ನಿರ್ಮಡಿ ನೊಳಂಬರಿಗೆ ಒಂದು ತೋಟದ ಜೊತೆಗೆ ೫೦ ಮತ್ತರು ಭೂಮಿಯನ್ನು ದಾನ ಮಾಡಿರುವುದನ್ನು ತಿಳಿಸುತ್ತದೆ. ಹಾಗೆಯೇ ಈ ದಾನವನ್ನು ಸೊಂಗೆಯೂರಿನ ಮಹಾಜನರ ಉಪಸ್ಥಿತಿಯಲ್ಲಿ ಜರುಗಿಸಿದ್ದನ್ನು ತಿಳಿಸುತ್ತದೆ.[೩] ಜಗದೇಕಮಲ್ಲನ ಆಳ್ವಿಕೆಯ ಸಂದರ್ಭದಲ್ಲಿಯೇ ಶಿವಪಾದ ಎಂಬ ಗ್ರಾಮದಲ್ಲಿ ಆಂಜನೇಯ ದೇವಸ್ಥಾನದ ಮುಂದಿನ ಒಂದು ಶಾಸನದಲ್ಲಿ ಹೊಸ ವಡಂಗಿಲೆಯ ಮಹಾಜನರು ದೇವಸ್ಥಾನಕ್ಕೆ ಭೂಮಿ ದಾನ ಮಾಡಿರುವುದನ್ನು ಮತ್ತು ಸರಸ್ವತಿ ದೇವಿಗೆ ದಾನ ನೀಡಿದ ಬಗ್ಗೆಯೂ ತಿಳಿಸುತ್ತದೆ. ಈ ಶಾಸನವು ತುಂಬಾ ಹಾಳಾಗಿದೆ.

ಕಲ್ಯಾಣ ಚಾಲುಕ್ಯ ಅರಸನಾದ ಅಹವಮಲ್ಲ, ತ್ರೈಲೋಕ್ಯಮಲ್ಲನೆಂದು ಬಿರುದಾಂಕಿತನಾದ ಒಂದನೇ ಸೋಮೇಶ್ವರನ ಆಳ್ವಿಕೆಯ ಸಂದರ್ಭದಲ್ಲಿಯೂ ಸಹ ಹಲವಾರು ದಾನ-ದತ್ತಿಗಳನ್ನು ನೀಡಲಾಗಿತ್ತು. ಅವುಗಳ ಉಲ್ಲೇಖವೂ ಕೂಡ ಶಾಸನಗಳಲ್ಲಿ ದೊರೆಯುತ್ತದೆ.

ಮೈಲಾರ ಗ್ರಾಮದ ಸೋಮಲಿಂಗೇಶ್ವರ ದೇವಸ್ಥಾನದ ಮುಖ್ಯದ್ವಾರದ ಬಳಿ ಇರುವ ಶಾಸನವು ಕ್ರಿ.ಶ.೧೦೪೬ಕ್ಕೆ ಸೇರಿದ್ದಾಗಿದೆ. ಈ ಶಾಸನದಲ್ಲಿ ಪೆರ್ಗಡೆ ಕಾಳಿಮರಸನು ಮೇಳಿಮಡುವಿನ ತೇಜೋರಾಶಿ ಪಂಡಿತನ ಶಿಷ್ಯನಾದ ಚಿಲ್ಲುಕಾಚಾರ್ಯನಿಗೆ ಸ್ವಯಂಭುದೇವ ಮತ್ತು ಮೂಲಸ್ಥಾನ ದೇವರ ಸೇವೆಗೆ ಭೂಮಿಯನ್ನು, ಎರಡು ಮನೆ ಮತ್ತು ಒಂದು ಅಂಗಡಿಯನ್ನು ದಾನ ನೀಡಿರುವ ಉಲ್ಲೇಖವಿದೆ.[೪]

ತಳಕಲ್ಲು ಗ್ರಾಮದ ಕಲ್ಲೇಶ್ವರ ದೇವಸ್ಥಾನದಲ್ಲಿನ ಶಾಸನವು ಅರಸನು ದುರಸ್ತಿಗೊಂಡ ಗುಂಡಿಕೆರೆಯ ನಿರ್ವಹಣೆಗೆ ೧೨ ಮತ್ತರು ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೫] ಇಲ್ಲಿ ಕೆರೆಯನ್ನು ನಿರ್ವಹಿಸಿಕೊಂಡು ಹೋಗುವವರು ಉತ್ತಮ ರೀತಿಯಲ್ಲಿ ಕೆರೆಯನ್ನು ಅಭಿವೃದ್ಧಿಪಡಿಸಬೇಕೆಂಬ ನಿಟ್ಟಿನಲ್ಲಿ ಭೂಮಿಯನ್ನು ದಾನವಾಗಿ ನೀಡಿದ್ದಾರೆ. ಹಾಗೆಯೇ ಹಿರೇಹಡಗಲಿ ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿ ದೊರೆತ ಶಾಸನದಲ್ಲಿ ಅರಸನು ದೇವಸ್ಥಾನವನ್ನು ಕಟ್ಟಿಸಿ, ದೇಮೇಶ್ವರ ದೇವರನ್ನು ಪ್ರತಿಷ್ಠಾಪಿಸಿದ್ದನ್ನು ಮತ್ತು ಕ್ರಿ.ಶ.೧೧೦೭ರ ಮಾರ್ಚ್ ೨೫ರಂದು ದಂಡನಾಯಕನಾದ ಮಾಚಿದೇವನು ಅದೇ ದೇವರ ಸೇವೆಗೆ ತೆರಿಗೆಯನ್ನು ಅಥವಾ ತೆರಿಗೆ ಆದಾಯವನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[೬] ತ್ರಿಭುವನಮಲ್ಲನು ಭೂಮಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ರಂಗಾಪುರದ ನರಸಿಂಹ ದೇವಸ್ಥಾನದ ಒಂದು ಶಾಸನದಲ್ಲಿ ಮಾಂಗೋಳದ ಮಹಾಜನರು ನರಸಿಂಹ ದೇವರ ಸೇವೆಗೆ ೨೩ ಮತ್ತರು ಭೂಮಿಯನ್ನು ಮತ್ತು ಗಣಪತಿ ದೇವರ ಸೇವೆಗಾಗಿ ಭೂದಾನ ಮಾಡಿರುವರು. ಹೂವಿನಹಡಗಲಿಯ ಪಾಂಡುರಂಗ ದೇವಸ್ಥಾನದ ಹತ್ತಿರದ ಶಾಸನವು ವಿಷ್ಣುವರ್ಧನ ವಿಜಯಾದಿತ್ಯನು ಕಲಿದೇವರ ಸೇವೆಗೆ ಮತ್ತು ಸತ್ರಕ್ಕೆ ಪುಲಿಯಕೆರೆಯ ಅಗ್ರಹಾರವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಈ ಶಾಸನವು ಒಂದನೇ ಸೋಮೇಶ್ವರನ ಕಾಲದ್ದಾಗಿದೆ.[೭] ಮೊದಲಘಟ್ಟ ಗ್ರಾಮದ ತುಂಗಭದ್ರ ಅಣೆಕಟ್ಟೆಯ ಅಸಿಸ್ಟಂಟ್ ಇಂಜಿನಿಯರ್ ಕಚೇರಿಯ ಪ್ರವೇಶದ್ವಾರದ ಹತ್ತಿರ ಬಿದ್ದಿರುವ ಶಾಸನದಲ್ಲಿ ಒಂದನೇ ಸೋಮೇಶ್ವರ ಅರಸನು ದೇವರ ಪೂಜೆಗೆ ಮತ್ತು ಕೆಲವು ವ್ಯಕ್ತಿಗಳಿಗೆ ಭೂಮಿ, ಎಣ್ಣೆ, ಗಾಣ ಮುಂತಾದವುಗಳನ್ನು ದಾನ ಮಾಡಿದ್ದನ್ನು ತಿಳಿಸಲಾಗಿದೆ. ಇವು ಒಂದನೇ ಸೋಮೇಶ್ವರ ಆಳ್ವಿಕೆಯ ಸಂದರ್ಭದಲ್ಲಿ ಕೆತ್ತಲ್ಪಟ್ಟಿರುವ ಶಾಸನಗಳಾಗಿವೆ.

ಚಾಲುಕ್ಯ ಅರಸ ಎರಡನೇ ಸೋಮೇಶ್ವರನ ಕಾಲದಲ್ಲಿನ ಒಂದು ಶಾಸನವು ದೊರೆತಿದ್ದು ಈ ಶಾಸನವು ಕ್ರಿ.ಶ.೧೦೭೪ರಲ್ಲಿ ಕೆತ್ತಲ್ಪಟ್ಟಿದೆ. ಈ ಶಾಸನದಲ್ಲಿ ೧೨೦ ಮಹಾಜನರು ಗವರೇಶ್ವರ ದೇವರ ಸೇವೆಗೆ ಭೂಮಿ ದಾನ ನೀಡಿದ್ದನ್ನು ತಿಳಿಸುತ್ತದೆ. ಈ ಶಾಸನವು ಹಡಗಲಿ ತಾಲೂಕಿನ

ಹೊಳಲು ಗ್ರಾಮದ ವೀರಭದ್ರ ದೇವಸ್ಥಾನದಲ್ಲಿ ದೊರೆತಿದೆ. ಚಾಲುಕ್ಯ ಅರಸರಲ್ಲಿಯೇ ಪ್ರಮುಖ ಮತ್ತು ಪ್ರಖ್ಯಾತ ಅರಸನಾಗಿದ್ದ ೬ನೆಯ ವಿಕ್ರಮಾದಿತ್ಯನ ಕಾಲದಲ್ಲಿನ ಹಲವಾರು ಶಾಸನಗಳು ಹಡಗಲಿಯಲ್ಲಿ ದೊರೆತಿವೆ. ಇವು ದಾನಶಾಸನಗಳಾಗಿವೆ. ಯದುವಂಶದ ಅರಸ ಮಹೇಂದ್ರನು ಹೊಸ ವಡಂಗಿಲೆಯ ಮೂಲಸ್ಥಾನ ದೇವರ ದೇವಸ್ಥಾನಕ್ಕೆ ಭೂಮಿಯನ್ನು ದಾನವಾಗಿ ನೀಡಿದ್ದಾನೆ. ಅದೇ ಶಾಸನದಲ್ಲಿ ಮಲಿಯಣ್ಣನೆಂಬುವವನು ಮಲ್ಲಿಕಾರ್ಜುನ ದೇವರ ದೇವಸ್ಥಾನಕ್ಕೆ ಆಲಘಟ್ಟದ ಹಳುಗಿನಲು ಮತ್ತು ಇತರ ಪ್ರದೇಶಗಳಲ್ಲಿ ಭೂಮಿಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಈ ಶಾಸನವು ಹಿರೇಹಡಗಲಿಯಲ್ಲಿನ ವೀರಭದ್ರ ದೇವಸ್ಥಾನದ ಮುಂಭಾಗದಲ್ಲಿದೆ.[೮]

ಹೂವಿನ ಹಡಗಲಿಯಲ್ಲಿನ ಕೇಶವಸ್ವಾಮಿ ದೇವಸ್ಥಾನದಲ್ಲಿನ ಒಂದು ಶಾಸನವು ಸಂಪೂರ್ಣವಾಗಿ ದಾನವನ್ನು ನೀಡಿದ ವಿಷಯವನ್ನೇ ಹೇಳುತ್ತದೆ. ಇಲ್ಲಿ ಬ್ರಾಹ್ಮಣ ದಂಡನಾಯಕನಾದ ರವಿ ದಂಡನಾಯಕನ ಹೆಂಡತಿಯಾದ ರೆಬ್ಬಲದೇವಿಯು ಕೇಶವ ದೇವರಿಗೆ ದೇವಸ್ಥಾನ ಕಟ್ಟಿಸಿದ್ದನ್ನು, ಅದರ ಸೇವೆಗೆ ಭೂಮಿಯನ್ನು ಮತ್ತು ಬ್ರಾಹ್ಮಣರ ಸತ್ರಕ್ಕೆ ಭೂಮಿಯನ್ನು ದಾನವಾಗಿ ನೀಡಿದ್ದಾಳೆ. ಹಾಗೆಯೇ ಒಂದು ಹೂವಿನ ತೋಟವನ್ನು, ಒಂದು ಮನೆಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ನಂತರ ರವಿಯಣ ಭಟ್ಟನ ವಿನಂತಿಯಂತೆ ರಾಜನು ಕೇಶವ ದೇವರ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಮತ್ತು ಪೂಜೆಗಾಗಿ ಒಂದು ಗ್ರಾಮವನ್ನು ದಾನವಾಗಿ ನೀಡಿದ್ದಾನೆ. ನಂತರದ ದಿನಗಳಲ್ಲಿ ಅನೇಕ ವ್ಯಕ್ತಿಗಳು ದೇವಸ್ಥಾನಕ್ಕೆ ವೀಳ್ಯದ ಎಲೆ, ಗಂಧ, ಪೂಜೆ, ದೀಪ, ಚೈತ್ರ ಪೂಜೆಗಳಿಗೆ ಭೂಮಿ ಮತ್ತು ಹಣವನ್ನು ದಾನ ಮಾಡಿದ್ದುದರ ಉಲ್ಲೇಖ ಈ ಶಾಸನದಲ್ಲಿ ಕಂಡುಬರುತ್ತದೆ.[೯] ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಏನೆಂದರೆ ಮಹಿಳೆಯರೂ ಸಹ ದಾನ ಮಾಡುವುದರಲ್ಲಿ ಪುರುಷರಿಗಿಂತ ಕಡಿಮೆ ಇಲ್ಲ ಎಂಬುದನ್ನು ರೆಬ್ಬಲದೇವಿ ತೋರಿಸಿಕೊಟ್ಟಿದ್ದಾಳೆ. ಇವಳು ಒಬ್ಬ ಬ್ರಾಹ್ಮಣ ಸೇನಾಧಿಕಾರಿಯ ಹೆಂಡತಿಯಾಗಿದ್ದಾಳೆ. ಹಾಗೆಯೇ ಈ ಶಾಸನವೊಂದರಲ್ಲಿಯೇ ಕೇಶವ ದೇವಾಲಯಕ್ಕೆ ಹಲವು ರೀತಿಯ ದಾನಗಳು ದೊರೆತಿರುವುದರ ಉಲ್ಲೇಖ ಕಂಡುಬರುತ್ತದೆ. ೬ನೇ ವಿಕ್ರಮಾದಿತ್ಯನ ಮಹಾಸಾಮಂತ ಅರಸ ಚಾವುಂಡರಸನ ಮಗನಾದ ಮಹಾಮಂಡಲೇಶ್ವರ ಗಂಗರಸನು[೧೦] ಅವರ ತಂದೆ ತನ್ನದೆಂದು ಕಟ್ಟಿಸಿದ ಬಾಳೇಶ್ವರ ದೇವಸ್ಥಾನದ ಸೇವಾಕಾರ್ಯಗಳಿಗೆ ಎರಕಗಾವುಂಡನ ಕೈಯಲ್ಲಿ ಭೂದಾನ ಮಾಡಿಸಿದನು ಎಂಬ ವಿವರವೂ ಕೂಡ ಶಾಸನದಿಂದ ತಿಳಿದುಬರುತ್ತದೆ. ಕುರುವತ್ತಿಯ ಶಾಸನವು ಗ್ರಾಮದ ೨೦೦ ಮಹಾಜನರು ಮತ್ತು ಗ್ರಾಮದ ಮುಖ್ಯಸ್ಥನಾದ ಕಾಳಿದಾಸನು ಅಭಿನವ ಸೋಮೇಶ್ವರ ದೇವಸ್ಥಾನದಲ್ಲಿ ನಡೆಯುವ ಪೂಜೆ, ಉತ್ಸವ, ಧೂಪಗಳಿಗೆ ಮತ್ತು ತಪೋಧನರ ಊಟಕ್ಕೆ ಭೂಮಿ ಮತ್ತು ಗ್ರಾಮದಿಂದ ಹೊರಗೆ ಹೋಗುವ ಮತ್ತು ಒಳಗೆ ಬರುವ ಹುಲ್ಲು, ಸೌದೆ, ತರಕಾರಿ, ಹಣ್ಣು ಮತ್ತು ಹತ್ತಿಯ ಮೇಲೆ ವಿಧಿಸಿದ ತೆರಿಗೆ ಮತ್ತು ಹಣವನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.[೧೧] ಆ ಗ್ರಾಮಕ್ಕೆ ಆಮದು ಮತ್ತು ರಫ್ತು ಆಗುವ ವಸ್ತುಗಳ ಮೇಲೆ ವಿಧಿಸಿದ ತೆರಿಗೆಯಿಂದ ಬಂದ ಹಣವನ್ನು ಈ ದೇವಸ್ಥಾನಕ್ಕೆ ನೀಡಲಾಗುತ್ತಿತ್ತು. ಸೋಗೆಯ ದಂಡನಾಯಕರಾದ ನಾಗವರ್ಮಯ್ಯ ನಾಯಕ

ಮತ್ತು ಮಹಾನಾಯಕರು ಭೂಮಿ ದಾನ ನೀಡಿದಂತೆ ಉಲ್ಲೇಖವಿದೆ.[೧೨] ಈ ಶಾಸನವು ಸೋಗಿ ಗ್ರಾಮದ ಕೇಶವ ದೇವಸ್ಥಾನದಲ್ಲಿದೆ. ಸೋಗಿಯ ಹತ್ತಿರದ ನಾಗಸಮುದ್ರ ಕೆರೆಗೆ ದಾನ ಮಾಡಿದ್ದನ್ನು ತಿಳಿಸುತ್ತದೆ.[೧೩] ಈ ಶಾಸನವು ಹೂವಿನಹಡಗಲಿಯಲ್ಲಿ ದೊರೆತಿದೆ. ರಂಗಾಪುರ ಗ್ರಾಮದಲ್ಲಿನ ನರಸಿಂಹ ದೇವಸ್ಥಾನದಲ್ಲಿನ ಶಾಸನವು ರಾಣಿ ಪದ್ಮಲದೇವಿಯು ನರಸಿಂಘದೇವರ ದೇವಸ್ಥಾನಕ್ಕೆ ತೆರಿಗೆರಹಿತ ಭೂಮಿಯನ್ನು ಮತ್ತು ಹಣವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ.[೧೪] ಸೋಗಿಯಲ್ಲಿನ ಕೇಶವ ದೇವಸ್ಥಾನದಲ್ಲಿನ ಶಾಸನವು ಬ್ರಾಹ್ಮಣ ನಾಗವರ್ಮಯ್ಯ ನಾಯಕ, ಕಾಳಿಮಯ್ಯ ನಾಯಕ ಮತ್ತು ಮಹಾದೇವಯ್ಯ ನಾಯಕ ಎಂಬ ಮೂವರು ಸಹೋದರರು ಕೇಶವ ದೇವರ ದೇವಸ್ಥಾನಕ್ಕೆ ಪ್ರತಿದಿನದ ಪೂಜೆಗೆ ಭೂಮಿ ಮತ್ತು ಒಂದು ಮಾನ ಎಣ್ಣೆಯನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧೫] ಹೂವಿನಹಡಗಲಿಯ ಕಲ್ಲೇಶ್ವರ ದೇವಸ್ಥಾನದಲ್ಲಿನ ಶಾಸನದಲ್ಲಿ ತ್ರಿಭುವನಮಲ್ಲನು ಪೂವಿನ ಪಡಂಗಿಲೆಯ ಕಲಿದೇವರ ಸೇವೆಗೆ, ಲಾಕುಳೇಶ್ವರ ಪಂಡಿತರ ಮಠದ ತಪೋಧನರ ಊಟಕ್ಕೆ ಮತ್ತು ವಿದ್ಯಾರ್ಥಿಗಳ ಸೇವಕರ, ಸಂಗೀತಗಾರರ ಆಹಾರ ಮತ್ತು ಬಟ್ಟೆಗಾಗಿ ಕೋಗಳಿ ೫೦೦ರ ಉಪ ವಿಭಾಗವಾದ ಹಾಲ್ವೊಳ ೧೨ರಲ್ಲಿಯ ಕೋಟಿಗನೂರು ಗ್ರಾಮವನ್ನು ದಾನವಾಗಿ ನೀಡಿದ ಉಲ್ಲೇಖವಿದೆ. ಜೊತೆಗೆ ಮಹಾಸಾಮಂತನಾದ ಘಟ್ಟಿಯರಸನು ಅದೇ ದೇವರಿಗೆ ಕೋಟಿಗನೂರು ಮನ್ನೆಯ ಸಾಮ್ಯವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೧೬] ಹೊಳಲು ಗ್ರಾಮದಲ್ಲಿ ದೊರೆತ ಶಾಸನವೂ ಕೂಡ ದಾನಶಾಸನವಾಗಿದೆ. ಗಂಡರಾದಿತ್ಯನ ಪೊಳಲ ಗ್ರಾಮದ ಕೊಯ್ಲುಳಿದೇವ ಮತ್ತು ೧೨೦ ಮಹಾಜನರು ಕೋಲೇಶ್ವರ ದೇವಸ್ಥಾನಕ್ಕೆ ಗೌಡಗೆರೆಯಲ್ಲಿ ೧೦೦ ಕಂಬ ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸುತ್ತದೆ. ಹೀಗೆ ತ್ರಿಭುವನಮಲ್ಲನೆಂದು ಬಿರುದು ಪಡೆದುಕೊಂಡ ೬ನೇ ವಿಕ್ರಮಾದಿತ್ಯನ ಆಡಳಿತದ ಸಂದರ್ಭದಲ್ಲಿ ದೊರೆತ ಶಾಸನಗಳೆಲ್ಲವೂ ದಾನಶಾಸನಗಳಾಗಿವೆ.

ಚಾಲುಕ್ಯ ಅರಸ ೨ನೇ ಜಗದೇಕಮಲ್ಲನ ಆಳ್ವಿಕೆಯ ಸಂದರ್ಭದಲ್ಲಿಯೂ ಸಹ ಹಲವಾರು ಶಾಸನಗಳು ಕೆತ್ತಲ್ಪಟ್ಟಿವೆ. ಹೊಳಲು ಗ್ರಾಮದಲ್ಲಿನ ಒಂದು ಶಾಸನವು ವೀರಪಾಂಡ್ಯದೇವನ ಅಧೀನ ಅಧಿಕಾರಿಯಾದ ಅಣುಕ ಪಲ್ಲವರಾಯನು ಮೂರು ಲಕ್ಷ ಅಡಕೆಯ ಸುಂಕ, ವಡ್ಡರಾವುಳ ಮತ್ತು ಹೆಜ್ಜುಂಕಗಳನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೧೭] ಹೊಳಲಿನ ೧೨೦ ನಾಗರಿಕರು ಗವರೇಶ್ವರ ದೇವಸ್ಥಾನದಲ್ಲಿ ನಡೆಯುತ್ತಿದ್ದ ದಿನನಿತ್ಯದ ಪೂಜೆಗೆ ಭೂಮಿಯನ್ನು ದಾನ ನೀಡಿರುವುದನ್ನು ತಿಳಿಸುತ್ತದೆ.[೧೮] ಈ ಶಾಸನವು ಹೊಳಲು ಗ್ರಾಮದಲ್ಲಿದೆ.

ಈ ಮೇಲೆ ಉಲ್ಲೇಖಿಸಿದ ದಾನಶಾಸನಗಳಲ್ಲೆವೂ ಕೂಡ ಕಲ್ಯಾಣ ಚಾಲುಕ್ಯರ ಕಾಲದಲ್ಲಿನ ಶಾಸನಗಳಾಗಿವೆ. ಮುಖ್ಯವಾಗಿ ಇವರ ಆಡಳಿತದ ಸಂದರ್ಭದಲ್ಲಿ ದೇವಸ್ಥಾನಗಳಿಗೆ ಹೆಚ್ಚಿನ ರೀತಿಯಲ್ಲಿ ದಾನವನ್ನು ನೀಡಿರುವುದನ್ನು ಗಮನಿಸಬಹುದಾಗಿದೆ. ಎಂ.ಪಿ.ವೀಣಾ ಅವರು ಹೂವಿನಹಡಗಲಿಯಲ್ಲಿ ಶೋಧ ನಡೆಸಿ ಎರಡು ಶಾಸನಗಳನ್ನು ಬೆಳಕಿಗೆ ತಂದಿದ್ದಾರೆ. ಇವು ಇತಿಹಾಸ ದರ್ಶನ ಸಂಪುಟದಲ್ಲಿ ಪ್ರಕಟವಾಗಿವೆ. ಈ ಎರಡೂ ಶಾಸನಗಳು ಹೂವಿನಹಡಗಲಿಯಲ್ಲಿಯೇ

ದೊರೆತಿವೆ. ಇವು ಸಹ ದಾನಶಾಸನಗಳಾಗಿದ್ದು, ಇವುಗಳೆರಡೂ ಪಾಂಡುರಂಗ ದೇವಾಲಯದಲ್ಲಿಯೇ ದೊರೆತಿವೆ. ಮೊದಲನೆಯ ಶಾಸನವು ೫ ದಾಖಲೆಗಳನ್ನು ಒಳಗೊಂಡಿದೆ.[೧೯] ಇನ್ನೊಂದು ಶಾಸನವೂ ಕೂಡ ದಾನಶಾಸನವಾಗಿದ್ದು ಅದರಲ್ಲಿ ಮುದ್ದರಸ ಎಂಬ ವ್ಯಕ್ತಿಯು ತನ್ನ ಸುಂಕದ ಆದಾಯವನ್ನು ಸೋಮೇಶ್ವರ ದೇವರಿಗೆ ದಾನ ಮಾಡಿದ ಉಲ್ಲೇಖವಿದೆ.[೨೦]

### ಹೊಯ್ಸಳರ ಕಾಲದ ದಾನಶಾಸನಗಳು

ಹೊಯ್ಸಳರ ಆಡಳಿತದ ಸಂದರ್ಭದಲ್ಲಿಯೂ ಸಹ ಹಲವಾರು ಶಾಸನಗಳು ಇರುವುದನ್ನು ಹಡಗಲಿಯಲ್ಲಿನ ಶಾಸನಗಳನ್ನು ನೋಡಿದರೆ ತಿಳಿದುಬರುತ್ತದೆ. ಹೊಯ್ಸಳ ಅರಸ ಎರಡನೇ ಬಲ್ಲಾಳನ ಕಾಲದಲ್ಲಿ ಹಲವಾರು ಶಾಸನಗಳು ಕೆತ್ತಲ್ಪಟ್ಟವು. ಬಸವೆಯ ನಾಯಕನ ಮಗನಾದ ಚೌಡೆಯ ನಾಯಕನಿಗೆ ಮಹಾಜನರು ಭೂಮಿಯನ್ನು ದಾನ ನೀಡಿದರು ಎಂಬ ಉಲ್ಲೇಖವಿದೆ.[೨೧] ವೀರಬಲ್ಲಾಳದೇವನು ಅಹವಮಲ್ಲೇಶ್ವರ ದೇವಸ್ಥಾನದ ದುರಸ್ತಿ, ಉತ್ಸವ ಪೂಜೆಗಳಿಗಾಗಿ ಬೆಣ್ಣೆವೂರು-೧೨ರಲ್ಲಿಯ ಬಾಡ ಮತ್ತು ಮುಕ್ಕರಬ್ಬೆ ಗ್ರಾಮಗಳನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ.[೨೨] ಈ ಶಾಸನವು ಕುರುವತ್ತಿ ಗ್ರಾಮದಲ್ಲಿ ಇದೆ. ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ ರಾಣಿ ಪದುಮಲದೇವಿಯ ಮಹಾಪ್ರಧಾನ ಭಂಡಾರಿ ಸೋವರಸನು ಅಹವಮಲ್ಲೇಶ್ವರನ ದೇವಸ್ಥಾನದ ಪೂಜೆಗೆ ಭೂಮಿಯನ್ನು ದಾನವಾಗಿ ನೀಡಿದ್ದಾನೆ.[೨೩] ಹಾಗೆಯೇ ಇದೇ ದೇವಸ್ಥಾನದ ದೀಪ ಮತ್ತು ದೂಪದ ವ್ಯವಸ್ಥೆಗಾಗಿ ಮಗ್ಗ, ಎಣ್ಣೆ, ಗಾಣ ಮತ್ತು ಪಂಚಕಾರುಕ ಮೇಲಿನ ಸುಂಕವನ್ನು ಅರಸಿಕೆರೆಯ ಮಹಾಪ್ರಧಾನರು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ಹಾಗೆಯೇ ಕುರುವತ್ತಿ ಗ್ರಾಮದ ಮಹಾಜನರು ಕೂಡ ಇದೇ ದೇವಸ್ಥಾನಕ್ಕೆ ೨ ಗುಣಿಗನ ಮತ್ತರು ಭೂಮಿಯನ್ನು ದಾನ ನೀಡಿದ್ದಾರೆ. ಸೋಗಿಯಲ್ಲಿ ದೊರೆತ ಶಾಸನಗಳಲ್ಲಿ ಕಲ್ಲಿನಾಥ ದೇವರ ಸೇವೆಗೆ ಸುಂಕಾಧಿಕಾರಿಯಾದ ಸಿರಿಪಣ್ಣನು ಪಾಂಡ್ಯ ನಾಡಿನ ಸುಂಕದ ಆದಾಯದಲ್ಲಿ ಪ್ರತಿ ವರ್ಷ ಎರಡು ಗದ್ಯಾಣಗಳನ್ನು ದಾನವಾಗಿ ನೀಡಿದ್ದಾನೆ. ಹಾಗೆಯೇ ಪಾಂಡ್ಯನಾಡಿನಲ್ಲಿಯ ಕೋಗಳಿ ನಾಡಿನ ಧಾನ್ಯದ ಆದಾಯದ ೧ ಗದ್ಯಾಣ ಮತ್ತು ೧೦ ಪಣಗಳನ್ನು ಸೋಗೆಯ ಸೋಮನಾಥ ದೇವರ ಪ್ರತಿದಿನದ ಪೂಜೆಗೆ ದಾನವನ್ನು ನೀಡಲಾಗಿದೆ. ಬಿದ್ದಿರುವ ತುಂಡುಕಲ್ಲಿನ ಮೇಲಿನ ಶಾಸನವು ದಾನಶಾಸನವಾಗಿದ್ದು ವಿಷ್ಣುವರ್ಧನ ವೀರಬಲ್ಲಾಳನ ಕಾಲದ್ದಾಗಿದೆ. ಈ ಶಾಸನವು ನಾಗವರ್ಮನ ವಂಶದ ಕಾಳಿಮಯ್ಯನ ಮಗ ತಿಲಕಯ್ಯನು ಕೋಗಳಿಯ ಜೈನಗುರು ಉಭಯಾಚಾರ್ಯನಿಗೆ ಭೂಮಿಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[೨೪] ಮಂಗಳೇಶನ ಮರ್ಮರಸನ ಭಂಡಾರಿಯಾದ ಬ್ರಾಹ್ಮಣ ಸಿಂಗಯ್ಯ ಮತ್ತು ಇತರ ಮಹಾಜನರು ಶಿವ, ವಿಷ್ಣು ಮತ್ತು ಸೂರ್ಯ ದೇವರ ದೇವಸ್ಥಾನಗಳಿಗೆ ಭೂಮಿದಾನ ಮಾಡಿದ್ದನ್ನು ಮಾಗಳ ಗ್ರಾಮದಲ್ಲಿನ ಶಾಸನವು ತಿಳಿಸುತ್ತದೆ. ಈ ದೇವಸ್ಥಾನಗಳನ್ನು ಮರ್ಮರಸನು ಕಟ್ಟಿಸಿದ್ದರ ಉಲ್ಲೇಖವೂ ಇದೆ.[೨೫] ಹಾಗೆಯೇ ಇದೇ ಗ್ರಾಮದಲ್ಲಿನ ವೇಣುಗೋಪಾಲ ದೇವಸ್ಥಾನದಲ್ಲಿನ ಒಂದು ಶಾಸನದಲ್ಲಿ ಊರಿನ

ಒಡೆಯರಾದ ಹರಿಹರ ಮತ್ತು ಗೋವಿಂದರು ಮಾಂಗೋಳದ ಮಹಾಜನರ ಸಹಾಯದಿಂದ ಶ್ರೀ ವೇಣುಗೋಪಾಲ ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿರುವರು. ದೇವರ ಪೂಜೆಗೆ ಭೂಮಿ ಮತ್ತು ಮನೆಗಳನ್ನು ದಾನ ಮಾಡಿದ ವಿಷಯ ತಿಳಿದುಬರುತ್ತದೆ.[೨೬]

ಹೊಯ್ಸಳರು ಇತಿಹಾಸದ ಪುಟಗಳಲ್ಲಿ ತಮ್ಮ ಆಡಳಿತದ ವೈಖರಿಯನ್ನು ಮೆರೆದುದರಲ್ಲಿ ಪ್ರಮುಖರಾದವರು. ಇವರ ಆಡಳಿತದ ಸಂದರ್ಭದಲ್ಲಿಯೇ ಅಂದರೆ ಹೊಯ್ಸಳ ಅರಸ ವಿಷ್ಣುವರ್ಧನನ ಆಳಿಕೆಯಲ್ಲಿ ಪ್ರಸಿದ್ಧ ಶ್ರೀವೈಷ್ಣವ ಸಂತರಾದ ರಾಮಾನುಜರು ಕರ್ನಾಟಕಕ್ಕೆ ಆಗಮಿಸಿದ್ದುದು ಒಂದು ಗಮನಾರ್ಹ ಸಂಗತಿಯಾಗಿದೆ. ಒಂದು ನಂಬಿಕೆಯ ಪ್ರಕಾರ ಶ್ರೀ ರಾಮಾನುಜರು ಮತೀಯ ಹಿಂಸೆಯನ್ನು ತಾಳಲಾರದೆ ಚೋಳ ದೇಶದಿಂದ ಇಲ್ಲಿಗೆ ಬಂದರೆಂಬ ಪ್ರತೀತಿ ಇದೆ. ಇವರು ವಿಷ್ಣುವರ್ಧನನ್ನು ಸಂಧಿಸಿದಾಗ ಅವರಿಗೆ ಎಂಬತ್ತರ ಮೇಲ್ಪಟ್ಟು ವಯಸ್ಸಾಗಿತ್ತು. ವಿಷ್ಣುವರ್ಧನನು ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿ ದೇವಸ್ಥಾನಗಳಿಗೆ ದಾನ ದತ್ತಿಗಳನ್ನು ಉದಾರವಾಗಿ ನೀಡಿದನು. ಹೊಯ್ಸಳರು ಕೇವಲ ಕರ್ನಾಟಕಕ್ಕೆ ಸೀಮಿತವಾಗದೇ ಇವರು ತಮಿಳು ದೇಶಕ್ಕೂ ಪ್ರವೇಶಿಸಿ ಅಲ್ಲಿ ತಮ್ಮ ಪ್ರಭಾವವನ್ನು ಹರಡಿದ್ದಾರೆ. ಕೊಯಮತ್ತೂರು, ಮಧುರೆ ಮತ್ತು ಸೇಲಂ ಜಿಲ್ಲೆಗಳಲ್ಲಿ ಹಲವಾರು ಹೊಯ್ಸಳ ಶಾಸನಗಳು ದೊರೆತಿವೆ.[೨೭]

**ಯಾದವರ ಕಾಲದ ದಾನಶಾಸನಗಳು**

ಹಡಗಲಿಯಲ್ಲಿ ಹೊಯ್ಸಳರ ನಂತರ ಯಾದವರ ಕಾಲದ ದಾನಶಾಸನಗಳು ದೊರೆಯುತ್ತವೆ. ಯಾದವರು ಕಲ್ಯಾಣ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದರು. ಆದರೆ ಹೊಯ್ಸಳರೊಂದಿಗೆ ತೀವ್ರ ಹೋರಾಟವನ್ನು ನಡೆಸುತ್ತಿದ್ದರಿಂದ ಅವರ ರಾಜ್ಯದ ಎಲ್ಲೆಯು ಬದಲಾಗುತ್ತಿತ್ತು. ಯಾದವರ ಅರಸರಾದ ಮಹಾದೇವ, ರಾಮಚಂದ್ರ ಇವರ ಕಾಲದ ಶಾಸನಗಳು ಹಡಗಲಿಯಲ್ಲಿ ದೊರೆತಿವೆ. ಮಹಾದೇವರಾಯನ ಕಾಲದ ಒಂದು ಶಾಸನವು ಕೊಟ್ನಕಲ್ಲು ಗ್ರಾಮದಲ್ಲಿದೆ. ಈ ಶಾಸನವು ಕೋಟಿಗನೂರಿನ ಮಧುವಯ್ಯನು ಐದು ಮತ್ತರು ಭೂಮಿಯನ್ನು ಕೋಟಿಶಂಕರ ದೇವರ ಸೇವೆಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[೨೮] ಹಾಗೆಯೇ ಹ್ಯಾರಡ ಗ್ರಾಮದಲ್ಲಿನ ಶಾಸನದಲ್ಲಿ ಮಹಾಪ್ರಸಾಯಿತ ದಳವಯ್ಯ... ಸೋವಿದೇವನು ಶ್ರೀ ಪರ್ವತದಲ್ಲಿ ಮಲ್ಲಿಕಾರ್ಜುನ ದೇವರ ಸೇವೆಗೆ ಹೆರಡ ಗ್ರಾಮ ವನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಮನ್ನೇರು ಮಸಲವಾಡ ಗ್ರಾಮದ ಪಾಳುಬಿದ್ದ ಮಠದ ನಿವೇಶನದಲ್ಲಿನ ಕಲ್ಲಿನ ಮೇಲಿನ ಶಾಸನವು ಮಹಾಮಂಡಲೇಶ್ವರ ಭೈರವ ದೇವರಸನು ಮೊಸಳೆಮಡುವಿನ ಜಿನ ದೇವಸ್ಥಾನದ ಪೂಜೆ ಪುನಸ್ಕಾರಗಳಿಗೆ ಭೂಮಿಯನ್ನು ದಾನವಾಗಿ ನೀಡಿದ್ದಾನೆ. ಹಾಗೆಯೇ ಎಂಟು ಹಿಟ್ಟುಗಳು ಮತ್ತು ಗ್ರಾಮದ ಜನರು ಹಗರನೂರಿನ ಪರಿಶಗೌಡನನ್ನು ತಮ್ಮ ಮುಖ್ಯಸ್ಥನನ್ನಾಗಿ ಮಾಡಿಕೊಂಡು ಮೊಸಳವಾಡದಲ್ಲಿ ಪಾರ್ಶ್ವನಾಥ ದೇವರ ದೇವಸ್ಥಾನಕ್ಕೆ ಭೂಮಿ ದಾನ ನೀಡಿದ್ದನ್ನು ತಿಳಿಸುತ್ತದೆ. ಈ ಎರಡೂ ದಾನದ

ಉಲ್ಲೇಖಗಳು ಒಂದೇ ಶಾಸನದಲ್ಲಿದೆ.[೨೯] ಜಕ್ಕರಸನು ರಾಮನಾಥ ದೇವರಿಗೆ ಚಿನ್ನವನ್ನು ದಾನವಾಗಿ ನೀಡಿರುವ ಉಲ್ಲೇಖ ರಂಗಾಪುರ ಗ್ರಾಮದ ರಾಮೇಶ್ವರ ದೇವಸ್ಥಾನದ ನವರಂಗದ ಬಲಗಡೆ ಕಂಬದ ಶಾಸನದಲ್ಲಿದೆ.[೩೦] ಇವರ ಕಾಲದ ಅವಧಿಯಲ್ಲಿ ದೇವಾಲಯಗಳು ಸಂಪತ್ತಿನ ಕೇಂದ್ರಗಳಾಗಿದ್ದವು. ಮುಖ್ಯವಾಗಿ ಇವರು ಜೈನ ದೇವಾಲಯಗಳಿಗೆ ಹೆಚ್ಚಿನ ಪ್ರೋತ್ಸಾಹವಿತ್ತುದನ್ನು ಅವರ ಶಾಸನಗಳಿಂದಲೇ ತಿಳಿಯಬಹುದಾಗಿದೆ.

**ವಿಜಯನಗರ ಕಾಲದ ದಾನಶಾಸನಗಳು**

ಹಡಗಲಿಯಲ್ಲಿ ವಿಜಯನಗರದ ಅರಸರ ಕಾಲದ ಹಲವಾರು ಶಾಸನಗಳು ದೊರೆತಿವೆ. ಮೊದಲನೆಯ ಬುಕ್ಕರಾಯ, ಎರಡನೇ ದೇವರಾಯ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ ಇವರ ಕಾಲದ ಶಾಸನಗಳು ಹಡಗಲಿಯಲ್ಲಿ ದೊರೆತಿವೆ. ಇವುಗಳಲ್ಲಿ ಹೆಚ್ಚಿನವು ದಾನಶಾಸನಗಳೇ ಆಗಿವೆ. ಸೋಗಿ ಗ್ರಾಮದಲ್ಲಿನ ಶಾಂತೀಶ್ವರ ದೇವಸ್ಥಾನದ ತೋಟದಲ್ಲಿನ ಶಾಸನವು ಶ್ರೀ ಕೃಷ್ಣದೇವರಾಯನ ಕಾಲದ್ದಾಗಿದೆ. ಕೊಟ್ಟೂರಿನ ಪ್ರಧಾನ ಅರುಹತಿಮಣನಾಯಕನು ಸೋಗೆಯಲ್ಲಿನ ಗೋವಿನ ಅರವಟಿಗೆಯ ಧರ್ಮಪತದ ನಿರ್ವಹಣೆಗೆ ದಣ್ಣಾಯಕಪುರ ಗ್ರಾಮವನ್ನೇ ದಾನ ನೀಡಿದ್ದನ್ನು ತಿಳಿಸುತ್ತದೆ.[೩೧] ಅಣ್ಣಾಜಿಯು ಲಿಂಗಭಟ್ಟನ ಮಗ ಸಿಂಗಭಟ್ಟನಿಗೆ ಕಲ್ಲಹಳ್ಳಿ ಗ್ರಾಮವನ್ನೇ ದಾನವಾಗಿ ನೀಡಿದ್ದನ್ನು ಮುಸುಕಿನ ಕಲ್ಲಹಳ್ಳಿಯಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿನ ಶಾಸನವು ತಿಳಿಸುತ್ತದೆ. ಈ ಶಾಸನವು ಅಚ್ಯುತರಾಯನ ಕಾಲದ್ದಾಗಿದೆ; ಸದಾಶಿವರಾಯ ಕಾಲದ ಶಾಸನವು ಹಡಗಲಿಯ ಹಗರನೂರು ಗ್ರಾಮದಲ್ಲಿ ದೊರೆತಿದೆ. ಈ ಶಾಸನದಲ್ಲಿ ಬೊಮ್ಮನಾಯಕನು ಮಯಿಲಾರದ ಕಪಿಲಮುನಿ–ಹೆಗ್ಗಪ–ಶಿವಾಚಾರ್ಯ–ವೊಡೆಯನ ಮಗ ವರುಣಕಾಂತ ವೊಡೆಯನಿಗೆ ಕೋಟೂರು ಸೀಮೆಯಲ್ಲಿರುವ ರಂಗಾಪುರ ಸ್ಥಳದಲ್ಲಿಯ ಅಮರಗೆರೆ ಗ್ರಾಮವನ್ನು ದಾನ ನೀಡಿದ ಉಲ್ಲೇಖವಿದೆ.[೩೨] ನಕ್ಕರಹಾಳ ಗ್ರಾಮದ ಆಂಜನೇಯ ದೇವಸ್ಥಾನದ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಗಾಜುಲ್ಲ–ನಾಗಯ್ಯನ ಮಗನೂ ಮತ್ತು ನಗರೆಹಾಳದ ಅಧಿಕಾರಿಯೂ ಆದ ಪೆದಪನು ಸೇನಬೊವ ತಿಮ್ಮರಸ, ಗೌಡ, ತಳಾರ ಮತ್ತು ಜೋಯಿಸರಿಗೆ ಮಾನ್ಯ ಭೂಮಿಗಳನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಹಾಗೆಯೇ ಕ್ರಿ.ಶ.೧೫೪೮ರಲ್ಲಿ ದೊರೆತ ಇನ್ನೊಂದು ಶಾಸನವು ಕೃಷ್ಣಪನಾಯಕನು ಬೊಮ್ಮಪುರದ ತಿಮಪನಿಗೆ ಕೋಗಳಿ–ವಳಿತದೊಳಗಿನ ನೂರ–ಸೀಮೆಯಲ್ಲಿರುವ ನಗರೂರು ಎಂದು ಕರೆಯಲ್ಪಡುತ್ತಿದ್ದ ನಗರೆಹಳ್ಳಿಯನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ; ಅರಸನು ಸದಾಶಿವ ಮಹಾರಾಯನು ಭಯಿರಾಪುರ ಗ್ರಾಮಕ್ಕೆ ಪ್ರತಿನಾಮವಾದ ಗೋಪಿನಾಥಪುರವನ್ನು ತಿಮಲಾಪುರ ಅಗ್ರಹಾರದ ಬಂದೇಶ್ವರ ಮತ್ತು ಗೋಪಿನಾಥ ದೇವರಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[೩೩] ಹೀಗೆ ವಿಜಯನಗರದ ಅರಸರ ಕಾಲಾವಧಿಯಲ್ಲಿ ಹೆಚ್ಚಾಗಿ ಪಾಳೆಯಗಾರರು, ಮಹಾಪ್ರಧಾನರು, ಅಧಿಕಾರಿ ವರ್ಗದವರೇ ದಾನವನ್ನು ನೀಡಿರುವ ಉಲ್ಲೇಖಗಳು ದೊರೆಯುತ್ತವೆ. ಇವುಗಳಲ್ಲದೆ ಹಡಗಲಿಯಲ್ಲಿ ಹಲವಾರು ಶಾಸನಗಳು ತ್ರುಟಿತವಾಗಿವೆ. ಈ ತ್ರುಟಿತಗೊಂಡಿರುವ

ಶಾಸನಗಳಲ್ಲಿ ಕೆಲವು ಶಾಸನಗಳಿಗೆ ವಿವರವಿದೆ. ಆದರೆ ರಾಜರ ಕಾಲಮಾನದ ವಿವರಗಳಿಲ್ಲ. ಆದರೂ ಸಹ ಇವು ಪ್ರಮುಖವಾಗಿವೆ. ಹೀಗೆ ತ್ರುಟಿತಗೊಂಡ ಶಾಸನಗಳಲ್ಲಿಯೂ ಸಹ ದಾನಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಕ್ರಿ.ಶ.೧೦೪೮ರಲ್ಲಿನ ಶಾಸನದಲ್ಲಿ ಚನ್ದಿಮಯ್ಯನು ದೇವಸ್ಥಾನಕ್ಕೆ ಒಂದು ಹೇರು ವೀಳ್ಯದೆಲೆಯನ್ನು ದಾನ ನೀಡಿರುವ ಉಲ್ಲೇಖವಿದೆ. ಬ್ರಹ್ಮಪುರಿ ಕುರುವತ್ತಿಯ ಊರೊಡೆಯ ಮತ್ತಿತರರು ಒಂದು ಹೂವಿನ ತೋಟಕ್ಕೆ ಭೂಮಿಯನ್ನು ದಾನ ನೀಡಿದ್ದಾರೆ. ಈ ಶಾಸನವು ಕ್ರಿ.ಶ.೧೦೮೭ರ ಕಾಲದ್ದಾಗಿದೆ.[೩೪] ಮಹಾಮಂಡಲೇಶ್ವರ ವೀರಪಾಂಡ್ಯ ದೇವನ ಚಿಕ್ಕಪ್ಪನಾದ ವಿಕ್ರಮಪಾಂಡ್ಯನು ತನ್ನ ಪತ್ನಿ ಬಾಚಲದೇವಿ ಮತ್ತು ಮಗಳು ಮಹಾದೇವಿಯರಸಿಯರಿಗೆ ಪುಣ್ಯವಾಗಲೆಂದು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಹಿರೇಹಡಗಲಿಯಲ್ಲಿನ ಒಂದು ಶಾಸನವು ತಿಳಿಸುತ್ತದೆ.[೩೫] ವಿಜಯಪಾಂಡ್ಯನ ಸಾಮಂತನಾದ ಶಂಕರಪಾಂಡ್ಯನು ಗಂಡರಾದಿತ್ಯನ–ಹೊಳಲ ಗೌರೀಶ್ವರ ದೇವಸ್ಥಾನದಲ್ಲಿ ಪ್ರತಿನಿತ್ಯ ನಡೆಯುವ ಪೂಜೆಗೆ ಅಡಿಕೆಯ ಮೇಲಿನ ಹೆಜ್ಜುಂಕ ಮತ್ತು ಇತರ ಕೆಲವು ಸುಂಕಗಳನ್ನು ದಾನ ನೀಡಿರುವ ಉಲ್ಲೇಖವು ಹೊಳಲು ಗ್ರಾಮದ ಶಾಸನವೊಂದರಲ್ಲಿ ದೊರೆಯುತ್ತದೆ.[೩೬] ಹೀಗೆ ಹಲವಾರು ಶಾಸನಗಳು ದಾನದ ಬಗ್ಗೆ ಉಲ್ಲೇಖಿಸಿರುವುದನ್ನು ಹಡಗಲಿ ತಾಲೂಕಿನಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ.

ಹ್ಯಾರಡದ ಪಾಳೆಯಗಾರರ ಕಾಲಕ್ಕೆ ಸೇರಿದ ಶಾಸನವು ಬಸವಪ್ಪ ನಾಯಕನ ಹೆಸರನ್ನು ಉಲ್ಲೇಖಿಸುತ್ತದೆ. ಮಾನ್ಯದ ವಿವರವಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಬಾವಿಹಳ್ಳಿಯ ಕರಿಬಸಜ್ಜನ ಮಠದಲ್ಲಿರುವ ಶಾಸನವು ಬಾಗಳಿ ಬಸಪ್ಪನಾಯಕನ ಹೆಸರನ್ನು ಉಲ್ಲೇಖಿಸುತ್ತದೆ.

**ದಾನದ ಪ್ರಮುಖ ವಸ್ತುಗಳು/ದಾನದ ಪರಿಕರಗಳು**

ದಾನಶಾಸನಗಳಲ್ಲಿ ಹೆಚ್ಚಾಗಿ ಭೂಮಿಯನ್ನು ದಾನವಾಗಿ ಕೊಟ್ಟಿರುವುದನ್ನು ಕಾಣಲಾಗುತ್ತದೆ. ಭೂಮಿಯ ದಾನವನ್ನು ಮತ್ತರು ಎಂಬ ಅಳತೆಯಲ್ಲಿ ನೀಡುತ್ತಿದ್ದರು. ಹಾಗೆಯೇ ಭೂಮಿಯ ಜೊತೆ ಜೊತೆಯಲ್ಲಿಯೇ ಹಣದ ದಾನವನ್ನು ಸಹ ನೀಡುತ್ತಿದ್ದರು. ಹಣವನ್ನು ಗದ್ಯಾಣ ಮತ್ತು ಪಣಗಳ ಲೆಕ್ಕದಲ್ಲಿ ಕೊಡುತ್ತಿದ್ದರು. ಗದ್ಯಾಣ ಎಂಬುದು ಚಿನ್ನದ ನಾಣ್ಯವಾಗಿತ್ತು. ಇದು ಒಂದು ವರಹಕ್ಕೆ ಸಮನಾಗಿತ್ತು. ಪಣವೆಂಬುದೂ ಸಹ ಚಿನ್ನದ ನಾಣ್ಯವಾಗಿದ್ದು ಇದು ಗದ್ಯಾಣದ ಹತ್ತನೆಯ ಭಾಗವಾಗಿತ್ತೆಂದು ತಿಳಿಸಲಾಗಿದೆ. ಇನ್ನು ಕೆಲವು ಶಾಸನಗಳಲ್ಲಿ ತೆರಿಗೆಯ ಹಣದ ದಾನವನ್ನು ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ದೇವಸ್ಥಾನಗಳ ಅಭಿವೃದ್ಧಿಗಾಗಿ ಮತ್ತು ಅವುಗಳ ಪ್ರಖರತೆಯನ್ನು ನಿರಂತರವಾಗಿ ಕಾಪಾಡಲೆಂದು ದೇವಸ್ಥಾನಕ್ಕೆ ಎಣ್ಣೆಯನ್ನು, ಗಾಣವನ್ನು,

ಹೂವಿನ ತೋಟವನ್ನು ಮತ್ತು ಕೆಲವು ಗ್ರಾಮಗಳನ್ನು ಸಹ ದಾನವಾಗಿ ನೀಡಿರುವ ಅಂಶಗಳು ಶಾಸನಗಳಿಂದ ತಿಳಿಯುತ್ತವೆ. ಒಟ್ಟಾರೆಯಾಗಿ ದಾನಶಾಸನಗಳಲ್ಲಿ ಹೆಚ್ಚಿನವು ದೇವಸ್ಥಾನಗಳಿಗೆ ಮೀಸಲಾಗಿವೆ. ಅರಸರು ನೀಡಿರುವ ದಾನಗಳಿಗಿಂತ ಅವರ ಸಾಮಂತ ಅರಸರು, ಮಹಾ ಮಂಡಳೇಶ್ವರರು, ಸಾಮಾನ್ಯ ಜನರು ನೀಡಿರುವ ದಾನಗಳ ಉಲ್ಲೇಖಗಳೇ ಹೆಚ್ಚಾಗಿ ಕಂಡುಬರುತ್ತವೆ.

### ೪.೨. ವೀರಗಲ್ಲುಗಳು

ವೀರನೊಬ್ಬನ ಸ್ಮಾರಕವಾಗಿ ನಿಲ್ಲಿಸಿದ ಶಿಲೆಯನ್ನು ವೀರಶಾಸನ ಅಥವಾ ವೀರಗಲ್ಲು ಎಂದು ಕರೆಯಲಾಗಿದೆ. ಮಾನವನಿಗೆ ಹುಟ್ಟು ಎಂಬುದು ಅನಿವಾರ್ಯವಾಗದೇ ಇರಬಹುದು. ಆದರೆ ಸಾವು ಎಂಬುದು ಅನಿವಾರ್ಯವೂ, ಪ್ರಕೃತಿಯ ನಿಯಮವೂ ಆಗಿದೆ. ಮಾನವನಿಗೆ ಎಲ್ಲಾ ಸಂಕಷ್ಟಗಳಿಗಿಂತಲೂ ಸಾವು ಎಂಬುದು ಅವನ ಜೀವನವನ್ನು ಅಲ್ಲೋಲಕಲ್ಲೋಲ ಮಾಡಿಬಿಡುತ್ತದೆ. ಹೀಗೆ ಸತ್ತ ಶವಗಳನ್ನು ರಕ್ಷಿಸಿಡುವುದೂ ಕೂಡ ಒಂದು ರೀತಿಯ ವಿಸ್ಮಯದ ಸಂಗತಿಯಾಗಿದೆ. ಪ್ರಪಂಚದ ನಾನಾ ಭಾಗಗಳಲ್ಲಿನ ಶವಸಂಸ್ಕಾರದ ಪದ್ಧತಿಗಳನ್ನು ಕಾಲಾನುಕ್ರಮದಲ್ಲಿ ಸಮೀಕ್ಷಿಸಿದಾಗ ಶವಸಂಸ್ಕಾರ ಮಾಡುವ ವಿಧಾನ, ಸಮಾಧಿ ವಿಧಾನ, ಸಮಾಧಿಗಳ ಮುಂದೆ ನೀಡುವ ಬಲಿ, ಕಾಣಿಕೆಗಳು, ಸತ್ತವರ ಗೌರವಾರ್ಥವಾಗಿ ನಿಲ್ಲಿಸಿರುವ ಸ್ಮಾರಕಗಳು ಈ ಎಲ್ಲವುಗಳ ನಡುವೆಯೂ ಕೂಡ ಬಹಳ ವ್ಯತ್ಯಾಸವಿರುವುದನ್ನು ಕಾಣಲಾಗುತ್ತದೆ. ಮರಣ ಹೊಂದಿದ ಮಾನವನನ್ನು ಸಮಾಧಿ ಮಾಡಿದ ಸ್ಥಳವನ್ನು ಗುರುತಿಸುವುದಕ್ಕಾಗಿಯೇ ಅಥವಾ ಮಡಿದವನ ನೆನಪು ಬರುವಂತೆ ಹಲವಾರು ಸಂಕೇತಗಳನ್ನು ಬಳಸಿ ಸಮಾಧಿ ಮಾಡಿದ ಸ್ಥಳಗಳಲ್ಲಿ ನೆಡುತ್ತಿದ್ದರು. ಸಮಾಧಿಗಳು ಬೃಹದಾಕಾರದ ಪಿರಾಮಿಡ್ಡುಗಳಿಂದ ಹಿಡಿದು ಸಣ್ಣಪುಟ್ಟ ಕಲ್ಲುಗಳವರೆಗೂ ಇರುವುದನ್ನು ಕಾಣಬಹುದು. ಭಾರತದ ಸಂದರ್ಭದಲ್ಲಿ ವೀರಗಲ್ಲುಗಳು ಪ್ರಮುಖವಾಗಿವೆ. ಈ ವೀರಗಲ್ಲುಗಳನ್ನು ಹಾಕಿಸುವುದರ ಉದ್ದೇಶವೇನಿತ್ತು ಎಂಬುದನ್ನು ನೋಡಿದರೆ ಮುಖ್ಯವಾಗಿ ಮರಣ ಹೊಂದಿದ ವೀರನ ಹೆಸರು ಶಾಶ್ವತವಾಗಿ ಜನರ ಮನಸ್ಸಿನಲ್ಲಿ ಇರಲೆಂದು ಅವನ ಹೆಸರಿನಲ್ಲಿ ಸ್ಮಾರಕ ಶಿಲೆಯನ್ನು ನಡೆಸುತ್ತಿದ್ದರು. ಹಾಗೆಯೇ ವೀರನು ಹಲವಾರು ಕಾರಣಗಳಿಗಾಗಿ ತನ್ನ ಪ್ರಾಣವನ್ನು ತೆತ್ತಿರುತ್ತಾನೆ. ಹೀಗೆ ಮರಣ ಹೊಂದಿದ ವೀರನ ಕುಟುಂಬವು ಅನಾಥವಾಗಿ ಬಿಡುವ ಸಂಭವಗಳು ಹೆಚ್ಚಿದ್ದವು. ಹೀಗೆ ವೀರನ ಕುಟುಂಬದ ಅನಾಥತೆಯನ್ನು ಹೋಗಲಾಡಿಸಲು ರಾಜರು ಇಲ್ಲವೇ ಸಮಾಜದವರು ಆ ಕುಟುಂಬಕ್ಕೆ ಹಲವಾರು ರೀತಿಯ ದಾನಧರ್ಮಗಳನ್ನು ಮಾಡುತ್ತಿದ್ದರು. ಹೀಗೆ ದಾನದ ರೂಪದಲ್ಲಿ ಬಂದಿರುವುದನ್ನು ಆ ಕುಟುಂಬವು ತಲಾತಲಾಂತರಗಳಿಂದ ಅನುಭವಿಸಿಕೊಂಡೇ ಬರಬೇಕಾಗುತ್ತದೆ. ಇದುವೇ ಅವರ ಜೀವನೋಪಾಯಕ್ಕೆ ಸಹಾಯವಾಗುತ್ತಿತ್ತು. ಹೀಗಾಗಿ ಈ ಕಾರಣಗಳಿಂದ ವೀರನ ನೆನಪಿಗಾಗಿ ಶಿಲೆಗಳನ್ನು ನಿರ್ಮಿಸುತ್ತಿದ್ದರು. ಈ ವೀರಗಲ್ಲು ಆ ಊರಿನ ಜನರ ಜವಾಬ್ದಾರಿಯನ್ನು ನೆನಪಿಸುತ್ತಿರುತ್ತದೆ.

ವೀರ ಎಂಬ ಪದವು ಮೂಲತಃ ಸಂಸ್ಕೃತ ಭಾಷೆಯ ಪದವಾಗಿದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ. ವೀರ ಎಂಬ ಪದಕ್ಕೆ ಸಮಾನಾರ್ಥಕವಾಗಿ ಇಂಗ್ಲೀಷಿನಲ್ಲಿ Hero ಎಂಬ ಪದವನ್ನು ಬಳಸಲಾಗುತ್ತದೆ. ಇದು ಮೂಲತಃ ಗ್ರೀಕ್ ಭಾಷೆಯಿಂದ ಇಂಗ್ಲಿಷ್ ಭಾಷೆಗೆ ಬಂದ ಪದವಾಗಿದೆ. Hero ಅಥವಾ ವೀರ ಎಂಬ ಪದದ ಬಗ್ಗೆ ಕೆಲವು ವಿದ್ವಾಂಸರು ಹೀಗೆ ಹೇಳಿದ್ದಾರೆ.

* ಹೋಮರ್ ಕವಿ ತನ್ನ 'ಇಲಿಯಡ್' ಎಂಬ ಮಹಾಕಾವ್ಯದಲ್ಲಿ ದೈವಿಕ ಶಕ್ತಿಯುಳ್ಳ ಮನುಷ್ಯ, ದೇವತೆಗಳಿಂದ ದತ್ತವಾದ ಶೌರ್ಯಸಾಹಸ ಮತ್ತು ದಕ್ಷತೆ ಮುಂತಾದ ಗುಣಗಳನ್ನು ಮನುಷ್ಯ ಎಂಬ ಅರ್ಥದಲ್ಲಿ ಗುಣವಾಚಕವಾಗಿ ಬಳಸಿದ್ದಾನೆ. ಅನಂತರದ ಕಾಲದಲ್ಲಿ ಉತ್ತಮ ಕಾರ್ಯಗಳನ್ನು (Nobledeeds) ಮಾಡಿದ ಮಾನವರನ್ನು Hero ಎಂಬ ವಿಶೇಷಣದಿಂದ ಕರೆದಿದ್ದಾರೆ.

* ವ್ಯಕ್ತಿ ವಿಶಿಷ್ಟವಾದ ಪರಾಕ್ರಮ, ಯುದ್ಧ ನೈಪುಣ್ಯವಿರುವ; ಸಾಹಸ ಅಥವಾ ಉತ್ತಮ ಕೆಲಸಗಳನ್ನು ಮಾಡುವ ಯೋಧ ಮುಂತಾದ ಅರ್ಥಗಳೊಂದಿಗೆ ಹಲವಾರು ಕಡೆ ಪ್ರಯೋಗವಾಗಿದೆ.[೩೭]

ಭಾರತೀಯ ಸಂದರ್ಭದಲ್ಲಿ ವೀರಗಲ್ಲುಗಳಿಗೆ ಒಂದು ವಿಶೇಷವಾದ ಸ್ಥಾನಮಾನವಿದೆ. ಏಕೆಂದರೆ ವೀರಗಲ್ಲಿನಲ್ಲಿ ವೀರನ ಆತ್ಮ ಇರುತ್ತದೆ ಎಂಬ ನಂಬಿಕೆ ನಮ್ಮ ಜನರಲ್ಲಿ ಇದೆ. ಅಂದರೆ ವೀರನ ಆತ್ಮವನ್ನು ಅದರಲ್ಲಿ ಆವಾಹನೆ ಮಾಡಿ ಪ್ರತಿಷ್ಠಾಪಿಸುವುದು ಎಂದರ್ಥ. ಹಾಗಾಗಿ ವೀರಗಲ್ಲನ್ನು ದೈವೀನೆಲೆಯಲ್ಲಿ ಪೂಜಿಸುತ್ತಿದ್ದರು. ಮುಖ್ಯವಾಗಿ ವೀರನಾದವನು ಎಲ್ಲೇ ಮರಣ ಹೊಂದಿದರೂ ಅವನಿಗೆ ಅವನ ಸ್ವಂತ ಊರಿನಲ್ಲೇ ವೀರಗಲ್ಲನ್ನು ಹಾಕಿಸುತ್ತಿದ್ದರು ಎಂಬ ಅಂಶ ವೀರಗಲ್ಲುಗಳ ಪಾಠದಿಂದ ತಿಳಿದುಬರುತ್ತದೆ. ವೀರಗಲ್ಲುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಹಲವಾರು ವಿಧಗಳಾಗಿ ವಿಂಗಡಿಸಲಾಗಿದೆ.

೧. ಕಳ್ಳರೊಡನೆ ಹೋರಾಡಿ ಮಡಿದ ವೀರರು

೨. ಪೆಣ್ಬುಯ್ಯಲಿನಲ್ಲಿ ಮಡಿದ ವೀರರು

೩. ಸೀಮಾ ಸಂಬಂಧದ ಕಾಳಗದಲ್ಲಿ ಮಡಿದ ವೀರರು

೪. ಊರಳಿವು-ಊರುಹುಯ್ಯಲಿನಲ್ಲಿ ಸತ್ತ ವೀರರು

೫. ನೀರಿನಲ್ಲಿ ಸತ್ತ ವೀರರು

೬. ಬೇಟೆಯಲ್ಲಿ ಸತ್ತ ವೀರರು

೭. ತುರುಗಾಳಗದಲ್ಲಿ ಸತ್ತ ವೀರರು

೮. ಯುದ್ಧದಲ್ಲಿ ಸತ್ತ ವೀರರು

ಹೀಗೆ ವೀರಗಲ್ಲು ಸ್ಮಾರಕಗಳನ್ನು ವಿಂಗಡಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಹಡಗಲಿಯಲ್ಲಿನ ಶಾಸನಗಳಲ್ಲಿ ವೀರಮರಣವನ್ನಪ್ಪಿದ ವೀರರ ಉಲ್ಲೇಖಗಳು ಇರುವುದು ತಿಳಿದುಬರುತ್ತದೆ. ಮುಖ್ಯವಾಗಿ ಹಡಗಲಿ ತಾಲೂಕಿನಲ್ಲಿನ ಉತ್ತಂಗಿ ಗ್ರಾಮದಲ್ಲಿ ಎರಡು ವೀರಗಲ್ಲುಗಳು ದೊರೆತಿರುವುದನ್ನು ಎನ್.ಎಸ್.ವೀರೇಶ್ ಉತ್ತಂಗಿಯವರು ತಮ್ಮ ಒಂದು ಲೇಖನದಲ್ಲಿ ತಿಳಿಸುತ್ತಾರೆ. ಉತ್ತಂಗಿಯ ಶ್ರೀ ಶಂಕರಸ್ವಾಮಿ ಸಂಸ್ಥಾನ ವಿರಕ್ತಮಠದಲ್ಲಿ ಒಂದು ವೀರಗಲ್ಲು ದೊರೆತಿದೆ. ಈ ಶಾಸನ ಲಿಪಿರಹಿತ ವೀರಗಲ್ಲಾಗಿದೆ. ಇದು ವೀರರಿಬ್ಬರು ವೈರಿಗಳೊಡನೆ ಹೋರಾಡುವ ಶಿಲ್ಪವಾಗಿದೆ. ಇದೇ ಗ್ರಾಮದ ತೀರ್ಥರಾಮೇಶ್ವರ ದೇವಾಲಯದಲ್ಲಿ ಒಂದು ವೀರಗಲ್ಲು ದೊರೆತಿದೆ. ಆದರೆ ಲಿಪಿಯಾಕಾರದ ಶಾಸನವಿಲ್ಲ. ಹಡಗಲಿ ತಾಲೂಕಿನಲ್ಲಿ ದೊರೆತ ಕೆಲವು ಶಾಸನಗಳಲ್ಲಿ ವೀರ ಮರಣವನ್ನಪ್ಪಿದ ವೀರರ ಉಲ್ಲೇಖಗಳು ದೊರೆಯುತ್ತವೆ. ಹಡಗಲಿಯ ಬಸರಕೋಡು ಗ್ರಾಮದ ಕ್ರಿ.ಶ.೧೩೭೦ರ ಲಿಪಿಸಹಿತ ವೀರಗಲ್ಲಿನಲ್ಲಿ ಬುಕ್ಕರಾಯನ ಆಳ್ವಿಕೆಯಲ್ಲಿ ಪ್ರಧಾನಿ ಕೇಚರಿದೇವನು ನಡೆಸಿದ ಕಾಳಗದಲ್ಲಿ ಚಂದಪ್ಪನೆಂಬುವನು ಮರಣ ಹೊಂದಿರುವುದು ತಿಳಿಯುತ್ತದೆ.[೩೮] ಹಾಗೆಯೇ ಹೊಳಲು ಗ್ರಾಮದಲ್ಲಿನ ದೊಡ್ಡ ಬೇವಿನಕಟ್ಟಿ ಬಸವಣ್ಣ ಎಂಬ ನಂದಿಯ ಹತ್ತಿರ ನಿಲ್ಲಿಸಿದ ಕ್ರಿ.ಶ.೧೧೯೪ರ ಹೊಯ್ಸಳ ವೀರಬಲ್ಲಾಳನ ಶಾಸನವು ಬಸವೆಯನಾಯಕನೆಂಬುವನು ಚೋರರೊಡನೆ ಹೋರಾಡಿ ಸಾವನ್ನಪ್ಪಿದನು. ಊರಿನ ಮಹಾಜನರು ಬಸವೆಯನಾಯಕನ ಮಗ ಚೌಡೆಯ ನಾಯಕನಿಗೆ ಭೂದಾನ ಮಾಡಿದುದನ್ನು ಉಲ್ಲೇಖಿಸುತ್ತದೆ.[೩೯]

ಹೀಗೆ ವೀರಗಲ್ಲುಗಳು ಕೆಲವು ಶಿಲ್ಪಗಳಲ್ಲಿ ಇರುವುದು ಕಂಡುಬಂದರೆ ಕೆಲವು ವೀರಮರಣ ವನ್ನಪ್ಪಿದ ವಿವರಗಳನ್ನು ತಿಳಿಸುವ ಶಾಸನ ರೂಪದಲ್ಲಿ ಕಂಡುಬಂದಿವೆ.

ಕುರುವತ್ತಿಯ ಶಾಲೆಯ ಬಳಿ ಇರುವ ವೀರಗಲ್ಲು ಶಾಸನ ಸಹಿತವಾಗಿದೆ. ಇದು ಸುಮಾರು ಕ್ರಿ.ಶ.೧೭–೧೮ನೇ ಶತಮಾನಕ್ಕೆ ಸೇರಿದುದಾಗಿದೆ. ಇದರ ಮೇಲೆ ಚಿಕ್ಕಣನ ಮಗ ಗಂಗಣನ ಉಲ್ಲೇಖವಿದೆ.[೪೦]

ಮೈಲಾರದ ಅರಳಿಕಟ್ಟೆಯ ಮೇಲಿರುವ ವೀರಗಲ್ಲು ಶಾಸನವನ್ನೊಂದಿದೆ. ಕಾಲದ ಉಲ್ಲೇಖವಿಲ್ಲ. ಇದರಲ್ಲಿ ಮಹಾದೇವಣ್ಣ ಮತ್ತು ಮಯಿಲಾರನ ಮರಣವನ್ನು ಉಲ್ಲೇಖಿಸುತ್ತದೆ.[೪೧]

ಕತ್ತೆಬೆನ್ನೂರಿನ ಆಂಜನೇಯ ದೇವಾಲಯದ ಎದುರು ಇರುವ ವೀರಗಲ್ಲು ಲಿಪಿಸಹಿತವಾಗಿದೆ. ಅಸ್ಪಷ್ಟವಾಗಿದೆ. ಅಲ್ಲಿಯೇ ಹಿಂದುಗಡೆ ಇರುವ ವೀರಗಲ್ಲು ಸಹ ಲಿಪಿಸಹಿತವಾಗಿದ್ದು, ತುಂಬಾ ಹಾಳಾಗಿದೆ.

ತಿಪ್ಪೇಸ್ವಾಮಿ ಡಿ. ಅವರು ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಉಲ್ಲೇಖಿಸಿದಂತೆ ಮುದೇನೂರು ಗ್ರಾಮದ ವೀರಗಲ್ಲು ಕ್ರಿ.ಶ. ಸುಮಾರು ೮ನೇ ಶತಮಾನಕ್ಕೆ ಸೇರಿದೆ. ಇದರಲ್ಲಿ ಮಾರಮ್ಮನೆಂಬುವನು ಮುದಿನೀರನ್ನು ಆಳುತ್ತಿದ್ದಾಗ ಪನ್ನಸುಮತ್ತರು ಹೊಲವನ್ನು ವೀರನಿಗೆ ನೀಡಿದ ಉಲ್ಲೇಖವಿದೆ.

ಬೂದನೂರಿನ ವೀರಭದ್ರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಹಂತದಲ್ಲಿ ಸೈನಿಕರ ಜೊತೆಗೂಡಿ ಶತ್ರುಗಳ ವಿರುದ್ಧ ಹೋರಾಡುತ್ತಿರುವ ವೀರನ ಚಿತ್ರಣ ಕೆಳಗಿನ ಪಟ್ಟಿಕೆಯಲ್ಲಿದೆ. ಮಧ್ಯಭಾಗದಲ್ಲಿ ವೀರನನ್ನು ನಾಲ್ಕು ಜನ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವುದನ್ನು ಹಾಗೂ ಮೇಲ್ಭಾಗದ ಹಂತದಲ್ಲಿ ವೀರನು ಲಿಂಗವನ್ನು ಆರಾಧಿಸುತ್ತಿರುವ ವೀರ ಹಾಗೂ ಅವನ ಅಕ್ಕಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿರುವ ವ್ಯಕ್ತಿ ಮತ್ತು ನಂದಿಯ ಉಬ್ಬುಗೆತ್ತನೆಗಳಿವೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಬನ್ನಿಮಟ್ಟಿ ಮತ್ತು ನಂದಿಗಾವಿ ಮಾರ್ಗದ ಮಧ್ಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲಿದೆ. ಮೂರು ಹಂತಗಳಿಂದ ಕೂಡಿದೆ. ಕೆಳಗಿನ ಹಂತದಲ್ಲಿ ಸೈನಿಕರು ಗುರಾಣಿ, ಭರ್ಚಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯ, ಮಧ್ಯದ ಹಂತದಲ್ಲಿ ಕೈಮುಗಿದು ಕುಳಿತ ವೀರರಿಬ್ಬರನ್ನು ಅಪ್ಸರೆಯರಿಬ್ಬರು ಪಲ್ಲಕ್ಕಿಯಲ್ಲಿ ದೇವರ ಸನ್ನಿಧಿಗೆ ಕೊಂಡೊಯ್ಯುತ್ತಿರುವ ದೃಶ್ಯ ಮತ್ತು ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಕೈಮುಗಿದು ಕುಳಿತ ವೀರರಿಬ್ಬರು ಹಾಗೂ ಶಿವಲಿಂಗವನ್ನು ಹೂವಿನಿಂದ ಅಲಂಕರಿಸಿ ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಮಾನ್ಯರ ಮಸಲವಾಡದ ಮುಕ್ತೇಶ್ವರ ದೇವಾಲಯದಲ್ಲಿರುವ ವೀರಗಲ್ಲು ತ್ರುಟಿತವಾಗಿದೆ. ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು, ಪ್ರಸ್ತುತ ಎರಡು ಹಂತಗಳು ಮಾತ್ರ ಉಳಿದಿವೆ. ಕೆಳಗಿನ ಹಂತದಲ್ಲಿ ಕುದುರೆಗಳ ಮೇಲೆ ಕುಳಿತು ವೀರರು ಬಿಲ್ಲು, ಬಾಣ ಭರ್ಚಿಗಳನ್ನು ಹಿಡಿದು ಹೋರಾಡುತ್ತಿರುವ ಚಿತ್ರಣ, ಅದರ ಮೇಲ್ಭಾಗದಲ್ಲಿ ವೀರನ ಕಾಲಡಿ ಸತ್ತ ವೈರಿಯನ್ನು ಹಾಗೂ ಅದರ ಮೇಲ್ಭಾಗದಲ್ಲಿ ವೀರನು ಕುದುರೆಯ ಮೇಲೆ ಕುಳಿತ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ.

ಕೊಂಬಳಿಯ ಆಂಜನೇಯ ದೇವಾಲಯದ ಮುಖಮಂಟಪದಲ್ಲಿ ಎರಡು ವೀರಗಲ್ಲುಗಳಿವೆ. ಕೆಳಭಾಗ ದೇವಾಲಯದ ನೆಲಹಾಸುವಿನಲ್ಲಿ ಹೂತಿದೆ. ಮೂರು ಹಂತಗಳು ಕಾಣುತ್ತಿದ್ದು, ಕೆಳಗಿನ ಹಂತ ಅಸ್ಪಷ್ಟವಾಗಿದೆ. ಮಧ್ಯದ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ದೇವರ ಸನ್ನಿಧಿಗೆ ಕೊಂಡೊಯ್ಯುತ್ತಿರುವ ದೃಶ್ಯ ಮತ್ತು ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗವನ್ನು ಪೂಜಿಸುತ್ತಿರುವ ಯತಿಯ ಚಿತ್ರಣವಿದೆ.

ಇನ್ನೊಂದು ವೀರಗಲ್ಲು ತ್ರುಟಿತಗೊಂಡಿದೆ. ಅಸ್ಪಷ್ಟವಾಗಿದೆ. ಕೆಳಹಂತದಲ್ಲಿ ವೀರನು ವೈರಿಗಳೊಡನೆ ಹೋರಾಡುತ್ತಿರುವ ದೃಶ್ಯ, ಎರಡನೆ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯ ಹಾಗೂ ಮೂರನೆ ಮೊದಲ ಹಂತದಲ್ಲಿ ನಂದಿ, ಶಿವಲಿಂಗವನ್ನು ಪೂಜಿಸುತ್ತಿರುವ ಯತಿಯ ಚಿತ್ರಣವಿದೆ.

ಹಿರೇಹಡಗಲಿಯ ಈಶ್ವರ ದೇವಾಲಯದ ಆವರಣದಲ್ಲಿರುವ ವೀರಗಲ್ಲು ತ್ರುಟಿತಗೊಂಡಿದ್ದು, ಎರಡು ಹಂತಗಳು ಮಾತ್ರ ಕಾಣಸಿಗುತ್ತವೆ. ಮೊದಲ ಹಂತದಲ್ಲಿ ಕತ್ತಿ, ಗುರಾಣಿಗಳನ್ನು ಹಿಡಿದು ಸೈನಿಕರು ಹೋರಾಡುತ್ತಿರುವ ದೃಶ್ಯ, ವೀರರಿಬ್ಬರು ವೈರಿಯನ್ನು ಕಾಲಡಿ ತುಳಿಯುತ್ತಿರುವ ದೃಶ್ಯ, ಮೇಲಿನ ಹಂತದಲ್ಲಿ ವೀರರಿಬ್ಬರನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತ ತ್ರುಟಿತಗೊಂಡಿದೆ.

**ಕಳ್ಳರೊಡನೆ ಹೋರಾಡಿ ಮಡಿದ ವೀರರು:** ಕ್ರಿ.ಶ.೧೧೯೪ರ ಶಾಸನದಲ್ಲಿ ಬಸವೆಯ ನಾಯಕ ಎಂಬುವನು ಕಳ್ಳರೊಡನೆ ಹೋರಾಡಿ ಸಾವನ್ನಪ್ಪಿದ್ದನ್ನು ಕಾಣುತ್ತೇವೆ. ಈ ಬಸವೆಯ ನಾಯಕನ ಮಗ ಚೌಡೆಯ ನಾಯಕನಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೨೨]

**ತುರುಗೋಳ್ ವೀರಗಲ್ಲು:** ಇಟಗಿಯ ಬೋಳದೇವರಗುಡಿಯ ವೀರಗಲ್ಲು ಹಸುಗಳನ್ನು ರಕ್ಷಿಸುವ ಸಲುವಾಗಿ ಶತ್ರುಗಳ ವಿರುದ್ಧ ಹೋರಾಡುತ್ತಿರುವ ವೀರನ ಚಿತ್ರಣವಿದೆ. ಶತ್ರುಗಳ ಚಿತ್ರಗಳು ಭಗ್ನವಾಗಿವೆ. ಹಿಂಭಾಗದಲ್ಲಿ ನಾಲ್ಕು ಹಸುಗಳು ನಿಂತಿವೆ.

ಇಟಗಿ ಗ್ರಾಮದ ಊರ ಹೊರಗಿನ ಕಲ್ಲೇಶ್ವರ ದೇವಾಲಯದ ಮುಂದಿನ ಶ್ರೀ ಸಿದ್ಧನಗೌಡ ಅವರ ಹೊಲದಲ್ಲಿ ತುರುಗೋಳ್ ವೀರಗಲ್ಲು ಇದ್ದು, ಎರಡು ಹಂತಗಳಿಂದ ಕೂಡಿದೆ. ಸುಮಾರು ಮುಕ್ಕಾಲು ಅಡಿ ಎತ್ತರವಿದೆ. ಕೆಳಗಿನ ಹಂತದಲ್ಲಿ ಸಾಲಾಗಿ ನಿಂತಿರುವ ಮೂರು ದನಗಳನ್ನು ಕಂಡರಿಸಲಾಗಿದೆ. ಮೇಲ್ಭಾಗದಲ್ಲಿ ಕುದುರೆಯ ಮೇಲೆ ಕುಳಿತ ಶತ್ರುವಿನ ಚಿತ್ರಣವಿದೆ. ವೀರನೊಬ್ಬ ಬಿಲ್ಲನ್ನು ಹಿಡಿದು ಶತ್ರುವಿನೊಂದಿಗೆ ಹೋರಾಡುತ್ತಿರುವ ಚಿತ್ರಣವಿದೆ.

ಮುದೇನೂರು ರಾಮಲಿಂಗೇಶ್ವರ ದೇವಾಲಯದ ಹತ್ತಿರ ಮೂರು ಹಂತಗಳಿಂದ ಕೂಡಿದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಹಂತದಲ್ಲಿ ಬಿಲ್ಲು ಬಾಣಗಳಿಂದ ಹೋರಾಡುತ್ತಿರುವ ವೈರಿಗಳ ದೃಶ್ಯ, ವೀರನ ಬಲಗಡೆ ನಾಲ್ಕು ಎಮ್ಮೆಗಳು ಸಾಲಾಗಿ ನಿಂತಿವೆ. ಕೆಳಗಡೆ ಬಿದ್ದ ವೈರಿಯ ಚಿತ್ರಣವಿದೆ. ಎರಡನೆ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯ ಮತ್ತು ಮೂರನೆಯ ಹಂತದಲ್ಲಿ ಚಾಮರಧಾರಿಯರು ವೀರನನ್ನು ಪೀಠದ ಮೇಲೆ ಕುಳ್ಳಿರಿಸಿ ಉಪಚರಿಸುತ್ತಿರುವ ದೃಶ್ಯವಿದೆ.

ಇನ್ನೊಂದು ತುರುಗೋಳ್ ವೀರಗಲ್ಲಿನಲ್ಲಿ ಕೆಳಗಡೆ ಸಾಲಿನಲ್ಲಿ ಮೂರು ಜನ ವೀರರು, ಅವರ ಮುಂದೆ ಎತ್ತು, ಎತ್ತಿನ ಹಿಂದೆ ವೈರಿಯ ಚಿತ್ರಣವಿದೆ. ಎರಡನೆ ಸಾಲಿನಲ್ಲಿ ಅಪ್ಸರೆಯರು ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ (ಹಾರುತ್ತಿರುವ) ದೃಶ್ಯ, ಮೇಲಿನ ಸಾಲಿನಲ್ಲಿ ಚಾಮರಧಾರಿಯರು ವೀರರನ್ನು ಉಪಚರಿಸುತ್ತಿರುವ ಚಿತ್ರಣವಿದೆ.

ಕತ್ತೆಬೆನ್ನೂರಿನ ಶಿಬಾರಕಟ್ಟೆಯ ಮೇಲೆ ಮೂರು ಹಂತಗಳಿಂದ ಕೂಡಿದ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಹಂತದಲ್ಲಿ ವೀರನ ಬಲಭಾಗಕ್ಕೆ ಐದು

ಹಸುಗಳ ಚಿತ್ರಣವಿದೆ. ಮುಂದುಗಡೆ ವೈರಿಗಳಿಬ್ಬರು ತಮ್ಮ ಬಲಗೈಯಲ್ಲಿ ಭರ್ಚಿಯನ್ನು ಎತ್ತಿ ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಎರಡನೆ ಪಟ್ಟಿಕೆಯಲ್ಲಿ ಚೌರಿ ಹಿಡಿದ ಅಪ್ಸರೆಯರು ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಮೊದಲ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಕತ್ತೆಬೆನ್ನೂರಿನ ಶಿಬಾರಕಟ್ಟೆಯ ಮೇಲೆ ಮೂರು ಹಂತಗಳಿಂದ ಕೂಡಿದ ಕಲ್ಯಾಣ ಚಾಲುಕ್ಯರ ಕಾಲದ ಇನ್ನೊಂದು ವೀರಗಲ್ಲಿದೆ. ಕೆಳಗಿನ ಹಂತದಲ್ಲಿ ವೀರನು ಬಿಲ್ಲು ಬಾಣಗಳಿಂದ ಕುದುರೆಯನ್ನು ಪಳಗಿಸುತ್ತಿರುವ ದೃಶ್ಯ, ಎರಡನೆ ಹಂತದಲ್ಲಿ ಚೌರಿ ಹಿಡಿದ ಅಪ್ಸರೆಯರು ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಮೊದಲ ಹಂತದಲ್ಲಿ ನಂದಿ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಹರವಿಯಲ್ಲಿಯೂ ತುರುಗೋಳ್ ವೀರಗಲ್ಲು ಇದ್ದು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ವೈರಿಯೊಡನೆ ಬಿಲ್ಲು ಬಾಣದಿಂದ ಹೋರಾಡುತ್ತಿರುವ ದೃಶ್ಯವಿದೆ. ವೀರನ ಬಲಭಾಗದಲ್ಲಿ ಐದು ತುರುಗಳನ್ನು ಕೆತ್ತಲಾಗಿದೆ. ಎರಡನೆ ಪಟ್ಟಿಕೆಯಲ್ಲಿ ವೀರನನ್ನು ವಾದ್ಯಗಳ ಸಂಗಡ ಅಪ್ಸರೆಯರು ತಮ್ಮ ತೋಳ್ತೆಕ್ಕೆಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಪಟ್ಟಿಕೆಯಲ್ಲಿ ಪದ್ಮಾಸನದಲ್ಲಿ ಕುಳಿತ ವೀರ ಹಾಗೂ ಅಪ್ಸರೆಯರ ಚಿತ್ರಣವಿದೆ.

ಮಾನ್ಯರ ಮಸಲವಾಡದ ವೀರಭದ್ರೇಶ್ವರ ದೇವಾಲಯದ ಆವರಣದಲ್ಲಿ ತುರುಗೋಳ್ ವೀರಗಲ್ಲಿದೆ. ಮೂರು ಹಂತಗಳನ್ನು ಹೊಂದಿದೆ. ಮೊದಲ ಕೆಳಹಂತ ನೆಲದಲ್ಲಿ ಹೂತು ಹೋಗಿದೆ. ಅಸ್ಪಷ್ಟವಾಗಿದೆ. ಯುದ್ಧ ನಿರತ ಸೈನಿಕರ ಚಿತ್ರಣವಿದೆ. ಎರಡನೆ ಹಂತದ ಪಟ್ಟಿಯ ಮೇಲೆ ಮೂರು ಹಸುಗಳ ಚಿತ್ರಣವಿದೆ. ಮಧ್ಯದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಯತಿಯ ಚಿತ್ರಣವಿದೆ.

ರಾಜುವಾಳದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಸುಮಾರು ನಾಲ್ಕು ಅಡಿ ಉದ್ದದ ವೀರಗಲ್ಲಿದೆ. ಮೂರು ಪಟ್ಟಿಕೆಗಳನ್ನು ಹೊಂದಿದೆ. ಕೆಳಹಂತದಲ್ಲಿ ಗುರಾಣಿ, ಭರ್ಚಿಗಳಿಂದ ಯುದ್ಧದಲ್ಲಿ ಹೋರಾಡುತ್ತಿರುವವರ ಚಿತ್ರಣ. ಮಧ್ಯದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರರಿಬ್ಬರನ್ನು ಪಲ್ಲಕ್ಕಿಯಲ್ಲಿ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಸೂರ್ಯ, ಚಂದ್ರರ ಚಿತ್ರಣವಿದೆ. ಶಿವಲಿಂಗವಿದೆ. ಅದರ ಕೆಳಭಾಗದಲ್ಲಿ ವೀರರಿಬ್ಬರು ಅಂಜಲಿ ಮುದ್ರೆಯಲ್ಲಿ ಕುಳಿತಿರುವರು. ಪಕ್ಕದಲ್ಲಿ ನಂದಿಯ ಚಿತ್ರಣವಿದೆ.

ಸೋಗಿಯ ವೀರಭದ್ರೇಶ್ವರ ದೇವಾಲಯದ ಅವರಣದಲ್ಲಿ ಎರಡು ವೀರಗಲ್ಲುಗಳಿವೆ. ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಗಿನ ಹಂತದಲ್ಲಿ ವೀರನು ಕುದುರೆಯ ಮೇಲೆ ಕುಳಿತು ಭರ್ಚಿಯಿಂದ ತಿವಿಯಲು ಬರುತ್ತಿರುವ ವೈರಿಯನ್ನು ತನ್ನ ಎಡಗೈಯಲ್ಲಿರುವ ಗುರಾಣಿಯಿಂದ ತಡೆಹಿಡಿದಿರುವನು. ಬಲಗೈಯಲ್ಲಿ ಕತ್ತಿಯಿದೆ. ಇನ್ನು ಮಧ್ಯದ ಹಂತದಲ್ಲಿ ಅಪ್ಸರೆಯರು ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

**ಹುಲಿಬೇಟೆ ವೀರಗಲ್ಲು :** ಅಲ್ಲಿಯೇ ಇರುವ ಇನ್ನೊಂದು ವೀರಗಲ್ಲು ಹುಲಿಬೇಟೆಯದ್ದಾಗಿದೆ. ಹುಲಿಯಂತಹ ಬಲಿಷ್ಠ ಪ್ರಾಣಿಯೊಂದಿಗೆ ಹೋರಾಡಿ ವೀರ ಮರಣ ಹೊಂದಿದ ವಿಷಯವನ್ನು ಇದು ತಿಳಿಸುತ್ತದೆ. ಈ ವೀರಗಲ್ಲಿನಲ್ಲಿ ಕೆಳಗಿನ ಹಂತವನ್ನು ಮಾತ್ರ ಕಾಣುತ್ತೇವೆ. ಮೇಲ್ಭಾಗ ತ್ರುಟಿತಗೊಂಡಿದೆ. ಈ ಕೆಳಗಿನ ಹಂತದಲ್ಲಿ ವೀರನು ಕೈಯಲ್ಲಿ ಭರ್ಚಿಯನ್ನು ಹಿಡಿದು ಬಲಿಷ್ಠವಾದ ಹುಲಿಯನ್ನು ಎದುರಿಸುತ್ತಿದ್ದಾನೆ. ಇವನ ಹಿಂದೆ ಸೈನಿಕರಿದ್ದು ಎಲ್ಲರ ಕೈಯಲ್ಲೂ ಖಡ್ಗಗಳಿವೆ.

ಉತ್ತಂಗಿಯ ಶಂಕರಲಿಂಗೇಶ್ವರ ದೇವಾಲಯದ ಆವರಣದಲ್ಲಿ ವೀರಗಲ್ಲಿದೆ. ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಹಂತದ ಪಟ್ಟಿಕೆಯಲ್ಲಿ ವೀರರಿಬ್ಬರು ಕತ್ತಿ ಗುರಾಣಿಗಳನ್ನು ಹಿಡಿದು ಪರಸ್ಪರ ಹೋರಾಡುತ್ತಿರುವರು. ಮಧ್ಯದ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯು ತ್ತಿರುವ ಚಿತ್ರಣವಿದೆ. ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನು ಶಿವನ ಸಾನಿಧ್ಯ ಸೇರಿರುವನು.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ.೧೧ನೇ ಶತಮಾನದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ಬಿಲ್ಲು ಬಾಣಗಳಿಂದ ವೈರಿಗಳೊಡನೆ ಕಾದಾಡುವ ದೃಶ್ಯ, ವೀರನ ಹಿಂದೆ ಹಸು-ಕರುವಿನ ಚಿತ್ರಣವಿದೆ. ಎರಡನೆ ಹಂತದಲ್ಲಿ ಎರಡನೆ ಹಂತದಲ್ಲಿ ಚೌರಿ ಹಿಡಿದ ಅಪ್ಸರೆಯರು ಅಂಜಲಿ ಮುದ್ರೆಯಲ್ಲಿ ಕುಳಿತ ವೀರ ನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ.೧೧ನೇ ಶತಮಾನದ ಇನ್ನೊಂದು ತುರುಗೋಳ್ ವೀರಗಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ಬಿಲ್ಲು ಬಾಣಗಳಿಂದ ವೈರಿಗಳೊಡನೆ ಕಾದಾಡುವ ದೃಶ್ಯ, ವೀರನ ಹಿಂದೆ ಹೆದರಿ ಓಡುತ್ತಿರುವ ಎತ್ತುಗಳ ಚಿತ್ರಣ, ಇನ್ನೊಬ್ಬ ವೀರನ ಚಿತ್ರಣವಿದ್ದು, ಕಾಲ ಕೆಳಗೆ ವೈರಿಯನ್ನು ತುಳಿಯುತ್ತಿರುವ ದೃಶ್ಯವಿದೆ. ಎರಡನೆ ಹಂತದಲ್ಲಿ ಎರಡನೆ ಹಂತದಲ್ಲಿ ಚೌರಿ ಹಿಡಿದ ಅಪ್ಸರೆಯರು, ಪಕ್ಕದಲ್ಲಿ

ನೃತ್ಯಗಾರ್ತಿಯರು, ವಾದ್ಯಗಳ ಮೂಲಕ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಅಲಂಕೃತವಾದ ಮಂಟಪದಲ್ಲಿ ಶಿವಲಿಂಗವಿದ್ದು, ಅಲಂಕೃತ ಶಿವಲಿಂಗವನ್ನು ಇಬ್ಬರು ಪೂಜಿಸುತ್ತಿರುವ ಯತಿ, ವೀರನ ಚಿತ್ರಣವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಅಲ್ಲಿಯೇ ದೊರೆತ ಇನ್ನೊಂದು ತುರುಗೋಳ್ ವೀರಗಲ್ಲು ಕ್ರಿ.ಶ.೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ಮೂರು ಪಟ್ಟಿಕೆಯನ್ನೊಂದಿದೆ. ಮೇಲಿನ ಭಾಗ ತ್ರುಟಿತಗೊಂಡಿದೆ. ಕೇವಲ ಶಿವಲಿಂಗ ಮಾತ್ರ ಅಸ್ಪಷ್ಟವಾಗಿ ಕಾಣುತ್ತಿದೆ. ಕೆಳಗಿನ ಹಂತದಲ್ಲಿ ವೀರನು ಭರ್ಚಿಯಿಂದ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ. ಅವನ ಬಲಗಡೆ ನಾಲ್ಕು ಹಸುವಿನ ಚಿತ್ರಣವಿದೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ.

ಇಟಗಿ ಗ್ರಾಮದ ಊರೊಳಗಿನ ಕಲ್ಲಪ್ಪನ ದೇವಾಲಯದ ಹತ್ತಿರ ಮೂರು ತ್ರುಟಿತ ವೀರಗಲ್ಲುಗಳಿವೆ.

**ಪೆಣ್ಬುಯಲ್ ವೀರಗಲ್ಲು:** ಸೋಗಿಯ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಸ್ತ್ರೀಯರ ಮಾನ ರಕ್ಷಣೆಗಾಗಿ ಹೋರಾಡಿ ಮಡಿದ ವೀರನ ನೆನಪಿಗಾಗಿ ಹಾಕಿಸಿದುದಾಗಿದೆ. ಇದರಲ್ಲಿ ಮೂರು ಹಂತಗಳಿದ್ದು, ಕೆಳಹಂತದಲ್ಲಿ ವೀರನು ಶತ್ರುಗಳೊಡನೆ ಹೋರಾಡುತ್ತಿರುವುದು. ಅವನ ಹಿಂಬದಿಯಲ್ಲಿ ಸ್ತ್ರೀಯರನ್ನು ಚಿತ್ರಿಸಲಾಗಿದೆ. ಮಧ್ಯಭಾಗದಲ್ಲಿ ನಾಲ್ಕು ಜನ ಅಪ್ಸರೆಯರು ವೀರನನ್ನು ಪಲ್ಲಕ್ಕಿಯಲ್ಲಿ ಹೊತ್ತಿರುವುದು. ಮೇಲ್ಭಾಗದ ಹಂತದಲ್ಲಿ ಲಿಂಗಪೂಜೆಯಲ್ಲಿ ನಿರತನಾದ ವೀರ ಹಾಗೂ ನಂದಿಯನ್ನು ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

**ಕುರಿಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರಗಲ್ಲು:** ಹೊಳಗುಂದಿಯ ವೀರಣ್ಣ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಕುರಿಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರನ ನೆನಪಿಗಾಗಿ ಹಾಕಿಸಿದುದಾಗಿದೆ. ಇದು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಕೆಳಹಂತದ ಪಟ್ಟಿಕೆಯಲ್ಲಿ ಶತ್ರುಗಳ ನಡುವೆ ಹೋರಾಡುತ್ತಿರುವ ವೀರ, ಅವನ ಹಿಂಬದಿಯಲ್ಲಿ ಕುರಿಗಳಿವೆ. ಮಧ್ಯದ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದ ಹಂತದಲ್ಲಿ ಲಿಂಗಪೂಜೆಯಲ್ಲಿ ನಿರತನಾಗಿರುವ ವೀರನ ಚಿತ್ರಣಗಳನ್ನು ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಹೊಳಗುಂದಿಯ ಭಳ್ಳೇಶ್ವರ ವೀರಭದ್ರೇಶ್ವರ ದೇವಾಲಯದ ಆವರಣದಲ್ಲಿರುವ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ವೀರನು ಬಿಲ್ಲು ಬಾಣಗಳನ್ನು ಬಳಸಿ ವೈರಿಯೊಡನೆ ಕಾದಾಡುವ ದೃಶ್ಯ, ಎರಡನೆ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ

ದೃಶ್ಯ, ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನು ಶಿವಲಿಂಗವನ್ನು ಪ್ರಾರ್ಥಿಸುತ್ತಿರುವ ದೃಶ್ಯವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದಲ್ಲಿ ದೊರೆತ ವೀರಗಲ್ಲು ಸುಮಾರು ಕ್ರಿ.ಶ.೧೧-೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ವೀರನು ಕುದುರೆಯ ಮೇಲೆ ಕುಳಿತಿರುವನು. ವೀರನ ತಲೆಯು ತ್ರುಟಿತಗೊಂಡಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಅಲ್ಲಿಯೇ ದೊರೆತ ವೀರಗಲ್ಲು ಕ್ರಿ.ಶ.೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ಮೂರು ಪಟ್ಟಿಕೆಯನ್ನೊಂದಿದೆ. ಕೆಳಗಿನ ಹಂತದಲ್ಲಿ ವೀರರು ಬಿಲ್ಲು, ಬಾಣ, ಭರ್ಚಿ, ಗುರಾಣಿಗಳಿಂದ ಪರಸ್ಪರ ಹೋರಾಡುತ್ತಿರುವ ದೃಶ್ಯವಿದೆ. ಕಾಲಕೆಳಗೆ ವೈರಿಗಳ ಮೃತ ದೇಹಗಳಿವೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ವೀರನು ಅಂಜಲಿ ಮುದ್ರೆಯಲ್ಲಿ ಕುಳಿತಿರುವನು. ಶಿವಲಿಂಗವನ್ನು ಪೂಜಿಸುತ್ತಿರುವ ಮುನಿ, ಸೂರ್ಯ, ಚಂದ್ರರ ಚಿತ್ರಣವಿದೆ.

ಮಾಗಳ ಸೂರ್ಯನಾರಾಯಣ ದೇವಾಲಯದ ಆವರಣದಲ್ಲಿರುವ ಕಲ್ಯಾಣ ಚಾಲುಕ್ಯ ಕಾಲದ ಲಿಪಿಸಹಿತ ಮೂರು ಹಂತಗಳನ್ನುಳ್ಳ ವೀರಗಲ್ಲು ತುಂಬಾ ಸುಂದರವಾಗಿದೆ. ಕೆಳಭಾಗದ ಹಂತದಲ್ಲಿ ವೀರನು ಯುದ್ಧದಲ್ಲಿ ಶತ್ರುಗಳೊಂದಿಗೆ ಭರ್ಚಿ ಗುರಾಣಿ ಆಯುಧಗಳಿಂದ ಹೋರಾಡುತ್ತಿರುವುದು. ಅವನ ಕೆಳಗೆ ವೈರಿಗಳು ಸತ್ತು ಬಿದ್ದಿರುವ ಚಿತ್ರಣವಿದೆ. ಮಧ್ಯದ ಹಂತವು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿತ್ರಣವಿದೆ. ಲಿಂಗವನ್ನು ಪೂಜಿಸುತ್ತಿರುವ ಯತಿ, ಯತಿಯ ಹಿಂದೆ ನಂದಿ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರನ ತಲೆಯ ಹಿಂಭಾಗ ಹಾವಿನ ಚಿತ್ರಣವಿದೆ.

ತಿಪ್ಪಾಪುರದ ಕಲ್ಲೇಶ್ವರ ದೇವಾಲಯದ ವೀರಗಲ್ಲು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದು ದಾಗಿದೆ. ಕುದುರೆ ಸವಾರಿಯಲ್ಲಿರುವ ವೀರಯೋಧನ ಕೈಯಲ್ಲಿ ಖಡ್ಗ ಹಾಗೂ ಕುದುರೆಯ ಕಡಿವಾಣವನ್ನು ಹಿಡಿದಿರುವನು. ಹಿಂಬದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ. ಯೋಧನ ಹಿಂಬದಿಯಲ್ಲಿ ಛತ್ರಿ-ಛಾಮರ ಹಿಡಿದ ಪರಿಚಾರಕರು, ಮುಂಭಾಗದಲ್ಲಿ ವೀರನ ಪತ್ನಿ ಹಾಗೂ ಬಾವುಟವಿಡಿದು ಯೋಧನನ್ನು ಯುದ್ಧಕ್ಕೆ ಬೀಳ್ಕೊಡುತ್ತಿರುವ ದೃಶ್ಯವಿದೆ.

ತಿಪ್ಪಾಪುರದ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲಿನಲ್ಲಿ ಕುದುರೆಯನ್ನು ಪಳಗಿಸುತ್ತಿರುವ ಯೋಧನನ್ನು ಕೆತ್ತಲಾಗಿದೆ. ಇವನ ಹಿಂಬದಿಯಲ್ಲಿ ಕೈಮುಗಿದು ನಿಂತ ವ್ಯಕ್ತಿಯನ್ನು ಚಿತ್ರಿಸಲಾಗಿದೆ.

ಇಟಗಿಯ ವಿಜಯನಗರ ಕಾಲದ ಕಣಶಿಲೆಯ ವೀರಗಲ್ಲಿನಲ್ಲಿ ಬಿಲ್ಲು-ಬಾಣಗಳನ್ನು ಹಿಡಿದು ಹೊರಟಿರುವ ಯೋಧ ಮತ್ತು ಅವನ ಹಿಂದೆ ಒಬ್ಬ ಪುರುಷ ಹಾಗೂ ಮಹಿಳೆಯ ಚಿತ್ರವಿದೆ. ಯೋಧನು ಜಡೆ ಬಿಟ್ಟಿರುವನು. ಮಹಿಳೆ ತುರುಬು ಕಟ್ಟಿರುವಳು.

ಇಟಗಿಯ ವಿಜಯನಗರ ಕಾಲದ ಕಣಶಿಲೆಯ ವೀರಗಲ್ಲಿನಲ್ಲಿ ಯೋಧ ಮತ್ತು ಅವನ ಪತ್ನಿಯ ಉಬ್ಬುಗೆತ್ತನೆಗಳಿವೆ. ವೀರನು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಯುದ್ಧಕ್ಕೆ ಹೊರಟಿರುವ ದೃಶ್ಯ ಅವನ ಹಿಂದೆ ಪತ್ನಿಯು ಹಿಂಬಾಲಿಸಿರುವುದನ್ನು ಕಾಣಬಹುದು.

ಹಾಳೂರು ಶಿವಲಿಂಗನಹಳ್ಳಿಯ ಕಲ್ಯಾಣ ಚಾಲುಕ್ಯ ಕಾಲದ ಮೂರು ಹಂತಗಳನ್ನುಳ್ಳ ಈ ಶಿಲೆಯು ಎರಡು ಭಾಗವಾಗಿ ತುಂಡಾಗಿದೆ. ಕೆಳಭಾಗದ ಹಂತದಲ್ಲಿ ವೀರನು ಶತ್ರುಗಳೊಂದಿಗೆ ಯುದ್ಧದಲ್ಲಿ ಹೋರಾಡುತ್ತಿರುವುದು. ಅವನ ಕೆಳಗೆ ನಾಲ್ಕು ಜನ ಸತ್ತು ಬಿದ್ದಿರುವ ಚಿತ್ರಣವಿದೆ. ಮಧ್ಯದ ಹಂತವು ಸತ್ತ ವೀರನನ್ನು ಮಂಗಳ ವಾದ್ಯಗಳ ಮೂಲಕ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣವನ್ನು ಹೊಂದಿದೆ. ಮೇಲ್ಭಾಗದಲ್ಲಿ ಲಿಂಗವನ್ನು ಪೂಜಿಸುತ್ತಿರುವ ವೀರ ಹಾಗೂ ಲಿಂಗ ಮುನಿ, ನಂದಿಯ ಚಿತ್ರಗಳನ್ನು ಕೆತ್ತಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹಡಗಲಿಯ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಈ ವೀರಗಲ್ಲಿನಲ್ಲಿ ವೀರಯೋಧನು ನೇರವಾಗಿ ನಿಂತಿದ್ದು ತನ್ನ ಎರಡು ಕೈಗಳಿಂದ ಖಡ್ಗವೊಂದನ್ನು ಹಿಡಿದಿದ್ದಾನೆ. ಸೊಂಟದಲ್ಲಿ ವಿಶಾಲವಾಗಿ ಧರಿಸಿದ ವಸ್ತ್ರವಿದೆ. ತಲೆಗೂದಲನ್ನು ಮುಡಿ ಕಟ್ಟಿದ್ದಾನೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಅಲ್ಲಿಯೇ ದೊರೆತ ಇನ್ನೊಂದು ವೀರಗಲ್ಲು ಕ್ರಿ.ಶ.೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ಮೂರು ಪಟ್ಟಿಕೆಗಳನ್ನು ಹೊಂದಿದೆ. ತ್ರುಟಿತಗೊಂಡಿದೆ. ಮೇಲಿನ ಹಂತದಲ್ಲಿ ಶಿವಲಿಂಗ, ನಂದಿ ಮತ್ತು ಸೂರ್ಯರ ಶಿಲ್ಪಗಳಿವೆ. ಮಧ್ಯದ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಕೆಳಗಿನ ಹಂತದಲ್ಲಿ ಕುದುರೆ ಮೇಲೆ ಕುಳಿತು ವೀರರು ಭರ್ಚಿಯಿಂದ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ.

ಮಾಗಳದ ಊರ ಒಳಗೆ ಶಿಬಾರ ಕಟ್ಟೆಯ ಮೇಲೆ, ಹಗರನೂರು ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿ, ಮಾನ್ಯರ ಮಸಲವಾಡದ ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿ, ಹೊಳಲು ವೀರಭದ್ರ ದೇವಾಲಯದ ಆವರಣದಲ್ಲಿ, ಬೂದನೂರು ವೀರಭದ್ರೇಶ್ವರ ಮತ್ತು ಆಂಜನೇಯ ದೇವಾಲಯಗಳ ಆವರಣದಲ್ಲಿ, ನಡುವಿನಹಳ್ಳಿ ಆಂಜನೇಯ ದೇವಾಲಯದ ಆವರಣದಲ್ಲಿ, ಬನ್ನಿಮಟ್ಟಿ ರಾಮಲಿಂಗೇಶ್ವರ ದೇವಾಲಯದ ಆವರಣದಲ್ಲಿ, ಹಿರೇಹಡಗಲಿಯ

ಹೊನ್ನತ್ತೆಮ್ಮನ ಗುಡಿಯ ಹತ್ತಿರ, ತುಂಬಿನಕೇರಿ ಊರ ಹೊರಗಡೆ, ಹಿರೇಕುರುವತ್ತಿಯ ಗಣಪತಿ ದೇವಾಲಯದ ಮುಂದೆ ಹಾಗೂ ಹೂವಿನಹಡಗಲಿಯ ಗೋಣಿ ಬಸವೇಶ್ವರ ದೇವಾಲಯದ ಆವರಣದಲ್ಲಿ ವೀರಗಲ್ಲುಗಳಿವೆ.

**ವೀರ–ಸತಿಗಲ್ಲು:** ಮಾಗಳ ಆಂಜನೇಯ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಸತಿಗಲ್ಲು ಕೈಯಲ್ಲೊಂದು ಖಡ್ಗ ಮತ್ತು ಸೊಂಟದಲ್ಲೊಂದು ಬಾಕು ಇರುವ ಯೋಧನ ಚಿತ್ರಣ ಒಂದೆಡೆಯಿದ್ದರೆ, ಅವನ ಎಡಭಾಗಕ್ಕೆ ಕನ್ನಡಿ–ಬಾಚಣಿಕೆಗಳನ್ನು ಹಿಡಿದು ನಿಂತಿರುವ ಸ್ತ್ರೀ ಇರುವಳು.

ನವಲಿಯ ಶಿಬಾರಕಟ್ಟೆಯ ಹತ್ತಿರ ವೀರ–ಸತಿಗಲ್ಲಿದೆ. ಮುಡಿ ಕಟ್ಟಿ ನಿಂತ ವೀರನು ಕೈಯಲ್ಲಿ ಬಿಲ್ಲನ್ನು ಹಿಡಿದಿರುವನು. ಅವನ ಹಿಂದೆ ಸತಿಯ ಚಿತ್ರಣವಿದ್ದು, ಅವಳು ಮುಡಿ ಕಟ್ಟಿದ್ದು, ಬಲಗೈ ಅಭಯಮುದ್ರೆಯಲ್ಲಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ.೧೧ನೇ ಶತಮಾನದ ಸತಿಶಿಲ್ಪವಿದೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಚಿತ್ರಣವಿದೆ. ಮಹಿಳೆಯು ವರ್ತುಲಾಕಾರದ ಓಲೆ ಧರಿಸಿ ಮುಡಿ ಕಟ್ಟಿದ್ದಾಳೆ. ಕಾಲಲ್ಲಿ ಕಡಗ ಧರಿಸಿ, ಕೈಗಳಲ್ಲಿ ಕಡಗ, ಬಳೆ, ತೋಳುಬಂಧಿ, ಕೊರಳಲ್ಲಿ ಸರ, ಬಲಗೈಯಲ್ಲಿ ಕತ್ತಿ ಹಿಡಿದಿದ್ದು, ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿರುವಳು. ಸೀರೆ ನೆರಿಗೆಯನ್ನು ಧರಿಸಿದ ರೀತಿ ತುಂಬಾ ಕಲಾತ್ಮಕವಾಗಿದೆ. ಅವಳ ಬಲಗಡೆ ಕಮಂಡಲವಿದೆ. ಎಡಗಡೆ ವೀರನನ್ನು ಸಣ್ಣದಾಗಿ ಕೆತ್ತಲಾಗಿದೆ. ಕಾಲ ಕೆಳಗಡೆ ಪಕ್ಕದಲ್ಲಿ ಹಾವಿನ ಚಿತ್ರವಿದೆ. ಈ ಶಿಲ್ಪದ ಸುತ್ತಲೂ ಅಲಂಕೃತ ತೋರಣವಿದೆ.

**ವಾಮನಮುದ್ರೆ ಕಲ್ಲು:** ಶೈವ ಶಿಲ್ಪಗಳಲ್ಲಿ ಕಂಡುಬರುವ ಲಿಂಗಮುದ್ರೆ ಕಲ್ಲುಗಳಂತೆ ವೈಷ್ಣವ ಶಿಲ್ಪಗಳಲ್ಲಿ ವಾಮನಮುದ್ರೆ ಕಲ್ಲುಗಳು ಕಂಡುಬರುತ್ತವೆ. ವೈಷ್ಣವರಿಗೆ ದಾನ ನೀಡಿದ ಭೂಮಿಯನ್ನು ಗುರುತಿಸಲು ನೆಡುತ್ತಿದ್ದ ಕಲ್ಲುಗಳೇ ವಾಮನಮುದ್ರೆ ಕಲ್ಲುಗಳು. ಸಾಮಾನ್ಯವಾಗಿ ಇವು ಉಬ್ಬುಶಿಲ್ಪದಂತೆ ಇರದೆ ರೇಖಾಚಿತ್ರದಂತಿರುತ್ತವೆ. ಇದರಲ್ಲಿ ಸಾಮಾನ್ಯವಾಗಿ ವಿಷ್ಣುವು ಬ್ರಾಹ್ಮಣರ ವೇಷದಲ್ಲಿ ಬಲಿ ಚಕ್ರವರ್ತಿಯ ಬಳಿ ಛತ್ರಿ ಹಿಡಿದು ದಾನ ಬೇಡುವ ಚಿತ್ರಣವಿರುತ್ತದೆ.[೬೩]

ದೊಂಬರಹಳ್ಳಿಯ ಹೊಲದ ಶಿಲೆಯೊಂದರ ಮೇಲೆ ಕೊರೆದ ಲಿಪಿಸಹಿತ ವಾಮನ ಮುದ್ರೆ ಕಲ್ಲಿದೆ. ಮೊದಲಿಗೆ ಚಂದ್ರ, ಸೂರ್ಯರ ಚಿತ್ರ ಅದರ ಕೆಳಗಡೆ ಸೂರ್ಯ ಮತ್ತು ಚಂದ್ರರ ಕೆತ್ತನೆಯಿದೆ. ನಂತರ ವಾಮನನ್ನು ಚಿತ್ರಿಸಲಾಗಿದೆ. ವಾಮನ ನಾಲ್ಕು ಕೈಗಳನ್ನು ಹೊಂದಿದ್ದು, ಬಲಗೈಗಳಲ್ಲಿ ಪರಶು, ಚಕ್ರ ಹಿಡಿದಿರುವನು. ಎಡಗೈಗಳಲ್ಲಿ ಶಂಖ ಮತ್ತು ಕಮಂಡಲವನ್ನು ಹಿಡಿದಿರುವನು. ಪಕ್ಕದಲ್ಲಿ ಛತ್ರಿ ಇದೆ. ಚಿತ್ರದ ಕೆಳಗಡೆ "ಸೇನಬೋವರು ಬೊಮ್ಮ ಮಕ್ಕಳು ಹನುಮಣ ಮಕ್ಕಳು" ಎಂದಿದೆ.

ನವಲಿಯ ಪೂಜಾರಿ ಚನ್ನಪ್ಪ ಅವರ ಮನೆಯ ಮುಂದೆ ಲಿಪಿರಹಿತ ವಾಮನಮುದ್ರೆ ಕಲ್ಲಿದೆ. ಅದೇ ರೀತಿ ಕನುವಳ್ಳಿ ಬೇಚಾರಕ್ ಗ್ರಾಮದಲ್ಲಿ ಹರಗೂರೆಮ್ಮ ದೇವಸ್ಥಾನದಿಂದ ಮುಂದೆ ಹೋದರೆ ವಾಮನಮುದ್ರೆ ಕಲ್ಲಿದೆ.

**ಲಿಂಗಮುದ್ರೆ ಕಲ್ಲು:** ಇದರ ಹೆಸರೇ ಸೂಚಿಸುವಂತೆ ಶಿವಲಿಂಗ ಪ್ರಮುಖವಾಗಿರುತ್ತದೆ. ಇಲ್ಲಿ ಸೂರ್ಯ-ಚಂದ್ರರ ಚಿತ್ರಗಳಿದ್ದು, ಇವು ಹೆಚ್ಚಾಗಿ ರೇಖಾಚಿತ್ರಗಳಿಂದ ಕೂಡಿರುತ್ತವೆ. ವಿವಿಧ ದೇವಾಲಯಗಳ ಅರ್ಚಕರಿಗೆ ಭೂಮಿಯನ್ನು ದಾನ ಮಾಡಿದ ನಂತರ, ಆ ಭೂಮಿಯ ಸೀಮಾ ಚಕ್ಕುಬಂದಿಯನ್ನು ಸೂಚಿಸಲು ಅದರ ನಾಲ್ಕು ದಿಕ್ಕುಗಳಲ್ಲಿ ಮೇರೆಗಲ್ಲುಗಳಾಗಿ ಲಿಂಗಮುದ್ರೆ ಕಲ್ಲುಗಳನ್ನು ನಿಲ್ಲಿಸಿದ ಉಲ್ಲೇಖಗಳಿವೆ. ಇವು ಸುಮಾರು ಎರಡರಿಂದ ನಾಲ್ಕು ಅಡಿಗಳ ಎತ್ತರವಿರುತ್ತವೆ. ಇವುಗಳ ಮೇಲೆ ಶಿವಲಿಂಗ, ಇಕ್ಕೆಲಗಳಲ್ಲಿ ಸೂರ್ಯ-ಚಂದ್ರರ ರೇಖಾಚಿತ್ರಣವಿರುತ್ತದೆ. ಅಪರೂಪಕ್ಕೊಮ್ಮೆ ಶಾಸನವಿರುತ್ತದೆ. ಕೆಲವೊಮ್ಮೆ ಶಿವಲಿಂಗದ ಒಂದು ಕಡೆ ಹಸು ಕರುವಿಗೆ ಹಾಲುಣಿಸುತ್ತಿರುವುದು, ಮತ್ತೊಂದು ಕಡೆ ನಂದಿಯನ್ನು ಚಿತ್ರಿಸಲಾಗಿದೆ.

ಹಡಗಲಿಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆ.ವೀರಾಪುರದ ಹತ್ತಿರ ಕನುವಳ್ಳಿ ಗ್ರಾಮದಲ್ಲಿ ಒಂದೇ ಕಲ್ಲಿನಲ್ಲಿ ಲಿಂಗ-ವಾಮನ ಮುದ್ರೆ ಕಲ್ಲಿದೆ. ಈಶ್ವರಲಿಂಗ ಅದರ ಮೇಲ್ಭಾಗ ಚಂದ್ರ, ಸೂರ್ಯರ ರೇಖಾಚಿತ್ರವಿದೆ. ಕೆಳಗಡೆ ವಾಮನ ಕೈಯಲ್ಲಿ ಛತ್ರಿ ಹಿಡಿದು ನಿಂತಿರುವನು. ಅವನ ಪಕ್ಕದಲ್ಲಿ ಕತ್ತಿಯ ಚಿತ್ರಣವಿದೆ. ಅದೇ ರೀತಿ ನವಲಿಯಲ್ಲಿಯೂ ಸಹ ಲಿಂಗ-ವಾಮನ ಮುದ್ರೆ ಕಲ್ಲು ಒಂದರಲ್ಲಿಯೇ ಇದೆ. ಮೇಲ್ಭಾಗ ಶಿವಲಿಂಗ ಕೆಳಭಾಗದಲ್ಲಿ ಸೂರ್ಯ, ಚಂದ್ರ, ಪಕ್ಕದಲ್ಲಿ ಕತ್ತಿ, ಕೈಯಲ್ಲಿ ಛತ್ರಿ ಹಿಡಿದಿರುವ ವಾಮನ ಅವನ ಮುಂಭಾಗದಲ್ಲಿ ಹಸುವಿನ ಚಿತ್ರಣವಿದೆ.

ಸೋವೇನಹಳ್ಳಿಯಲ್ಲಿ ಎರಡು ಲಿಂಗಮುದ್ರೆ ಕಲ್ಲುಗಳಿವೆ. ಉಪನಾಯಕನಹಳ್ಳಿಯ ಊರ ಹೊರ ಹೊಲದಲ್ಲಿ ಒಂದು ಲಿಂಗಮುದ್ರೆ ಕಲ್ಲಿದೆ. ತುಂಬಿನಕೇರಿ ಬಸವೇಶ್ವರ ದೇವಾಲಯದ ನಾಲ್ಕು ಮೂಲೆಗಳಲ್ಲಿ ಹಾಗೂ ಶ್ರೀಮತಿ ಕೊಟ್ರಮ್ಮ ಎಂ.ಜಿ.ಎಂ. ಅವರ ಹೊಲದ ನಾಲ್ಕು ಮೂಲೆಗಳಲ್ಲಿ ಲಿಂಗಮುದ್ರೆ ಕಲ್ಲುಗಳಿವೆ. ಬ್ಯಾಲಹುಣಸಿ ಊರೊಳಗೆ ಲಿಂಗಮುದ್ರೆ ಕಲ್ಲುಗಳಿವೆ. ಬನ್ನಿಮಟ್ಟಿ, ಬಾವಿಹಳ್ಳಿ, ದೊಂಬರಹಳ್ಳಿ, ನವಲಿಗಳಲ್ಲಿ ಲಿಂಗಮುದ್ರೆ ಕಲ್ಲುಗಳಿವೆ. ಶಿವಪುರದ ಹಾಳೂರು ಹನುಮಪ್ಪನ ಗುಡಿಯ ಮುಂದೆ ಲಿಂಗಮುದ್ರೆ ಕಲ್ಲಿದೆ. ಕೆ.ಐಯ್ಯನಹಳ್ಳಿ (ಕರಡಿ ಅಯ್ಯನಹಳ್ಳಿ)ಯ ಆಂಜನೇಯ ದೇವಾಲಯದ ಹತ್ತಿರ, ಗಿರಿಯಾಪುರದಲ್ಲಿ ಹುಗ್ಗಿ ಮನೆತನದವರ ಮನೆಯ ನಾಲ್ಕು ಮೂಲೆಗೂ ಲಿಂಗಮುದ್ರೆ ಕಲ್ಲುಗಳಿವೆ.

ಹಡಗಲಿಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಲಿಂಗಮುದ್ರೆ ಕಲ್ಲು ಸುಮಾರು ನಾಲ್ಕು ಅಡಿ ಉದ್ದವಿದೆ. ಅದರಲ್ಲಿ ಲಿಂಗ, ಸೂರ್ಯ, ಚಂದ್ರ ಹಾಗೂ ಅದರ ಕೆಳಗಡೆ "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಯಾ ಶಂಭವೇ" ಎಂಬ ಶೈವ ಶ್ಲೋಕವಿದೆ.

**ಗಂಡಪೆಂಡೆರ:** ಗಂಡಪೆಂಡೆರ ಎಂಬುದು ಹೊಯ್ಸಳರ ಕಾಲದ ಗರುಡ ಪದ್ಧತಿಯ ಒಂದು ರೂಪವೇ ಆಗಿದೆ. ತನ್ನನ್ನು ಸಾಕಿ ಸಲುಹಿದ ಒಡೆಯನಿಗೆ ಗರುಡನಾಗ ಬಯಸತಕ್ಕವನು ತನ್ನ ಒಡೆಯನ ಮುಂದೆ ಭಾಷೆಯನ್ನು ಕೊಟ್ಟು ಎಡಗಾಲಿಗೆ ಗಂಡಪೆಂಡೆರ(ಕಡಗ)ವನ್ನು ಕಟ್ಟಿ ಕೊಳ್ಳುತ್ತಿದ್ದನು.[೬೪]

ಮಾನ್ಯರ ಮಸಲವಾಡದ ಶಾಸನದಲ್ಲಿ ವಿಕ್ರಮಾಂಕನೆಂಬುವನನ್ನು 'ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ ಕರಗಸಗಾಳನಿಚ್ಚಣಿಗೆ....' ಎಂದಿದೆ. ವೀರರು ತಮ್ಮನ್ನು ಸಾಕಿ ಸಲುಹಿದ ಒಡೆಯ ಸತ್ತಾಗ ತಾವೂ ಕೂಡ ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದರು.[೬೫]

**ಗೋಸಾಸ:** ಗೋಸಾಸವು ಸಾಮಾನ್ಯವಾಗಿ ಮೂರರಿಂದ ನಾಲ್ಕು ಅಡಿಗಳವರೆಗೆ ಇರುತ್ತದೆ. ಒಮ್ಮೊಮ್ಮೆ ಎತ್ತರದ ಗೋಸಾಸಗಳೂ ಇವೆ. ಒಂದೇ ರೀತಿಯ ಕಲ್ಲಿನ ಮೇಲಿದ್ದು, ಮೇಲ್ಭಾಗವು ದುಂಡಾಗಿರುತ್ತದೆ. ಕಲಶದ ಚಿತ್ರ ಮತ್ತು ಕಲಶದಿಂದ ಹೊರಬೀಳುತ್ತಿರುವ ಹೂವಿನ ಚಿತ್ರವಿರುತ್ತದೆ. ಕೆಲವೊಮ್ಮೆ ನೇಗಿಲ ಚಿತ್ರ, ಪಕ್ಕದಲ್ಲಿ ಆನೆಯ ಚಿತ್ರವಿರುತ್ತದೆ. ಶಾಸನರಹಿತ ಗೋಸಾಸಗಳಿವೆ.

ಗೋವುಗಳಿಗೆ ಸಂಬಂಧಿಸಿದ್ದು, ದಾನ ನೀಡುವುದಷ್ಟೇ ಅಲ್ಲದೆ ಇದರ ನೆನಪಿಗಾಗಿ ನೆಡುವ ಕಲ್ಲುಗಳೇ ಆಗಿವೆ. ಹೂವಿನಹಡಗಲಿಯ ಕ್ರಿ.ಶ.೧೧ನೇ ಶತಮಾನದ ಶಾಸನದಲ್ಲಿ 'ಸ್ವಸ್ತಿಶ್ರೀ ವಾಸುಗಿ ಮಹಾನಾಗ ಗೋಸಾಸಿಯ' ಎಂದಿದೆ.[೬೬]

**ಯಂತ್ರಕಲ್ಲು:** ಕತ್ತೆಬೆನ್ನೂರಿನ ಕಲ್ಲೇಶ್ವರ ದೇವಾಲಯದ ಹಿಂಭಾಗದಲ್ಲಿ ಯಂತ್ರಕಲ್ಲಿದೆ. ಇದು ನೋಡಲು ವೃತ್ತಾಕಾರದ ರೇಖಾಚಿತ್ರದಲ್ಲಿ ನಕ್ಷತ್ರಾಕಾರದ ಯಂತ್ರವನ್ನು ಚಿತ್ರಿಸಲಾಗಿದ್ದು, ಇದರಲ್ಲಿ ಲಿಪಿಯಿದೆ. ಹಾಗೆಯೇ ಉಡುಚಲಮ್ಮ ದೇವಾಲಯದ ಮುಂಭಾಗದಲ್ಲಿಯೂ ಯಂತ್ರಕಲ್ಲಿದೆ. ಇದು ನೆಲದಲ್ಲಿ ಹೂತು ಹೋಗಿದೆ. ಮೇಲಿನ ನಾಲ್ಕು ಸಾಲಿನಲ್ಲಿ ಲಿಪಿಗಳಿವೆ. ಅದರ ಮೇಲ್ಭಾಗ ಅಕ್ಕ ಪಕ್ಕದಲ್ಲಿ ಸೂರ್ಯ ಮತ್ತು ಚಂದ್ರರ ಚಿತ್ರವನ್ನು ಬಿಡಿಸಲಾಗಿದೆ.

ಅಲ್ಲಿಯೇ ಇನ್ನೊಂದು ಯಂತ್ರಕಲ್ಲಿದೆ. ಇದು ಸೂರ್ಯ, ಚಂದ್ರ, ಶಿವಲಿಂಗಗಳಿಂದ ಕೂಡಿದ್ದು, ಕೆಳಭಾಗದಲ್ಲಿ ಚೌಕಾಕಾರದ ಮೂರು ಸಾಲಿನ ಮನೆಯಲ್ಲಿ ಸಂಖ್ಯೆಯನ್ನು ಬಿಡಿಸಲಾಗಿದೆ. ಈ ಯಂತ್ರಕಲ್ಲುಗಳನ್ನು ದನಗಳಿಗೆ ಕಾಲುಬಾಯಿ ರೋಗ ಬಂದಾಗ ಪೂಜಿಸಿದರೆ ಆ ರೋಗ ವಾಸಿಯಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ.

**ನಿಸಿಧಿಗಲ್ಲುಗಳು:** ನಿಸಿಧಿಗಲ್ಲುಗಳು ಸಲ್ಲೇಖನ ವ್ರತ ಪಾಲಿಸಿ ಪ್ರಾಣತ್ಯಾಗ ಮಾಡಿದ ಜೈನ ಧರ್ಮೀಯರ ಸ್ಮರಣಾರ್ಥವಾಗಿ ನಿಲ್ಲಿಸಿದವುಗಳಾಗಿವೆ. ಇದು 'ಸದ್' ಧಾತುವಿನಿಂದ ವ್ಯುತ್ಪನ್ನವಾಗುವ 'ನಿಷತ್ತಿ' 'ನಿಷಾದಿನ್' ಪದಗಳಿಗೆ ಸಮಾನಂತರವಾಗಿದೆ. ಇದರ ಅರ್ಥ ಕುಳಿತುಕೊಳ್ಳುವಿಕೆ, ವಿಶ್ರಮಿಸುವಿಕೆ ಎಂದು ಅರ್ಥ.

ನಿಸಿಧಿಗಲ್ಲುಗಳು ಸಾಮಾನ್ಯವಾಗಿ ಎರಡರಿಂದ ಮೂರು ಹಂತಗಳಲ್ಲಿ ಕೆತ್ತಲ್ಪಟ್ಟಿರುತ್ತವೆ. ಮೊದಲ ಹಂತದಲ್ಲಿ ವ್ರತ ಸ್ವೀಕರಿಸುವ ವ್ಯಕ್ತಿಯು ಗುರುವಿನ ಬಳಿ ಕುಳಿತು ಉಪದೇಶ ಸ್ವೀಕರಿಸುತ್ತಿರುವಂತೆ, ವ್ಯಾಸಪೀಠದ ಮೇಲೆ ಧರ್ಮಗ್ರಂಥ ಪಠಣ ಮಾಡುತ್ತಿರುವ ಗುರುವನ್ನು ಕಾಣುತ್ತೇವೆ. ಎರಡನೆಯ ಹಂತದಲ್ಲಿ ವ್ಯಕ್ತಿಯು ಗುರುವಿನಿಂದ ಕಲಿತು ವ್ರತ ಸಾಧನೆ ಮಾಡುತ್ತಾ ಸಿದ್ಧಿಯ ಹಂತ ತಲುಪುತ್ತಿರುವಂತೆ ಕೆತ್ತಲಾಗಿರುತ್ತದೆ. ಇನ್ನು ಮೂರನೆಯ ಕೊನೆಯ ಹಂತದಲ್ಲಿ ಅವನು ಮುಕ್ತಿ ಪಡೆದು ಪದ್ಮಾಸನದಲ್ಲಿ ಕುಳಿತಿರುವಂತೆ ಕೆತ್ತಲಾಗಿರುತ್ತದೆ.

ಬೋಧಿಸುವ ಗುರು, ಆಲಿಸುವ ಶಿಷ್ಯ ಇಬ್ಬರ ಮಧ್ಯ ಪುಸ್ತಕ ಹೊತ್ತ ವ್ಯಾಸಪೀಠ. ಈ ಚಿತ್ರವು ಸಾಮಾನ್ಯವಾಗಿ ನಿಸಿಧಿಗಲ್ಲುಗಳ ಶಿಲ್ಪವಾಗಿದೆ.[೪೭]

ನಿಸಿಧಿ ಶಾಸನಗಳು ಜೈನ ಧರ್ಮದ ತತ್ವ ಮತ್ತು ಆಚರಣೆಗಳ ನಿಶ್ಚಯ-ವ್ಯವಹಾರ ಮುಖಗಳನ್ನು ತಿಳಿಸಿಕೊಡುತ್ತವೆ.[೪೮]

ಉತ್ತಂಗಿಯ ಬೇವಿನ ಮರದಡಿ ಇರುವ ನಿಸಿಧಿ ಶಾಸನದಲ್ಲಿ ಸ್ಥಾನಿಕ ಭಂಗಿಯ ಜಿನನ ಶಿಲ್ಪವನ್ನು ಕೆತ್ತಲಾಗಿದೆ. ಶಿಲ್ಪದ ಕೆಳಗೆ ದಂಪತಿಗಳಿಬ್ಬರು ಕೈಮುಗಿದು ಕುಳಿತಿರುವ ಶಿಲ್ಪ ಕೆತ್ತಲಾಗಿದೆ. ಇದರಿಂದಾಗಿ ಜೈನ ಧರ್ಮದಲ್ಲಿ ಮಹಿಳೆಗೂ ಸಮಾನ ಅವಕಾಶಗಳು ಇದ್ದುದನ್ನು ಮನಗಾಣುತ್ತೇವೆ.[೪೯]

ಇಟಗಿಯ ನಾಡಕಚೇರಿಯ ಮುಂದುಗಡೆ ನಿಸಿಧಿಗಲ್ಲು ದೊರೆತಿದೆ. ಮಾನ್ಯರ ಮಸಲವಾಡದ ವೀರಭದ್ರ ದೇವಸ್ಥಾನದ ಆವರಣದಲ್ಲಿ ಎರಡು ನಿಸಿಧಿಗಲ್ಲುಗಳಿವೆ. ಹೊಳಗುಂದಿ ಬಳ್ಳೇಶ್ವರ ದೇವಾಲಯದ ಆವರಣದಲ್ಲಿಯೂ ನಿಸಿಧಿಗಲ್ಲುಗಳಿವೆ. ತಾಲೂಕಿನ ಹಲವು ಕಡೆ ನಿಸಿಧಿಗಲ್ಲುಗಳು ದೊರಕುತ್ತವೆ.

ಇಟಗಿಯಲ್ಲಿ ದೊರೆತ ಕಲ್ಯಾಣ ಚಾಲುಕ್ಯರ ಕಾಲದ ಕಣಶಿಲೆಯ ನಿಸಿಧಿಕಲ್ಲಿನಲ್ಲಿ ಜೈನ ತೀರ್ಥಂಕರ ಮತ್ತು ಓರ್ವ ಭಕ್ತನ ಚಿತ್ರಣವಿದೆ. ಜಿನನ ಮೇಲ್ಭಾಗದಲ್ಲಿ ಛತ್ರಿಯಿದೆ. ಇದು ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ. ೧೧-೧೨ನೇ ಶತಮಾನದ ನಿಸಿಧಿಕಲ್ಲಿನಲ್ಲಿ ಜೈನ ತೀರ್ಥಂಕರ ಮತ್ತು ಓರ್ವ ಭಕ್ತನ ಚಿತ್ರಣವಿದೆ. ಜಿನನ ಮೇಲ್ಭಾಗದಲ್ಲಿ ನಾಲ್ಕು ಹಂತಗಳ ಛತ್ರಿಯಿದೆ. ಪಕ್ಕದಲ್ಲಿ ಚಾಮರಗಳಿವೆ.

ಕೊಂಬಳಿ, ರಾಜುವಾಳ, ಮಾಗಳ, ಹಿರೇಹಡಗಲಿ, ಹೂವಿನಹಡಗಲಿ, ಉತ್ತಂಗಿ, ಮಾನ್ಯರ ಮಸಲವಾಡ, ಮುದೇನೂರು, ತಿಪ್ಪಾಪುರ, ಹಗರನೂರು, ಹೊಳಲು, ಬೂದನೂರು, ನಡುವಿನಹಳ್ಳಿ, ಕತ್ತೆಬೆನ್ನೂರು, ಬನ್ನಿಮಟ್ಟಿ, ಹಿರೇಕುರುವತ್ತಿ, ಕನುವಳ್ಳಿ, ತುಂಬಿನಕೇರಿ ಮೊದಲಾದ ಕಡೆ ವೀರಗಲ್ಲುಗಳು ಕಂಡುಬರುತ್ತವೆ. ನಿಷಿದಿಗಲ್ಲುಗಳು ಕತ್ತೆಬೆನ್ನೂರು, ಹಿರೇಹಡಗಲಿ, ಹೊಳಗುಂದಿ, ಇಟಗಿ, ಬಾವಿಹಳ್ಳಿ, ಉತ್ತಂಗಿ ಮೊದಲಾದೆಡೆ ಕಂಡುಬಂದಿವೆ.

**ಟಿಪ್ಪಣಿಗಳು**

೧. ಕ.ವಿ.ವಿ.ಶಾ.ಸಂ.೧, ಹಡಗ-೫೭, ಕ್ರಿ.ಶ.೩ನೇ ಶತಮಾನ

೨. ಅದೇ, ಹಡಗ-೬೦, ಕ್ರಿ.ಶ.೧೦೩೬

೩. ಅದೇ, ಹಡಗ-೯೬, ಕ್ರಿ.ಶ.೧೦೩೮

೪. ಅದೇ, ಹಡಗ-೨೩, ಕ್ರಿ.ಶ.೧೦೪೬

೫. ಅದೇ, ಹರಪ-೪೧, ಕ್ರಿ.ಶ.೧೦೫೨-೫೩

೬. ಅದೇ, ಹಡಗ-೫೨, ಕ್ರಿ.ಶ.೧೦೫೭

೭. ಅದೇ, ಹಡಗ-೮೬, ಕ್ರಿ.ಶ.೧೦೬೨

೮. ಅದೇ, ಹಡಗ-೫೬, ಕ್ರಿ.ಶ.೮೫೧

೯. ಅದೇ, ಹಡಗ-೮೩, ಕ್ರಿ.ಶ.೧೦೯೦

೧೦. ಅದೇ, ಹಡಗ-೯೩, ಕ್ರಿ.ಶ.೧೦೯೭

೧೧. ಅದೇ, ಹಡಗ-೧, ಕ್ರಿ.ಶ.೧೦೯೯

೧೨. ಅದೇ, ಹಡಗ-೧೦೩, ಕ್ರಿ.ಶ.೧೧೨೧

೧೩. ಅದೇ, ಹಡಗ-೧೦೧, ಕ್ರಿ.ಶ.೧೧೧೦

೧೪. ಅದೇ, ಹಡಗ-೭೧, ಕ್ರಿ.ಶ.೧೧೧೬

೧೫. ಅದೇ, ಹಡಗ-೧೦೩, ಕ್ರಿ.ಶ.೧೧೨೧

೧೬. ಅದೇ, ಹಡಗ-೮೪, ಕ್ರಿ.ಶ.೧೦೭೧

೧೭. ಅದೇ, ಹಡಗ-೩೬, ಕ್ರಿ.ಶ.೧೧೪೨

೧೮. ಅದೇ, ಹಡಗ-೩೭, ಕ್ರಿ.ಶ.೧೦೭೪

೧೯. ಅದೇ, ಹಡಗ-೮೬, ಕ್ರಿ.ಶ.೧೦೬೨

೨೦. ಅದೇ, ಹಡಗ-೮೫, ಕ್ರಿ.ಶ.೧೧೧೦

೨೧. ಅದೇ, ಹಡಗ-೩೫, ಕ್ರಿ.ಶ.೧೧೯೪

೨೨. ಅದೇ, ಹಡಗ-೧೪, ಕ್ರಿ.ಶ.೧೨೦೧

೨೩. ಅದೇ, ಹಡಗ-೫, ಕ್ರಿ.ಶ.೧೨೦೫

೨೪. ಅದೇ, ಹಡಗ-೧೦೦, ಕಾಲದ ಉಲ್ಲೇಖವಿಲ್ಲ.

೨೫. ಅದೇ, ಹಡಗ-೬೭, ಕ್ರಿ.ಶ.೧೨೦೯

೨೬. ಅದೇ, ಹಡಗ-೬೫, ಕ್ರಿ.ಶ.೧೨೧೫

೨೭. ಕರ್ನಾಟಕ ಪರಂಪರೆ ಸಂ.೧, ಪು.೪೭೦, ೪೭೧

೨೮. ಕ.ವಿ.ವಿ.ಶಾ.ಸಂ.೧, ಹಡಗ–೮೨, ಕ್ರಿ.ಶ.೧೨೬೨

೨೯. ಅದೇ, ಹಡಗ–೬೨, ಕ್ರಿ.ಶ. ೧೨೯೭

೩೦. ಅದೇ, ಹಡಗ–೭೭, ಕಾಲದ ಉಲ್ಲೇಖವಿಲ್ಲ.

೩೧. ಅದೇ, ಹಡಗ–೧೦೬, ಕ್ರಿ.ಶ.೧೫೧೬

೩೨. ಅದೇ, ಹಡಗ–೬೪, ಕ್ರಿ.ಶ.೧೫೪೭

೩೩. ಅದೇ, ಹಡಗ–೯೫, ಕಾಲದ ಉಲ್ಲೇಖವಿಲ್ಲ.

೩೪. ಅದೇ, ಹಡಗ–೭, ಕ್ರಿ.ಶ.೧೦೮೭

೩೫. ಅದೇ, ಹಡಗ–೫೪, ಕಾಲದ ಉಲ್ಲೇಖವಿಲ್ಲ.

೩೬. ಅದೇ, ಹಡಗ–೩೯, ಕ್ರಿ.ಶ.೧೧೭೮

೩೭. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪು.೨೫

೩೮. ಕ.ವಿ.ವಿ.ಶಾ.ಸಂ.೧, ಹಡಗ–೬೩, ಕ್ರಿ.ಶ.೧೩೭೨

೩೯. ಅದೇ, ಹಡಗ–೩೫, ಕ್ರಿ.ಶ.೧೧೯೪

೪೦. ಅದೇ, ಹಡಗ–೨೨, ಕ್ರಿ.ಶ.೧೭–೧೮ನೇ ಶತಮಾನ

೪೧. ಅದೇ, ಹಡಗ–೩೨, ಕಾಲದ ಉಲ್ಲೇಖವಿಲ್ಲ.

೪೨. ಅದೇ, ಹಡಗ–೩೫, ಕ್ರಿ.ಶ.೧೧೯೪

೪೩. ನರೇಗಲ್ಲ ಎಂ.ಎಸ್., ಉತ್ತರ ಗದಗ ಜಿಲ್ಲೆಯ ಶಾಸನಗಳು: ಒಂದು ಅಧ್ಯಯನ, ಪು.೨೪೪

೪೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೩೨೯

೪೫. ಕ.ವಿ.ವಿ.ಶಾ.ಸಂ.೧, ಹಡಗ–೬೧, ಕ್ರಿ.ಶ.೧೧೮೩

೪೬. ಅದೇ, ಹಡಗ–೯೧, ಕ್ರಿ.ಶ.೧೧ನೇ ಶತಮಾನ

೪೭. ಗಿರಿಜ, ಸಂಡೂರು ತಾಲ್ಲೂಕು: ಒಂದು ಚಾರಿತ್ರಿಕ ಅಧ್ಯಯನ, ಪು.೧೨೦

೪೮. ಕಲಬುರ್ಗಿ ಎಂ.ಎಂ., ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಪು.೧೫

೪೯. ವೀರೇಶ ಎನ್.ಎಸ್.ಉತ್ತಂಗಿ, ಇ.ದ.ಸಂ.೨೩, ೨೦೦೪, ಪು.೮೫

□□



ತಳಕಲ್ಲು ಶಾಸನ



ಕೊಟ್ಟೆಕಲ್ ಶಾಸನ



ಮಾಗಳ ಶಾಸನ



ಹೊಳಗುಂದಿ ಶಾಸನ




ತೀರ್ಥಂಕರ. ಹಡಗಲಿ ವಸ್ತುಸಂಗ್ರಹಾಲಯ



ಜೈನ ಶಾಸನ. ಮಾನ್ಯರಮಸಲವಾಡ




ತೀರ್ಥಂಕರ. ಹಡಗಲಿ ವಸ್ತುಸಂಗ್ರಹಾಲಯ



ಜೈನ ಶಾಸನ. ಹೊಳಗುಂದಿ



ವೀರಗಲ್ಲು, ಮಾನ್ಯರಮಸಲವಾಡ



ವೀರಗಲ್ಲು, ಹಡಗಲಿ ವಸ್ತುಸಂಗ್ರಹಾಲಯ



ಹುಲಿಬೇಟೆ ವೀರಗಲ್ಲು, ಮಾನ್ಯರ ಮಸಲವಾಡ



ಸತಿಗಲ್ಲು, ಹಡಗಲಿ ವಸ್ತುಸಂಗ್ರಹಾಲಯ



ವೀರಗಲ್ಲು, ಹಡಗಲಿ ವಸ್ತುಸಂಗ್ರಹಾಲಯ



ತುರುಗೋಳ್ ವೀರಗಲ್ಲು, ಹರವಿ



ವೀರಗಲ್ಲು, ಮಾಗಳ



ವೀರಗಲ್ಲು, ರಾಜುವಾಳ



ಯಂತ್ರಕಲ್ಲು, ಕತ್ತೆಬೆನ್ನೂರು



ವೀರಗಲ್ಲು, ಬನ್ನಿಮಟ್ಟಿ



ಕಾರ್ತಿಕೇಯ, ಮಾನ್ಯರ ಮಸಲವಾಡ



ಯಂತ್ರಕಲ್ಲು, ಕತ್ತೆಬೆನ್ನೂರು



ಕೇಶವ ದೇವಾಲಯ, ಹೂವಿನಹಡಗಲಿ



ಕೇಶವ ದೇವಾಲಯ, ಹೂವಿನಹಡಗಲಿ



ಗಜಲಕ್ಷ್ಮೀ, ಹೊನ್ನೂರು



ವೀರಗಲ್ಲು ಶಿಭಾರಕಟ್ಟೆ, ಕತ್ತೆಬೆನ್ನೂರು

ಅಧ್ಯಾಯ : ಐದು

# ದೇವಾಲಯಗಳು ಮತ್ತು ಮೂರ್ತಿಶಿಲ್ಪ

ಅಧ್ಯಾಯ : ಐದು

# ದೇವಾಲಯಗಳು ಮತ್ತು ಮೂರ್ತಿಶಿಲ್ಪ

## ೫.೧. ವಾಸ್ತು ಮತ್ತು ಶಿಲ್ಪಗಳ ನಿರ್ಮಾಣದ ಹಿನ್ನೆಲೆ

ಶಿಲಾಯುಗದ ಮಾನವನು ಅಲೆಮಾರಿಯಾಗಿದ್ದು, ತನ್ನ ಸುತ್ತಮುತ್ತಲಿನ ಪ್ರಾಕೃತಿಕ ಸನ್ನಿವೇಶವನ್ನು ಅವಲಂಬಿಸಿದ್ದನು. ಆಹಾರಕ್ಕಾಗಿ ಬೇಟೆಯನ್ನು ರೂಢಿಸಿಕೊಂಡಿದ್ದನು. ಈ ಮಾನವನು ವ್ಯವಸಾಯ ಮಾಡುವುದನ್ನು ಯಾವಾಗ ಕಲಿತನೋ ಅಂದಿನಿಂದ ಒಂದು ಕಡೆ ನೆಲೆಸಲು ಪ್ರಾರಂಭಿಸಿದನು. ಪ್ರಕೃತಿಯಿಂದ ಹಲವಾರು ಪಾಠಗಳನ್ನು ಕಲಿಯುತ್ತಾ ಬಂದನು. ಅದರಲ್ಲಿ ಪ್ರೀತಿ ಹಾಗೂ ಭಯವನ್ನು ಬೆಳೆಸಿಕೊಂಡನು. ಈ ರೀತಿಯ ಪ್ರೀತಿ ಮತ್ತು ಭಯ, ಗೌರವಗಳೇ ದೇವರ ಸೃಷ್ಟಿಗೆ ಕಾರಣವಾಗಿರಬಹುದು. ಈ ಕಾರಣದಿಂದಾಗಿ ಪ್ರಕೃತಿಯಲ್ಲಿ ದೊರೆಯುವ ಎಲ್ಲಾ ವಸ್ತುಗಳು ಪೂಜಾರ್ಹವಾದವು. ಹೀಗೆ ಗುಹೆಗಳಲ್ಲಿ ವಾಸಿಸುತ್ತಾ ಪ್ರಕೃತಿಯೊಂದಿಗೆ ನಿರಂತರವಾದ ಸಂಬಂಧವನ್ನು ಹೊಂದಿದ್ದನು. ಹಾಗೆಯೇ ಪ್ರಕೃತಿಯಲ್ಲಿ ನಡೆಯುವ ಎಲ್ಲಾ ಸೃಷ್ಟಿಗಳ ಹಿಂದೆ ಯಾವುದೋ ಒಂದು ಅಗೋಚರ ಶಕ್ತಿ ಅಡಗಿದೆ ಎಂದು ತಿಳಿದಿದ್ದನು. ಹಾಗಾಗಿ ಆ ಶಕ್ತಿಗೆ ಒಂದು ರೂಪ ಕೊಡಲು ಪ್ರಯತ್ನಿಸಿದನು. ಹೀಗೆ ತನಗೆ ಅನಿಸಿದ್ದನ್ನು ಮಾಡುತ್ತಾ ತನಗೂ ಒಂದು ಸುರಕ್ಷಿತ ಸ್ಥಳದ ಅಗತ್ಯತೆ ಇದೆ ಎಂದು ತಿಳಿದು ತಾವು ವಾಸಿಸುವಲ್ಲಿಯೇ ಅಗತ್ಯಕ್ಕೆ ತಕ್ಕಂತೆ ಸುತ್ತ ಗೋಡೆ, ಮೇಲ್ಛಾವಣಿ, ಬಾಗಿಲು ಇತ್ಯಾದಿಗಳನ್ನು ರಚಿಸಿಕೊಂಡನು. ಸಿಂಧೂ ಸಂಸ್ಕೃತಿಯಲ್ಲಿ ವಸತಿಯೋಗ್ಯ ವಸ್ತುಗಳನ್ನು ಕಾಣಬಹುದಾಗಿದೆ. ಈ ನಾಗರಿಕತೆಯ ಜನರು ಪ್ರಕೃತಿಯ ಆರಾಧಕರಾಗಿದ್ದು, ಪಶುಪತಿಯಂತಹ ಹಲವಾರು ವಿಗ್ರಹಗಳನ್ನು ಜನರು ಆರಾಧಿಸುತ್ತಿದ್ದರು. ಈ ಅವಧಿಯಲ್ಲಿ ದೇಗುಲಗಳಿಗೆಂದು ದೇವಾಲಯ ಕಟ್ಟುವ, ವಾಸ್ತು ಶೈಲಿಯ ವಿನ್ಯಾಸ ಇತ್ತೆಂದು ಅವರಿಗೂ ತಿಳಿದಿರಲಿಲ್ಲ. ಭಾರತದ ಚರಿತ್ರೆಯಲ್ಲಿ ದೇಗುಲಗಳ ವಾಸ್ತುರೂಪಗಳು ದೊರೆಯುವುದು ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದನಂತರ. ಮನುಷ್ಯನು ತನ್ನ ರಕ್ಷಣೆಗೆಂದು ಕಟ್ಟಿಕೊಂಡ ಕಟ್ಟಡವು ಗೃಹವಾಸ್ತುವಾದರೆ, ತನ್ನ ಹಿರಿಯರು ದೇವರು ಹಾಗೂ ಇತರ ಶಕ್ತಿಗಳಿಗೆಂದು ನಿರ್ಮಿಸಿದ ಕಟ್ಟಡವನ್ನು ದೇವಾಲಯ ಅಥವಾ ಧಾರ್ಮಿಕ ವಾಸ್ತು ಎಂದು ಕರೆಯಲಾಗುತ್ತದೆ. ವಾಸ್ತು ಎಂದರೆ ವಸ್ತುಗಳಿಂದ ನಿರ್ಮಿತವಾದದ್ದು, ಅಂದರೆ ಕಟ್ಟಡ ಎಂದರೆ ಹೀಗೆ ಇರಬೇಕು ಎಂದು ಹೇಳುತ್ತದೆ. ಅದು ಅವರವರ ನಂಬಿಕೆಗೆ ಅನುಗುಣವಾಗಿರುತ್ತದೆ. ಆದರೆ

ಇದು ಕೇವಲ ಕಟ್ಟಡಗಳಿಗೆ ಸೀಮಿತವಾಗಿರದೆ ಪಟ್ಟಣ ನಿರ್ಮಾಣದ ಯೋಜನೆ, ಉದ್ಯಾನವನಗಳು, ರಸ್ತೆಗಳು, ಕೆರೆ, ಬಾವಿಗಳು ಹೀಗೆ ಹಲವಾರು ವಿಧದಲ್ಲಿ ಇದರ ವ್ಯಾಪ್ತಿ ಬೆಳೆಯುತ್ತದೆ. ಆದರೆ ಇಲ್ಲಿ ವಾಸ್ತು ಎಂಬುದನ್ನು ದೇವಾಲಯಗಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಮುಂದೆ ಇದರ ವ್ಯಾಪ್ತಿ ಪರಿಮಿತಗೊಂಡು 'ವಾಸ್ತುಶಿಲ್ಪ' ಎಂದರೆ ಕಟ್ಟಡಗಳ ನಿರ್ಮಾಣ ಮತ್ತು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ಬೆಳೆದಿದೆ.

ನಮ್ಮಲ್ಲಿ ಈ ವಾಸ್ತುಶಿಲ್ಪದ ಹುಟ್ಟನ್ನು ಕುರಿತು 'ಮಾನಸಾರ' ಎಂಬ ಶಾಸ್ತ್ರಗ್ರಂಥ ಈ ರೀತಿ ಹೇಳುತ್ತದೆ: ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟ ಮತ್ತು ಮನು ಹುಟ್ಟಿದರು. ಇವರ ನಾಲ್ಕು ಜನ ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ ಮತ್ತು ತಕ್ಷಕ ಎಂಬುವವರು. ಇವರಿಂದ ವಾಸ್ತುಕಲೆ ಬೆಳೆಯಿತು ಎಂದು ಮಾನಸಾರ ಹೇಳುತ್ತದೆ. ವಾಸ್ತವವಾಗಿ ಸ್ಥಪತಿ ಮೊದಲಾದವು ವಸ್ತು ನಿರ್ಮಾಣ ಕಾರ್ಯದಲ್ಲಿ ತೊಡಗುವ ಕರ್ಮಚಾರಿಗಳ ಉದ್ಯೋಗಕ್ಕೆ ಇರುವ ಹೆಸರುಗಳು. ಅದರಲ್ಲಿಯೂ ಸ್ಥಪತಿ ಎಂಬುದು ದೇವಾಲಯಗಳ ನಿರ್ಮಾಣದಲ್ಲಿ ಪ್ರಮುಖ ಸ್ಥಾನವನ್ನು ಪಡೆಯಿತು. ದಕ್ಷನಾದ ಮತ್ತು ದೇವಾಲಯಗಳ ನಿರ್ಮಾಣದಲ್ಲಿ ಪ್ರಮುಖ ಸ್ಥಾನವನ್ನು ಪಡೆಯಿತು. ದಕ್ಷನಾದ ಮತ್ತು ವಾಸ್ತುವಿದ್ಯಾಪಾರಂಗತನಾದ ಸ್ಥಪತಿಯೊಬ್ಬನ ನೇತೃತ್ವದಲ್ಲಿ ಕಟ್ಟಡಗಳ ನಿರ್ಮಾಣ ಕಾರ್ಯ ನಡೆಯುತ್ತಿತ್ತು.[೧] ಇದಲ್ಲದೆ ಶಿಲ್ಪರತ್ನ, ವಾಸ್ತುಚಂದ್ರಿಕೆ ಮೊದಲಾದ ಗ್ರಂಥಗಳನ್ನು ಸುಪ್ರಬೇಧ, ಕಾಮಿಕ ಮೊದಲಾದ ಆಗಮಗಳು ಮತ್ಸ್ಯಪುರಾಣ ಮೊದಲಾದ ನಿರೂಪಣೆಗಳು ಈ ಕಲೆಗೆ ದೈವಿಕವಾದ ಮೂಲವನ್ನೇ ಹೇಳುತ್ತವೆ. ವಾಸ್ತುಶಿಲ್ಪ ಕಲೆಯ ಐತಿಹಾಸಿಕ ಅಧ್ಯಯನಕ್ಕೆ ದೊರಕುವ ವಿಶಿಷ್ಟವಾದ ಸಾಮಗ್ರಿಗಳೆಂದರೆ ದೇವಾಲಯಗಳು, ಮಸೀದಿಗಳು, ಘೋರಿಗಳು ಇತ್ಯಾದಿ. ಈಗ ದೊರಕುವ ಅತೀ ಪ್ರಾಚೀನವಾದ ಕಟ್ಟಡಗಳೆಂದರೆ ಮೆಹೆಂಜೋದಾರೋ ಹರಪ್ಪಗಳ ಅವಶೇಷಗಳು. ಸಿಂಧೂ ಸಂಸ್ಕೃತಿಯ ಈ ಕಟ್ಟಡಗಳಲ್ಲಿ ಕಲಾತ್ಮಕವಾದ ದೃಷ್ಟಿಯಿಂದ ಅಷ್ಟು ಮಹತ್ವದ ಅಂಶ ಕಾಣದಿದ್ದರೂ, ಕಟ್ಟಡಗಳಿಗೆ ಅವರು ಉಪಯೋಗಿಸುತ್ತಿದ್ದ ಸಾಮಗ್ರಿಗಳು ಗಮನಾರ್ಹವಾಗಿವೆ. ಮಣ್ಣುಗಾರೆಗಳನ್ನು ಉಪಯೋಗಿಸಿ ಇಟ್ಟಿಗೆಗಳಿಂದ ಕಟ್ಟಡಗಳನ್ನು ಕಟ್ಟುವುದರಲ್ಲಿ ಅಲ್ಲಿನ ಜನ ಪರಿಣಿತರಾಗಿದ್ದರು ಎಂಬುದಕ್ಕೆ ಈಗ ದೊರೆತಿರುವ ಕಟ್ಟಡಗಳ ಅವಶೇಷಗಳೇ ಸಾಕ್ಷಿಗಳಾಗಿವೆ.

ಭಾರತದಲ್ಲಿ ಮೊದಲ ಪೂಜಾಗೃಹ ನಿರ್ಮಿಸಿದ ಕೀರ್ತಿ ಬೌದ್ಧರಿಗೆ ಸಲ್ಲುತ್ತದೆ. ಬೌದ್ಧರು ನಿರ್ಮಿಸಿದ ಸ್ತೂಪಗಳೇ ಪೂಜ್ಯನೀಯ ವಸ್ತುಗಳಾದವು. ಇವುಗಳೇ ಮುಂದೆ ಚೈತ್ಯಾಲಯಗಳಾದವು. ಹೀಗೆ ಬದಲಾಗುತ್ತಾ ಮುಂದೆ ಜಿನಾಲಯ, ದೇವಾಲಯಗಳಾದವು ಎಂದು ಊಹಿಸಬಹುದಾಗಿದೆ. ಜಿನರು ಕ್ರಿ.ಶ.೨-೩ನೇ ಶತಮಾನದ ಕಾಲಾವಧಿಯಲ್ಲಿ ಜಿನನ ಪಾದಗಳನ್ನಿಟ್ಟು ದೀಪ ಹಚ್ಚುತ್ತಿದ್ದರು. ಇದರಿಂದಾಗಿ ಮೊಟ್ಟಮೊದಲನೆಯ ಬಾರಿಗೆ ಜಿನರು ಜಿನಾಲಯವನ್ನು ನಿರ್ಮಿಸಿದರು. ನಂತರ ದೇವಾಲಯಗಳು ಕಟ್ಟಡಗಳ ರೂಪದಲ್ಲಿ ಆರಂಭವಾದದ್ದು ಗುಪ್ತರ ಕಾಲದಲ್ಲಿ. ಈ ಅವಧಿಯಲ್ಲಿ

ಆರಂಭವಾದ ಸಾಂಚಿಯ ೧೭ನೇ ಸಂಖ್ಯೆಯ ದೇವಾಲಯ ಭಾರತದ ಅತೀ ಪ್ರಾಚೀನ ದೇವಾಲಯವೆಂದು ಗುರುತಿಸಲಾಗಿದೆ. ಗುಪ್ತರ ಕಾಲದಲ್ಲಿ ಇಟ್ಟಿಗೆ ಬಳಸಿ ಕಟ್ಟಿರುವ ಪ್ರಥಮ ದೇವಾಲಯವನ್ನು ಬೀತರ್‌ಗಾಂವ್‌ನಲ್ಲಿ ಸಂಶೋಧಕರು ಪತ್ತೆ ಹಚ್ಚಿದ್ದಾರೆ. ಕರ್ನಾಟಕದಲ್ಲಿ ಈ ಬಗೆಯ ದೇವಾಲಯಗಳನ್ನು ನಿರ್ಮಿಸಿದವರು ಶಾತವಾಹನರು. ಮುಖ್ಯವಾಗಿ ದೇವಾಲಯಗಳ ವಾಸ್ತುಶಿಲ್ಪಕ್ಕೆ ವಿಶೇಷ ಪ್ರೋತ್ಸಾಹ ಮತ್ತು ಆದ್ಯತೆ ನೀಡಿದವರಲ್ಲಿ ಗುಪ್ತರೇ ಮೊದಲಿಗರಾಗಿದ್ದಾರೆ.

ಪ್ರಾಚೀನ ಭಾರತದಲ್ಲಿ ದೇವಾಲಯಗಳು ಸಾಮಾಜಿಕ ಸಂಸ್ಥೆಗಳಾಗಿದ್ದು, ಸಾಂಸ್ಕೃತಿಕ ಕೇಂದ್ರಗಳಾಗಿ ಬೆಳೆದಿದ್ದವು. ಈ ವ್ಯವಸ್ಥೆಯನ್ನು ಕಾಪಾಡುವಲ್ಲಿ ಸಾರ್ವಜನಿಕರೂ ಸಹಕರಿಸುತ್ತಿದ್ದರು. ದೇವಾಲಯಗಳ ಕುರಿತ ವಸ್ತುನಿಷ್ಠ ಅಧ್ಯಯನವು ೧೯ನೇ ಶತಮಾನದ ಮೊದಲ ದಶಕಗಳಲ್ಲಿ ಆರಂಭವಾಯಿತು. ದೇವಾಲಯ ವಾಸ್ತುವಿಗೆ ಸಂಬಂಧಿಸಿದ ಶಾಸ್ತ್ರೀಯ ಅಧ್ಯಯನ ಕೈಗೊಂಡ ಭಾರತೀಯರಲ್ಲಿ ರಾಂರಾಜ್ ಮೊದಲಿಗರು. ಇವರು ಹಿಂದೂ ದೇವಾಲಯಗಳನ್ನು ಕುರಿತ ಪ್ರಬಂಧವನ್ನು ಪ್ರಕಟಿಸಿದರು. ಇವರು ೧೮೨೮ರಲ್ಲಿ ರಿಚರ್ಡ್‌ಕ್ಲಾರ್ಕ್ ಎಂಬುವವರಿಗೆ ಬರೆದ ಒಂದು ಒಕ್ಕಣೆಯಲ್ಲಿ ತಮ್ಮ ಪ್ರಬಂಧದ ಕಾರ್ಯವ್ಯಾಪ್ತಿಯ ಬಗ್ಗೆ ಹೀಗೆ ಹೇಳುತ್ತಾರೆ.

"I only propose to write a short but comprehensive essay on Indian architechture from the materials. I may be able to collect; to which I shall perhaps add some descriptions of a few temples and perticles. Principally taken from the carnatic with corresponding designs" ಎಂದು ಹೇಳುತ್ತಾರೆ. ಇವರ ಪ್ರಬಂಧದ ವಿವರಣೆಗಳು ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳಿಗೆ ಸಂಬಂಧಿಸಿದ್ದು.[೨] ಹಾಗೆಯೇ ಜೇಮ್ಸ್ ಫರ್ಗುಸನ್‌ರವರ 'ಹಿಸ್ಟರಿ ಆಫ್ ಇಂಡಿಯನ್ ಅಂಡ್ ಇಂಡೋನೇಷಿಯನ್ ಆರ್ಕಿಟೆಕ್ಚರ್' ಎಂಬ ಗ್ರಂಥವು ಕ್ರಿ.ಶ.೧೮೭೬ರಲ್ಲಿ ಪ್ರಕಟವಾಯಿತು. ಈ ಗ್ರಂಥವು ಪ್ರಾಚೀನ ಭಾರತದ ವಾಸ್ತುಶೈಲಿಗಳ ಸಮಗ್ರ ನೋಟವನ್ನು ಒದಗಿಸಿತು. ಇವರ ಮುಂದುವರಿಕೆಯಾಗಿ ಹೆನ್ರಿ ಕಜಿನ್ಸ್, ಜೇಮ್ಸ್ ಬರ್ಗೆಸ್, ಪರ್ಸಿಬ್ರೌನ್, ಬೆಂಜಮಿನ್ ರೋಲಾಂಡ್, ಹರ್ಲೆ ಜೆ.ಸಿ. ಮುಂತಾದವರು ಸಂಶೋಧನೆಯನ್ನು ಮುಂದುವರೆಸಿದರು. ದೇಶದಲ್ಲಿ ದೇಶೀಯ ಪಂಡಿತರಾಗಿದ್ದು ಶ್ರೀನಿವಾಸನ್ ಕೆ.ಆರ್., ಮಹಾಲಿಂಗಂ ಟಿ.ವಿ., ಸೌಂದರಾಜನ್ ಕೆ.ವಿ. ಮುಂತಾದವರು ದಾಕ್ಷಿಣಾತ್ಯ ದೇವಾಲಯಗಳನ್ನು ಶಾಸ್ತ್ರ ರೀತಿಯಲ್ಲಿ ಗುರುತಿಸಿದರು. ಗುಜರಾತಿನ ಸೋಂಪುರ ಪಿ.ವಿ. ಅವರು ಔತ್ತರೇಯ ಸಂಪ್ರದಾಯದ ಗ್ರಂಥಗಳನ್ನು ಟೀಕೆ, ಟಿಪ್ಪಣಿಗಳೊಂದಿಗೆ ಪ್ರಕಟಿಸಿದರು. ಆದರೆ ಭಾರತೀಯರು ದೇವಾಲಯಗಳ ವಾಸ್ತುವನ್ನು ಸಮಗ್ರವಾಗಿ ಅವಲೋಕಿಸಿದ್ದು ಕಡಿಮೆಯೇ ಎಂದು ಹೇಳಬಹುದಾಗಿದೆ.[೩]

ಕರ್ನಾಟಕದಲ್ಲಿರುವಷ್ಟು ವಾಸ್ತುಶಿಲ್ಪದಲ್ಲಿನ ವೈವಿಧ್ಯ ಭಾರತದ ಇನ್ನಾವುದೇ ಭಾಗದಲ್ಲಿಯೂ ಇಲ್ಲವೆಂದೇ ಹೇಳಬಹುದು. ದೇವಾಲಯಗಳ ನಿರ್ಮಾಣದಲ್ಲಿ ಕರ್ನಾಟಕ ತೋರಿಸಿದ ಉದಾತ್ತವಾದ ಅಭಿರುಚಿ ಮತ್ತು ಅವುಗಳನ್ನು ಬೆಳೆಸಿಕೊಂಡು ಬಂದ ಬಗೆ ತುಂಬಾ ವಿಶಿಷ್ಟವಾಗಿದೆ. ಭರತಖಂಡದ

ಎಲ್ಲಾ ಭಾಗಗಳಲ್ಲಿನ ವೈವಿಧ್ಯತೆಗಳನ್ನು ಕರ್ನಾಟಕ ಒಳಗೊಂಡಿದೆ. ಆದರೆ ಕರ್ನಾಟಕದಲ್ಲಿ ವಾಸ್ತುಶಿಲ್ಪ ಯಾವಾಗ ಕಾಣಿಸಿಕೊಂಡಿತು? ಎಂಬುದನ್ನು ನಿಖರವಾಗಿ ಹೇಳಲಾಗದಿದ್ದರೂ ಅಶೋಕನ ಕಾಲದಲ್ಲಿ ಕರ್ನಾಟಕದಲ್ಲಿಯೂ ಸ್ತೂಪಗಳನ್ನು ಕಟ್ಟಿದ್ದಿರಬಹುದರ ಬಗ್ಗೆ ಉಲ್ಲೇಖಗಳಿವೆ. ಸರ್ ಮಾರ್ಟಿಮರ್ ವ್ಹೀಲರ್‌ರವರು ನಡೆಸಿದ ಭೂಸಂಶೋಧನೆಯಲ್ಲಿ ಕಟ್ಟಡದ ವಿನ್ಯಾಸಗಳು ಸಾಮಾನ್ಯವಾಗಿ ಕಂಡುಬರದಿದ್ದರೂ ಇಟ್ಟಿಗೆಯ ಸಣ್ಣ ಚೈತ್ಯವೊಂದು ಬ್ರಹ್ಮಗಿರಿಯಲ್ಲಿ ಕಂಡುಬಂದಿತು. ಇದು ತುಂಬಾ ನಾಶವಾಗಿದೆ. ನಂತರ ಶಾತವಾಹನರ ಕಾಲದ ಶಿಲ್ಪ ಸ್ಮಾರಕಗಳು ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ನಡೆಸಿದ ಭೂಶೋಧನೆಗಳಲ್ಲಿ ಕೆಲವು ದೊಡ್ಡ ಅಳತೆಯ ಇಟ್ಟಿಗೆಗಳು ದೊರೆತಿದ್ದರಿಂದ ಆ ಕಾಲದಲ್ಲಿ ಇಟ್ಟಿಗೆಯ ಕಟ್ಟಡಗಳು ಇದ್ದವೆಂದು ಊಹಿಸಬಹುದಾಗಿದೆ.[೪] ನಂತರ ಇವರ ಕಾಲದ ಬೌದ್ಧಚೈತ್ಯ, ಸ್ತೂಪ, ವಿಹಾರಗಳ ಅವಶೇಷಗಳನ್ನು ಬನವಾಸಿ, ಸನ್ನತಿ, ಬ್ರಹ್ಮಗಿರಿ ಮುಂತಾದ ಕಡೆ ಶಾಸನೋಕ್ತ ಅವಶೇಷಗಳ ಹಿನ್ನೆಲೆಯಲ್ಲಿ ಪ್ರಾಚೀನ ವಾಸ್ತುನಿರ್ಮಾಣವನ್ನು ಅಧ್ಯಯನ ಮಾಡಬಹುದಾಗಿದೆ. ವಾಸ್ತುಗ್ರಂಥಗಳಲ್ಲಿ ದೇವಾಲಯಗಳನ್ನು ಭೌಗೋಳಿಕವಾಗಿ, ಪ್ರಾದೇಶಿಕವಾಗಿ ಹಾಗೂ ರಚನಾ ವಿನ್ಯಾಸ ಇತ್ಯಾದಿಗಳ ಆಧಾರಗಳಿಂದ ವರ್ಗೀಕರಿಸಲಾಗಿದೆ. ಹಿಮಾಲಯ ವಿಂಧ್ಯಾ ಪ್ರದೇಶಗಳ ನಡುವೆ ಬಳಕೆಯಲ್ಲಿರುವುದು ನಾಗರಶೈಲಿ ಎಂದೂ, ವಿಂಧ್ಯಾಪರ್ವತದಿಂದ ಕೃಷ್ಣಾ ನದಿಯವರೆಗೆ ಬಳಕೆಯಲ್ಲಿರುವುದು ವೇಸರಶೈಲಿ ಎಂದೂ, ಕೃಷ್ಣಾ ನದಿಯಿಂದ ಕನ್ಯಾಕುಮಾರಿಯವರೆಗೆ ದ್ರಾವಿಡ ಶೈಲಿ ಬಳಕೆಯಲ್ಲಿರುವುದು ಎಂದು ಭಾರತದ ದೇವಾಲಯಗಳ ವಾಸ್ತುವನ್ನು ವಿಂಗಡಿಸಲಾಗಿದೆ. ದೇವಾಲಯದ ಬುಡದಿಂದ ತುದಿಯವರೆಗೆ ಚೌಕೋನವಾಗಿರುವುದು 'ನಾಗರಶೈಲಿ' ಎಂದು ಗರ್ಭಗುಡಿಯ ಮೇಲಿನ ಕಟ್ಟಡದ ಗ್ರೀವದಿಂದ ಮೇಲೆ ಆರು ಅಥವಾ ಎಂಟು ಮುಖಗಳಿರುವುದು 'ದ್ರಾವಿಡಶೈಲಿ' ಎಂದೂ, ಅದೇ ವೃತ್ತಾಕಾರವಾಗಿರುವುದು ಹಾಗೂ ಗ್ರೀವದಿಂದ ಮೇಲೆ ವೃತ್ತಾಂದಿತ, ಅರ್ಧವೃತ್ತ, ಗಜಪೃಷ್ಠ, ಅಷ್ಟಾಶ್ರ್ಯ ವೃತ್ತದ ರೀತಿಯಲ್ಲಿನ ದೇವಾಲಯಗಳನ್ನು 'ವೇಸರಶೈಲಿ'ಯೆಂದು ಕರೆಯಲಾಗಿದೆ.[೫]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸ ಆಚಾರ್ಯ ಪಿ.ಕೆ. ಅವರು ವಾಸ್ತುಶಾಸ್ತ್ರ ಮತು ಶಿಲ್ಪಶಾಸ್ತ್ರ ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ. ಇವುಗಳನ್ನು ಭಾರತೀಯ ವಾಸ್ತು ಎಂದು ಗುರುತಿಸುವುದುಂಟು. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮಾರಚನೆ, ಅವುಗಳ ಲಕ್ಷಣಗಳು, ಕಾಲಮಾನ ಇತ್ಯಾದಿಗಳನ್ನು ಹೆಸರಿಸುವುದುಂಟು. ಫಣೀಂದ್ರನಾಥ ಬೋಸ್ ಅವರು ಭಾರತೀಯ ಶಿಲ್ಪಶಾಸ್ತ್ರದ ಮೂಲತತ್ವಗಳನ್ನು ಗುರುತಿಸುವಾಗ ಶಿಲ್ಪಶಾಸ್ತ್ರವೆಂಬ ಪದವನ್ನು 'ವಾಸ್ತು ಹಾಗೂ ಪ್ರತಿಮಾಶಾಸ್ತ್ರ' ಎರಡನ್ನೂ ಒಳಗೊಂಡಂತೆ ವಿವರಿಸಿದ್ದಾರೆ.[೬]

'ಶಿಲ್ಪ' ಎನ್ನುವ ಪದವು ಮೂರ್ತಿಶಿಲ್ಪವೆಂಬ ಅರ್ಥದಲ್ಲಿ ರೂಢಿಗತವಾಗಿದ್ದರೂ, ಅದಕ್ಕೆ ತನ್ನದೇ ಆದ ಖಚಿತಾರ್ಥವಿದೆ. 'ಶಿಲ್ಪಂ ಕರ್ಮ ಕಲಾಧಿಕಂ'[೭] ಇದು ಅಮರಸಿಂಹನ ಅಮರಕೋಶದ

ವಿವರಣೆ. ಕರ್ತೃವಿನ ಅಧಿಕ ಕೌಶಲ್ಯಗಳನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಇದು ತಾಂತ್ರಿಕ ಪರಿಣತಿಯನ್ನು ಅಪೇಕ್ಷಿಸುತ್ತದೆ.

"ಶಿಲ್ಪ ಶಬ್ದಸ್ತಯ ಪುನಃ ಶೀಲ ಸಮಾಧೌ ಇತಿಧಾತೋರ್ಮನಸಃ ಸಮಾಧಾನಕಾರಕಂ ವಸ್ತು ಜಾಗಮಿತಿ ಉತ್ಪದ್ಯತೇ," ಶಿಲ್ಪ ಶಬ್ದವು ಮನಸ್ಸಿಗೆ ಸಮಾಧಾನವನ್ನುಂಟುಮಾಡುವ ಕ್ರಿಯೆಯಾಗಿದ್ದು, ಕಲೆಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಈಗ ವಾಸ್ತುಶಾಸ್ತ್ರ ಮತ್ತು ವಾಸ್ತುಶಿಲ್ಪ ಪದಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು. ವಾಸ್ತುವಿಗೆ ಸಂಬಂಧಿಸಿದ ಮೂಲ ಸಿದ್ಧಾಂತಗಳನ್ನು ಗುರುತಿಸುವುದೇ ವಾಸ್ತುಶಾಸ್ತ್ರ. ವಾಸ್ತುಶಿಲ್ಪವೆಂದಲ್ಲಿ ತಾಂತ್ರಿಕ ಪರಿಣತಿಯನ್ನು ಹೊಂದಿದ, ಭಾವ ಸಂಬಂಧವೂ ಬೆಸೆಯಲ್ಪಟ್ಟ, ಸಾಂಸ್ಕೃತಿಕ ವಾಸ್ತು ಎಂದು ಹೆಸರಿಸಬಹುದು. ದೇವಾಲಯದಲ್ಲಿನ ಪ್ರತಿಮಾರಚನೆ ಹಾಗೂ ಲಕ್ಷಣಗಳು, ಚಿತ್ರರಚನೆ ಇತ್ಯಾದಿಗಳಿಗೆ ಸಂಬಂಧಿಸಿದ್ದನ್ನು ಶಿಲ್ಪಶಾಸ್ತ್ರವೆನ್ನಬಹುದು.

ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಿಯ ಅಭಿರುಚಿಗೆ ಅನುಗುಣವಾಗಿ ವಾಸ್ತುವಿನ ವಿವಿಧ ಭಾಗಗಳಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣುತ್ತೇವೆ. ವಾಸ್ತು ಮತ್ತು ಶಿಲ್ಪಗಳೆರಡೂ ಕಲಾಸೌಂದರ್ಯದ ಪ್ರತೀಕವಾಗಿವೆ. ಇವು ಆರಂಭದಿಂದಲೂ ಜೊತೆಯಾಗಿಯೇ ಬೆಳೆದು ಬಂದಿರುವುದು ಗಮನೀಯ ಅಂಶ. ಹಡಗಲಿ ತಾಲೂಕಿನ ದೇವಾಲಯಗಳ ಭಿತ್ತಿ, ಪ್ರಸ್ತಾರ ಹಾಗೂ ಕಂಭಗಳ ವಿಭಿನ್ನ ಭಾಗಗಳಲ್ಲಿ ಬಗೆಬಗೆಯ ಶಿಲ್ಪಗಳನ್ನು ಕಾಣಬಹುದು. ಇನ್ನು ಕೆಲವು ದೇವಾಲಯಗಳಲ್ಲಿ ಶಿಲ್ಪಗಳಿರದೆ, ಕೇವಲ ವಾಸ್ತುಭಾಗವನ್ನು ಮಾತ್ರ ಒಳಗೊಂಡಿವೆ.

### ೫.೨. ದೇವಾಲಯಗಳ ನಿರ್ಮಾಣದ ಹಿನ್ನೆಲೆ

ದೇವಾಲಯಗಳ ನಿರ್ಮಿತಿಗಳಲ್ಲಿ ಒಂದು ಕ್ರಮ ಮತ್ತು ಸ್ವರೂಪವನ್ನು ತರಲು ಸುಮಾರು ಕ್ರಿ.ಶ.೬ನೇ ಶತಮಾನದಿಂದ ಪ್ರಯತ್ನ ಮಾಡಿದಂತೆ ತೋರುತ್ತದೆ. ಅದರ ಫಲವಾಗಿ ಸುಮಾರು ಕ್ರಿ.ಶ.೭-೮ನೇ ಶತಮಾನಗಳ ಹೊತ್ತಿಗೆ ದೇವಾಲಯಗಳ ರಚನಾಕ್ರಮದಲ್ಲಿ ಸ್ಪಷ್ಟತೆ ಮೂಡಲಾರಂಭಿಸಿತು. ಅಷ್ಟೇ ಅಲ್ಲದೆ, ಉತ್ತರ ಮತ್ತು ದಕ್ಷಿಣ ಭಾರತದ ದೇವಾಲಯಗಳು ತಮ್ಮ ರಚನೆಯಲ್ಲಿ ವಿಭಿನ್ನ ರೂಪಗಳನ್ನು ಸ್ಪಷ್ಟವಾಗಿ ಪ್ರಕಟಿಸಲಾರಂಭಿಸಿದವು. ಇದನ್ನು ನಾವು ಪ್ರಬುದ್ಧ ಹಂತವೆಂದು ಕರೆಯಬಹುದು. ಹಡಗಲಿ ತಾಲೂಕಿನಲ್ಲಿರುವ ಅಸಂಖ್ಯಾತ ದೇವಾಲಯಗಳ ಶೈಲಿ ಹಾಗೂ ವಿವಿಧ ವಾಸ್ತುಭಾಗಗಳು ಕರ್ನಾಟಕದ ಇತರೆ ಪ್ರದೇಶಗಳಲ್ಲಿ ಕಾಣಬರುವ ದೇವಾಲಯಗಳಿಗೆ ಹೆಚ್ಚು ಹೋಲಿಕೆಯಾಗುತ್ತವೆ. ಆದುದರಿಂದ ಕರ್ನಾಟಕದಲ್ಲಿ ದೇವಸ್ಥಾನಗಳು ಬೆಳೆದುಬಂದ ರೀತಿಯನ್ನು ಸ್ಥೂಲವಾಗಿ ವಿವರಿಸುವುದು ಅವಶ್ಯಕವೆನಿಸುತ್ತದೆ.

ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಬೆಳೆದು ಬಂದ ದಾರಿಯನ್ನು ಗುರುತಿಸಲು ಯತ್ನಿಸಿದರೆ, ಮೊದಲಿಗೆ ಶಾತವಾಹನರ ಕಾಲದ ಬೌದ್ಧ ಧರ್ಮದ ಚೈತ್ಯ, ಸ್ತೂಪ, ವಿಹಾರಗಳು ಕಂಡುಬರುತ್ತವೆ. ಬ್ರಹ್ಮಗಿರಿ, ಬನವಾಸಿ, ಸನ್ನತಿ ಮುಂತಾದೆಡೆಗಳಲ್ಲಿದ್ದ ಪ್ರಾಚೀನ ವಾಸ್ತುರಚನೆಗಳನ್ನಿಲ್ಲಿ

ನೆನೆಯಬಹುದು. ಶಾತವಾಹನರ ಕಾಲದಲ್ಲಿ ಬೌದ್ಧ ಸ್ತೂಪ, ಚೈತ್ಯಗಳೊಂದಿಗೆ ವೈದಿಕ ಧರ್ಮದ ರಚನೆಗಳಿದ್ದವೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.[೮]

ಕರ್ನಾಟಕ ವಾಸ್ತುಶಿಲ್ಪದ ಪ್ರಾಚೀನ ನಿರ್ಮಿತಿಗಳಿಗೆ ಬಾದಾಮಿ, ಐಹೊಳೆ-ಪಟ್ಟದಕಲ್ಲುಗಳು ಉತ್ತಮ ಉದಾಹರಣೆಯಾಗಿವೆ. ಇಟ್ಟಿಗೆ ಗಾರೆಯಿಂದ ನಿರ್ಮಿತವಾದ ಕದಂಬ, ಗಂಗರ ಕಾಲದ ಆರಂಭದ ಕಟ್ಟಡಗಳು ಹೆಚ್ಚಾಗಿ ಉಳಿದುಬಂದಿಲ್ಲ.

ಬಾದಾಮಿ ಚಾಲುಕ್ಯರ ಕಾಲದಿಂದ ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣವು ಹೆಚ್ಚು ಭರದಿಂದ ಸಾಗಿತೆನ್ನಬಹುದು. ಇವುಗಳನ್ನು ಕಲ್ಲಿನಿಂದ ಕಟ್ಟಲಾಗಿದ್ದು, ಮಹಾಕೂಟ-ಬಾದಾಮಿ-ಐಹೊಳೆ-ಪಟ್ಟದಕಲ್ಲುಗಳಲ್ಲಿ ಈ ಪ್ರಾಚೀನ ನಿರ್ಮಿತಿಗಳನ್ನು ಕಾಣಬಹುದಾಗಿದೆ.[೯] ಬಾದಾಮಿಯ ಗುಹಾದೇವಸ್ಥಾನಗಳು ಶಿಲೆಯಲ್ಲಿ ಕೊರೆದು ಮಾಡಿದ ದೇವಾಲಯಗಳಿಗೆ ಹೆಸರಾಗಿದ್ದು, ಇವುಗಳಲ್ಲಿ ಶೈವ-ಜೈನ-ವೈಷ್ಣವ ಈ ಎಲ್ಲ ಧರ್ಮಗಳ ನಿರ್ಮಾಣಗಳೂ ಇವೆ. ಐಹೊಳೆಯನ್ನು 'ದೇವಸ್ಥಾನಗಳ ಪ್ರಯೋಗಶಾಲೆ' ಎಂದು ಕರೆಯಲಾಗಿದೆ. ಹಳೇ ಮಹಾಕೂಟದಲ್ಲಿ ಪ್ರಬುದ್ಧ ಸ್ಥಿತಿಯನ್ನು ಹೊಂದಿವೆ. ದೇವಾಲಯದ ಮುಖ್ಯಭಾಗ-ಅಂಗಗಳು ಆಗಲೇ ಅವತರಿಸಿದ್ದು, ಗರ್ಭಗುಡಿಯ ಮೇಲೆ ವಿವಿಧ ರೀತಿಯ ಶಿಖರ ಅಥವಾ ಮೇಲ್ಕಟ್ಟಡಗಳು ರೂಪುಗೊಂಡಿರುವುದು ಇದನ್ನು ಸ್ಪಷ್ಟಪಡಿಸುತ್ತದೆ. ಇವು 'ಷಟ್ವರ್ಗ ದೇವಾಲಯ'ಗಳೆನಿಸಿದ್ದು, ಈ ಮಾದರಿಯನ್ನು ರಾಷ್ಟ್ರಕೂಟ, ಗಂಗ, ನೊಳಂಬ, ವಿಜಯನಗರದ ಅರಸರ ಕಾಲದ ದೇವಾಲಯಗಳಲ್ಲೂ ಕಾಣಬಹುದಾಗಿದೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು ಆ ಹೊಸ ಜಾಡನ್ನು ಮುಂದುವರಿಸಿ, ಪರಾಕಾಷ್ಠತೆಯನ್ನು ತಲುಪಿದ್ದನ್ನು ಗುರುತಿಸಬಹುದಾಗಿದೆ. ಅವು ಬೇರೆ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ವಿವಿಧ ಮಾದರಿಯ ರಚನೆಗಳನ್ನು ಅನುಸರಿಸಿ ರಚಿಸಲ್ಪಟ್ಟಿದ್ದು, ದೇವಾಲಯ ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದವೆಂದು ಹೇಳಬಹುದು. ಇದರಿಂದಾಗಿ ಕರ್ನಾಟಕದಲ್ಲಿ ವೈವಿಧ್ಯಮಯ ದೇವಾಲಯ ರಚನೆಗಳು ಸಾಧ್ಯವಾಗಿವೆ.

ಕರ್ನಾಟಕದ ಹಲವು ಪ್ರದೇಶಗಳಲ್ಲಿ ಅಪರಿಮಿತ ಸಂಖ್ಯೆಯ ದೇವಸ್ಥಾನಗಳು ನಿರ್ಮಾಣ ಗೊಂಡವು. ಒಂದೊಂದು ಪ್ರಮುಖ ರಾಜವಂಶದ ದೇವಸ್ಥಾನಗಳು ಒಂದೊಂದು ಪ್ರದೇಶದಲ್ಲಿ ಕೇಂದ್ರೀಕೃತಗೊಂಡಂತೆಯೇ ಇತರ ಪ್ರದೇಶಗಳಲ್ಲಿ ಬಿಡಿ ಬಿಡಿಯಾಗಿಯೂ ನಿರ್ಮಿಸಲ್ಪಟ್ಟವು. ಒಂದು ಕಾಲದ ದೇವಾಲಯ ರಚನಾಶೈಲಿಯು ಆಯಾ ರಾಜವಂಶದ ರಾಜಧಾನಿ ಮತ್ತು ಆ ಸುತ್ತಲಿನ ಪ್ರದೇಶಗಳ ಪ್ರಮುಖ ದೇವಾಲಯಗಳಲ್ಲಿ ನಿಖರವಾಗಿ, ಸ್ಪಷ್ಟವಾಗಿ ಮತ್ತು ಪೂರ್ಣವಾಗಿ ಪ್ರಕಟವಾಗಿರುತ್ತದೆ. ಆದ್ದರಿಂದ ಒಂದು ಕಾಲದ ದೇವಾಲಯ ಶೈಲಿಯನ್ನರಿಯುವಲ್ಲಿ ಆ ಕೇಂದ್ರಸ್ಥಾನಗಳು ಪ್ರಮುಖ ಪಾತ್ರವಹಿಸುತ್ತವೆ.

ಪ್ರಾಚೀನ ಕಾಲದಿಂದಲೇ ದೇವಾಲಯದ ರಚನೆಯು ಕರ್ನಾಟಕದಲ್ಲಿ ಆರಂಭವಾಗಿದ್ದು, ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತಾ, ತನ್ನದೇ ಆದ ಶೈಲಿ-ಪ್ರಭೇದಗಳನ್ನು

ಪ್ರಕಟಗೊಳಿಸುತ್ತಾ ನಡೆದು, ಪ್ರತಿಯೊಂದು ಪ್ರದೇಶದ ದೇವಸ್ಥಾನಗಳು ಕರ್ನಾಟಕ ವಾಸ್ತುಶಿಲ್ಪಕ್ಕೆ ವೈಶಿಷ್ಟ್ಯಪೂರ್ಣ ಕೊಡುಗೆ ನೀಡಿವೆ. ಒಂದೊಂದು ಕಾಲದಲ್ಲಿ ಒಂದೊಂದು ರಚನೆಯಲ್ಲಿ ವೈಶಿಷ್ಟ್ಯತೆಯಿದೆ. ಕಾಲದಿಂದ ಕಾಲಕ್ಕೆ ಈ ವೈಶಿಷ್ಟ್ಯತೆಯಲ್ಲಾದ ಮಾರ್ಪಾಟನ್ನರಿಯುವಲ್ಲಿ ದೇವಾಲಯಗಳ ರೂಪುರೇಷೆ, ರಚನಾಕ್ರಮ ದೇವಾಲಯದ ಒಂದೊಂದು ಭಾಗದ ಅಂಗಗಳು, ಅವುಗಳ ಅಲಂಕಾರ, ಪ್ರಕಾರಗಳು ಇವುಗಳನ್ನು ಗಮನಿಸಬೇಕಾಗುತ್ತದೆ. ಇವು ದೇವಾಲಯದ ಶೈಲಿಯನ್ನು ನಿರ್ಧರಿಸಲು ಸಹಾಯಕವಾಗುವುದರೊಂದಿಗೆ ಆ ಅಂಗಭಾಗಗಳು ಬೆಳೆದು ಬಂದ ರೀತಿಯನ್ನು ಸೂಚಿಸುತ್ತವೆ.

ಕರ್ನಾಟಕದ ವಾಸ್ತುಶಿಲ್ಪವನ್ನು ಪ್ರಧಾನವಾಗಿ ನಾಲ್ಕು ಘಟ್ಟಗಳಾಗಿ ವಿಂಗಡಿಸಲಾಗಿದೆ.

೧. ಚಾಲುಕ್ಯ ಪೂರ್ವಯುಗ: ಕ್ರಿ.ಶ.೫ನೇ ಶತಮಾನದವರೆಗಿನ ಕಾಲಾವಧಿ.

೨. ಚಾಲುಕ್ಯ ಯುಗ: ಕ್ರಿ.ಶ.೬ರಿಂದ ೧೦ನೇ ಶತಮಾನದ ಅವಧಿಯು ಇಲ್ಲಿ ಸೇರುತ್ತದೆ.

೩. ಹೊಯ್ಸಳ ಯುಗ: ಕ್ರಿ.ಶ.೧೧ನೇ ಶತಮಾನದಿಂದ ೧೩ನೇ ಶತಮಾನದ ಕೊನೆಯವರೆಗಿನ ಯುಗ.

೪. ವಿಜಯನಗರದ ಕಾಲ: ಕ್ರಿ.ಶ.೧೪ನೇ ಶತಮಾನದಿಂದ ಈಚೆಗಿನ ಕಾಲವಾಗಿದೆ.

೫. ಮುಸ್ಲಿಂ ವಾಸ್ತುಶಿಲ್ಪ: ವಿಜಯನಗರದ ಕಾಲದಲ್ಲಿಯೇ ಇದು ಬೆಳೆದರೂ ಅದಕ್ಕೆ ಸೇರದೆ ಸ್ವತಂತ್ರವಾಗಿ ಬೆಳೆದ ಶೈಲಿಯಾಗಿದೆ.

ಕರ್ನಾಟಕದಲ್ಲಿ ಚಾಲುಕ್ಯರಿಗಿಂತಲೂ ಹಿಂದೆ ನಿರ್ಮಿತವಾದ ಪ್ರಾಚೀನ ದೇವಾಲಯ ಗಳೆಲ್ಲವನ್ನು 'ಕದಂಬರ ಶೈಲಿ' ಎಂದು ಕರೆಯಲಾಗಿದೆ. ಕದಂಬ ಶೈಲಿಯ ಅತೀ ಪ್ರಾಚೀನ ದೇವಾಲಯವೆಂದರೆ ಹಲಸಿ ಅಥವಾ ಪಲಸಿಕ ಎಂಬಲ್ಲಿರುವ ಜೈನಬಸ್ತಿ. ಕ್ರಿ.ಶ.೫ನೇ ಶತಮಾನದಲ್ಲಿದ್ದ ಮೃಗೇಶವರ್ಮನು ಇದನ್ನು ಕಟ್ಟಿಸಿದ್ದಾನೆ. ಇದು ಗರ್ಭಗೃಹ, ಶುಕನಾಸಿ ಮತ್ತು ಚಿಕ್ಕ ಮಂಟಪಗಳಿಂದ ಕೂಡಿದೆ. ಇದಕ್ಕಿಂತ ಹೆಚ್ಚು ಪರಿಷ್ಕೃತವಾದ ಕಟ್ಟಡವೆಂದರೆ ತಾಳಗುಂದದ ಪ್ರಣವೇಶ್ವರ ದೇವಾಲಯ.

**ಚಾಲುಕ್ಯ ಯುಗ:** ಗುಪ್ತರು ಉತ್ತರ ಭಾರತದಲ್ಲಿ ದೇವಾಲಯಗಳನ್ನು ನಿರ್ಮಿಸಿ ಪೋಷಿಸುತ್ತಿರುವ ಸಂದರ್ಭದಲ್ಲಿ, ದಕ್ಷಿಣ ಭಾರತದಲ್ಲಿ ಒಂದು ಹೊಸ ಪರಂಪರೆ ಪ್ರಾರಂಭವಾಯಿತು. ಚಾಲುಕ್ಯರು ಪರಂಪರೆಯು ಈ ಹೊಸ ಸೃಷ್ಟಿಗೆ ಕಾರಣವಾಯಿತು. ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿ ನಿರ್ಮಿತವಾದ ದೇವಾಲಯಗಳು ಚಾಲುಕ್ಯ ಶೈಲಿಯ ವಿಕಾಸವನ್ನು ತೋರಿಸುತ್ತದೆ. ಐಹೊಳೆಯಲ್ಲಿ ದೇವಾಲಯದ ನಿರ್ಮಾಣದಲ್ಲಿ ಮಾಡಿದ ಪ್ರಯೋಗಗಳನ್ನು ಕಂಡುಕೊಳ್ಳಬಹುದಾಗಿದೆ. ಒಂದು ಗರ್ಭಗೃಹದಿಂದ ಕೂಡಿರುವ ಗುಡಿಗಳಿಂದ ಹಿಡಿದು ಸಂಕೀರ್ಣವಾದ ರಚನೆಯನ್ನೊಳಗೊಂಡ ದುರ್ಗಾ ದೇವಾಲಯದವರೆಗೂ ಬಾದಾಮಿ ಚಾಲುಕ್ಯರು ಕಲೆಯ ಬೆಳವಣಿಗೆಗೆ ಹೇಗೆ ಶ್ರಮಿಸಿದ್ದರು ಎಂಬುದನ್ನು ತಿಳಿಸುತ್ತದೆ. ಚಾಲುಕ್ಯ ದೊರೆಗಳು ನಾಗರ ಮತ್ತು ದ್ರಾವಿಡ ಇವೆರಡೂ ವಾಸ್ತುಶೈಲಿಗಳನ್ನು

ಅಳವಡಿಸಿಕೊಂಡು ಚಾಲುಕ್ಯಶೈಲಿಯನ್ನು ಸೃಷ್ಟಿಸಿತು. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ನಂತರ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಅತ್ಯಧಿಕವಾಗಿ ನಡೆದವು. ಇವರ ಕಾಲದಲ್ಲಿ ಮೊದಲಿಗಿಂತ ಹೆಚ್ಚು ಅಲಂಕೃತವಾದ ದೇವಾಲಯಗಳು ನಿರ್ಮಿತವಾದವು. ಇದಕ್ಕೆ ಕಾರಣವೆಂದರೆ ಹಿಂದಿನವರ ಅನುಭವದ ಮೇಲೆ ಅಂದಿನ ಶಿಲ್ಪಿಗಳು ಮುಂದುವರೆಯುತ್ತಿದ್ದರು. ಮತ್ತು ಕಲ್ಲಿನಲ್ಲಾದ ಬದಲಾವಣೆ ಹಿಂದಿನಂತೆ ಹಳದಿ ಮಿಶ್ರಿತವಾದ ಕೆಂಪು ಮರಳುಗಲ್ಲಿನ ಒರಟು ಮಾಧ್ಯಮವನ್ನು ಬಿಟ್ಟು ಕೆತ್ತನೆಯ ಕೆಲಸಕ್ಕೆ ಹೆಚ್ಚು ಒಗ್ಗಿಕೊಳ್ಳಬಲ್ಲ ಕಲ್ಲನ್ನು ಇವರು ಆರಿಸಿಕೊಂಡರು. ಅದರಿಂದಾಗಿ ಶಿಲ್ಪದ ಮತ್ತು ಇತರ ಕೆತ್ತನೆಯ ಕೆಲಸದ ಅಲಂಕಾರ ದೇವಾಲಯಗಳಲ್ಲಿ ಹೆಚ್ಚಿತು. ಆ ಕಾರಣಕ್ಕಾಗಿ ಕರ್ನಾಟಕದ ವಾಸ್ತುಶಿಲ್ಪ ಇತಿಹಾಸದಲ್ಲಿ ಕ್ರಿ.ಶ.೧೦ನೇ ಶತಮಾನದಿಂದ ೧೪ನೇ ಶತಮಾನಗಳವರೆಗಿನ ಕಾಲವನ್ನು ಉಚ್ಛ್ರಾಯ ಕಾಲವೆಂದು ಗುರುತಿಸಲಾಗಿದೆ. ಇವರ ವಾಸ್ತುಶೈಲಿಯು ಬಾದಾಮಿ ಚಾಲುಕ್ಯರ ವಾಸ್ತುಶೈಲಿಯ ಮುಂದುವರೆದ ಭಾಗವಾಗಿದೆ. ಇವರು ಮುಖ್ಯವಾಗಿ ಮೃದುವಾದ ನಸುಗಂಪು ಅಥವಾ ತಿಳಿಹಸಿರು ಬಳಪದ ಕಲ್ಲಿನ(ಕ್ಲೋರೈಟಿಕ್ ಶಿಸ್ಟ್) ಬಳಕೆಯನ್ನು ಮಾಡಿದರು. ಅವು ಹೆಚ್ಚಿನ ಭಾರ ತಾಳುತ್ತಿರಲಿಲ್ಲವಾದ್ದರಿಂದ ದೇವಾಲಯದ ಎತ್ತರ ಕಡಿಮೆಯಾಗಿ ವಿಸ್ತಾರ ಹೆಚ್ಚಿತು. ವಿಸ್ತಾರ ಹೆಚ್ಚಿದಂತೆ ಕಂಬಗಳ ಸಂಖ್ಯೆಯೂ ಹೆಚ್ಚಾಯಿತು. ಪ್ರಾಚೀನ ಕರ್ನಾಟಕದ ವಾಸ್ತುಶಿಲ್ಪ ಇತಿಹಾಸದಲ್ಲಿಯೇ ಸ್ವರ್ಣಯುಗವನ್ನು ಸೃಷ್ಟಿಸಿದ ಕೀರ್ತಿ ಕಲ್ಯಾಣ ಚಾಲುಕ್ಯರಿಗೆ ಸಲ್ಲುತ್ತದೆ.

ಕ್ರಿ.ಶ.೯೭೩ರಿಂದ ರಾಜವಂಶದ ಕಲ್ಯಾಣ ಚಾಲುಕ್ಯರು ಅನೇಕ ವಾಸ್ತುಶಿಲ್ಪ ಸಿದ್ಧಿಗಳ ಪೋಷಕರಾಗಿ ದೇವಾಲಯಗಳ ಮತ್ತು ಬಸದಿಗಳಿಗೆ ಆಶ್ರಯ ನೀಡಿದರು. ಶೈವ ಧರ್ಮವು ಇಲ್ಲಿ ಪ್ರಧಾನ ಧರ್ಮವಾಗಿದ್ದರಿಂದ ಇಲ್ಲಿ ಪಾಶುಪತ ಮತ್ತು ಕಾಳಾಮುಖ, ಕಾಪಾಲಿಕ ಪಂಥೀಯರು ಬಹು ಸಂಖ್ಯೆಯಲ್ಲಿ ಬೆಂಬಲಿಗರನ್ನು ಹೊಂದಿದ್ದರು. ಆ ಕಾರಣಕ್ಕಾಗಿಯೇ ಇವರ ಕಾಲಾವಧಿಯಲ್ಲಿ ಅನೇಕ ಶಿವ ದೇವಾಲಯಗಳು ನಿರ್ಮಾಣವಾದವು. ಕ್ರಿ.ಶ.೧೧ನೇ ಶತಮಾನದ ಮಧ್ಯಭಾಗದಿಂದ ಬಹು ಸಂಖ್ಯೆಯಲ್ಲಿ ದೇವಾಲಯ ನಿರ್ಮಾಣ ನಡೆದುದನ್ನು ನೋಡುತ್ತೇವೆ. ಇವು ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪ ಶೈಲಿಯನ್ನು ನಿಜವಾಗಿ ಪ್ರತಿನಿಧಿಸಿವೆಯೆಂದು ಪರಿಗಣಿಸಲಾಗಿದೆ. ಕ್ರಿ.ಶ.೧೦೭೬ನೆಯ ವರ್ಷವು ಸಾಮಾನ್ಯವಾಗಿ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಮಹತ್ವಪೂರ್ಣವಾದ ವರ್ಷವಾಗಿದೆ. ಏಕೆಂದರೆ ಆ ವರ್ಷ ೬ನೆಯ ವಿಕ್ರಮಾದಿತ್ಯನು ಚಾಲುಕ್ಯ ಸಿಂಹಾಸನವನ್ನೇರಿ ವಿಕ್ರಮ ಶಕೆ ಅಥವಾ ಚಾಲುಕ್ಯ ಶಕೆಯನ್ನು ಆರಂಭಿಸಿದನು. ಈತನ ಆಡಳಿತಾವಧಿಯಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾದವು. ಈತನ ಕಾಲದಲ್ಲಿ ಕಟ್ಟಲ್ಪಟ್ಟ ದೇವಾಲಯಗಳು ದೊಡ್ಡವು ಮತ್ತು ಅಲಂಕಾರಮಯವಾಗಿವೆ. ಇವರು ಸೂರ್ಯ ಮತ್ತು ಸಪ್ತಮಾತೃಕೆಯರನ್ನು ಗೌರವಿಸುತ್ತಿದ್ದರು ಎಂಬುದಕ್ಕೆ ತ್ರಿಕೋನ ಗರ್ಭಗೃಹಗಳಲ್ಲೊಂದರಲ್ಲಿ ಸೂರ್ಯನನ್ನು ಪ್ರತಿಷ್ಠಾಪಿಸಿದರೆ ನವರಂಗದ ದೇವಕೋಷ್ಠಗಳಲ್ಲಿ ಸಪ್ತಮಾತೃಕೆಯರಿಗೆ ಸ್ಥಾನ ನೀಡಿರುವುದೇ

ಸಾಕ್ಷಿಯಾಗಿದೆ. ಈ ಕಾಲದಲ್ಲಿ ವೈಷ್ಣವ ದೇವಾಲಯಗಳು ಕಡಿಮೆ ಪ್ರಮಾಣದಲ್ಲಿದ್ದವು. ಹಾಗೆಯೇ ಬೌದ್ಧ ಚೈತ್ಯಾಲಯಗಳು, ವಿಹಾರಗಳು ಕಂಡುಬರುವುದೂ ಕಡಿಮೆ. ಇವರು ಹೆಚ್ಚಾಗಿ ಶಿವ ದೇವಾಲಯಗಳನ್ನು ಕಟ್ಟುವುದರಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿದ್ದರು. ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳ ವಿನ್ಯಾಸವನ್ನು ವಿವರಿಸುವುದು ಅಗತ್ಯವಾಗಿದೆ. ಏಕೆಂದರೆ ಇವರು ಅಂದಿನ ಸಮಕಾಲೀನ ಔತ್ತರೇಯ ಹಾಗೂ ನಾಗರ, ದ್ರಾವಿಡ ಶೈಲಿಯ ಸಮ್ಮಿಶ್ರದ ರೂಪವನ್ನು ಉಪಯೋಗಿಸಿಕೊಂಡು ತಮ್ಮದೇ ಆದ ಶೈಲಿಯನ್ನು ಸೃಷ್ಟಿಸಿಕೊಂಡಿದ್ದಾರೆ.

ಒಟ್ಟಿನಲ್ಲಿ ವಾಸ್ತುವೊಂದನ್ನು ವಿವರಿಸುವುದು ಪ್ರಾಚೀನ ಕಾಲದಿಂದಲೂ ಕಲೆಯೋಪಾದಿಯಲ್ಲಿ ಬೆಳೆದುಬಂದಿದೆ. ಈ ಹಿನ್ನೆಲೆಯಲ್ಲಿ ವಾಸ್ತುಕಲೆ ಎನ್ನುವ ಪದ ಪ್ರಯೋಗವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ವಾಸ್ತುಕಲೆಯಲ್ಲಿ ನಾವು ಆಧ್ಯಾತ್ಮಿಕ ಮನೋಧರ್ಮವನ್ನು ಕಾಣುತ್ತೇವೆ.[೧೦] ಇದೇ ಧಾರ್ಮಿಕ ಭಾವನೆಯನ್ನು ಮೈಗೂಡಿಸಿಕೊಂಡು ಹೂವಿನಹಡಗಲಿ ತಾಲೂಕಿನಲ್ಲಿ ಆಳ್ವಿಕೆ ಮಾಡಿದ ರಾಜರು, ಸಾಮಂತರು ಅನೇಕ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಜೊತೆಗೆ ಅಲ್ಲಲ್ಲಿ ಕೋಟೆಗಳನ್ನು, ಲೌಕಿಕ ಕಟ್ಟಡಗಳನ್ನು ನಿರ್ಮಿಸಿದ್ದಾರೆ.

ಹೂವಿನಹಡಗಲಿ ತಾಲೂಕಿನಲ್ಲಿ ಕಂಡುಬರುವ ವಾಸ್ತುಶಿಲ್ಪದ ವಿವಿಧ ಸ್ಮಾರಕಗಳನ್ನು ಈ ರೀತಿ ವಿಭಾಗಿಸಬಹುದಾಗಿದೆ.

೧. ಧಾರ್ಮಿಕ ಕಟ್ಟಡಗಳು

೨. ಲೌಕಿಕ ಕಟ್ಟಡಗಳು

೩. ಸೈನಿಕ ಕಟ್ಟಡಗಳು

ಇಲ್ಲಿ ಆಳ್ವಿಕೆ ಮಾಡಿದ ರಾಜರು ಇತರೆ ಶೈಲಿಯ ಲಕ್ಷಣಗಳನ್ನು ಅಳವಡಿಸಿಕೊಂಡು ಅದರ ಜೊತೆ ಜೊತೆಗೆ ಪ್ರಾದೇಶಿಕ ಶೈಲಿಗಳ ಹೊಸ ಅಂಶಗಳನ್ನು ಅಳವಡಿಸಿಕೊಂಡು ನಿರ್ಮಿಸಿದ ಸುಮಾರು ನೂರಾ ಇಪ್ಪತ್ತಕ್ಕಿಂತಲೂ ಹೆಚ್ಚಿನ ದೇವಾಲಯಗಳು ಪ್ರಸ್ತುತ ಹಡಗಲಿ ತಾಲೂಕಿನಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಕೇಂದ್ರ, ರಾಜ್ಯ ಪುರಾತತ್ವ ಇಲಾಖೆಯ ಅಧೀನದಲ್ಲಿದ್ದರೆ, ಉಳಿದ ದೇವಾಲಯಗಳಲ್ಲಿ ಕೆಲವು ಮುಜರಾಯಿ ಇಲಾಖೆಯ ಅಧೀನದಲ್ಲಿವೆ. ಇನ್ನು ಕೆಲವು ಗ್ರಾಮಸ್ಥರ ಸುಪರ್ದಿಯಲ್ಲಿವೆ. ಇಲ್ಲಿ ಶೈವ ದೇವಸ್ಥಾನಗಳು ಪ್ರಧಾನವಾಗಿ ಕಂಡು ಬಂದರೂ ಸಹ ವೈಷ್ಣವ, ಶಾಕ್ತ ಹಾಗೂ ಮತ್ತಿತರೆ ದೇವಾಲಯಗಳು(ಜೈನಬಸದಿ, ಬ್ರಹ್ಮಾಲಯಗಳು) ಈ ಪ್ರದೇಶದಲ್ಲಿರುವುದು ವಿಶೇಷವಾಗಿದೆ. ದೇವಾಲಯಗಳ ವಾಸ್ತುಕಲೆಯ ಲಕ್ಷಣಗಳು ಮತ್ತು ಶಾಸನಗಳ ಆಧಾರದ ಮೇಲೆ ಇಲ್ಲಿನ ದೇವಾಲಯಗಳನ್ನು ಗುರುತಿಸಬಹುದು.

ಅಲೆಕ್ಸಾಂಡರ್ ರೇ ಅವರು ಈ ಪ್ರದೇಶದ ಕೆಲವು ದೇವಾಲಯಗಳ ಲಕ್ಷಣಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ.[೧೧] ಇಲ್ಲಿ ಪ್ರಧಾನವಾಗಿ ಕಲ್ಯಾಣ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಕಾಲದ ದೇವಸ್ಥಾನಗಳು ಕಂಡುಬರುತ್ತವೆ.

ಹಡಗಲಿ ತಾಲೂಕಿನಲ್ಲಿ ಹೆಚ್ಚಿನ ಉತ್ಖನನ ನಡೆದಿಲ್ಲ. ಆದುದರಿಂದ ಪ್ರಾಚೀನ ಮತ್ತು ಮಧ್ಯಯುಗೀನ ಕಾಲದ ಪೌರ(ಲೌಕಿಕ) ಕಟ್ಟಡಗಳು ಇನ್ನೂ ಬೆಳಕಿಗೆ ಬರದೆ ಅಜ್ಞಾತವಾಗಿವೆ. ಆದರೆ ಮಧ್ಯಯುಗದ ಅಂತ್ಯಕಾಲದವು ಎಂದು ಹೇಳಬಹುದಾದ ಮಾಗಳ, ಕುರುವತ್ತಿಯ ಪುಷ್ಕರಿಣಿಗಳು ಮೈಲಾರ, ಹಡಗಲಿ, ಸೋಗಿ, ಅಂಗೂರು, ಇಟಗಿ ಮೊದಲಾದೆಡೆ ಇರುವ ಅಳಿದುಳಿದ ಕಟ್ಟಡಗಳು ಈ ಲೌಕಿಕ ವಾಸ್ತುಶಿಲ್ಪಕ್ಕೆ ಹೆಸರಿಸಬಹುದಾದ ಉದಾಹರಣೆಗಳು.

ಸೈನಿಕ ವಾಸ್ತುಶಿಲ್ಪಕ್ಕೆ ಸಾಕಷ್ಟು ಉದಾಹರಣೆಗಳು ಹಡಗಲಿ ತಾಲೂಕಿನ ವಿವಿಧ ಕಡೆ ದೊರೆಯುತ್ತವೆ. ಪ್ರಾಚೀನ ಮತ್ತು ಮಧ್ಯಯುಗೀನ ಕಾಲದಲ್ಲಿ ಕಟ್ಟಿಸಲ್ಪಟ್ಟ ಕೋಟೆ–ಕೊತ್ತಲ, ಬತ್ತೇರಿಗಳು ಇದೇ ತಾಲೂಕಿನ ಮಾಲಚಿಪುರ(ಮೈಲಾರ ಕೋಟೆ), ಸೋಮಲಾಪುರ, ಮಾಳಾಪುರ, ಹ್ಯಾರಡ, ವಿಠ್ಠಲಾಪುರ, ಹನುಮಾಪುರ, ವಿಟಲಾಪುರ, ರಾಮಾಪುರ ಮೊದಲಾದೆಡೆ ಇವೆ. ಹೊಳಲು ಕೋಟೆಯನ್ನು ಹರಪನಹಳ್ಳಿ ಪಾಳೆಯಗಾರನ ಸಾಮಂತನಾದ ಬಸವನಾಯಕನು ನೋಡಿಕೊಳ್ಳುತ್ತಿದ್ದನು. ಧಾರ್ಮಿಕ ವಾಸ್ತುಕಲೆಯ ಪ್ರತೀಕಗಳಾದ ಹಿಂದೂ ದೇವಾಲಯಗಳನ್ನು ಹಾಗೂ ಜೈನಬಸದಿಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿರುವುದರಿಂದ ಪೌರ(ಲೌಕಿಕ) ಮತ್ತು ಸೈನಿಕ ವಾಸ್ತುಕಟ್ಟಡಗಳ ವಿಶ್ಲೇಷಣೆಗೆ ಹೆಚ್ಚಿನ ಗಮನ ಕೊಡದೆ, ಧಾರ್ಮಿಕ ವಾಸ್ತುಕಲೆಗೆ ಇಲ್ಲಿ ಹೆಚ್ಚಿನ ಒತ್ತು ಕೊಡಲಾಗಿದೆ. ಈ ತಾಲೂಕಿನಲ್ಲಿರುವ ವಿಭಿನ್ನ ಪಂಥೀಯ ದೇವಾಲಯಗಳು, ಯಾವ ಕಾಲಘಟ್ಟದಲ್ಲಿ ಯಾವ ರೀತಿಯ ಶೈಲಿಗಳನ್ನು ಅಳವಡಿಸಿಕೊಂಡು ಬೆಳವಣಿಗೆ ಆದವು ಎಂಬುದನ್ನು ಹಾಗೂ ಇವುಗಳ ವಾಸ್ತು ವೈಶಿಷ್ಟ್ಯತೆಯನ್ನು ಈ ಮುಂದೆ ವಿವರಿಸಲಾಗಿದೆ.

ಹಡಗಲಿ ತಾಲೂಕಿನಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಧಾರ್ಮಿಕ ವಾಸ್ತುಕಲೆಗಳ ಪ್ರತೀಕಗಳಾದ ಅಸಂಖ್ಯಾತ ದೇವಸ್ಥಾನಗಳು ಕಂಡುಬಂದಿವೆ. ಇವುಗಳನ್ನು ಹೆಚ್ಚಾಗಿ ಶಿಲೆಯಿಂದಲೇ ನಿರ್ಮಿಸಲಾಗಿದೆ. ಹಾಗೆಯೇ ಕೆಲವು ದೇವಾಲಯಗಳ ಗೋಪುರ ಮತ್ತು ಶಿಖರಗಳಿಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಲಾಗಿದೆ. ಒಟ್ಟಿನಲ್ಲಿ ಹಡಗಲಿ ತಾಲೂಕಿನ ವಿವಿಧ ಕಡೆ ಕಂಡುಬಂದಿರುವ ದೇವಾಲಯಗಳಲ್ಲಿ ಕೆಲವು ಮಾತ್ರ ಮೂಲರೂಪದಲ್ಲಿವೆ, ಕೆಲವು ಜೀರ್ಣೋದ್ಧಾರಗೊಂಡಿದ್ದು, ಇನ್ನೂ ಕೆಲವು ಅವಸಾನದ ಅಂಚಿನಲ್ಲಿವೆ. ಹಡಗಲಿ ತಾಲೂಕಿನ ವಾಸ್ತುಕಲೆಯ ವೈಶಿಷ್ಟ್ಯತೆ ಮತ್ತು ಅವುಗಳ ಕಾಲವನ್ನು ಗುರುತಿಸಲು ಈ ಎಲ್ಲಾ ದೇವಸ್ಥಾನಗಳು ಸಹಾಯಕವಾಗಿದ್ದು, ಅವುಗಳಲ್ಲಿ ಮುಖ್ಯವಾಗಿ ಹೂವಿನಹಡಗಲಿ, ಹಿರೇಹಡಗಲಿ, ಮಾಗಳ, ಕುರುವತ್ತಿ, ರಂಗಾಪುರ, ಮೈಲಾರ, ಕೊಂಬಳಿ, ಬಸಾಪುರ, ಸೋಗಿ, ಅಂಗೂರು, ಹೊಳಲು, ಹೊಳಗುಂದಿ, ಉತ್ತಂಗಿ, ಕೊಟ್ನಿಕಲ್, ತಳಕಲ್ಲು, ತುಂಬಿಗೇರಿ, ನಾಗತಿ ಬಸಾಪುರ, ಮೊದಲಘಟ್ಟ, ಮಾನ್ಯರ ಮಸಲವಾಡ, ಹ್ಯಾರಡ, ಇಟಗಿ, ಹರವಿ, ಬ್ಯಾಲಹುಣಸಿ, ಸೋಗಿ, ಕತ್ತೆಬೆನ್ನೂರುಗಳಲ್ಲಿ ಪ್ರಮುಖ ದೇವಾಲಯಗಳಿವೆ. ಕೆಲವು ಕಡೆ ಸುಸ್ಥಿತಿಯಲ್ಲಿರುವ ದೇವಾಲಯಗಳಿವೆ. ಇನ್ನು ಕೆಲವು ದೇವಾಲಯಗಳು ಕಾಲನ ತುಳಿತಕ್ಕೆ

ಸಿಕ್ಕು, ಅವನತಿಯ ಹಾದಿಯನ್ನು ಹಿಡಿದಿರುವುದನ್ನು ಗಮನಿಸಬಹುದು. ಕೆಲ ಗ್ರಾಮಗಳಲ್ಲಿ ಸಂಪೂರ್ಣವಾಗಿ ನವೀಕರಣಗೊಂಡು ಇಲ್ಲವೇ ಅಲ್ಪಸ್ವಲ್ಪ ಜೀರ್ಣೋದ್ಧಾರಗೊಂಡು ಅಸ್ತಿತ್ವವನ್ನು ಉಳಿಸಿಕೊಂಡ ಪ್ರಾಚೀನ ಮತ್ತು ಮಧ್ಯಯುಗೀನ ಕಾಲದ ದೇವಸ್ಥಾನಗಳು ಕಂಡುಬರುತ್ತವೆ.

ಹಡಗಲಿಯಲ್ಲಿ ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿತವಾದ ಹಲವು ದೇವಾಲಯಗಳಿವೆ. ವಿಶೇಷವಾಗಿ ಪ್ರಾಚೀನ ಮತ್ತು ಮಧ್ಯಯುಗೀನ ಕಾಲಕ್ಕೆ ಸೇರಿದ ಹಲವು ದೇವಸ್ಥಾನಗಳು ಇಂದಿನ ಕುರುವತ್ತಿ, ಮೈಲಾರ, ಮಾಗಳ, ಹಡಗಲಿ, ಹಿರೇಹಡಗಲಿ, ಹೊಳಲು, ಅಂಗೂರು, ರಂಗಾಪುರ, ಸೋಗಿ, ಉತ್ತಂಗಿ, ಮಾನ್ಯರ ಮಸಲವಾಡ, ಕತ್ತೆಬೆನ್ನೂರು, ಹೊಳಗುಂದಿ ಮೊದಲಾದೆಡೆ ಕೇಂದ್ರೀಕೃತವಾಗಿವೆ. ಇವು ಅಂದಿನ ವಾಸ್ತುಶಿಲ್ಪದ ಪ್ರತೀಕಗಳಾಗಿದ್ದು, ಅಂದಿನ ಜನರ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿವೆ. ಇವು ಅಂದಿನ ಚರಿತ್ರೆಯನ್ನು ಪುನಾರಚಿಸಲು ಉಪಯುಕ್ತ ಆಕರಗಳಾಗಿವೆ ಎಂದರೆ ತಪ್ಪಾಗಲಿಕ್ಕಿಲ್ಲ. ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾದಂತೆ ದೇವಾಲಯದ ಕೆಲವು ಭಾಗಗಳನ್ನು, ದೇವಾಲಯಗಳ ನಿರ್ಮಾಣದ ಹಿನ್ನೆಲೆ, ಇಲ್ಲಿನ ಮುಖ್ಯ ದೇವಾಲಯಗಳ ವಾಸ್ತುವೈಶಿಷ್ಟ್ಯತೆಯನ್ನು ಚರ್ಚಿಸಲಾಗಿದೆ.

### ೫.೩. ಪ್ರಮುಖ ದೇವಾಲಯಗಳ ವಾಸ್ತುವೈಶಿಷ್ಟ್ಯತೆ ಮತ್ತು ಮಹತ್ವ

ಚಾರಿತ್ರಿಕ ಆಕರಗಳಾದ ದೇವಾಲಯಗಳು ಹಡಗಲಿ ತಾಲೂಕಿನ ವಿವಿಧ ಕಡೆ ಕೇಂದ್ರೀಕೃತವಾಗಿವೆ. ಹೂವಿನಹಡಗಲಿ, ಹಿರೇಹಡಗಲಿ, ಮಾಗಳ, ಕುರುವತ್ತಿ, ರಂಗಾಪುರ, ಮೈಲಾರ, ಕೊಂಬಳಿ, ಬಸಾಪುರ, ಸೋಗಿ, ಅಂಗೂರು, ಹೊಳಲು, ಹೊಳಗುಂದಿ, ಉತ್ತಂಗಿ, ಕೊಟ್ನೆಕಲ್, ತುಂಬಿಗೇರಿ, ನಾಗತಿ ಬಸಾಪುರ, ತಳಕಲ್ಲು, ಮೊದಲಘಟ್ಟ, ಮಾನ್ಯರ ಮಸಲವಾಡ, ಹ್ಯಾರಡ, ಇಟಗಿ, ಬ್ಯಾಲಹುಣಸಿ, ಸೋಗಿ, ಕತ್ತೆಬೆನ್ನೂರುಗಳಲ್ಲಿ ಪ್ರಮುಖ ದೇವಾಲಯಗಳಿವೆ. ಅವುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಕಂಡಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದು.

೧. ಶೈವ ದೇವಾಲಯಗಳು

೨. ವೈಷ್ಣವ ದೇವಾಲಯಗಳು

೩. ಶಾಕ್ತ ದೇವಾಲಯಗಳು

೪. ಜೈನ ದೇವಾಲಯಗಳು

೫. ಇತರೆ ದೇವಾಲಯಗಳು

ಆಯಾ ಧಾರ್ಮಿಕ ಪಂಥಕ್ಕೆ ಸೇರದೇ ಇರುವ ಮಿಶ್ರ ಪಂಥ ಇಲ್ಲವೇ ಪ್ರತ್ಯೇಕವೆನ್ನಬಹುದಾದ ಹರಿಹರ, ಬ್ರಹ್ಮ ಮೊದಲಾದ ದೇವಾಲಯಗಳನ್ನು ಸಹ ವಿಶ್ಲೇಷಿಸಲಾಗಿದೆ. ಈ ಎಲ್ಲ ದೇವಾಲಯಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಮುನ್ನ ಈ ತಾಲೂಕಿನ ವಿವಿಧ ದೇವಾಲಯಗಳ ಅಂಗ ಭಾಗಗಳನ್ನು (ವಾಸ್ತು ಲಕ್ಷಣಗಳನ್ನು) ಸ್ಥೂಲವಾಗಿ ಈ ಕೆಳಗಿನಂತೆ ವಿಶ್ಲೇಷಿಸುವುದು ಅವಶ್ಯಕ.

ಹಡಗಲಿ ತಾಲೂಕಿನ ದೇವಾಲಯಗಳ ರಚನಾಕ್ರಮವನ್ನು 'ಊರ್ಧ್ವಮುಖ ಕ್ರಮ' ಮತ್ತು 'ತಿರ್ಯಙ್ಮುಖ ಕ್ರಮ' ಎಂದು ಎರಡು ರೀತಿಯಲ್ಲಿ ವಿಭಾಗಿಸಬಹುದು. ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೀತಿಯಲ್ಲಿ ರಚಿಸುವ ಕ್ರಮವನ್ನು 'ಊರ್ಧ್ವಮುಖ ಕ್ರಮ' ಎಂದು ಹೇಳಬಹುದು. ಅದೇ ರೀತಿ ಒಳಭಾಗದಲ್ಲಿ ಗರ್ಭಗೃಹ ಸೇರಿದಂತೆ ಅದರ ಮುಂದಿರುವ ಎಲ್ಲಾ ಮಂಟಪ ಇತ್ಯಾದಿಗಳ ರಚನಾಕ್ರಮವನ್ನು 'ತಿರ್ಯಙ್ಮುಖಕ್ರಮ' ಎಂದು ಕರೆಯಬಹುದು.

ದೇವಸ್ಥಾನಗಳು ಊರ್ಧ್ವಮುಖ ಕ್ರಮದಲ್ಲಿ(ಅಂದರೆ ಕೆಳಗಿನಿಂದ ಮೇಲಕ್ಕೆ) ಪ್ರಧಾನವಾಗಿ ಆರು ಭಾಗ(ಷಡ್ವರ್ಗ)ಗಳಿಂದ ಕೂಡಿರುತ್ತವೆ. ಅವುಗಳೆಂದರೆ, ಅಧಿಷ್ಠಾನ–ಭಿತ್ತಿ–ಪ್ರಸ್ತರ–ಗ್ರೀವ–ಶಿಖರ–ಸ್ತೂಪಿ. ಹೀಗೆ ಆರು ಭಾಗಗಳಿಂದ ಕೂಡಿರುವ ದೇವಾಲಯಗಳಿಗೆ 'ಷಡ್ವರ್ಗ ದೇವಾಲಯ' ಎಂದು ಹೆಸರು. ಷಡ್ವರ್ಗ ಕ್ರಮದ ದೇವಾಲಯಗಳಲ್ಲಿ ಅಧಿಷ್ಠಾನವೇ ಮೊದಲ ಭಾಗ.

**ಅಧಿಷ್ಠಾನ:** ಹೂವಿನಹಡಗಲಿ ತಾಲೂಕಿನ ವಿವಿಧ ದೇವಾಲಯಗಳ ಅಧಿಷ್ಠಾನಗಳಲ್ಲಿ ಪ್ರಮುಖವಾಗಿ ಉಪಾನ, ಪದ್ಮ, ಕರ್ಣಿಕಾ, ಕುಮುದ, ಕಪೋತ, ವೇದಿ ಅಂಗಗಳು ಕಂಡುಬರುತ್ತವೆ. ಮಾಗಳ, ಹಡಗಲಿ, ಕುರುವತ್ತಿ, ಸೋಗಿ ಮೊದಲಾದ ದೇವಾಲಯಗಳ ಅಧಿಷ್ಠಾನದ ಮೊದಲ ಭಾಗದಲ್ಲಿ ಕೆಲವು ಲೌಕಿಕ ಮತ್ತು ಪೌರಾಣಿಕ ಶಿಲ್ಪಗಳನ್ನು ಕೆತ್ತಲಾಗಿದೆ. ಅಧಿಷ್ಠಾನದಲ್ಲಿ ಅನೇಕ ಪ್ರಕಾರಗಳೂ ಇವೆ. ಮಂಚಕ, ಪಾದಬಂಧ, ಪ್ರತಿಬಂಧ ಎಂಬ ಮುಖ್ಯ ಪ್ರಭೇದವೂ, ಪಾದಬಂಧ, ಪ್ರತಿಬಂಧ, ಪದ್ಮಬಂಧ. ಮಂಚಬಂಧ ಮುಂತಾದ ಉಪ ಪ್ರಕಾರಗಳೂ ಇವೆ.

**ಭಿತ್ತಿ:** ಅಧಿಷ್ಠಾನದ ಮೇಲಿನ ಷಡ್ವರ್ಗ ಕ್ರಮದ ಎರಡನೇ ಭಾಗವೇ 'ಭಿತ್ತಿ'(ಗೋಡೆ). ಇದು ದೇವಾಲಯದ ಭಾರ ಹೊರಲೆಂದು ಭಿತ್ತಿಯಲ್ಲಿ ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳು ಇರುವುದಲ್ಲದೆ, ಅವುಗಳ ನಡುವೆ ದೇವಕೋಷ್ಠ, ಜಾಲಂಧ್ರ(ವಾತಾಯನ), ತೋರಣ, ಕುಂಭಲತಾ ಇತ್ಯಾದಿಗಳಿರುತ್ತವೆ. ಮಯಮತ, ಕಾಮಿಕಾಗಮ, ಮಾನಸಾರ, ಕಾಶ್ಯಪಶಿಲ್ಪ ಮುಂತಾದ ಶಿಲಾಶಾಸ್ತ್ರಗಳು, ಗ್ರಂಥಗಳಲ್ಲಿ ವಿವರಣೆಯನ್ನು ನೋಡಬಹುದಾಗಿದೆ. ಮಯಮತವು ಭಿತ್ತಿಯನ್ನು ಫಲಕಕುಡ್ಯ, ಜಾಲಕಕುಡ್ಯ, ಇಷ್ಟಕ ಕುಡ್ಯ ಮತ್ತು ಶೈಲಕುಡ್ಯ ಎಂದು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ. ಜಾಲಕಗಳಿಂದ ಕೂಡಿದ ಭಿತ್ತಿಯು ಜಾಲಕ ಕುಡ್ಯವಾದರೆ, ಇಟ್ಟಿಗೆಯಿಂದ ಮಾಡಿದ್ದು ಇಷ್ಟಕ ಕುಡ್ಯವೆನಿಸುತ್ತದೆ. ಫಲಕಗಳಿಂದ ಕೂಡಿ ಮಧ್ಯ ಕಂಬಗಳಿರುವ ಭಿತ್ತಿಯನ್ನು ಫಲಕಕುಡ್ಯವೆಂದೂ ಅದರ ಮೇಲೆ ಮತ್ತು ಕೆಳಗೆ ಪದ್ಮಪಟ್ಟಿಕೆ ಇರಬೇಕೆಂದೂ ಇದರಲ್ಲಿ ಹೇಳಲಾಗಿದೆ. ಕಲ್ಲಿನಿಂದ ಮಾಡಿದ ಭಿತ್ತಿಗೆ ಶೈಲಕುಡ್ಯವೆಂದು ಹೇಳಿದೆ. ಇಲ್ಲಿನ ಅಂಗೂರು, ಕುರುವತ್ತಿ, ಮೈಲಾರ, ಸೋಗಿ, ಹಡಗಲಿ ಮೊದಲಾದಡೆ ಭಿತ್ತಿಯ ಹೊರಭಾಗದಲ್ಲಿ ಅರೆಗಂಭಗಳು, ಜೋಡಿ ಅರೆಗಂಭಗಳಷ್ಟನ್ನೇ ಕೆತ್ತಿದ್ದರೆ, ಇನ್ನೂ ಕೆಲವು ಕಡೆ ಶಿಖರದ ಮಾದರಿಗಳನ್ನು ಬಿಡಿಸಲಾಗಿದೆ. ಹೂವಿನಹಡಗಲಿ, ಮಾಗಳ ಮತ್ತು ಇತರೆಡೆಯ ಕೆಲವು ದೇವಾಲಯಗಳ ಗರ್ಭಗುಡಿಗಳ ಹೊರಭಾಗದ ಮಧ್ಯ ಭಿತ್ತಿಯಲ್ಲಿ

ದೇವಕೋಷ್ಠಗಳಿದ್ದು, ಕೆಲವು ದೇವಕೋಷ್ಠಗಳಲ್ಲಿ ಮೂರ್ತಿಗಳಿವೆ. ಈ ದೇವಕೋಷ್ಠಗಳನ್ನು ಉತ್ತಮ ರೀತಿಯಲ್ಲಿ ಅಲಂಕರಿಸಲಾಗಿರುತ್ತದೆ. ಕುರುವತ್ತಿ, ಸೋಗಿ, ಮಾಸ್ವಲವಾಡ ದೇವಾಲಯಗಳ ಪೂರ್ವ ಭಾಗದಲ್ಲಿ ಪುಷ್ಪ ಜಾಲಂಧ್ರ (ಜಾಲಕ)ಗಳಿವೆ. ಮಾಗಳ ಸೂರ್ಯನಾರಾಯಣ ದೇವಾಲಯದ ದಕ್ಷಿಣಾಭಿಮುಖವಾಗಿರುವ ಭಿತ್ತಿಯು ಜಾಲಂಧ್ರ (ಜಾಲಕ ಕುಡ್ಯ)ಗಳಿಂದ ಕೂಡಿದೆ.

**ಪ್ರಸ್ತರ:** ದೇವಾಲಯದಲ್ಲಿ ಭಿತ್ತಿಯ ನಂತರ ಬರುವ ಭಾಗವೇ ಪ್ರಸ್ತರ. ಷಡ್ವರ್ಗ ದೇವಾಲಯಗಳಲ್ಲಿ ಊರ್ಧ್ವಕ್ರಮದಲ್ಲಿ ಇದು ಮೂರನೇ ಭಾಗವಾಗಿದ್ದು ಭಿತ್ತಿಯ ಅಂತ್ಯದಿಂದ ಗ್ರೀವದ ಪ್ರಾರಂಭದವರೆಗಿನ ಭಾಗವನ್ನು ಪ್ರಸ್ತರ ಎನ್ನಬಹುದು. ಇದರಲ್ಲಿ ಉತ್ತರ, ವಾಜನ, ವಲಭೀ, ಕಪೋತ, ಅಲಿಂಗ ಎನ್ನುವ ಉಪಭಾಗಗಳಿವೆ. ಇವು ದೇವಾಲಯವನ್ನು ರಕ್ಷಿಸುತ್ತವೆ. ಕುರುವತ್ತಿ, ಮೈಲಾರ, ಸೋಗಿ, ಹಡಗಲಿ ಮೊದಲಾದೆಡೆ ಪ್ರಸ್ತರದಲ್ಲಿನ ಈ ವಿವಿಧ ಭಾಗಗಳನ್ನು ಕಾಣಬಹುದು. ಈ ಭಾಗವನ್ನು ಕೆಲವು ದೇವಾಲಯಗಳಲ್ಲಿ ಕೀರ್ತಿಮುಖಗಳಿಂದ, ಪುಷ್ಪಗಳಿಂದ ಅಲಂಕರಿಸಲಾಗಿದೆ. ಹಾಗೆಯೇ ತಾಲೂಕಿನ ಬಹುತೇಕ ದೇವಾಲಯಗಳಲ್ಲಿನ ಕಪೋತ ಭಾಗದ ಸುತ್ತಲೂ ಆಂಗ್ಲ ವರ್ಣಮಾಲೆ 'ಎಸ್' ಆಕಾರದಂತೆ ಹೊರಬಾಗಿದ್ದು, ಮುಂದೆ ಚಾಚಿದಂತಿರುತ್ತದೆ. ಈ ರೀತಿ ಇರುವ ಕಪೋತ ಭಾಗವು ಮಾಗಳ, ಅಂಗೂರು, ಹಂಪಸಾಗರ ಮೊದಲಾದ ದೇವಾಲಯಗಳಲ್ಲಿ ಕಂಡುಬರುತ್ತದೆ. ಮಯಮತದ ೧೬ನೇ ಅಧ್ಯಾಯ, ಮಾನಸಾರದ ೧೬ನೇ ಅಧ್ಯಾಯ, ಅಜಿಲೋಗಮದ ೧೪ನೆಯ ಅಧ್ಯಾಯ, ಕಾಶ್ಯಪಶಿಲ್ಪದ ೧೯ನೆಯ ಅಧ್ಯಾಯಗಳಲ್ಲಿ ಪ್ರಸ್ತರವನ್ನು ಕುರಿತು ವಿವರಣೆ ಇದೆ.[೨] ಹೀಗೆ ಶಾಸ್ತ್ರಗ್ರಂಥಗಳು ದೇವಾಲಯದ ವಾಸ್ತುಶಾಸ್ತ್ರದ ಬಗ್ಗೆ ವಿವರಿಸಿರುವುದನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ದೇವಾಲಯಗಳ ರಚನೆ ತುಂಬಾ ಅದ್ಭುತವಾದ ರಚನೆಯಾಗಿದ್ದು ಇವುಗಳನ್ನು ರಚಿಸುವುದರಲ್ಲಿ ಶಾಸ್ತ್ರಗ್ರಂಥಗಳ ಪಾತ್ರ ತುಂಬಾ ಇದೆ.

**ಮೇಲ್ಕಟ್ಟಡದ ರಚನೆ:** ಷಡ್ವರ್ಗ ರೀತಿಯ ದೇವಾಲಯಗಳಲ್ಲಿ ನಾಲ್ಕು, ಐದು, ಆರನೇ ಭಾಗಗಳೆಂದು ಗ್ರೀವ, ಶಿಖರ, ಸ್ತೂಪಿಗಳನ್ನು ಕರೆಯಲಾಗಿದೆ. ಈ ಮೂರನ್ನು ಮೇಲ್ಕಟ್ಟಡ ಎಂದು ಹೇಳಲಾಗಿದೆ. ಈ ಭಾಗಗಳ ಬಗ್ಗೆ ವಿವಿಧ ಶಾಸ್ತ್ರಗ್ರಂಥಗಳು ನಿರೂಪಿಸಿವೆ. ಗ್ರೀವವನ್ನು ಗ್ರಂಥಗಳು ಗಲ, ಕಂಧರ, ಕಂಠ ಇತ್ಯಾದಿಯಾಗಿ ಹೇಳಿವೆ. ಗ್ರೀವದ ಕೆಳಗೆ ವೇದಿ ಇರಬೇಕೆಂದೂ, ಈ ವೇದಿಯಲ್ಲಿ ಕುಡ್ಯಸ್ತಂಭವಿರಬೇಕೆಂದೂ ನಿಯಮವಿದೆ. ಈ ವೇದಿ ಮತ್ತು ಗ್ರೀವವು ಮೇಲಿರುವ ಶಿಖರದ ಆಕಾರವನ್ನು ಹೋಲುತ್ತಿರಬೇಕು ಎಂದು ಹೇಳಿವೆ. ಗ್ರೀವಾದಾರದ ಮೂಲೆಗಳಲ್ಲಿ ವಾಹನವಿರಬೇಕು ಮತ್ತು ಅದು ಆಯಾ ದೇವತೆಯ ಬಲಕ್ಕಿರಬೇಕು. ಮಾನಸಾರದ ಪ್ರಕಾರ ಶಿವ ದೇವಾಲಯಗಳಲ್ಲಿ ಪ್ರಸ್ತರದ ಮೂಲೆಯಲ್ಲಿ ವೃಷಭವನ್ನು ಸ್ಥಾಪಿಸಬೇಕು, ಶಿವೇತರ ದೇವಾಲಯಗಳಲ್ಲಿ ಅವರವರ ಅಭಿರುಚಿಗೆ ತಕ್ಕಂಥ ಬಿಂಬವನ್ನು ಮಾಡಬೇಕು. ಪ್ರಸ್ತರದ ಮೇಲಿರುವ ಬಿಂಬಗಳು ಕುಳಿತಿರಬೇಕು ಅಥವಾ ಮಲಗಿರಬೇಕು.

ಗ್ರೀವದ ಮೇಲಿನ ಭಾಗವಾದ ಶಿಖರಕ್ಕೆ ಶಿರ, ಶಿರಸ್, ಶೀರ್ಷ, ಶೀರ್ಷಕ, ಮಸ್ತಕ ಇತ್ಯಾದಿ ಪರ್ಯಾಯ ಪದಗಳಿವೆ. ಶಿಖರವು ಚೌಕ, ವೃತ್ತ, ಷಡಶ್ರ, ಅಷ್ಟಶ್ರ, ಗೋಲಕ ರೂಪಗಳಲ್ಲಿರಬಹುದು. ಸ್ತೂಪಿಯನ್ನು ಶಿಖಾ, ಕುಂಭ, ಘಟ ಎಂದು ಗ್ರಂಥಗಳಲ್ಲಿ ಕರೆಯಲಾಗಿದೆ. ಪ್ರಾಸಾದದಲ್ಲಿ ಮೂರು, ಎರಡು ಅಥವಾ ಒಂದು ಸ್ತೂಪಿಯಿರಬೇಕು. ಇದನ್ನು ಸುವರ್ಣ, ರಜತ, ತಾಮ್ರದಿಂದ ಮಾಡಬಹುದು. ಗ್ರೀವದಿಂದ ಸ್ತೂಪಿಯವರೆಗೂ ಆಕಾರವು ಒಂದೇ ರೀತಿಯಾಗಿರಬೇಕೆಂಬ ಸೂಚನೆ ಗ್ರಂಥಗಳಲ್ಲಿದೆ.[೧೩]

ಗ್ರೀವದಲ್ಲೂ ಕೋಷ್ಠಗಳಿದ್ದು, ಅದರಲ್ಲಿ ದೇವತಾಶಿಲ್ಪಗಳಿರುತ್ತವೆ. ಅದರ ಮೇಲಿನ ಶಿಖರವು ಐದನೇ ಭಾಗವಾಗಿದೆ. ಶಿಖರವು ಬೇರೆ ಬೇರೆ ಆಕಾರದಲ್ಲಿ ರಚಿಸಲ್ಪಡುವುದರಿಂದ, ಆಕಾರಕ್ಕೆ ತಕ್ಕಂತೆ ಅವು ವಿಷ್ಣುಛಂದ, ಬ್ರಹ್ಮಛಂದ, ರುದ್ರಛಂದ, ಶಾಲಾಕಾರ, ಗಜಪೃಷ್ಠಾಕಾರ ಎಂದು ವಿವಿಧ ಹೆಸರುಗಳನ್ನು ಪಡೆಯುತ್ತವೆ. ಇವು ಪ್ರಧಾನವಾಗಿ 'ನಾಸಿ'ಗಳಿಂದ ಅಲಂಕರಿಸಲ್ಪಟ್ಟಿರುತ್ತವೆ. ಮೇಲ್ಕಟ್ಟಡದ ಒಂದು ಭಾಗವಾದ ಶಿಖರವು ಈ ತಾಲೂಕಿನ ಬಹುತೇಕ ದೇವಾಲಯಗಳಲ್ಲಿ ನಾಶವಾಗಿವೆ. ಕೆಲವು ದೇವಾಲಯಗಳ ಶಿಖರಗಳಲ್ಲಿ ಪ್ರಧಾನವಾಗಿ ಕದಂಬ ನಾಗರ (ಫಾಂಸಾನ), ದ್ರಾವಿಡ, ವೇಸರ ಶೈಲಿಯ ಶಿಖರಗಳು ಕಂಡುಬರುತ್ತವೆ. ಕುರುವತ್ತಿ, ಅಂಗೂರುಗಳಲ್ಲಿ ಕದಂಬ ನಾಗರಶೈಲಿಯ ಶಿಖರಗಳಿವೆ. ಅಂಗೂರಿನ ಕಲ್ಲೇಶ್ವರ, ಬೂದನೂರಿನ ಈಶ್ವರ ದೇವಾಲಯ ಗಳ ಮೇಲಿನ ಶಿಖರಗಳು ಕದಂಬ–ನಾಗರ ಶೈಲಿಯಲ್ಲಿದ್ದವೆಂದು ಹೇಳಲು ಈಗ ಅಲ್ಲಿ ಉಳಿದಿರುವ ಅವುಗಳ ತಳಗಳೇ ಸಾಕ್ಷಿಯಾಗಿವೆ. ಮೈಲಾರ, ಸೋಗಿ, ಬ್ಯಾಲಹುಣಸಿ, ಕತ್ತೆಬೆನ್ನೂರು, ಕೊಂಬಳಿಗಳಲ್ಲಿ ದ್ರಾವಿಡ ಮಾದರಿಯ ಮಾದರಿಯ ಶಿಖರಗಳಿದ್ದರೆ, ಕುರುವತ್ತಿ ಕಲ್ಲೇಶ್ವರ ದೇವಾಲಯದ ಮೇಲಿನ ಶಿಖರವು ವೇಸರ ಶೈಲಿಯದ್ದೆನಿಸುತ್ತದೆ.

ಊರ್ಧ್ವಕ್ರಮದಲ್ಲಿ ಕೊನೆಯದಾದ ಮತ್ತು ಮುಖ್ಯವಾದ ಭಾಗವೇ ಸ್ತೂಪಿ(ಕಲಶ). ಇದರಲ್ಲೂ ಘಟ, ಗಲ ಮತ್ತು ಮುಕುಲಗಳೆಂಬ ಮುಖ್ಯ ಅಂಗಗಳಿರುತ್ತವೆ. ಕಲಶ ಸ್ಥಾಪನೆಯಿಂದಲೇ ದೇವಾಲಯದ ಪೂಜಾವಿಧಿಗಳು ಆರಂಭವಾಗುವುದರಿಂದ ಧಾರ್ಮಿಕ ದೃಷ್ಟಿಯಿಂದ ಇದು ಮುಖ್ಯ ಅಂಗವಾಗಿದೆ. ಸೋಗಿ, ಮೈಲಾರದ ದೇವಾಲಯಗಳಲ್ಲಿನ ಶಿಖರಗಳ ಮೇಲಿನ ಕಲಶ ಭಾಗವು ಶಿಲೆಯದ್ದಾಗಿರುವುದು ವಿಶೇಷ. ಕೆಲವು ಎತ್ತರದ ದೇವಾಲಯಗಳಲ್ಲಿ ಮೇಲ್ಕಟ್ಟಡದಲ್ಲಿ, ಗ್ರೀವದ ಕೆಳಗೆ ಚೌಕೋನಾಕಾರದ ಕೂಟ, ಆಯತಾಕಾರದ ಎತ್ತರದ ದೇವಾಲಯಗಳಲ್ಲಿ ಕೆಳಕಟ್ಟಡದಲ್ಲಿ, ಗ್ರೀವದ ಕೆಳಗೆ ಚೌಕೋನಕಾರದ ಕೂಟ, ಆಯತಾಕಾರದ ಶಾಲಾ, ಗಜಪೃಷ್ಠಾಕಾರದ ಪಂಜರ, ನಾಸಿ, ನಾಸಿಕೋಷ್ಠ, ವೃತ್ತಸ್ಫುಟಗಳಿಂದ ಕೂಡಿದ ತಲ/ಹಾರಗಳು ಇರುತ್ತವೆ. ಈ ಅಲಂಕಾರವನ್ನು ಹಡಗಲಿ ಕಲ್ಲೇಶ್ವರ ದೇವಾಲಯದಲ್ಲಿ ಕಾಣಬಹುದು. ಹೂವಿನಹಡಗಲಿ, ಹಿರೇಹಡಗಲಿ, ಮಾಗಳ, ಕುರುವತ್ತಿ, ರಂಗಾಪುರ, ಮೈಲಾರ, ಕೋಗಳಿ, ಹೊಳಲು, ಹೊಳಗುಂದಿ, ಉತ್ತಂಗಿ, ನಾಗತಿ ಬಸಾಪುರ, ಮೊದಲಘಟ್ಟ, ಮಾನ್ಯರ ಮಸಲವಾಡ, ಹ್ಯಾರಡ, ಇಟಗಿ, ಸೋಗಿ, ಕತ್ತೆಬೆನ್ನೂರುಗಳಲ್ಲಿ ದೇವಾಲಯಗಳಲ್ಲಿ ಶುಕನಾಸಿ ಭಾಗವು ಕಂಡುಬರುತ್ತದೆ.

**ಗರ್ಭಗೃಹ:** ಇಲ್ಲಿ ಮೂಲದೇವರ ಪ್ರತಿಷ್ಠಾಪನೆಯಾಗಿರುತ್ತದೆ. ಕೆಲವೊಮ್ಮೆ ಗರ್ಭಗೃಹದ ಸುತ್ತ ದೇವಾಲಯ ಒಳಭಾಗದಲ್ಲಿ 'ಪ್ರದಕ್ಷಿಣಾ ಪಥ' ಇರುತ್ತದೆ. ಕೆಲವೊಮ್ಮೆ ಗರ್ಭಗೃಹದಿಂದ ಹೊರಚಾಚಿರುವ ವಿವಿಧಾಕಾರದ ಜಲಪ್ರಣಾಳಿಯೂ ಇವೆ. ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥ ಇರುವ ದೇವಾಲಯಗಳನ್ನು 'ಸಾಂಧಾರ' ದೇವಾಲಯಗಳೆಂದು ಆ ರೀತಿ ಇರದಿರುವ ದೇವಾಲಯಗಳನ್ನು 'ನಿರಂಧಾರ' ದೇವಾಲಯಗಳೆಂದು ಕರೆಯಲಾಗುತ್ತದೆ. ಹಡಗಲಿ ತಾಲೂಕಿನ ವಿವಿಧ ದೇವಾಲಯಗಳ ಗರ್ಭಗುಡಿಗಳ ಸುತ್ತ(ಒಳಭಾಗದಲ್ಲಿ) ಪ್ರದಕ್ಷಿಣಾ ಪಥ ಕಂಡುಬರುವುದಿಲ್ಲ. ಆದುದರಿಂದ ಈ ತಾಲೂಕಿನ ವಿವಿಧ ದೇವಾಲಯಗಳನ್ನು ನಿರಂಧಾರ ದೇವಾಲಯಗಳ ಗುಂಪಿಗೆ ಸೇರಿಸಬಹುದು. ಈ ದೇವಾಲಯಗಳ ಗರ್ಭಗುಡಿಗಳು ಹೆಚ್ಚಾಗಿ ಚೌಕಾಕಾರವಾಗಿದ್ದರೂ ಸಹ ಕೆಲವು ದೇವಸ್ಥಾನಗಳು ಆಯತಾಕಾರವಾಗಿರುವುದನ್ನು ಕಾಣಬಹುದು.

ಮೂಲ ಗರ್ಭಗುಡಿಯ ಅಭಿಷೇಕದ ನೀರು ಹೊರಹೋಗಲು ಜಲಪ್ರಣಾಳಗಳನ್ನು ನಿರ್ಮಿಸಲಾಗಿದೆ. ಅವುಗಳ ಅಲಂಕಾರವನ್ನು ಅನುಸರಿಸಿ ಗೋಮುಖ, ಗಜವಕ್ತ್ರ, ಮಕರವಕ್ತ್ರ, ಸಿಂಹವಕ್ತ್ರ ಪ್ರಣಾಳಗಳೆಂದು ಹೆಸರಿಸಲಾಗಿದೆ. ಹೂವಿನಹಡಗಲಿ ದೇವಾಲಯದಲ್ಲಿ ಹಸುವಿನ ಬಾಯಿಂದ ಹೊರಬಂದಂತಿದ್ದರೆ(ಗೋಮುಖ ಪ್ರಣಾಳ) ಹಿರೇಹಡಗಲಿ, ಮಾಗಳ, ಕುರುವತ್ತಿ, ರಂಗಾಪುರ, ಮೈಲಾರ, ಕೋಗಳಿ, ಕತ್ತೆಬೆನ್ನೂರುಗಳಲ್ಲಿ ಸಿಂಹದ ಬಾಯಿಯಿಂದ ಹೊರ ಬಂದಂತಿದೆ(ಸಿಂಹ ವಕ್ತ್ರಪ್ರಣಾಳ). ಕೊಂಬಳಿ, ಬಸಾಪುರ, ಸೋಗಿ, ಅಂಗೂರು, ಹೊಳಲು, ಹೊಳಗುಂದಿಗಳ ಜಲಪ್ರಣಾಳವು ಸಾಧಾರಣವಾಗಿ ಹೊರಬಂದಂಥ ರೀತಿಯಲ್ಲಿದ್ದರೂ ಸಹ ಅದು ಕಮಲದ ಮೊಗ್ಗಿನಿಂದ ಇಳಿಬಿದ್ದ ರೀತಿಯಲ್ಲಿದೆ. ಮೊದಲಘಟ್ಟ, ಮಾನ್ಯರ ಮಸಲವಾಡ, ಹ್ಯಾರಡ, ಇಟಗಿ, ಸೋಗಿ ದೇವಾಲಯಗಳ ಜಲಪ್ರಣಾಳವು ಆನೆ ಸೊಂಡಿಲಿನಿಂದ ಹೊರಬಂದ ರೀತಿಯಲ್ಲಿದೆ (ಗಜವಕ್ತ್ರ ಪ್ರಣಾಳ). ಉತ್ತಂಗಿ, ಕೊಟ್ನೆಕಲ್, ತಳಕಲ್ಲು, ತುಂಬಿಗೇರಿ, ನಾಗತಿಬಸಾಪುರ ಜಲಪ್ರಣಾಳವು ಮಕರದ ಬಾಯಿಯಿಂದ ಹೊರಬಂದ ರೀತಿಯಲ್ಲಿದೆ(ಮಕರ ವಕ್ತ್ರ ಪ್ರಣಾಳ).

**ಅಂತರಾಳ:** ಮುಖ್ಯ ಗರ್ಭಗೃಹಗಳ ಮುಂದೆ ಸಾಮಾನ್ಯವಾಗಿ ಅಂತರಾಳವಿರುತ್ತದೆ. ಒಂದಕ್ಕಿಂತ ಹೆಚ್ಚಿನ ಗರ್ಭಗುಡಿಗಳಿದ್ದಾಗ ಅವುಗಳ ಮುಂದೆಯೂ ಅಂತರಾಳಗಳಿರುವುದನ್ನು ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ, ಮಾಗಳ, ಸೋಗಿ ಮೊದಲಾದ ದೇವಾಲಯಗಳಲ್ಲಿ ಕಾಣಬಹುದು. ಇವು ತೆರೆದ ಇಲ್ಲವೇ ಮುಚ್ಚಿದ ರೀತಿಯಲ್ಲಿವೆ.

**ನವರಂಗ/ಸಭಾಮಂಟಪ:** ಅಂತರಾಳಗಳ ಮುಂದೆ ನವರಂಗವಿರುತ್ತದೆ. ನವರಂಗವು ವಿಶಾಲವಾದ ರಚನೆಯನ್ನು ಹೊಂದಿದ್ದು, ಹೆಚ್ಚು ಅಲಂಕೃತಗೊಂಡಿರುತ್ತದೆ. ಈ ತಾಲೂಕಿನ ವಿವಿಧ ನವರಂಗದಲ್ಲಿ (ಅಂತರಾಳಗಳ ಮುಂಭಾಗದಲ್ಲಿ ಹಾಗೂ ಪ್ರವೇಶದ್ವಾರದ ಒಳಭಾಗದ ಭಿತ್ತಿಯ ಎರಡೂ ಕಡೆ) ಕೋಷ್ಠಗುಡಿಗಳಿರುವುದನ್ನು ಕಾಣಬಹುದು. ಇವುಗಳಲ್ಲಿ ದೇವತಾ ಮೂರ್ತಿಗಳನ್ನು ಇಡಲಾಗಿರುತ್ತದೆ. ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ,

ಮಾಗಳ, ಸೋಗಿ ಮುಂತಾದ ದೇವಾಲಯಗಳಲ್ಲಿ ಕೋಷ್ಠಗುಡಿಗಳನ್ನು ಕಾಣಬಹುದು. ಕುರುವತ್ತಿ, ಹೂವಿನಹಡಗಲಿ, ಮೈಲಾರದ ದೇವಾಲಯಗಳ ನವರಂಗದಲ್ಲಿನ ಮಧ್ಯಭಾಗದ ವೇದಿಕೆಯಲ್ಲಿ ನಂದಿಗಳಿವೆ.

**ಮುಖಮಂಟಪ:** ನವರಂಗದ ನಂತರ ಇರುವುದೇ 'ಮುಖಮಂಟಪ'. ಇದು ದೇವಾಲಯದ 'ಪ್ರವೇಶ'ದಲ್ಲೇ ಇರುವುದು. ಇದರಲ್ಲಿ ಕಕ್ಷಾಸನವೂ ಇರುತ್ತದೆ. ಹೂವಿನಹಡಗಲಿ, ಹಿರೇಹಡಗಲಿ, ಮಾಗಳ, ಕುರುವತ್ತಿ, ರಂಗಾಪುರ, ಮೈಲಾರ, ಹೊಳಲು, ಹೊಳಗುಂದಿ, ಉತ್ತಂಗಿ, ನಾಗತಿಬಸಾಪುರ, ಮೊದಲಘಟ್ಟ, ಮಾನ್ಯರಮಸಲವಾಡ, ಹ್ಯಾರಡ, ಇಟಿಗಿ, ಸೋಗಿ, ಕತ್ತೆಬೆನ್ನೂರು ಮುಂತಾದೆಡೆಯ ದೇವಾಲಯಗಳಲ್ಲಿ ಮುಖಮಂಟಪಗಳನ್ನು ಕಾಣಬಹುದು. ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ, ಮಾಗಳ, ಸೋಗಿ, ಮಾನ್ಯರ ಮಸಲವಾಡ ಮುಂತಾದ ಕಡೆ ದೇವಾಲಯಗಳ ಮುಖಮಂಟಪಗಳಲ್ಲಿ ಕಕ್ಷಾಸನಗಳಿವೆ.

**ನಂದಿಮಂಟಪ:** ಹಡಗಲಿ ತಾಲೂಕಿನ ವಿವಿಧ ದೇವಾಲಯಗಳಲ್ಲಿ ಹೊಂದಿಕೊಂಡಂತೆ ಇಲ್ಲವೇ ಪ್ರತ್ಯೇಕವಾಗಿರುವ ನಂದಿಮಂಟಪಗಳನ್ನು ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ, ಮಾಗಳ, ಸೋಗಿಗಳಲ್ಲಿ ಕಾಣಬಹುದು. ನಂದಿಮಂಟಪದಂತೆಯೇ ಇರಬೇಕಾದ ಕಲ್ಯಾಣಮಂಟಪ, ರಂಗಮಂಟಪಗಳು ಹೂವಿನಹಡಗಲಿ, ಮೈಲಾರ, ಕುರುವತ್ತಿ, ಸೋಗಿ, ಉತ್ತಂಗಿ ದೇವಾಲಯಗಳಲ್ಲಿ ಕಾಣಬಹುದು. ಈ ಮೇಲಿನ ಮಂಟಪಗಳು ಅಲಂಕೃತ ಸ್ತಂಭಗಳು, ವಿತಾನ(ಒಳಛಾವಣಿ), ದ್ವಾರ, ತೋರಣ ಮತ್ತು ಸೋಪಾನಗಳಿಂದ ಕೂಡಿರುತ್ತವೆ.

**ಕಂಭ(ಸ್ತಂಭ):** ಕಂಭದಲ್ಲಿ ಪೀಠ, ಪಾದ, ದಂಡ, ದಂಡಾಗ್ರ(ಕಲಶ, ತಾಟಿಕಾ, ಘಟ, ಮಂಡಿ, ಫಲಕ), ವೀರಕಂಠ, ಬೋದಿಗೆ ಭಾಗಗಳಿದ್ದು, ಇವುಗಳಲ್ಲೂ ಉಪವಿಧಗಳಿವೆ. ರುಚಕ ಕಂಭ, ಪಾಲಿಕಾ ಕಂಭ, ಶ್ರೀಕಾರ ಕಂಭ, ಸಂಯೋಗಸ್ತಂಭ, ಕೋಷ್ಠಸ್ತಂಭ, ಪದ್ಮಕಾಂತ, ಚತುರಶ್ರ, ನಕ್ಷತ್ರಾಕಾರದ, ವೃತ್ತಾಕಾರದ ಕಂಭಗಳನ್ನು ಕಾಣಬಹುದು. ಹಡಗಲಿ ತಾಲೂಕಿನ ಬಹುತೇಕ ದೇವಾಲಯಗಳಲ್ಲಿ ಮಿಶ್ರಕಂಭ, ಶ್ರೀಕಾರ ಕಂಭ, ಚಿತ್ರಖಂಡ ಹಾಗೂ ಪದ್ಮಕಾಂತ ಕಂಭಗಳಿವೆ. ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ, ಮಾಗಳ, ಸೋಗಿ ಮೊದಲಾದೆಡೆಯ ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ಕಾಲದ ದೇವಾಲಯಗಳಲ್ಲಿ ಹೆಚ್ಚಾಗಿ ಶ್ರೀಕಾರ ಕಂಭ(ತಿರುಗುಣಿ ಯಂತ್ರದಿಂದ ತಿರುಗಿಸಲ್ಪಟ್ಟ ಕಂಭಗಳು) ಕಂಡುಬಂದರೆ, ವಿಜಯನಗರ ಕಾಲದ ಮೈಲಾರ, ಕುರುವತ್ತಿ, ಮಾಗಳ, ಸೋಗಿ, ಬ್ಯಾಲಹುಣಸಿ, ಕೊಟ್ನೆಕಲ್ಲು ದೇವಾಲಯಗಳಲ್ಲಿ ಚಿತ್ರಖಂಡ ಹಾಗೂ ಪದ್ಮಕಾಂತ ಸ್ತಂಭಗಳನ್ನು ಕಾಣಬಹುದು.

**ಭುವನೇಶ್ವರಿ:** ಭುವನೇಶ್ವರಿಯು ಬೇರೆ ಬೇರೆ ಆಕಾರಗಳಲ್ಲಿದ್ದು, ಇದರಲ್ಲಿ ಅಷ್ಟದಿಕ್ಪಾಲಕರು, ಮತ್ತಿತರ ಶಿಲ್ಪಗಳು, ಪದ್ಮ ಮಂಡಲ ಮುಂತಾದವುಗಳನ್ನು ಕೆತ್ತಲಾಗಿರುತ್ತದೆ. ಗರ್ಭಗುಡಿ, ಅಂತರಾಳ, ನವರಂಗದ ಮೇಲ್ಕಟ್ಟುಗಳಿಗೆ ಅಣ್ಣಿಗೇರೆಯವರು 'ಛತ್ತು' ಎಂದು ಕರೆದಿರುತ್ತಾರೆ.

ಕೆಲವು ಲಾಕ್ಷಣಿಕರು 'ವಿತಾನ'ವೆಂದು ಕರೆದಿರುತ್ತಾರೆ. ನಾನು 'ಭುವನೇಶ್ವರಿ' ಎಂದು ಕರೆದಿರುತ್ತೇನೆ. ಹಡಗಲಿ ತಾಲೂಕು ದೇವಾಲಯಗಳ ಗರ್ಭಗುಡಿ, ಅಂತರಾಳ, ನವರಂಗ, ಮುಖಮಂಟಪದಲ್ಲಿನ ಮುಚ್ಚಿಗೆಯನ್ನು ಅರಳಿದ ತಾವರೆಯಿಂದ ಅಲಂಕರಿಸಿರುವುದನ್ನು ಹಿರೇಹಡಗಲಿ, ಹೂವಿನಹಡಗಲಿ, ಮೈಲಾರ, ಕುರುವತ್ತಿ, ಮಾಗಳ, ಸೋಗಿ ಇನ್ನೂ ಮೊದಲಾದ ದೇವಾಲಯಗಳಲ್ಲಿ ಕಾಣಬಹುದು ಹಾಗೂ ಅರಳಿದ ತಾವರೆಯಿಂದ ಇಳಿಬಿದ್ದ ಮೊಗ್ಗಿನ ರೀತಿಯ ಅಲಂಕಾರವನ್ನು (ಪದ್ಮಶಿಲಾ) ಉತ್ತಂಗಿ, ಕತ್ತೆಬೆನ್ನೂರು ದೇವಾಲಯದ ಮುಖಮಂಟಪದ ಮುಚ್ಚಿಗೆಯಲ್ಲಿ ನಾವೀಗ ಕಾಣಬಹುದು. ಇದಕ್ಕೆ ಭಿನ್ನವಾಗಿ ದಿಕ್ಪಾಲಕರನ್ನು ಇಲ್ಲವೇ ಕೇವಲ ಅಷ್ಟದಿಕ್ಪಾಲಕರನ್ನಷ್ಟೇ ಇಲ್ಲವೇ ಕೇವಲ ಅಷ್ಟದಿಕ್ಪಾಲಕರನ್ನಷ್ಟೇ ಸ್ಥಾನಿಕರಾಗಿರುವಂತೆ ಕೆತ್ತಿ, ಅವರ ಮಧ್ಯದಲ್ಲಿ ತಾಂಡವೇಶ್ವರ ಇಲ್ಲವೇ ಗಜಸಂಹಾರಮೂರ್ತಿಯನ್ನು ಕೆತ್ತಿರುವುದನ್ನು ನೋಡಬಹುದು. ಇಂದ್ರ, ಅಗ್ನಿ, ಯಮ, ನಿಯತಿ, ವರುಣ, ವಾಯು, ಕುಬೇರ, ಈಶಾಧರ ಶಿಲ್ಪಗಳಿರುತ್ತವೆ.

**ಮಕರ ತೋರಣ:** ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯದ ದ್ವಾರದ ಮೇಲಿರುವ ಮಕರ ತೋರಣವು ವೈಶಿಷ್ಟ್ಯಪೂರ್ಣವಾದುದು. ಫಲಕದ ಆಚೀಚೆ ವರುಣ ದಂಪತಿಗಳನ್ನು ಹೊತ್ತ ಮಕರಗಳಿರುತ್ತವೆ. ಮಕರವು ಕಾಲ್ಪನಿಕ ಪ್ರಾಣಿಯಾಗಿದೆ. ಆನೆಸೊಂಡಿಲಿನಾಕಾರ, ಬಾಯಿ ಮಕರದಂತೆ, ಹಂಸ ಪುಚ್ಛ, ಅಲಂಕಾರಿಕ ಪುಚ್ಛ, ಬಾಯಿಂದ ಹೊರಟ ಅಂಕುಡೊಂಕಿನ ಮುತ್ತಿನ ತೋರಣಗಳು ಆಕರ್ಷಕವಾಗಿವೆ. ತೋರಣವು ಮಧ್ಯದ ಸಿಂಹಲಲಾಟದಲ್ಲಿ ಸೇರುತ್ತದೆ. ಇದರ ಕೆಳಗೆ ಶಿವತಾಂಡವ, ಶಿವಪರಿವಾರ, ಬ್ರಹ್ಮ, ವಿಷ್ಣು, ಪರಿವಾರ ಚಿತ್ರಣಗಳಿರುತ್ತವೆ. ಮಕರ ತೋರಣದ ಮೇಲ್ಭಾಗದಲ್ಲಿ ಕಪೋತ; ಅದರ ಮೇಲೆ ಶಿಖರಗಳು ಕಂಡುಬರುತ್ತವೆ. ಹೀಗೆ ಕಲ್ಯಾಣ ಚಾಲುಕ್ಯರು ತಮ್ಮ ಕಾಲಾವಧಿಯಲ್ಲಿ ವಿಭಿನ್ನ ಶೈಲಿಯ ತಂತ್ರಗಳನ್ನು ಬಳಸಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಆ ಮೂಲಕ ಕರ್ನಾಟಕದ ವಾಸ್ತುಶೈಲಿಗೆ ಹೊಸ ಆಯಾಮವನ್ನು ನೀಡಿದ್ದಾರೆ. ತೋರಣದಲ್ಲಿ ಅನೇಕ ವಿಧಗಳಿವೆ. ಅವುಗಳೆಂದರೆ ಮಕರ ತೋರಣ, ಚಿತ್ರ ತೋರಣ ಮತ್ತು ಪತ್ರ ತೋರಣ. ಮಕರ ತೋರಣವನ್ನು ಈಗಾಗಲೇ ವಿವರಿಸಲಾಗಿದೆ. ಭೂತ, ವಿದ್ಯಾಧರ, ಯಕ್ಷ, ಹಂಸ, ಸಿಂಹ, ವ್ಯಾಳ ಇತ್ಯಾದಿಗಳಿಂದ ಕೂಡಿ ಮಿಶ್ರಾಲಂಕಾರವಿದ್ದರೆ ಅದಕ್ಕೆ 'ಚಿತ್ರತೋರಣ' ಎಂದು ಕರೆಯಲಾಗಿದೆ. ತೋರಣವು ಅರ್ಧಚಂದ್ರಾಕಾರದಲ್ಲಿದ್ದು, ಅದರಲ್ಲಿ ಬಳ್ಳಿ ಸಾಲು, ಎಲೆಗಳನ್ನು ಬಿಡಿಸಿದ್ದಾರೆ. ಅದಕ್ಕೆ 'ಪತ್ರ ತೋರಣ' ಎಂದು ಹೆಸರು.[೧೪] ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ತೆರೆದ ಅಂತರಾಳದ ಮುಂಭಾಗದಲ್ಲಿ ಸ್ವತಂತ್ರ ಕಂಬಗಳ ಮೇಲೆ ಅಲಂಕಾರಿಕ ಮಕರ ತೋರಣವಿದೆ.

**ದ್ವಾರ:** ದ್ವಾರವು ಲಲಾಟ, ಉತ್ತರಾಂಗ, ದ್ವಾರಶಾಖಾ, ಪೇದ್ಯಾಪಿಂಡ, ಉದುಂಬರ ಮತ್ತು ಚಂದ್ರಶಿಲಾಗಳಿಂದ ಕೂಡಿದ್ದು, ದ್ವಾರಶಾಖೆಯಲ್ಲಿ ವಿವಿಧ ಅಲಂಕರಣಗಳಿರುತ್ತವೆ. ಅಂತೆಯೇ, ತೋರಣದಲ್ಲೂ ಪತ್ರತೋರಣ, ಮಕರತೋರಣ, ಚಿತ್ರತೋರಣ ಎಂಬ ವಿವಿಧಾಲಂಕರಣ ರೀತಿಗಳನ್ನು ಗುರುತಿಸಬಹುದು. ದೇವಾಲಯದ ಅವಶ್ಯಕಾಂಗಗಳಲ್ಲಿ 'ದ್ವಾರ'(ಬಾಗಿಲು)ವು ಒಂದಾಗಿದ್ದು,

ಗರ್ಭಗೃಹ, ನವರಂಗ ಇತ್ಯಾದಿಗಳು ದ್ವಾರಯುಕ್ತವಾಗಿರುತ್ತವೆ. ದ್ವಾರದ ಹೊಸ್ತಿಲಿಗೆ 'ಉದುಂಬರ' ಎನ್ನಲಾಗಿದೆ. ಈ ಭಾಗದಲ್ಲಿ ಸಾಮಾನ್ಯವಾಗಿ ಪದ್ಮಾಲಂಕಾರವಿರುತ್ತದೆ. ದ್ವಾರದ ಹೊಸ್ತಿಲಿಗೂ ಅಂದರೆ ಕೆಳಗೆ ಅಂದರೆ ನೆಲದ ಮೇಲೆ ಎದ್ದು ಕಾಣುವಂತಹ ಚಂದ್ರಾಕಾರದಂತಹ ರಚನೆಯನ್ನು 'ಚಂದ್ರಶಿಲಾ' ಎಂದು ಕರೆಯಲಾಗುತ್ತದೆ. ಇಲ್ಲಿನ ಹಡಗಲಿಯ ಕಲ್ಲೇಶ್ವರ, ಬೆಣ್ಣೆಕೃಷ್ಣ, ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಚಂದ್ರಶಿಲಾವು ಅಗಲವಾಗಿಯೂ ಸುಂದರವಾಗಿಯೂ ಇದೆ. ಇದು ಪ್ರಾಚೀನ ಕಾಲದ ದೇಗುಲಗಳಲ್ಲಿ ಕಂಡುಬಂದರೆ, ಮಧ್ಯಯುಗೀನ ಕಾಲದ ದೇವಾಲಯಗಳಲ್ಲಿ ಉದುಂಬರವೇ ಹೆಚ್ಚಾಗಿ ಕಂಡುಬರುತ್ತದೆ.

ದ್ವಾರದ ಕೆಳಭಾಗದಲ್ಲಿ ದ್ವಾರಪಾಲಕರಿರುವುದು ಸಾಮಾನ್ಯ. ಇದನ್ನು ಇಲ್ಲಿ 'ಪೇದ್ಯಾ' ಭಾಗವೆಂದು ಕರೆದಿದ್ದೇನೆ. ಈ ತಾಲೂಕಿನ ವಿವಿಧ ದೇವಾಲಯಗಳ ಪೇದ್ಯಾ ಭಾಗದಲ್ಲಿ ದ್ವಾರಪಾಲಕ ಶಿಲ್ಪಗಳು ಆಯಾ ಪಂಥಗಳಿಗನುಗುಣವಾಗಿ ಕಂಡುಬರುತ್ತವೆ. ವೈಷ್ಣವ ಪಂಥದ ದೇವಾಲಯಗಳಲ್ಲಿ ವೈಷ್ಣವ ದ್ವಾರಪಾಲಕರಿರುವರು. ಶೈವ ಪಂಥದ ದೇವಾಲಯಗಳಲ್ಲಿ ಶೈವ ದ್ವಾರಪಾಲಕರಿರುತ್ತಾರೆ. ಹಿರೇಹಡಗಲಿ, ಮಾಗಳ, ಬೆಟ್ಟದ ಮಲ್ಲೇಶ್ವರ, ಮುದೇನೂರು, ಹುಗಲೂರು, ಹೂವಿನಹಡಗಲಿ, ಹೊಳಗುಂದಿ ಮುಂತಾದ ಕಡೆ ಶೈವ ದ್ವಾರಪಾಲಕರನ್ನು ಕಾಣಬಹುದು. ಹಿರೇಹಡಗಲಿ, ಹೊಳಗುಂದಿ, ಮುದೇನೂರು, ಕತ್ತೆಬೆನ್ನೂರು, ಮೊದಲಘಟ್ಟ, ಕೊಟ್ನೆಕಲ್‌ನ ದೇವಾಲಯಗಳ ಪೇದ್ಯಾಭಾಗವು ಕುಂಭಗಳಿಂದ ಕೂಡಿದೆ. ಆದರೆ ಬ್ಯಾಲಹುಣಸಿಯ ಕಲ್ಲೇಶ್ವರ ಮತ್ತು ವಿಠ್ಠಲಾಪುರದ ಹರಿಹರೇಶ್ವರ ದೇವಾಲಯಗಳ ದ್ವಾರದ ಬಲಬದಿಯಲ್ಲಿ ಶೈವ ದ್ವಾರಪಾಲಕರು, ಎಡಬದಿಯಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಈ ದ್ವಾರಪಾಲಕರ ಜೊತೆಯಲ್ಲಿ ಗಂಗೆ, ಯಮುನೆಯರ ಶಿಲ್ಪಗಳನ್ನು ಕೆತ್ತಿರುವುದನ್ನು ಹಡಗಲಿಯ ಕಲ್ಲೇಶ್ವರ ದೇವಾಲಯಗಳಲ್ಲಿ ನೋಡಬಹುದು. ಹೂವಿನಹಡಗಲಿಯ ಯೋಗನಾರಾಯಣ ಹಾಗೂ ಬಾಲಕೃಷ್ಣ ದೇವಾಲಯಗಳಲ್ಲಿ ಶಂಖ ಹಾಗೂ ಪದ್ಮನಿಧಿಗಳ ಅಲಂಕಾರವಿದೆ. ಕುರುವತ್ತಿ ಮಲ್ಲಿಕಾರ್ಜುನ, ಅಂಗೂರು ಕಲ್ಲೇಶ್ವರ ದೇವಾಲಯಗಳ ಪೇದ್ಯಾಭಾಗದಲ್ಲಿ ಪುಷ್ಪ, ಫಲಗಳನ್ನು ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ಪೇದ್ಯಾಭಾಗವು ಅಲಂಕೃತವಾಗಿಲ್ಲದಿದ್ದಾಗ ಅದನ್ನು 'ಪೇದ್ಯಾಪಿಂಡ'ವೆಂದು ಕರೆಯಲಾಗುತ್ತದೆ.

ಪೇದ್ಯಾಭಾಗದ ಮೇಲಿನ ದ್ವಾರವು ವಿವಿಧ ಶಾಖೆಗಳಿಂದ ಕೂಡಿದ್ದು, ಅಲಂಕೃತವಾಗಿರುತ್ತದೆ. ಅವುಗಳಲ್ಲಿ ರತ್ನ, ಪುಷ್ಪ, ವಲ್ಲಿ, ಸ್ತಂಭ, ನಾಗ, ವಿದ್ಯಾಧರ, ಮಿಥುನ, ವ್ಯಾಳ ಶಾಖೆಗಳಿಂದ ಕೂಡಿರುತ್ತದೆ. ಮಲ್ಲಿಕಾರ್ಜುನ ದೇವಾಲಯದ ನವರಂಗದ ಪ್ರವೇಶದ್ವಾರವು ಏಳು ಶಾಖೆಗಳಿಂದ ಕೂಡಿದ್ದರೆ, ಮಲ್ಲಿಕಾರ್ಜುನ ದೇವಾಲಯದ ಪೂರ್ವದ್ವಾರವು ಒಂಬತ್ತು ಶಾಖೆಗಳಿಂದ ಕೂಡಿದೆ. ಈ ತಾಲೂಕಿನ ವಿವಿಧ ಉಳಿದ ದೇವಾಲಯಗಳಲ್ಲಿ ಮೂರರಿಂದ ಐದು ಹೆಚ್ಚಾಗಿ ಕಂಡುಬರುತ್ತವೆ. ಈ ಶಾಖೆಗಳ ಎರಡು ಬದಿಗೆ ಜಾಲಂಧ್ರಗಳನ್ನು ಅಳವಡಿಸಿರುವುದನ್ನು ಕಾಣಬಹುದು.

ದ್ವಾರಬಂಧದ ಮೇಲ್ಭಾಗದಲ್ಲಿ ಪಟ್ಟಿಕೆಯಂತಹ ಭಾಗವನ್ನು 'ಲಲಾಟ' ಎಂದು ಕರೆಯುತ್ತಾರೆ. ಈ ಭಾಗದಲ್ಲಿ ಗಜಲಕ್ಷ್ಮಿ ಶಿಲ್ಪವಿರುವುದನ್ನು ತಾಲೂಕಿನ ವಿವಿಧ ದೇವಾಲಯಗಳಲ್ಲಿ ಕಾಣಬಹುದು.

ಆದರೆ ಸೋಮೇಶ್ವರ ಗರ್ಭಗುಡಿಯ ಲಲಾಟದಲ್ಲಿ ಜಿನ ಶಿಲ್ಪವಿದ್ದು, ಅದೇ ರೀತಿ ಹಿರೇಹಡಗಲಿಯ ಮಲ್ಲಿಕಾರ್ಜುನ ದೇವಾಲಯದ ಲಲಾಟದಲ್ಲಿ ಗಣಪತಿ ಶಿಲ್ಪ, ಕೊಟ್ನೆಕಲ್ ಲಕ್ಷ್ಮೀನರಸಿಂಹ ದೇವಾಲಯದ ಲಲಾಟದಲ್ಲಿ ತ್ರೈಪುರುಷರ ಶಿಲ್ಪ, ಹೊಳಲು ಗೌರಿಶಂಕರ, ವೀರಭದ್ರೇಶ್ವರ ದೇವಾಲಯ ಹಾಗೂ ಕತ್ತೆಬೆನ್ನೂರಿನ ಉಡುಚಲಮ್ಮ ದೇವಾಲಯಗಳಲ್ಲಿ ಲಲಾಟದಲ್ಲಿ ಹೂವಿನ(ಪದ್ಮ) ಶಿಲ್ಪವನ್ನು ಕೆತ್ತಲಾಗಿದೆ.

ಲಲಾಟದ ಮೇಲಿನ ಭಾಗಕ್ಕೆ 'ಉತ್ತರಾಂಗ'ವೆಂದು ಕರೆಯಲಾಗುತ್ತದೆ. ಲಕ್ಷ್ಮೀನಾರಾಯಣ ದೇವಾಲಯದ ಅಂತರಾಳದ ಮೇಲಿನ ಉತ್ತರಾಂಗ ಭಾಗದಲ್ಲಿ ಮಕರತೋರಣದ ಕೆಳಗೆ ಪತ್ನಿ ಮತ್ತು ವಾಹನ ಸಮೇತರಾಗಿರುವ ತ್ರಿಮೂರ್ತಿಗಳನ್ನು ಕೆತ್ತಲಾಗಿದೆ. ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ಅಂತರಾಳ ದ್ವಾರದ ಉತ್ತರಾಂಗ ಭಾಗದ ಮಕರತೋರಣ ಮಧ್ಯದಲ್ಲಿ ನಾಟ್ಯಶಿವನಿದ್ದು, ಶಿವನ ಎರಡೂ ಬದಿಗೂ ಬ್ರಹ್ಮ, ವಿಷ್ಣುವಿದ್ದಾರೆ. ಇದೇ ರೀತಿ ಅಲಂಕಾರ ಇನ್ನು ಕೆಲವು ದೇವಾಲಯಗಳ ಅಂತರಾಳ ಇಲ್ಲವೇ ನವರಂಗದ ದ್ವಾರಗಳಲ್ಲಿ ಕಂಡುಬರುತ್ತವೆ.

**ಸೋಪಾನ:** ಎತ್ತರವಾದ ದೇವಾಲಯಗಳನ್ನು ಹತ್ತಿಹೋಗಲು ಇರುವ ಮೆಟ್ಟಿಲುಗಳನ್ನು ಸೋಪಾನಗಳೆಂದು ಕರೆಯಲಾಗುತ್ತದೆ. 'ಸೋಪಾನ'ಗಳು ವಾಸ್ತುದೃಷ್ಟಿಯಿಂದ ಗಮನಾರ್ಹವಾಗಿದ್ದು, ಇವುಗಳಲ್ಲಿ ಅಶ್ವಪಾದ, ಫಲಕ, ಹಸ್ತಿಹಸ್ತ, ಪಕ್ಷಶಿಲಾ ಮುಂತಾದ ಅಂಗಗಳು, ವಲ್ಲಿಮಂಡಲ, ಶಂಖಮಂಡಲ, ತ್ರಿಖಂಡಾಕಾರ ಮುಂತಾದ ವಿಧಗಳು ಇವೆ. ಈ ಎಲ್ಲ ಭಾಗಗಳು ಶಿಲ್ಪಿಯ ಕೈಚಳಕದಿಂದ ದೇವಾಲಯದಲ್ಲಿ ಆಕರ್ಷಣೀಯ ಭಾಗವಾಗಿ ಕಾಣುತ್ತದೆ. ಹೊಳಗುಂದಿಯ ಸೋಮೇಶ್ವರ, ಮಾನ್ಯರಮಸಲವಾಡದ ಮುಕ್ತೇಶ್ವರ, ಮೈಲಾರದ ಮೈಲಾರಲಿಂಗೇಶ್ವರ, ಉತ್ತಂಗಿ ಶಂಕರಲಿಂಗೇಶ್ವರ, ಮೊದಲಘಟ್ಟ ಆಂಜನೇಯ, ಬೆಟ್ಟದ ಮಲ್ಲೇಶ್ವರ, ಸೋಗಿಯ ವೀರಭದ್ರ ದೇವಾಲಯಗಳ ಮುಖಮಂಟಪದ ಮುಂಭಾಗದಲ್ಲಿ ಈ ರೀತಿಯ ಸೋಪಾನಗಳಿವೆ. ಈ ಸೋಪಾನಗಳ ಎರಡೂ ಬದಿಗೂ ಆನೆಯ ಸೊಂಡಿಲಿನಂತೆ ಚಾಚಿರುವ 'ಹಸ್ತಿಹಸ್ತ'ಗಳಿವೆ. ಇವುಗಳಲ್ಲಿ ಪದ್ಮದ ಅಲಂಕರಣವನ್ನು ಮಾಡಲಾಗಿದೆ. ಹೂವಿನಹಡಗಲಿ ತಾಲೂಕಿನ ವಿವಿಧ ದೇವಾಲಯಗಳಲ್ಲಿ ಶಂಖ ಮಂಡಲ ಸೋಪಾನಗಳೇ ಅಧಿಕವಾಗಿವೆ.

**ದೀಪಸ್ತಂಭ, ಮಾನಸ್ತಂಭ, ಗರುಡಸ್ತಂಭ:** ದೇವಾಲಯದ ಮುಂಭಾಗದಲ್ಲಿ ಹೊರಗಡೆ ಸಾಮಾನ್ಯವಾಗಿ ಬಲಿಪೀಠ, ದೀಪಸ್ತಂಭ, ಗರುಡಸ್ತಂಭ, ಧ್ವಜಸ್ತಂಭ, ಮಾನಸ್ತಂಭ ಮುಂತಾದ ಸ್ತಂಭಗಳು ಇರುತ್ತವೆ. ಹಡಗಲಿ ತಾಲೂಕು ದೇವಾಲಯಗಳ ಹಾಗೂ ಬಸದಿಗಳ ಮುಂಭಾಗದಲ್ಲಿ ದೀಪಸ್ತಂಭ, ಗರುಡಗಂಭ, ಮಾನಸ್ತಂಭಗಳು ಕಂಡುಬರುತ್ತವೆ. ಮಾನ್ಯರಮಸಲವಾಡ ಹಾಗೂ ಸೋಗಿಯ ವೀರಭದ್ರ ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದ್ದರೆ, ಹಿರೇಹಡಗಲಿ ರೇವಣಸಿದ್ದೇಶ್ವರ ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭ, ಉತ್ತಂಗಿ ಆಂಜನೇಯ, ವರಕನಹಳ್ಳಿ ಆಂಜನೇಯ, ಅಂಕಲಿ ಆಂಜನೇಯ, ಮಾಗಳ ರಾಮ ದೇವಾಲಯ, ಕೆ.ಅಯ್ಯನಹಳ್ಳಿ ಆಂಜನೇಯ,

ಹಗರನೂರು ಆಂಜನೇಯ ದೇವಾಲಯಗಳ ಮುಂಭಾಗ ಹಾಗೂ ಇಟಗಿ ಆಂಜನೇಯ ದೇವಾಲಯದ ಮುಂಭಾಗ ಗರುಡಸ್ತಂಭಗಳಿವೆ. ಉತ್ತಂಗಿ ರಾಮಲಿಂಗೇಶ್ವರ ದೇವಾಲಯದ ಮುಂದೆ ಸಾದಾ ಸ್ತಂಭವಿದೆ. ಹೊಳಗುಂದಿ ಮರಳಸಿದ್ದೇಶ್ವರ, ಹೂವಿನಹಡಗಲಿ ಗೋಣಿ ಬಸವೇಶ್ವರ, ಹುಗಲೂರು ರಾಮಲಿಂಗೇಶ್ವರ ದೇವಾಲಯಗಳು, ದಾಸನಳ್ಳಿ ಬೆಟ್ಟದ ಮಲ್ಲಪ್ಪ, ತುಂಬಿನಕೇರಿ ವೀರಭದ್ರೇಶ್ವರ ದೇವಾಲಯಗಳ ಮುಂದೆ ಬಲಿಪೀಠ, ಗರುಡಸ್ತಂಭ, ದೀಪಸ್ತಂಭ, ಧ್ವಜಸ್ತಂಭಗಳಿವೆ. ಹೊಳಗುಂದಿಯ ಸೋಮೇಶ್ವರನ ದೇವಾಲಯ ಅಂದರೆ ಮಲ್ಲಿನಾಥನ ಜಿನಬಸದಿಯ ಮುಂದೆ ಮಾನಸ್ತಂಭವಿದೆ.

**ಪರಿವಾರಾಲಯ, ಪ್ರಾಕಾರ, ಮಹಾದ್ವಾರ:** ದೇವಾಲಯಗಳ ಸುತ್ತ ಪರಿವಾರಾಲಯಗಳಿದ್ದು, ಇವುಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರ ಇರುತ್ತದೆ. ಪ್ರಾಕಾರದ ಒಳಭಾಗದಲ್ಲಿ ಸುತ್ತ 'ಆವೃತ್ತ ಮಂಟಪ'ವೂ ಮುಂಭಾಗದಲ್ಲಿ 'ಪ್ರತೋಲಿ'ಯೂ ಇರುತ್ತದೆ. ಪ್ರಾಕಾರದ ಮಧ್ಯೆ ದ್ವಾರವಿದ್ದು(ಮಹಾದ್ವಾರ) ಅದರ ಮೇಲೆ ಗೋಪುರವಿರುತ್ತದೆ. ಮೈಲಾರಲಿಂಗೇಶ್ವರ ದೇವಾಲಯದ ಆವರಣದಲ್ಲಿ ಗಂಗಿಮಾಳಮ್ಮ, ನಾರಾಯಣ, ಕಾಳಿ, ವೀರಭದ್ರ ಮತ್ತು ಹಳೆ ಜುಂಜಪ್ಪನ ಗುಡಿಗಳಿದ್ದು, ಇವೆಲ್ಲವುಗಳನ್ನು ಒಳಗೊಂಡಂತೆ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಇದ್ದು, ಪೂರ್ವಕ್ಕೆ ಪ್ರವೇಶ ದ್ವಾರವಿದೆ. ಹಡಗಲಿಯ ಚನ್ನಕೇಶವ, ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಇದ್ದು, ದಕ್ಷಿಣ ಮತ್ತು ಪೂರ್ವದಲ್ಲಿ ಮಹಾದ್ವಾರಗಳಿವೆ. ಈ ದ್ವಾರಗಳ ಮೇಲಿನ ಮೂಲಗೋಪುರಗಳು ಈಗ ನಾಶವಾಗಿವೆ. ಇವುಗಳ ಪೂರ್ವದಲ್ಲಿ ಮಹಾದ್ವಾರಗಳಿವೆ. ಮಾಗಳದ ವೇಣುಗೋಪಾಲಸ್ವಾಮಿ ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದ್ದು. ಮಹಾದ್ವಾರವು ಪೂರ್ವದಿಕ್ಕಿನ ಕಡೆ ಇದೆ. ಪ್ರಾಕಾರ–ಗೋಪುರಗಳು ಸ್ಥಾನಕ್ಕೆ ತಕ್ಕಂತೆ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟಿವೆ ಅಲ್ಲದೆ, ಗೋಪುರಗಳು ಮೇಲ್ಕಟ್ಟಡದಂತೆ ವಿವಿಧ ತಲಗಳು ಮತ್ತಿತರೆ ಅಲಂಕರಣಗಳಿಂದ ಕೂಡಿರುತ್ತವೆ. ಸೋಗಿ ವೀರಭದ್ರ, ಮಾನ್ಯರ ಮಸಲವಾಡ ವೀರಭದ್ರ, ಹೊಳಗುಂದಿ, ಉತ್ತಂಗಿಯ ದೇವಾಲಯಗಳು ಪ್ರಾಕಾರಗಳನ್ನು ಹೊಂದಿವೆ.

ದೇವಾಲಯಗಳ ಈ ಎಲ್ಲಾ ಅಂಗಗಳು ಕಾಲಕ್ರಮೇಣ ನಿರ್ಮಾಣವಾಗಿರುವ ಭಾಗಗಳಾಗಿರುವುದಲ್ಲದೇ, ನಿರ್ಮಾಪಕನ ಶಕ್ತಿ ಮತ್ತು ಅವಶ್ಯಕತೆಗೆ ತಕ್ಕಂತೆ ರಚಿಸಲ್ಪಟ್ಟಿವೆ. ದೇವಾಲಯದಲ್ಲಿ ಅವಶ್ಯಕತೆಗಾಗಿ ಇರುವ ಬಹುಪಾಲು ಅಂಗಗಳು ಅಲಂಕಾರದ ಭಾಗಗಳಾಗಿ ಪರಿಣಮಿಸಿದುದರಿಂದ ವೈವಿಧ್ಯಮಯ ರಚನೆಗಳುಂಟಾಗಲು ಕಾರಣವಾಯಿತು. ಹಡಗಲಿ ತಾಲೂಕಿನ ಕೆಲವು ದೇವಾಲಯಗಳಲ್ಲಿ ಗರ್ಭಗುಡಿ ಹಾಗೂ ಕೆಲವು ಪ್ರಮುಖ ಭಾಗಗಳು ಮಾತ್ರ ಕಾಣಬರುತ್ತವೆ.

### ೫.೩.೧. ಶೈವ ದೇವಾಲಯಗಳು

ಹೂವಿನಹಡಗಲಿ ತಾಲೂಕಿನ ವಿವಿಧ ಕಡೆ ಶೈವ, ವೈಷ್ಣವ, ಶಾಕ್ತ ದೇವಸ್ಥಾನಗಳು, ಜಿನಬಸದಿಗಳು ಹಾಗೂ ಇತರೆ ದೇವಸ್ಥಾನಗಳು ಕಂಡುಬರುತ್ತವೆ. ಆದರೆ ತಾಲೂಕಿನ ಅನೇಕ

ಕಡೆ ಶೈವ ದೇವಸ್ಥಾನಗಳು ಪ್ರಧಾನವಾಗಿ ಕಂಡುಬರುತ್ತವೆ. ಅವುಗಳಲ್ಲಿ ಮಹತ್ವದ ದೇವಾಲಯಗಳ ವೈಶಿಷ್ಟ್ಯತೆ ಈ ಕೆಳಕಂಡಂತಿದೆ.

**೧. ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯ:** ಗ್ರಾಮದ ನೈರುತ್ಯಕ್ಕಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೦೫೭(೧೧ನೆಯ ಶತಮಾನ)ಕ್ಕೆ ಸೇರಿದ್ದು, ಇದು ಉತ್ತಮ ಸ್ಥಿತಿಯಲ್ಲಿದೆ. ಇಲ್ಲಿರುವ ಕ್ರಿ.ಶ.೧೦೫೭ರ ಶಾಸನದಲ್ಲಿ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲದೇವ, ಮಹಾಮಾತ್ಯ ದೇಮರಸ ದೇಮೇಶ್ವರ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವಿದೆ.

ಮೂಲತಃ ತ್ರಿಕೂಟಾಚಲವಾದ ಈ ದೇವಾಲಯವನ್ನು ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ತಲವಿನ್ಯಾಸದಲ್ಲಿ ಮೂರು ಗರ್ಭಗೃಹಗಳು, ಅಂತರಾಳಗಳು, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದಲ್ಲಿ ಮೂರು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಶಿವಲಿಂಗವು ಬ್ರಹ್ಮಪೀಠ, ವಿಷ್ಣುಪೀಠ, ಪಾಣಿಪೀಠ, ಜಲಹರಿವು ಮತ್ತು ಲಿಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಪದ್ಮಾದಳಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು ಪದ್ಮ, ಲತಾ, ಬಳ್ಳಿ, ಕಂಬ, ಹೂಬಳ್ಳಿ, ಬಳೆಗಳಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಲಲಾಟದ ಮೇಲ್ಭಾಗವು ಮುಂಚಾಚಿಕೊಂಡಿದ್ದು ಇಲ್ಲಿ ಬ್ರಹ್ಮ, ಕೇಶವ, ಮಹೇಶ್ವರರ ಶಿಲ್ಪಗಳು ಸಮಭಂಗಿಯಲ್ಲಿವೆ. ಇವುಗಳ ಕೊನೆ ಭಾಗದಲ್ಲಿ ಗಣೇಶ ಕಾರ್ತಿಕೇಯರಿದ್ದಾರೆ. ಇದರ ಮುಂಚಾಚಿದ ಪಟ್ಟಿಕೆಯಲ್ಲಿ ಮಯೂರನ ಉಬ್ಬುಶಿಲ್ಪ, ಗೋಪುರ, ನಾಗ-ನಾಗಿಣಿಯರ, ದರ್ಪಣ ಸುಂದರಿ, ಮಹಿಷಮರ್ದಿನಿ ಹಾಗೂ ಭೈರವನ ಶಿಲ್ಪಗಳಿವೆ. ಗರ್ಭಗೃಹದ ಬಾಗಿಲುವಾಡದ ಇಕ್ಕೆಲಗಳಲ್ಲಿ ಚೌಕಾಕಾರವಾಗಿರುವ ಜಾಲಂಧ್ರವಿದೆ. ಕೆಳಗೆ ಪೂರ್ಣಕುಂಭಗಳಿವೆ.

ಉತ್ತರ ದಿಕ್ಕಿನಲ್ಲಿರುವ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸಮಭಂಗಿಯಲ್ಲಿರುವ ಸ್ಥಾನಿಕ ಕೇಶವನ ಮೂರ್ತಿಶಿಲ್ಪವಿದೆ. ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯವರಿದ್ದಾರೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ನವರಂಗದ ಮಧ್ಯದಲ್ಲಿ ವೇದಿಕೆಯ ಮೇಲಿರುವ ನಾಲ್ಕು ಸ್ವತಂತ್ರ ಕಂಬಗಳು ಪಟ್ಟ ದೇಶ, ಪಾದ, ಹದಿನಾರು-ಎಂಟು-ಹದಿನಾರು ಕೋನ, ಕಲಶ, ವೃತ್ತ, ಘಟ, ಪುಷ್ಪ ಬೋದಿಗೆಗಳಿಂದ ಕೂಡಿವೆ. ನವರಂಗದಲ್ಲಿ ಸಪ್ತಮಾತೃಕೆ, ಗಣೇಶ, ನಂದಿ, ಮಹಿಷಮರ್ದಿನಿ, ವೀರಭದ್ರ, ಆಲಿಂಗನ ಚಂದ್ರಶೇಖರಮೂರ್ತಿ, ಸರಸ್ವತಿಯರ ಶಿಲ್ಪಗಳಿವೆ. ಪದ್ಮಾಲಂಕೃತ ಭುವನೇಶ್ವರಿ ಇದೆ.

ದಕ್ಷಿಣಾಭಿಮುಖವಾಗಿರುವ ಪ್ರವೇಶದ್ವಾರವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳಲ್ಲಿ ಹೂಬಳ್ಳಿಗಳು, ಪದ್ಮ ಹಿಡಿದು ನಿಂತಿರುವ ಸ್ತ್ರೀಯರು, ಶೈವ ದ್ವಾರಪಾಲಕರು, ಬಳೆಗಳು, ಪದ್ಮಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಲಲಾಟಬಿಂಬದ ಮೇಲ್ಭಾಗವು ಮುಂಚಾಚಿ

ಕೊಂಡಿದ್ದು, ಇದರ ಮೇಲೆ ಬ್ರಹ್ಮ, ವಿಷ್ಣು, ಮಹೇಶ್ವರ, ಗಣೇಶನ ಶಿಲ್ಪ ಮತ್ತು ಗೋಪುರಗಳಿವೆ. ಈ ಭಾಗದ ಮುಖಮಂಟಪದಲ್ಲಿ ಕಕ್ಷಾಸನ ಮೇಲಿರುವ ಎರಡು ಕಂಬಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಈ ಕಂಬಗಳು ಪೀಠ, ಅಷ್ಟಪಟ್ಟಿಕೆ, ವೃತ್ತ, ಕಲಶ, ಪಾಟಿಕಾ, ಘಟ, ಬೋದಿಗೆಗಳನ್ನು ಹೊಂದಿವೆ. ಚತುಷ್ಕೋನಾಕಾರದಲ್ಲಿ ಕಂಬಗಳ ಪಾದಭಾಗದಲ್ಲಿ ನಾಟ್ಯ ಭಂಗಿ ಶಿವ, ಭೈರವ, ಸೂರ್ಯ, ನರಸಿಂಹ, ಹಿರಣ್ಯಕಶ್ಯಪುವಿನ ಸಂಹಾರ, ವರಾಹ ಇತ್ಯಾದಿ ಉಬ್ಬು ಕೆತ್ತನೆಗಳಿವೆ. ಪೂರ್ವ ಪ್ರವೇಶದ್ವಾರವು ದಕ್ಷಿಣ ಪ್ರವೇಶದ್ವಾರದ ಲಕ್ಷಣಗಳನ್ನೇ ಹೊಂದಿದೆ.

ದೇವಾಲಯದ ಪ್ರಾಕಾರದಲ್ಲಿ ಈಗ ಪ್ರತ್ಯೇಕಗೊಂಡಿರುವ ಸೂರ್ಯನಾರಾಯಣ ದೇವಾಲಯವು ಏಕಕೋಣೆಯನ್ನು ಹೊಂದಿದೆ. ಗರ್ಭಗೃಹದಲ್ಲಿ ಅಶ್ವಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಸೂರ್ಯನ ಮೂರ್ತಿಶಿಲ್ಪವಿದೆ. ಸೂರ್ಯನ ಎಡಬಲ ಭಾಗದಲ್ಲಿ ಉಷಾ-ಪ್ರತ್ಯುಷ ದೇವಿಯರು ನಿಂತಿದ್ದಾರೆ. ಇವರ ಸುತ್ತ ಪ್ರಭಾವಳಿಯ ರಚನೆಯಿದೆ. ಪ್ರಭಾವಳಿಯ ಮೇಲ್ಭಾಗದಲ್ಲಿ ದಶವತಾರದ ನವಶಿಲ್ಪಗಳಿವೆ. ಪೀಠದ ಜಲಹರಿವು ಬಲಭಾಗಕ್ಕಿದೆ. ಗರ್ಭಗೃಹದಲ್ಲಿ ಪದ್ಮಾಕಾರದ ಭುವನೇಶ್ವರವಿದೆ. ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳಲ್ಲಿ ಪದ್ಮ, ಲತಾಬಳ್ಳಿ, ಕಂಬ, ಬಳೆಗಳ ಅಲಂಕಾರವಿದೆ. ಗರ್ಭಗೃಹದ ಮುಂದೆ ತೆರೆದ ಮುಖಮಂಟಪವಿದೆ. ಮುಖಮಂಟಪದಲ್ಲಿ ಒಂದು ಅಡಿ ಎತ್ತರವುಳ್ಳ ಪೀಠದ ಮೇಲೆ ಮೂರು ಅಡಿ ಎತ್ತರವುಳ್ಳ ನಂದಿಶಿಲ್ಪವಿದೆ. ಭುವನೇಶ್ವರವು ಪದ್ಮಾಕಾರದಲ್ಲಿದೆ. ಮುಖಮಂಟಪದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪದ್ಮಪೀಠ, ಪಾದ, ವೃತ್ತ, ದಂಡ, ಕಲಶ, ಪಾಟಿಕಾ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ.

ದೇವಾಲಯದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಠ, ಕುಮುದ ಹಾಗೂ ಪದ್ಮಗಳ ಕೆತ್ತನೆಗಳಿವೆ. ಭಿತ್ತಿಯು ಕಂಬ, ದೇವಕೋಷ್ಠಗಳಿಂದ ಕೂಡಿದೆ. ಎರಡು ಅರ್ಧಗಂಬಗಳ ಮಧ್ಯದಲ್ಲಿರುವ ದೇವಕೋಷ್ಠಗಳ ಮೇಲೆ ಕದಂಬ ನಾಗರ ಶೈಲಿಯುಳ್ಳ ಶಿಖರ ಭಾಗವಿದೆ. ಇದೇ ರೀತಿಯ ದೇವಕೋಷ್ಠಗಳು ಮೇಲಿನ ಚಜ್ಜಾ ಭಾಗ ಹಾಗೂ ಶಿಖರಗಳಲ್ಲಿವೆ. ದೇವಾಲಯದ ಭಿತ್ತಿ ಹಾಗೂ ಶಿಖರದ ಭಾಗಗಳಲ್ಲಿ ಶಿವ, ಸೂರ್ಯ, ವಿಷ್ಣು, ಭೈರವ, ನಟರಾಜ, ವರಾಹ, ಯಕ್ಷ-ಯಕ್ಷಿ, ಹಾರಾಡುವ ಗಂಧರ್ವರು, ಆನೆ ಮತ್ತು ವಿವಿಧ ಭಂಗಿಯ ಪುರುಷರ ಉಬ್ಬುಶಿಲ್ಪಗಳಿವೆ. ಗರ್ಭಗೃಹದ ಕೂಟ ಶಿಖರದ ಮೇಲೆ ಕಲ್ಲಿನ ಕಳಸವಿದೆ. ಇದರ ಪ್ರಾಕಾರದಲ್ಲಿ ಸುಮಾರು ೬ ಅಡಿ ಎತ್ತರದ ಶಿವ ಮತ್ತು ಪಾರ್ವತಿಯರ ದೊಡ್ಡ ಮೂರ್ತಿಶಿಲ್ಪಗಳಿವೆ.

**೨. ಕುರುವತ್ತಿ ಮಲ್ಲಿಕಾರ್ಜುನ ದೇವಾಲಯ:** ಕುರುವತ್ತಿ ಗ್ರಾಮದ ಮಧ್ಯದಲ್ಲಿರುವ ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಉತ್ತಮ ಸ್ಥಿತಿಯಲ್ಲಿದೆ. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಇದು ಅವರ ಕಾಲಾವಧಿಯಲ್ಲಿಯೇ ಅಂದರೆ ಕ್ರಿ.ಶ.೧೧೮೫ರಲ್ಲಿ ನಿರ್ಮಾಣವಾಗಿದ್ದು, ಅತ್ಯಂತ ಸುಂದರವಾಗಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಈ ದೇವಾಲಯ ಕೇಂದ್ರ ಪುರಾತತ್ವ ಇಲಾಖೆ ಅಧೀನಕ್ಕೊಳಪಟ್ಟಿದೆ. ಆಯತಾಕಾರದಲ್ಲಿ ನೆಲಮಟ್ಟದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯ ದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಹಾಗೂ ನಂದಿಮಂಟಪಗಳಿವೆ.

ತೆರೆದ ಅಂತರಾಳದಲ್ಲಿ ಎರಡು ಸ್ವತಂತ್ರ ಕಂಬಗಳ ಮೇಲೆ ಮಕರತೋರಣವಿದ್ದು, ಇದರಲ್ಲಿ ಶಿವ, ಬ್ರಹ್ಮ, ಕೇಶವರು ಹಾಗೂ ಅಕ್ಕಪಕ್ಕದಲ್ಲಿ ಚಾಮರಧಾರೆಯರ ಉಬ್ಬುಶಿಲ್ಪಗಳು ಸಮಭಂಗಿಯಲ್ಲಿವೆ.

ಚೌಕಾಕಾರ ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರವುಳ್ಳ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿ ಒಂದರ ಮೇಲೊಂದರಂತೆ ಒಟ್ಟು ಮೂರು ದೇವಕೋಷ್ಠಗಳಿವೆ. ದೇವಕೋಷ್ಠಗಳ ಎರಡು ಬದಿಯಲ್ಲಿ ಅರ್ಧಗಂಬದ ರಚನೆಗಳಿವೆ. ಇಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ಪದ್ಮ, ನಾಗ-ನಾಗಿಣಿ ನೃತ್ಯಗಾರ್ತಿಯರ, ಕಂಬ, ಲತಾಬಳ್ಳಿ, ತೋರಣಗಳಿಂದ ಕೂಡಿವೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಕೆಳಭಾಗದಲ್ಲಿ ಶೈವಪಾಲಕರಿದ್ದಾರೆ.

ಅಂತರಾಳದಲ್ಲಿ ಭೈರವ, ಮದನಿಕೆಯರು, ನಂದಿ, ಸೂರ್ಯ, ಕೇಶವ, ಬ್ರಹ್ಮ ಮತ್ತು ಶಿವನ ಮೂರ್ತಿಶಿಲ್ಪಗಳಿವೆ. ಇವುಗಳನ್ನು ಬೇರೆಡೆಯಿಂದ ತಂದು ಇಟ್ಟಿರಬೇಕು. ತೆರೆದ ಅಂತರಾಳದಲ್ಲಿ ಎರಡು ಸ್ವತಂತ್ರಗಂಬಗಳ ಮೇಲೆ ವಿಶಾಲವಾದಂತಹ ಮಕರತೋರಣವಿದೆ. ಈ ತೋರಣದ ಮಧ್ಯದಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ಉಬ್ಬುಶಿಲ್ಪಗಳು ಸಮಭಂಗಿಯಲ್ಲಿವೆ.

ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರಗಂಬಗಳಿವೆ. ಈ ಕಂಬಗಳು ಪದ್ಮಪೀಠ, ಪಾದ, ವೃತ್ತ, ಪಟ್ಟಿಕೆ, ದಂಡ, ಕಲಶ, ಪಾಟಿಕ, ಘಟ, ಮಂಡಿ, ಫಲಕ, ಚಿತ್ರ ಬೋದಿಗೆಯನ್ನು ಹೊಂದಿವೆ. ಪಾದಭಾಗದ ನಾಲ್ಕು ಪಟ್ಟಿಕೆಯಲ್ಲಿ ಶಿವ, ವಿಷ್ಣು, ಕೇಶವ, ಬ್ರಹ್ಮ, ಸೂರ್ಯ, ಕಾಳಿ, ಗಣೇಶ ಹಾಗೂ ಸರಸ್ವತಿ, ದರ್ಪಣ ಸುಂದರಿ ಇನ್ನೂ ಮುಂತಾದ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಮಧ್ಯದಲ್ಲಿ ಬಾಳೆಹೂವಿನ ಮೊಗ್ಗುವಿನಾಕಾರದ ರಚನೆಯ ಜೊತೆಗೆ ಪದ್ಮದಳವನ್ನು ಹೊಂದಿರುವ ಭುವನೇಶ್ವರವಿದೆ. ಸಭಾಮಂಟಪದಲ್ಲಿ ಶಿವ, ಬ್ರಹ್ಮ, ಗಣೇಶ, ಭೈರವ, ಸೂರ್ಯ, ವಿಷ್ಣುವಿನ ಸುಂದರ ಮೂರ್ತಿಶಿಲ್ಪಗಳಿವೆ. ಸಭಾಮಂಟಪಕ್ಕೆ ಪೂರ್ವ-ಪಶ್ಚಿಮವಾಗಿ ಮತ್ತೆರಡು ಪ್ರವೇಶ ದ್ವಾರಗಳಿವೆ. ದಕ್ಷಿಣಾಭಿಮುಖವಾಗಿರುವ ಪ್ರಮುಖ ಪ್ರವೇಶದ್ವಾರವು ಏಳು ಶಾಖೆಗಳಿಂದ ಕೂಡಿದೆ. ಶಾಖೆಗಳಲ್ಲಿ ವಜ್ರಾಕಾರ, ನಾಗ-ನಾಗಿಣಿ-ಮಿಥುನಶಿಲ್ಪ, ಹಂಸ, ನೃತ್ಯಗಾರ್ತಿಯರು, ಮದನಿಕೆ ಮತ್ತು ಹೂಬಳ್ಳಿಗಳಿವೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರ, ನೃತ್ಯಗಾರ್ತಿಯರ, ವರಾಹ, ದರ್ಪಣ ಸುಂದರಿ, ಭೈರವನ ಉಬ್ಬುಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಮುಂಚಾಚಿದ ಕಪೋತವಿದ್ದು, ಅದರ ಮೇಲೆ ನಾಗರಶೈಲಿಯ ಏಳು ಶಿಖರಗಳಿವೆ.

ಉತ್ತರ-ದಕ್ಷಿಣಾಭಿಮುಖವಾಗಿರುವ ಎರಡು ಮುಖಮಂಟಪಗಳ ದ್ವಾರಶಾಖೆಗಳು ಬಹುತೇಕವಾಗಿ ಈ ಮೇಲಿನ ಅಲಂಕರಣೆಯನ್ನು ಹೊಂದಿವೆ. ಮುಖಮಂಟಪದ ಕಕ್ಷಾಸನದ ಮೇಲಿರುವ ಕಂಬಗಳು ಅನೇಕ ಪಟ್ಟಿಕೆಗಳನ್ನು ಹೊಂದಿವೆ. ಪೂರ್ವ ಪ್ರವೇಶದ್ವಾರದ ಕಂಬಗಳ ಮೇಲ್ಭಾಗದಲ್ಲಿ ಅಷ್ಟದಿಕ್ಪಾಲಕರ, ನೃತ್ಯಗಾರ್ತಿಯರ, ಮದನಿಕೆಯರ ಉಬ್ಬುಶಿಲ್ಪಗಳಿವೆ.

ದೇವಾಲಯದ ಪಾರ್ಶ್ವನೋಟದಲ್ಲಿ ಅಧಿಷ್ಠಾನವು ಅನೇಕ ಪಟ್ಟಿಕೆಗಳಿಂದ ಕೂಡಿದೆ. ಅಧಿಷ್ಠಾನವು ಪ್ರಮುಖವಾಗಿ ಉಪಾನ, ಜಗತಿ, ಗಳಪೀಠ, ಕುಮುದ, ಪದ್ಮಗಳನ್ನು ಹೊಂದಿದೆ. ಹಾಗೆಯೇ ಕಪೋತ, ಸಿಂಹ, ಮಕರತೋರಣಗಳು ಅಧಿಷ್ಠಾನ ಭಾಗದಲ್ಲಿವೆ. ದಕ್ಷಿಣ ಭಾಗದ ದ್ವಾರದ ಮುಂದೆ ಛತ್ರಿ–ಚಾಮರಗಳಿಂದ, ರಾಜಲಾಂಛನವನ್ನು ಹೊಂದಿದ ಸರ್ವಾಲಂಕಾರ ಭೂಷಿತನಾದ ಲಲಿತಾಸನದಲ್ಲಿ ಕುಳಿತ ಒಬ್ಬ ಪುರುಷ ಹಾಗೂ ಸ್ತ್ರೀ ಶಿಲ್ಪಗಳಿವೆ. ಇದು ಒಂದನೆಯ ಸೋಮೇಶ್ವರ ಹಾಗೂ ಅವನ ಪತ್ನಿಯರ ಪ್ರತಿರೂಪ ಎಂಬುದು ವಿದ್ವಾಂಸರ ಅಭಿಪ್ರಾಯ. ಭಿತ್ತಿಯಲ್ಲಿ ದೇವಕೋಷ್ಠ, ಅರ್ಧಗಂಬ, ಗೋಪುರಗಳ ರಚನೆಗಳಿವೆ. ಎರಡು ಅರ್ಧಗಂಬಗಳ ಮಧ್ಯದಲ್ಲಿರುವ ದೇವಕೋಷ್ಠದ ಮೇಲೆ ಶಿಖರದ ರಚನೆಯಿದೆ. ಹಾಗೆಯೇ ಅನೇಕ ತೋರಣ, ಹೂಬಳ್ಳಿಯ ರಚನೆಗಳು ಭಿತ್ತಿಯ ಭಾಗದಲ್ಲಿವೆ. ಈ ಕೋಷ್ಠಗಳಲ್ಲಿ ಮಹಿಷಮರ್ದಿನಿ, ಶಿವನ ಮೂರ್ತಿಶಿಲ್ಪಗಳಿವೆ. ಭಿತ್ತಿಯಲ್ಲಿ ಅಷ್ಟದಿಕ್ಪಾಲಕರ ಉಬ್ಬುಕೆತ್ತನೆಗಳಿವೆ. ಭಿತ್ತಿಯಲ್ಲಿ ಆನೆಗಳು, ಯಕ್ಷರು, ಹಾರಾಡುವ ಗಂಧರ್ವರು, ಹೂಬಳ್ಳಿಗಳು, ಭೈರವ, ಗಣೇಶ, ಕಾರ್ತಿಕೇಯ, ರಾಮ, ಲಕ್ಷ್ಮಣ, ವಾಲಿ-ಸುಗ್ರೀವರು ಯುದ್ಧ ಮಾಡುತ್ತಿರುವ ದೃಶ್ಯ, ಆಂಜನೇಯ ಹಾಗೂ ನೃತ್ಯಭಂಗಿಯ ಉಬ್ಬು ಕೆತ್ತನೆಗಳಿವೆ.

ಪ್ರಸ್ತರದಲ್ಲಿ ಕೀರ್ತಿಮುಖ, ಮಕರತೋರಣ, ಹೂಬಳ್ಳಿಗಳ, ಆನೆಗಳ ಉಬ್ಬುಶಿಲ್ಪಗಳ ಜೊತೆಗೆ ಕಪೋತ, ಪದ್ಮ ಭಾಗಗಳಿವೆ. ಪ್ರಸ್ತರದ ಮೇಲೆ ವೇಸರಶೈಲಿಯ ಕೂಟಶಿಖರವಿದೆ. ಇದಕ್ಕೆ ಮುಂಚಾಚಿದ ಸುಖನಾಸಿಯನ್ನು ನಿರ್ಮಿಸಲಾಗಿದೆ. ಶಿಖರವು ಗ್ರೀವ, ಶಿಖರ, ಸ್ತೂಪಿ ಭಾಗಗಳನ್ನು ಹೊಂದಿದೆ. ಶಿಖರ ಭಾಗದಲ್ಲಿ ಮಿಥುನಶಿಲ್ಪ, ಮದನಿಕೆ, ಲಜ್ಜಾಗೌರಿ, ದಕ್ಷ, ಯಕ್ಷ-ಯಕ್ಷಿಣಿಯರ ಉಬ್ಬುಶಿಲ್ಪಗಳಿವೆ.

ಮಲ್ಲಿಕಾರ್ಜುನ ದೇವಾಲಯದ ಮುಂಭಾಗದಲ್ಲಿ ನಂದಿಮಂಟಪವಿದೆ. ನಂದಿಮಂಟಪದ ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರ, ಐದು ಅಡಿ ಉದ್ದದ ಬೃಹತ್ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಮಂಟಪದ ಬಾಗಿಲುವಾಡವು ಅನೇಕ ಶಾಖೆಗಳಿಂದ ಕೂಡಿದೆ. ಗರ್ಭಗೃಹದ ಮುಂಭಾಗದಲ್ಲಿ ವಿಶಾಲವಾದ ತೆರೆದ ಮಂಟಪವಿದೆ. ಮಂಟಪದಲ್ಲಿನ ಸ್ವತಂತ್ರಗಂಬಗಳು ಅನೇಕ ಪಟ್ಟಿಕೆಗಳನ್ನು ಒಳಗೊಂಡಿವೆ.

ಕುರುವತ್ತಿಯಲ್ಲಿ ಸಿಂಹಾಸನ ಕಟ್ಟೆಯು ಉತ್ತರದಿಂದ ದಕ್ಷಿಣಕ್ಕೆ ೧೧೨ ಅಡಿ ಉದ್ದ ಪೂರ್ವದಿಂದ ಪಶ್ಚಿಮಕ್ಕೆ ೪೪ ಅಡಿ ಅಗಲವಾಗಿದೆ. ೮ ಅಡಿ ಎತ್ತರವಾಗಿದ್ದು ಆಯತಕಾರದಲ್ಲಿದೆ. ಈ ಕಟ್ಟೆಯ ಮೇಲೆ ಕುಳಿತು ಚಾಲುಕ್ಯ ಅರಸರು ಚಿಕ್ಕ ಅರಸರಲ್ಲಿ ಉಂಟಾದ ಜಗಳಗಳನ್ನು ಬಗೆಹರಿಸುತ್ತಿದ್ದರು.

**೩. ಹೂವಿನಹಡಗಲಿಯ ಕಲ್ಲೇಶ್ವರ ದೇವಾಲಯ:** ನಗರದ ಒಳಭಾಗದಲ್ಲಿರುವ ಇದು ಪೂರ್ವಕ್ಕೆ ಮುಖ ಮಾಡಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.

೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಮಿಶ್ರಿತ ನೀಲಿ ಛಾಯೆಯ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಕೇಂದ್ರ ಪುರಾತತ್ವ ಇಲಾಖೆಯ ಸಂರಕ್ಷಣೆಯಲ್ಲಿರುವ ಈ ದೇವಾಲಯ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಎರಡು ಮುಖಮಂಟಪಗಳಿಂದ ಕೂಡಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಮೂರು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಒಳಭಾಗದ ಪೂರ್ವ ಭಿತ್ತಿಯು ಮುಂಚಾಚಿದೆ. ಉತ್ತರಭಿತ್ತಿಯಲ್ಲಿ ದೇವಕೋಷ್ಠವಿದೆ. ಕೋಷ್ಠದಲ್ಲಿ ಶಿವ-ಪಾರ್ವತಿಯರ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡ ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು, ಲತಾ, ಬಳ್ಳಿ, ನೃತ್ಯನಿರತ ಸ್ತ್ರೀ, ಬಳೆ, ಹೂ–ಬಳ್ಳಿಗಳಿಂದ ಕೂಡಿವೆ. ಕೆಳಭಾಗದಲ್ಲಿ ಸ್ತ್ರೀ, ವರಾಹ, ಕನ್ನಡಿ ಹಿಡಿದ ಸ್ತ್ರೀ ಮತ್ತು ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳ ಸುತ್ತ ಪ್ರಭಾವಳಿ ರಚನೆಯಿದೆ. ಲಲಾಟದಲ್ಲಿ ಗಜಲಕ್ಷ್ಮಿಯಿದ್ದಾಳೆ. ಲಲಾಟದ ಮೇಲ್ಭಾಗವು ಮುಂಚಾಚಿಕೊಂಡಿದೆ. ಗರ್ಭಗೃಹದ ಭುವನೇಶ್ವರವು ವೃತ್ತಾಕಾರದ ರಚನೆಯನ್ನು ಹೊಂದಿದೆ. ಅಂತರಾಳದಲ್ಲಿ ಪದ್ಮದಳದ ಭುವನೇಶ್ವರವಿದೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ವಜ್ರಾಕೃತಿಯ ರಚನೆಯುಳ್ಳ ಜಾಲಂಧ್ರವಿದೆ. ಜಾಲಂಧ್ರದ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ನವರಂಗ ಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಕಂಬಗಳು ಪದ್ಮಪೀಠ, ಪಾದ, ಅಷ್ಟಪಟ್ಟಿಕೆ, ವೃತ್ತ, ಕಲಶ, ಪಾಟಿಕಾ, ಘಟ, ಮಂಡಿ, ಫಲಕ, ವೀರಕಂಠ ಮತ್ತು ಬೋದಿಗೆಗಳನ್ನು ಹೊಂದಿವೆ. ಈ ಕಂಬಗಳ ಪಾದದ ನಾಲ್ಕು ಪಟ್ಟಿಕೆಯಲ್ಲಿ ಶಿವ, ವಿಷ್ಣು, ಕೇಶವ, ನರಸಿಂಹ, ಹಿರಣ್ಯಕಶ್ಯಪುವಿನ ಸಂಹಾರ, ಸೂರ್ಯ, ಬ್ರಹ್ಮ, ಗಣೇಶ ಇತ್ಯಾದಿ ಉಬ್ಬುಶಿಲ್ಪಗಳಿವೆ. ನವರಂಗದ ಮಧ್ಯದಲ್ಲಿ ಪದ್ಮದಳದಿಂದ ಕೂಡಿದ ಭುವನೇಶ್ವರವಿದೆ. ನವರಂಗದಲ್ಲಿ ಗರ್ಭಗೃಹಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

ನವರಂಗಕ್ಕೆ ಎರಡು ಪ್ರವೇಶದ್ವಾರಗಳಿವೆ. ದಕ್ಷಿಣದ ಪ್ರವೇಶದ್ವಾರವು ಏಳು ಶಾಖೆಗಳಿಂದ ಕೂಡಿದೆ. ಶಾಖೆಗಳಲ್ಲಿ ಹೂಸುರುಳಿಗಳು, ನೃತ್ಯಗಾರ್ತಿಯರು, ವಾದ್ಯಗಾರ, ಪದ್ಮ, ನವಿಲು, ಆನೆ, ಸಿಂಹ, ಯಕ್ಷ, ಪೂರ್ಣಕುಂಭ, ಗಣೇಶ, ನಾಗ-ನಾಗಿಣಿಯರ ಉಬ್ಬುಕೆತ್ತನೆಗಳಿವೆ. ದ್ವಾರಶಾಖೆಯ ಕೆಳಭಾಗದಲ್ಲಿ ಶೈವ ದ್ವಾರಪಾಲಕರು, ದರ್ಪಣ ಸುಂದರಿಯರ ಕೆತ್ತನೆಗಳಿವೆ. ದಕ್ಷಿಣಕ್ಕಿರುವ ಮುಖಮಂಟಪದ ಸುತ್ತಲೂ ಕಕ್ಷಾಸನವಿದೆ. ಪಶ್ಚಿಮಕ್ಕಿರುವ ಪ್ರವೇಶದ್ವಾರವು ಏಳು ಶಾಖೆಗಳಿಂದ ಕೂಡಿದ್ದು, ಮುಂಭಾಗದಲ್ಲಿ ಮುಖಮಂಟಪವಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಕೆತ್ತನೆಯಿದೆ.

ದೇವಾಲಯದ ಪಾರ್ಶ್ವನೋಟವನ್ನು ನೋಡಿದಾಗ, ದೇವಾಲಯಕ್ಕೆ ಉತ್ತಮವಾದ ಅಧಿಷ್ಠಾನ ಭಾಗವಿದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಕುಮುದ, ಗಳಪೀಠ, ಕಪೋತ ಭಾಗಗಳಿವೆ ಹಾಗೂ ಆನೆ, ಸಿಂಹ, ಮಕರತೋರಣದ ಉಬ್ಬುಕೆತ್ತನೆಗಳಿವೆ. ಭಿತ್ತಿಯಲ್ಲಿ ಕಂಬ, ಪಂಜರಕೋಷ್ಠ, ಗೋಪುರ, ಅರ್ಧಗಂಬಗಳ ಮಧ್ಯ ವೇಸರಶೈಲಿಯ ಕೋಷ್ಠಗಳು, ಇಕ್ಕೆಲಗಳಲ್ಲಿ ಹಿಂಜರಿತ ಹಾಗೂ ಮುಂಜರಿತಗಳಿವೆ. ಪ್ರಸ್ತರದಲ್ಲಿ ಆನೆಕಾಳಗ, ತೋರಣಗಳ ಚಿತ್ರಣವಿದೆ. ಪ್ರಸ್ತರದ

ಮೇಲ್ಭಾಗದಲ್ಲಿ ಐದು ಹಂತದ ವೇಸರಶೈಲಿಯ ಶಿಖರವಿದೆ. ಶಿಖರವು ಗ್ರೀವ, ಶಿಖರ, ಸ್ತೂಪಿ ಭಾಗಗಳನ್ನು ಹೊಂದಿವೆ. ಪ್ರತಿ ಹಂತದ ಸುತ್ತಲೂ ಚೈತ್ಯಾಲಂಕಾರಗಳಿವೆ. ಕೂಟ ಶಿಖರದಲ್ಲಿರುವ ಚೈತ್ಯಗಳಲ್ಲಿ ಭೈರವ, ಶಿವ, ವಿಷ್ಣು, ಕೀರ್ತಿಮುಖ, ಹೂಬಳ್ಳಿ, ಮಕರತೋರಣ, ದರ್ಪಣ ಸುಂದರಿ, ನೃತ್ಯನಿರತ ಸ್ತ್ರೀಯರ ಉಬ್ಬುಶಿಲ್ಪಗಳಿದ್ದು, ಅಧ್ಯಯನ ಯೋಗ್ಯವಾಗಿವೆ.

**೪. ಹೂವಿನಹಡಗಲಿಯ ಪಾತಾಳೇಶ್ವರ ದೇವಾಲಯ:** ನಗರದ ಕೇಶವ ದೇವಾಲಯದ ಮುಂಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್‌ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಕಲ್ಲೇಶ್ವರ ದೇವಾಲಯ ಎಂದು ಕರೆಯಲ್ಪಡುವ ಇದು ಏಕ ಕೋಣೆಯನ್ನುಳ್ಳ ದೇವಾಲಯವಾಗಿದ್ದು, ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಶಿವಲಿಂಗಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿ ಪದ್ಮರಚನೆಯುಳ್ಳ ಭುವನೇಶ್ವರವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿಕೊಂಡಿದೆ. ಈ ದೇವಾಲಯವು ನೆಲದಡಿಯಲ್ಲಿದೆ. ಇದರ ಬಾಗಿಲುವಾಡ ಮತ್ತು ಉಳಿದ ಭಾಗಗಳು ಸರಳವಾಗಿವೆ.

**೫. ಹೂವಿನಹಡಗಲಿಯ ಬಸವಣ್ಣ ದೇವಾಲಯ:** ನಗರದ ಕೃಷ್ಣ ದೇವಾಲಯದ ಮುಂಭಾಗ ದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೮ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್‌ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಇದು ತಲವಿನ್ಯಾಸದಲ್ಲಿ ಗರ್ಭಗೃಹ, ಮಂಟಪದ ಭಾಗಗಳನ್ನು ಹೊಂದಿದೆ. ಚೌಕಾಕಾರ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ನಂದಿಶಿಲ್ಪವಿದೆ. ಗರ್ಭಗೃಹದಲ್ಲಿರುವ ದೇವಕೋಷ್ಠದಲ್ಲಿ ಗಣೇಶನ ವಿಗ್ರಹವಿದೆ. ಗರ್ಭಗೃಹ ಮತ್ತು ಮಂಟಪದ ಬಾಗಿಲುವಾಡವು ಸರಳವಾಗಿವೆ. ದೇವಾಲಯದ ಅಧಿಷ್ಠಾನ ಭಾಗವಿಲ್ಲ. ಭಿತ್ತಿಯನ್ನು ನವೀಕರಿಸಲಾಗಿದೆ.

**೬. ಸೋಗಿಯ ಬೆಟ್ಟದ ಮಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಬೆಟ್ಟದ ಮೇಲೆ ಈ ದೇವಾಲಯವಿದ್ದು, ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್‌ಶಿಲೆ, ಇಟ್ಟಿಗೆ ಮತ್ತು ಗಾರೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಮಂಟಪ ಭಾಗಗಳನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ಶಾಖೆಗಳಿಂದ ಕೂಡಿದ್ದು, ಸರಳವಾಗಿದೆ. ಗರ್ಭಗೃಹ ಮತ್ತು ಅಂತರಾಳದಲ್ಲಿರುವ ಭುವನೇಶ್ವರಗಳು ಪದ್ಮಾಕಾರದಲ್ಲಿವೆ. ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ವಜ್ರಾಕೃತಿಯ ರಚನೆಯುಳ್ಳ ಜಾಲಂಧ್ರವಿದೆ. ಜಾಲಂಧ್ರದ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅದರ ಮೇಲೆ ಬ್ರಹ್ಮ, ವಿಷ್ಣು, ಮಹೇಶ್ವರರು ಚಿತ್ರಿತವಾಗಿದ್ದಾರೆ. ಬಾಗಿಲುವಾಡದ ಶಾಖೆಗಳು ಲತಾ,

ಪದ್ಮ, ನಾಗ-ನಾಗಿಣಿಯರ ಉಬ್ಬುಶಿಲ್ಪಗಳಿವೆ. ಲಲಾಟದ ಮೇಲ್ಭಾಗದಲ್ಲಿ ಮುಂಚಾಚಿದ ಕಪೋತವಿದೆ. ಮಂಟಪ ದಲ್ಲಿರುವ ಕಂಬಗಳು ಪದ್ಮಪೀಠ, ಪಾದ, ಅಷ್ಟಪಟ್ಟಿಕೆ, ದಂಡ, ಹದಿನಾರು ಕೋನ, ಕಲಶ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ಮಂಟಪದ ಮಧ್ಯದ ನೆಲದಡಿಯಲ್ಲಿ ಬಾವಿ(ಪಾತಾಳ ಗಂಗಮ್ಮ)ಇದೆ. ಮಂಟಪಕ್ಕೆ ಉತ್ತರ-ದಕ್ಷಿಣವಾಗಿ ಎರಡು ಪ್ರವೇಶದ್ವಾರಗಳಿವೆ. ಬಾಗಿಲುವಾಡಗಳು ಅತ್ಯಂತ ಸರಳವಾಗಿವೆ.

ದೇವಾಲಯದ ಹೊರಭಾಗದಲ್ಲಿ ನೋಡಿದಾಗ ಅಧಿಷ್ಠಾನ ಭಾಗ ಕಾಣಿಸುವುದಿಲ್ಲ. ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ. ಪ್ರಸ್ತರದಲ್ಲಿ ಅನೇಕ ಪಟ್ಟಿಕೆ, ತೋರಣಗಳ ಅಲಂಕಾರವಿದೆ. ಗರ್ಭಗೃಹದ ಮೇಲೆ ಆಧುನಿಕವಾಗಿ ನಿರ್ಮಿಸಲಾದ ಶಿಖರ ಭಾಗವಿದೆ. ಮಂಟಪದ ಮೇಲ್ಭಾಗದಲ್ಲಿ ಡೂಮ್ ರಚನೆಯಿದೆ. ಇದು ಮುಸ್ಲಿಮರ ಪ್ರಭಾವವನ್ನು ಗುರುತಿಸುತ್ತದೆ. ಮಂಟಪದ ಮುಂಭಾಗದಲ್ಲಿ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ಐದು ಹಂತದ ಗೋಪುರವಿದೆ. ಗೋಪುರವು ವಿಜಯನಗರ ಕೊನೆಯ ಕಾಲಘಟ್ಟದ್ದಾಗಿದೆ. ಗೋಪುರವು ವೇಸರಶೈಲಿಯಲ್ಲಿದೆ. ಈ ಗೋಪುರವನ್ನು ನೋಡಿದಾಗ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳ್ಳುತ್ತಾ ಬಂದಿರುವುದು ಗೊತ್ತಾಗುತ್ತದೆ. ದೇವಾಲಯದ ಸುತ್ತಮುತ್ತ ನಂದಿ, ನಾಗ, ವೀರಭದ್ರ ಮತ್ತು ನವಗ್ರಹ ಮೂರ್ತಿಶಿಲ್ಪಗಳಿವೆ. ಈ ಮೂರ್ತಿಶಿಲ್ಪಗಳು ಕಲ್ಯಾಣ ಚಾಲುಕ್ಯರ ಕಾಲದವುಗಳಾಗಿವೆ. ಮಲ್ಲೇಶ್ವರ ದೇವಾಲಯದ ಕಟ್ಟೆಯ ಕೆಳಭಾಗದಲ್ಲಿ ಇನ್ನೊಂದು ಏಕಕೋಣೆಯ ದೇವಾಲಯವಿದೆ. ಇದರ ವಸ್ತುಗಳೆಲ್ಲವೂ ವಿಜಯನಗರೋತ್ತರ ಕಾಲಘಟ್ಟದವುಗಳಾಗಿವೆ. ಕೋಣೆಯಲ್ಲಿ ಅಲ್ಲಲ್ಲಿ ಬಿದ್ದಿರುವಂತಹ ಮೂರ್ತಿಶಿಲ್ಪಗಳನ್ನು ತಂದು ಇಲ್ಲಿರಿಸಲಾಗಿದೆ. ಪ್ರಮುಖವಾಗಿ ದುರ್ಗಿ, ನಾಗ, ವಿಷ್ಣು, ಭೈರವ, ಮಹಿಷಮರ್ದಿನಿ ಇನ್ನಿತರ ಮೂರ್ತಿಶಿಲ್ಪಗಳಿವೆ. ಇವುಗಳ ಕೆಲವೊಂದು ಭಾಗವು ಭಗ್ನಗೊಂಡಿದೆ. ಅಲ್ಲದೆ ಗರ್ಭಗೃಹದಲ್ಲಿ ಜಲಹರಿವು ಮತ್ತು ಲಿಂಗವಿಲ್ಲದ ಪದ್ಮಪೀಠವಿದೆ. ಈ ಕೋಣೆಯ ಬಾಗಿಲುವಾಡವು ಶಾಖೆಗಳಿಂದ ಕೂಡಿದ್ದು, ಲಲಾಟದಲ್ಲಿ ಯಾವುದೇ ಉಬ್ಬುಶಿಲ್ಪಗಳಿಲ್ಲ. ಭಿತ್ತಿಯನ್ನು ಕಲ್ಲುಹಾಸುಗಳಿಂದ ರಚಿಸಲಾಗಿದೆ. ಮೇಲ್ಭಾಗದಲ್ಲಿ ಡೂಮ್ ರಚನೆಯಿದೆ. ಇದು ಸ್ತೂಪಿಯ ಮೇಲಿರುವ ರಚನೆಯನ್ನು ಹೋಲುತ್ತದೆ. ಇದನ್ನು ಗಾರೆ ಮತ್ತು ಇಟ್ಟಿಗೆಗಳಿಂದ ರಚಿಸಲಾಗಿದೆ.

ಬೆಟ್ಟದ ಮಲ್ಲೇಶ್ವರ ದೇವಾಲಯಕ್ಕೆ ಮೆಟ್ಟಿಲು ಹತ್ತುವ ಮುಂಚೆ ಕೆಳಭಾಗದಲ್ಲಿ ಏಕಕೋಣೆಯುಳ್ಳ ಇನ್ನೊಂದು ದೇವಾಲಯವಿದೆ. ಇದರ ಕೋಣೆಯಲ್ಲಿ ಒಂದು ಅಸ್ಪಷ್ಟವಾದ ಕಲ್ಲನ್ನಿರಿಸಿ ಪೂಜಿಸಲಾಗುತ್ತಿದೆ. ಇಲ್ಲಿನ ಅರ್ಧಗಂಬಗಳು ಚಪ್ಪಟೆಯಾಕಾರದಲ್ಲಿವೆ. ಬಾಗಿಲುವಾಡವು ಅತ್ಯಂತ ಸರಳವಾಗಿದೆ. ಭಿತ್ತಿಯನ್ನು ಸಣ್ಣ ಸಣ್ಣ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಇದು ವಿಜಯನಗರೋತ್ತರ ಕಾಲಘಟ್ಟದ ವಾಸ್ತುಶೈಲಿಯನ್ನು ಹೊಂದಿದೆ.

**೭. ಮಾನ್ಯರಮಸಲವಾಡದ ಮುಕ್ತೇಶ್ವರ ದೇವಾಲಯ:** ಗ್ರಾಮದ ಪೂರ್ವಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.

೧೧ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ಎತ್ತರದ ಜಗತಿ ಮೇಲೆ ನಿರ್ಮಾಣಗೊಂಡಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ತೆರೆದ ಸಭಾಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿದೆ. ಚೌಕಾಕಾರ ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಶಿವಲಿಂಗದ ಜಲಹರಿವು ಮತ್ತು ಲಿಂಗ ಮಾತ್ರ ಹೊರಗೆ ಕಾಣಿಸುತ್ತಿದ್ದು, ಉಳಿದ ಕೆಳಭಾಗವು ಮುಚ್ಚಿದೆ. ಗರ್ಭಗೃಹದ ಬಾಗಿಲುವಾಡ ಸರಳವಾದ ಪಂಚಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮಿಯನ್ನು ಚಿತ್ರಿಸಲಾಗಿದೆ. ಅಂತರಾಳದ ಬಾಗಿಲುವಾಡ ಸರಳವಾಗಿದ್ದು, ಇಕ್ಕೆಲಗಳಲ್ಲಿ ವಜ್ರಾಕಾರವುಳ್ಳ ಜಾಲಂಧ್ರವನ್ನು ಹೊಂದಿದೆ. ಕೆಳಭಾಗದಲ್ಲಿ ಪೂರ್ಣಕುಂಭ ರಚನೆಯಿದೆ.

ಅಂತರಾಳದ ಮುಂಭಾಗದಲ್ಲಿ ವಿಶಾಲವಾದಂತಹ ಸಭಾಮಂಟಪವಿದೆ. ಸಭಾಮಂಟಪದಲ್ಲಿ ಒಟ್ಟು ಎಂಟು ಸ್ವತಂತ್ರಗಂಬಗಳಿವೆ. ಈ ಕಂಬಗಳು ಪಾದ, ಪೀಠ, ಹದಿನಾರು-ಎಂಟು-ಹದಿನಾರು-ಕೋನ, ದಂಡ, ಕಲಶ, ಘಟ, ಬೋದಿಗೆಗಳನ್ನು ಹೊಂದಿವೆ. ಸಭಾಮಂಟಪಕ್ಕೆ ಉತ್ತರ, ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮುಖಮಂಟಪಗಳಿವೆ. ಉತ್ತರ ಪ್ರವೇಶದ್ವಾರಕ್ಕೆ ಸೋಪಾನಗಳಿವೆ. ದಕ್ಷಿಣ ಕಡೆಗಳಲ್ಲಿ ಕಕ್ಷಾಸನವಿದೆ. ಸಭಾಮಂಟಪದಲ್ಲಿ ಗರುಡಪೀಠದ ಮೇಲೆ ನಂದಿಶಿಲ್ಪ, ಸಪ್ತಮಾತೃಕೆ, ವೀರಗಲ್ಲು, ಕಾರ್ತಿಕೇಯ, ಗಣೇಶನ ಮೂರ್ತಿ ಮತ್ತು ನಾಗಶಿಲ್ಪಗಳಿವೆ. ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪದ ಮಧ್ಯದ ಮೇಲ್ಚಾವಣಿಯಲ್ಲಿ ಪದ್ಮಾಕಾರವುಳ್ಳ ಭುವನೇಶ್ವರಗಳಿವೆ. ದೇವಾಲಯವು ಸರಳವಾದ ಅಧಿಷ್ಠಾನ ಮತ್ತು ಭಿತ್ತಿಯ ಭಾಗಗಳನ್ನು ಹೊಂದಿದೆ. ಪ್ರಸ್ತರದಲ್ಲಿ ಪದ್ಮ, ಕಪೋತ ಮತ್ತು ಹಲ್ಲಿನ ಮಾದರಿಯ ರಚನೆಗಳಿವೆ. ದೇವಾಲಯಕ್ಕೆ ಶಿಖರ ಭಾಗವಿಲ್ಲ. ದೇವಾಲಯದ ಎಡಕ್ಕೆ ಒಂದು ತೆರೆದ ಮಂಟಪವಿದೆ.

**೮. ಮಾನ್ಯರಮಸಲವಾಡದ ಕಲ್ಲೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೩ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ತ್ರಿಕೂಟ ಮಾದರಿಯುಳ್ಳ ಈ ದೇವಾಲಯವು ತಲವಿನ್ಯಾಸದಲ್ಲಿ ಪ್ರತ್ಯೇಕ ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗವನ್ನು ಒಳಗೊಂಡಿದೆ. ಪ್ರತ್ಯೇಕ ಗರ್ಭಗೃಹದಲ್ಲಿ ಶಿವಲಿಂಗಗಳಿವೆ. ಗರ್ಭಗೃಹ, ಅಂತರಾಳದ ಬಾಗಿಲುವಾಡ ಮತ್ತು ಭುವನೇಶ್ವರಗಳು ಸರಳವಾಗಿವೆ. ಮೂರು ಕೂಟಗಳಿಗೆ ಒಂದು ನವರಂಗ ಭಾಗವಿದ್ದು, ಇಂದು ವೇದಿಕೆ ಭಾಗ ಮಾತ್ರ ಉಳಿದಿದ್ದು, ಮೇಲ್ಚಾವಣಿಯು ಸಂಪೂರ್ಣ ಬಿದ್ದು ಹೋಗಿರುವುದರಿಂದ ದೇವಾಲಯದ ಸ್ಪಷ್ಟವಾದ ಅಧಿಷ್ಠಾನ ಭಾಗ ಕಾಣುತ್ತಿಲ್ಲ. ಭಿತ್ತಿಯನ್ನು ಒರಟಾದ ಕಲ್ಲು ಕಣಶಿಲೆಯಿಂದ ರಚಿಸಲಾಗಿದೆ. ಶಿಖರ ಭಾಗದಲ್ಲಿ ಒರಟಾದ ಕಲ್ಲು ಹಾಸುಗಳನ್ನು ಹಾಕಲಾಗಿದೆ. ಸಭಾಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲಿಯೇ ವೀರಗಲ್ಲು ಇದೆ. ದೇವಾಲಯದ ಮುಂಭಾಗದಲ್ಲಿ ಶಾಸನಗಳು, ಕಾರ್ತಿಕೇಯನ ಶಿಲ್ಪವಿದೆ.

೯. **ಮಾನ್ಯರ ಮಸಲವಾಡದ ವೀರಭದ್ರೇಶ್ವರ ದೇವಾಲಯ:** ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಇದು ಉತ್ತರಾಭಿಮುಖವಾಗಿದೆ. ವೀರಭದ್ರೇಶ್ವರ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೬ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆ ಹಾಗೂ ಇಟ್ಟಿಗೆಯಿಂದ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗಗಳನ್ನು ಹೊಂದಿದೆ. ಚೌಕಾಕಾರವುಳ್ಳ ಗರ್ಭಗೃಹದಲ್ಲಿ ಒಂದು ಅಡಿ ಪೀಠದ ಮೇಲೆ ವೀರಭದ್ರನು ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರಭದ್ರನು ಬಿಲ್ಲು, ಬಾಣ, ಖಡ್ಗ, ಗುರಾಣಿ ಆಯುಧಗಳನ್ನು ಹಿಡಿದಿದ್ದು ಅನೇಕ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದ್ದಾನೆ. ಗರ್ಭಗೃಹ ಮತ್ತು ಅಂತರಾಳದ ದ್ವಾರಶಾಖೆಗೆ ಹಿತ್ತಾಳೆಯ ಹೊದಿಕೆಯನ್ನು ಹಾಕಲಾಗಿದೆ. ನವರಂಗದ ಮಧ್ಯದ ವೇದಿಕೆಯ ಮೇಲೆ ವಿಜಯನಗರ ಕಾಲದ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಸರಳವಾದ ಪೀಠ, ಪಾದದ ಜೊತೆಗೆ ವೃತ್ತ, ದಂಡ, ಕಲಶ, ಪಾಟಿಕಾ, ಮಂಡಿ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಗರ್ಭಗೃಹ, ಅಂತರಾಳ ಮತ್ತು ನವರಂಗದಲ್ಲಿ ಪದ್ಮದಳಾಕಾರವುಳ್ಳ ಭುವನೇಶ್ವರಗಳಿವೆ. ನವರಂಗದ ಬಾಗಿಲುವಾಡವು ದ್ವಿಶಾಖೆಗಳಿಂದ ಕೂಡಿದ್ದು ಸರಳವಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಈ ದೇವಾಲಯಕ್ಕೆ ಸರಳವಾದ ಅಧಿಷ್ಠಾನ ಮತ್ತು ಭಿತ್ತಿಯ ಭಾಗಗಳಿವೆ. ಗರ್ಭಗೃಹದ ಹೊರಭಿತ್ತಿಯ ಮೇಲೆ ಆಂಜನೇಯನ ಉಬ್ಬುಶಿಲ್ಪವಿದೆ. ಅಂತರಾಳದ ಹೊರಭಿತ್ತಿಯ ಮೇಲೆ ಲಜ್ಜಾಗೌರಿಯ ಉಬ್ಬುಶಿಲ್ಪವಿದೆ. ಗರ್ಭಗೃಹದ ಮೇಲೆ ಆಧುನಿಕವಾಗಿ ನಿರ್ಮಿಸಿರುವ ದ್ರಾವಿಡ ಶೈಲಿಯ ಕೂಟಶಿಖರವಿದೆ. ದೇವಾಲಯಕ್ಕೆ ಪ್ರವೇಶದ ಮೆಟ್ಟಿಲು(ಸೋಪಾನ)ಗಳ ಎರಡು ಬದಿಯಲ್ಲಿ ಗಜವಕ್ತ್ರ ಪ್ರಣಾಳವಿದೆ. ದೇವಾಲಯದ ಮುಂಭಾಗದಲ್ಲಿ ಸುಮಾರು ೧೫ ಅಡಿ ಎತ್ತರವುಳ್ಳ ದೀಪಸ್ತಂಭವಿದೆ. ಪ್ರಾಕಾರದಲ್ಲಿ ನಂದಿ ಹಾಗೂ ವೀರಗಲ್ಲಿನ ಶಿಲ್ಪಗಳಿವೆ.

೧೦. **ಮಾನ್ಯರಮಸಲವಾಡದ ಬಸವಣ್ಣ ಗುಡಿ:** ಗ್ರಾಮದ ಹೊರಭಾಗದಲ್ಲಿರುವ ಇದು ಉತ್ತರಾಭಿಮುಖವಾಗಿದೆ. ಈ ದೇವಾಲಯ ಪಾಳೆಯಗಾರರ ಶೈಲಿಯಲ್ಲಿದ್ದು, ಕ್ರಿ.ಶ.೧೭-೧೮ನೇ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರವಾದ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ಮುಖಮಂಟಪದಲ್ಲಿರುವ ಎರಡು ಸ್ವತಂತ್ರಗಂಬಗಳು ಅತ್ಯಂತ ಸರಳವಾಗಿವೆ. ಮಂಟಪದ ಮುಂಭಾಗದಲ್ಲಿರುವ ಕಪೋತ ಭಾಗವು ಮುಂಚಾಚಿದೆ. ಭಿತ್ತಿಯು ಸರಳವಾಗಿದ್ದು, ಪ್ರಸ್ತರದಲ್ಲಿ ಬಸವಣ್ಣನ ಮೂರ್ತಿಗಳನ್ನು ಇಡಲಾಗಿದೆ.

೧೧. **ಹಿರೇಹಡಗಲಿಯ ಮಲ್ಲಿಕಾರ್ಜುನ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಪಾಳೆಯಗಾರರ ಶೈಲಿಯಲ್ಲಿದ್ದು, ಕ್ರಿ.ಶ.

೧೮-೧೯ನೆಯ ಶತಮಾನಕ್ಕೆ ಸೇರಿದೆ. ಬೆಣಚು ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ಸರಳವಾಸ್ತುಗಳನ್ನು ಹೊಂದಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಇದನ್ನು ಮಲ್ಲಿಕಾರ್ಜುನ ಎಂದು ಸೂಚಿಸಲಾಗುತ್ತಿದೆ. ಎದುರಿಗೆ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲುವಾಡವು ಅತ್ಯಂತ ಸರಳವಾಗಿದ್ದು ಲಲಾಟಬಿಂಬದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಮುಖಮಂಟಪದಲ್ಲಿ ಸರಳವಾಗಿರುವ ಚಪ್ಪಟೆಯಾಕಾರವುಳ್ಳ ಕಂಬಗಳಿವೆ. ಈ ಕಂಬಗಳು ಪೀಠದ ಮೇಲೆ ನಿಂತಿವೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ.

**೧೨. ಹಿರೇಹಡಗಲಿಯ ವೀರಭದ್ರ ದೇವಾಲಯ:** ಗ್ರಾಮದ ಒಳಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೩ನೆಯ ಶತಮಾನಕ್ಕೆ ಸೇರಿದ್ದು, ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗಗಳಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ವೀರಭದ್ರನ ಮೂರ್ತಿಯು ಆಕರ್ಷಣೀಯ ಕೇಂದ್ರಬಿಂದು. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ಅಂತರಾಳದ ಇಕ್ಕೆಲಗಳಲ್ಲಿ ಎರಡು ಕೋಣೆಯ ರಚನೆಗಳಿವೆ. ಅಂತರಾಳದ ಬಾಗಿಲುವಾಡವು ದ್ವಿಶಾಖೆಯಿಂದ ಕೂಡಿದ್ದು, ಶಾಖೆಗಳು ಕಂಬ, ಲತಾಬಳ್ಳಿಯನ್ನು ಒಳಗೊಂಡಿವೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಪಾದ, ಪೀಠ, ಅಷ್ಟ ಪಟ್ಟಿಕೆ, ವೃತ್ತ, ಘಟ, ಪುಷ್ಪಬೋದಿಗೆಯನ್ನು ಹೊಂದಿವೆ. ಹನ್ನೆರಡು ಅರ್ಧಗಂಬಗಳಿವೆ. ನವರಂಗದ ಮಧ್ಯದಲ್ಲಿ ಪದ್ಮದಳದಾಕಾರವುಳ್ಳ ಭುವನೇಶ್ವರವಿದೆ. ನವರಂಗದ ಹೊರಭಾಗವು ತೆರೆದುಕೊಂಡಿದೆ. ದೇವಾಲಯ ಒಳಭಿತ್ತಿಯನ್ನು ನವೀಕರಿಸಲಾಗಿದೆ.

**೧೩. ಹಿರೇಹಡಗಲಿಯ ಗಣೇಶ ದೇವಾಲಯ:** ಗ್ರಾಮದ ವೀರಭದ್ರೇಶ್ವರ ದೇವಾಲಯದ ಪಕ್ಕದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೩-೧೬ನೆಯ ಶತಮಾನಕ್ಕೆ ಸೇರಿದೆ. ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ತೆರೆದ ಮಂಟಪಗಳನ್ನು ಹೊಂದಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಗಣೇಶ ಮೂರ್ತಿಶಿಲ್ಪವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿಕೊಂಡಿದೆ. ಗರ್ಭಗೃಹದ ಬಾಗಿಲುವಾಡ ದ್ವಿಶಾಖೆಯಿಂದ ಕೂಡಿದ್ದು, ಅತ್ಯಂತ ಸರಳವಾಗಿದೆ. ಲಲಾಟ ಬಿಂಬದಲ್ಲಿ ಜೈನ ತೀರ್ಥಂಕರನ ಉಬ್ಬುಶಿಲ್ಪವಿದೆ. ತೆರೆದ ಮಂಟಪದ ಮಧ್ಯದಲ್ಲಿ ಎರಡು ಸ್ವತಂತ್ರಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪದ್ಮಪೀಠ, ಪಾದ, ಹದಿನಾರು-ಎಂಟು-ಹದಿನಾರುಕೋನ, ದಂಡ, ಕಲಶ, ಪಾಟಿಕಾ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯನ್ನು ನವೀಕರಿಸಲಾಗಿದೆ. ದೇವಾಲಯಕ್ಕೆ ಆಧುನಿಕವಾಗಿ ನಿರ್ಮಿಸಲಾದ ಶಿಖರ ಭಾಗವಿದೆ.

**೧೪. ಹಿರೇಹಡಗಲಿಯ ವಿರೂಪಾಕ್ಷೇಶ್ವರ ದೇವಾಲಯ:** ಗ್ರಾಮದ ಗಣೇಶ ದೇವಾಲಯದ ಮುಂಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೭–೧೮ನೆಯ ಶತಮಾನಕ್ಕೆ ಸೇರಿದೆ. ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯ ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ತೆರೆದ ಮಂಟಪವಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಲಿಂಗದ ಎದುರಿಗೆ ನಂದಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು ಅತ್ಯಂತ ಸರಳವಾಗಿದೆ. ಮಂಟಪದಲ್ಲಿ ಎತ್ತರವಾದ ಎರಡು ಸರಳವಾದ ಕಂಬಗಳಿವೆ.

**೧೫. ಹಿರೇಹಡಗಲಿಯ ಸಂಗಮೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೫–೧೬ ನೆಯ ಶತಮಾನಕ್ಕೆ ಸೇರಿದೆ. ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖ ಮಂಟಪಗಳಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಲಿಂಗದ ಜಲಹರಿವು ಬಲಭಾಗಕ್ಕಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ಅಂತರಾಳದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದ ಮಧ್ಯದಲ್ಲಿ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ, ದಂಡ, ಕಲಶ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಹನ್ನೆರಡು ಅರ್ಧಗಂಬಗಳಿವೆ. ನವರಂಗಕ್ಕೆ ಉತ್ತರ ದಿಕ್ಕಿನಲ್ಲಿ ಇನ್ನೊಂದು ಪ್ರವೇಶ ದ್ವಾರವಿದೆ. ಗರ್ಭಗೃಹ, ಅಂತರಾಳ ಮತ್ತು ನವರಂಗಗಳಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ಮುಖಮಂಟಪ, ಅಧಿಷ್ಠಾನ, ಭಿತ್ತಿಯ ಭಾಗವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ.

**೧೬. ಹಿರೇಹಡಗಲಿಯ ರೇವಣಸಿದ್ಧೇಶ್ವರ ದೇವಾಲಯ:** ಗ್ರಾಮದ ಮಾಗಳ ರಸ್ತೆಯ ಪಕ್ಕದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫–೧೬ನೆಯ ಶತಮಾನಕ್ಕೆ ಸೇರಿದೆ. ಉತ್ತಮ ಸ್ಥಿತಿಯಲ್ಲಿದೆ. ಇದು ಏಕಕೋಣೆಯುಳ್ಳ ದೇವಾಲಯವಾಗಿದ್ದು, ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಇದರ ಜಲಹರಿವು ಬಲಭಾಗಕ್ಕಿದೆ. ಗರ್ಭಗೃಹದ ಮುಂಭಾಗದಲ್ಲಿರುವ ತೆರೆದ ಮುಖಮಂಟಪದಲ್ಲಿ ಎರಡು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ವೃತ್ತ, ಕಲಶ, ಸರಳವಾದ ಬೋದಿಗೆಗಳನ್ನು ಹೊಂದಿವೆ. ಈ ದೇವಾಲಯದ ಬಲಬದಿಯಲ್ಲಿ ಮಂಟಪದ ರಚನೆಯಿದ್ದರೆ, ಎಡಭಾಗದಲ್ಲಿ ವಿಶಾಲವಾದಂತಹ ಪುಷ್ಕರಿಣಿ ಇದೆ. ದೇವಾಲಯದ ಮುಂಭಾಗದಲ್ಲಿ ಸುಮಾರು ಎಂಟು ಅಡಿ ಎತ್ತರವುಳ್ಳ ದೀಪಸ್ತಂಭವಿದೆ.

**೧೭. ಮೈಲಾರದ ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಕೇಂದ್ರ ಪುರಾತತ್ವ ಇಲಾಖೆಯ ಅಧೀನದ ಈ ದೇವಾಲಯ ಗರ್ಭಗೃಹ, ಅಂತರಾಳ, ಸಭಾಮಂಟಪಗಳನ್ನು ಹೊಂದಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದ್ದು, ಶಾಖೆಗಳ ಪಕ್ಕದಲ್ಲಿ ಚೌಕಾಕಾರವುಳ್ಳ ಜಾಲಂಧ್ರವಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅಂತರಾಳದಲ್ಲಿ ಶಿವಲಿಂಗಕ್ಕೆ ಎದುರಾಗಿ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಬಾಗಿಲುವಾಡವು ಸರಳವಾಗಿದೆ. ಸಭಾಮಂಟಪದಲ್ಲಿ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪದ್ಮಪೀಠ, ಪಾದ ಹದಿನಾರು-ಎಂಟು-ಹದಿನಾರು ಕೋನ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆಗಳನ್ನು ಹೊಂದಿವೆ. ಈ ಕಂಬದಲ್ಲಿ ಅನೇಕ ತೋರಣಗಳ, ಲತಾಬಳ್ಳಿಗಳ ಅಲಂಕಾರಗಳಿವೆ. ಮಂಟಪದ ದಕ್ಷಿಣ ದಿಕ್ಕಿನ ಕಡೆಗೆ ಇನ್ನೊಂದು ಪ್ರವೇಶದ್ವಾರವಿದೆ. ಮಂಟಪದ ಮಧ್ಯದಲ್ಲಿ ಪೀಠದ ಮೇಲೆ ಪ್ರತಿಷ್ಠಾಪಿಸಲಾದ ನಂದಿಶಿಲ್ಪವಿದೆ. ಗರ್ಭಗೃಹ, ಅಂತರಾಳ ಮಂಟಪಗಳಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ನವರಂಗದಲ್ಲಿರುವ ಅರ್ಧಗಂಬಗಳು ಪೀಠ, ಪಾದ, ಪಟ್ಟಿಕೆ, ಸರಳ ಬೋದಿಗೆ ರಚನೆಗಳನ್ನು ಹೊಂದಿವೆ. ನವರಂಗದ ಬಾಗಿಲುವಾಡವು ಸರಳವಾಗಿದೆ. ದೇವಾಲಯದ ಅಧಿಷ್ಠಾನ ಭಾಗ ಕಾಣಿಸುವುದಿಲ್ಲ ಮತ್ತು ಭಿತ್ತಿಯ ಭಾಗವು ಸಂಪೂರ್ಣವಾಗಿ ಬಿದ್ದುಹೋಗಿದೆ.

ಈ ದೇವಾಲಯದ ಆವರಣದಲ್ಲಿ ತುಪ್ಪದ ಮಾಳಮ್ಮದೇವಿ ಎಂದು ಕರೆಯುವ ಏಕಕೋಣೆಯ ದೇವಾಲಯವಿದೆ. ಪದ್ಮಾಸನದಲ್ಲಿ ಆಸೀನರಾಗಿರುವ ದೇವಿಯ ಕೈಯಲ್ಲಿ ಖಡ್ಗ, ತಲೆಯ ಮೇಲೆ ಕಿರೀಟ, ಕೊರಳಲ್ಲಿ ಅನೇಕ ಸರ ಮತ್ತು ಹಾರಗಳನ್ನು ಹಾಕಿಕೊಂಡಿದ್ದಾಳೆ.

**೧೮. ಮೈಲಾರದ ಮೈಲಾರಲಿಂಗೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫ನೆಯ ಶತಮಾನಕ್ಕೆ ಸೇರಿದೆ. ಇದು ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ, ಆಧುನಿಕವಾದ ಇನ್ನೊಂದು ದ್ವಾರಮಂಟಪವಿದೆ. ಗರ್ಭಗೃಹದಲ್ಲಿ ಹುತ್ತದ ಮಣ್ಣಿನಿಂದ ತಯಾರಿಸಿದ ಮೈಲಾರನ ಮೂರ್ತಿ ಹಾಗೂ ಮುಂಭಾಗದಲ್ಲಿ ಉದ್ಭವ ಲಿಂಗವಿದೆ. ಗರ್ಭಗೃಹದ ಬಾಗಿಲುವಾಡಕ್ಕೆ ಹಿತ್ತಾಳೆಯ ಹೊದಿಕೆಯನ್ನು ಹಾಕಲಾಗಿದೆ. ಲಲಾಟದಲ್ಲಿ ಶಿವನ ಶಿಲ್ಪವನ್ನು ಕೆತ್ತಲಾಗಿದೆ. ಅಂತರಾಳದ ಬಾಗಿಲುವಾಡಕ್ಕೂ ಸಹ ಹಿತ್ತಾಳೆಯ ಹೊದಿಕೆಯನ್ನು ಹಾಕಲಾಗಿದೆ.

ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಒಂದಕ್ಕೊಂದು ವಿಭಿನ್ನ ರೀತಿಯಲ್ಲಿವೆ. ಈ ಕಂಬಗಳು ಸಾಮಾನ್ಯವಾಗಿ ಪೀಠ, ಪಾದ, ಅಷ್ಟಪಟ್ಟಿಕೆ,

ವೃತ್ತ, ಕಲಶ, ಬೋದಿಗೆಗಳ ರಚನೆಯನ್ನು ಹೊಂದಿವೆ. ನವರಂಗಕ್ಕೆ ಉತ್ತರ ದಿಕ್ಕಿನಲ್ಲಿ ಇನ್ನೊಂದು ಪ್ರವೇಶ ದ್ವಾರವಿದೆ. ಪೂರ್ವಾಭಿಮುಖವಾಗಿರುವ ನವರಂಗದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು ಪದ್ಮ, ಲತಾಬಳ್ಳಿ, ಹೂಬಳ್ಳಿ, ಕಂಬ ರಚನೆಗಳ ಅಲಂಕಾರ ಹೊಂದಿವೆ. ಲಲಾಟಬಿಂಬದ ಮೇಲೆ ಕದಂಬ ನಾಗರ ಶೈಲಿಯ ಒಂಬತ್ತು ಶಿಖರಗಳಿವೆ. ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಮುಖಮಂಟಪದ ಇಕ್ಕೆಲಗಳಲ್ಲಿ ಇರುವ ಎರಡು ಕಟ್ಟೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು, ಪೀಠ, ಪಾದ, ಅಷ್ಟಪಟ್ಟಿಕೆ, ವೃತ್ತ, ಕಲಶ, ತಾಟಿಕ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ.

ಮುಖಮಂಟಪದ ಮುಂಭಾಗದಲ್ಲಿರುವ ಇನ್ನೊಂದು ದ್ವಾರಮಂಟಪದಲ್ಲಿ ಚಪ್ಪಟೆಯಾಕಾರವುಳ್ಳ, ಎತ್ತರವಾದ ೧೨ ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಇದು ಪೂರ್ವಕ್ಕೆ ತೆರೆದುಕೊಂಡಿದೆ. ಈ ಭಾಗವನ್ನು ಆಧುನಿಕವಾಗಿ ನಿರ್ಮಿಸಲಾಗಿದೆ.

ದೇವಾಲಯದ ಪಾರ್ಶ್ವನೋಟದಲ್ಲಿ ಅಧಿಷ್ಠಾನವಿದ್ದು, ಇದು ಉಪಾನ, ಜಗತಿ, ಗಳ, ಕುಮುದ, ಪದ್ಮಗಳನ್ನು ಒಳಗೊಂಡಿದೆ. ಭಿತ್ತಿಯನ್ನು ಸರಳವಾದ ಕಲ್ಲುಹಾಸುಗಳನ್ನು ಬಳಸಿ ನಿರ್ಮಿಸಲಾಗಿದೆ. ಪ್ರಸ್ತರದಲ್ಲಿ ಹಲ್ಲಿನ ಮಾದರಿ ರಚನೆ ಮತ್ತು ಕಪೋತ ಭಾಗಗಳಿವೆ. ಗರ್ಭಗೃಹದ ಮೇಲಿರುವ ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ದೇವಾಲಯವನ್ನು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳಿಸುತ್ತಾ ಬರಲಾಗಿದೆ. ಕಾರಣ ಆಧುನಿಕ ಶೈಲಿಗಳು ಹೆಚ್ಚಿನ ರೀತಿಯಲ್ಲಿ ಕಾಣಿಸಿಕೊಂಡಿವೆ.

ಮೈಲಾರಲಿಂಗೇಶ್ವರ ದೇವಾಲಯದ ಎಡಬದಿಯಲ್ಲಿ ಗಂಗಿಮಾಳಮ್ಮ ದೇವಾಲಯವಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಗಂಗಿಮಾಳಮ್ಮನ ಮೂರ್ತಿ ಹಾಗೂ ಶಿವಲಿಂಗವಿದೆ. ಸುಖನಾಸಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡವು ಸರಳವಾಗಿದೆ. ಮಂಟಪದಲ್ಲಿನ ಕಂಬಗಳು ಸರಳವಾಗಿದ್ದು, ಚೌಕಾಕಾರದಲ್ಲಿವೆ. ಕಂಬಗಳ ಪಾದಗಳಲ್ಲಿ ಗರುಡ, ನಾಗ, ನರ್ತಕಿಯರ ಉಬ್ಬುಶಿಲ್ಪಗಳಿವೆ. ಮಂಟಪಕ್ಕೆ ಉತ್ತರ ದಿಕ್ಕಿನಲ್ಲಿ ಮತ್ತೊಂದು ಪ್ರವೇಶದ್ವಾರವಿದೆ. ಪೂರ್ವದ ಪ್ರವೇಶದ್ವಾರವು ಪಂಚಶಾಖೆಗಳಿಂದ ಕೂಡಿದೆ. ಇದು ಲತಾಬಳ್ಳಿ, ಬಳೆ, ಪದ್ಮ, ಕಂಬಗಳಿಂದ ಕೂಡಿದೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಮೇಲ್ಭಾಗದಲ್ಲಿ ಶಿವನ ಉಬ್ಬುಶಿಲ್ಪವಿದೆ.

ದೇವಾಲಯದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಗಳ ಪೀಠ, ಕುಮುದ, ಪದ್ಮ ರಚನೆಗಳಿವೆ. ಭಿತ್ತಿಯ ಭಾಗ ಸರಳವಾಗಿದೆ. ಪ್ರಸ್ತರದಲ್ಲಿ ಪದ್ಮ ಹಲ್ಲಿನ ಮಾದರಿ, ಕಪೋತ ರಚನೆಗಳಿವೆ. ದೇವಾಲಯಕ್ಕೆ ಆಧುನಿಕ ಶಿಖರವಿದೆ.

ಮೈಲಾರಲಿಂಗೇಶ್ವರ ಮತ್ತು ಗಂಗಿಮಾಳಮ್ಮ ದೇವಾಲಯಕ್ಕೆ ವಿಶಾಲವಾದ ಪ್ರಾಕಾರ ಗೋಡೆಯಿದೆ. ಪ್ರಾಕಾರ ಗೋಡೆಯ ಒಳಗಡೆ ಗಣೇಶ, ನಂದಿ, ಸೂರ್ಯ, ಶಿವ, ಭೈರವ, ಸಪ್ತಮಾತೃಕೆ, ಆಂಜನೇಯ ಹಾಗೂ ನಾರಾಯಣರ ಬಿಡಿಶಿಲ್ಪಗಳಿವೆ. ಸುಮಾರು ಐದು ಅಡಿ ಎತ್ತರವಾದ ನಾರಾಯಣ ಶಿಲ್ಪವು ಪೀಠದಲ್ಲಿದೆ.

ದೇವಾಲಯದ ಮುಂಭಾಗದಲ್ಲಿ ಕದಂಬ ನಾಗರ ಮಾದರಿಯ ಗೋಪುರವಿದೆ. ಗೋಪುರವು ಎತ್ತರವಾದ ಜಗತಿ ಮೇಲಿದೆ. ಗೋಪುರ ಉತ್ತಮವಾದ ಅಧಿಷ್ಠಾನ ಭಾಗವನ್ನು ಹೊಂದಿದೆ. ಅಧಿಷ್ಠಾನದಲ್ಲಿ ಉಪಾನ, ಪದ್ಮ, ಕುಮುದ, ಗಳಪೀಠ, ಪದ್ಮಗಳನ್ನು ಹೊಂದಿದೆ. ಭಿತ್ತಿಯಲ್ಲಿ ಕುಂಬಪಂಜರಗಳಿವೆ. ಗೋಪುರದ ವೇದಿಕೆಯ ಮೇಲೆ ಸಿಂಹಕಂಬಗಳಿವೆ. ಈ ಕಂಬಗಳನ್ನು ಸಿಂಹಗಳು ಹೊತ್ತು ನಿಂತಿವೆ. ಕಂಬಗಳಲ್ಲಿ ಅನೇಕ ಉಬ್ಬುಶಿಲ್ಪಗಳಿವೆ. ಗೋಪುರದ ಮಧ್ಯದಲ್ಲಿ ಎರಡು ಕೋಣೆಗಳಿವೆ. ಇಲ್ಲಿರುವ ಕಂಬಗಳು ಸರಳವಾಗಿವೆ. ಅಧಿಷ್ಠಾನದ ಮೇಲಿರುವ ಕಂಬಗಳಲ್ಲಿ ನೃತ್ಯಗಾರ್ತಿಯರು, ಕೀರ್ತಿಮುಖ, ಸ್ತ್ರೀಯರು, ಲೈಂಗಿಕ ಶಿಲ್ಪಗಳು, ನಾಗ, ಮಿಥುನ ಶಿಲ್ಪ, ಕಾಳಿ, ದಕ್ಷ ಮುಂತಾದ ಶಿಲ್ಪಗಳಿವೆ.

**೧೯. ಮೈಲಾರದ ಸೋಮಲಿಂಗೇಶ್ವರ ದೇವಾಲಯ:** ಗ್ರಾಮದ ಹೊರಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿದ್ದು, ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ತಲವಿನ್ಯಾಸ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಶಾಸನಗಳಲ್ಲಿ ಈ ದೇವಾಲಯವನ್ನು ಸ್ವಯಂಭುದೇವ ಮತ್ತು ಮೂಲಸ್ಥಾನ ದೇವರೆಂದು ಉಲ್ಲೇಖಿಸಲಾಗಿದೆ. ಗರ್ಭಗೃಹದಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಯನ್ನು ಹಿಡಿದು ಕುಳಿತಿರುವ ಇತ್ತೀಚಿನ ಮೂರ್ತಿಶಿಲ್ಪ ಮತ್ತು ಶಿವಲಿಂಗವಿದೆ. ಈ ದೇವಾಲಯದ ಮುಂದಿರುವ ಕ್ರಿ.ಶ.೧೦೪೬ರ ಶಾಸನದಲ್ಲಿ ಮಹಾಮಂಡಳೇಶ್ವರ ಗಂಡರಾದಿತ್ಯನ ಪೆರ್ಗಡೆ ಕಾಳಿಮಯ್ಯನು ಮೇಳಿಮಡುವಿನ ತೇಜೋರಾಶಿ ಪಂಡಿತನ ಶಿಷ್ಯ ಚಿಲ್ಲುಕಾಚಾರ್ಯನ ಕಾಲನ್ನು ತೊಳೆದು ದಾನ ಮಾಡಿದನು. ದೇವಾಲಯದ ಆವರಣದಲ್ಲಿ ಅನೇಕ ಪ್ರಾಚೀನ ಶಿಲ್ಪಗಳಿವೆ.

**೨೦. ಮಾಗಳದ ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಕಪ್ಪು ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ತ್ರಿಕೂಟ ಮಾದರಿಯದ್ದಾಗಿದ್ದು, ತಲವಿನ್ಯಾಸದಲ್ಲಿ ಮೂರು ಗರ್ಭಗೃಹ, ಮೂರು ತೆರೆದ ಅಂತರಾಳ ಮತ್ತು ಒಂದು ನವರಂಗ ಅಥವಾ ಮಂಟಪ ಭಾಗಗಳನ್ನು ಹೊಂದಿದೆ.

ಉತ್ತರದ ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಜನಾರ್ದನನ ಮೂರ್ತಿಶಿಲ್ಪವಿದೆ. ಸ್ಥಾನಿಕ ಭಂಗಿಯಲ್ಲಿರುವ ಜನಾರ್ದನನು ಹಿಂದಿನ ಕೈಗಳಲ್ಲಿ ಶಂಖ, ಚಕ್ರ, ಹಿಡಿದಿದ್ದು, ಮುಂದಿನ ಕೈಗಳು ಹಾಳಾಗಿವೆ. ಇಕ್ಕೆಲಗಳಲ್ಲಿ ಶ್ರೀದೇವಿ-

ಭೂದೇವಿಯರು ತಮ್ಮ ಕೈಗಳಲ್ಲಿ ಪದ್ಮ ಹಿಡಿದು ಸಮಭಂಗಿಯಲ್ಲಿ ನಿಂತಿದ್ದಾರೆ. ಜನಾರ್ದನನ ಹಿಂಭಾಗದಲ್ಲಿ ಪ್ರಭಾವಳಿ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಗರ್ಭಗೃಹದಲ್ಲಿ ಪದ್ಮದಳದಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡ ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ಪದ್ಮ, ಲತಾಬಳ್ಳಿ, ಕಂಬ, ಹೂಬಳ್ಳಿ, ಬಳೆಗಳ ರಚನೆಗಳನ್ನು ಹೊಂದಿವೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅದರ ಮೇಲ್ಭಾಗದಲ್ಲಿ ಭೈರವ ಮತ್ತು ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರು, ದರ್ಪಣ ಸುಂದರಿ, ನಾಗಿಣಿ, ನೃತ್ಯಗಾರ್ತಿಯರ ಉಬ್ಬುಶಿಲ್ಪಗಳಿವೆ. ಎಲ್ಲಾ ಗರ್ಭಗೃಹದ ಬಾಗಿಲುವಾಡಗಳು ಒಂದೇ ರೀತಿಯ ಅಲಂಕಾರವನ್ನು ಹೊಂದಿವೆ.

ಪೂರ್ವದ ಗರ್ಭಗೃಹದಲ್ಲಿ ಅಶ್ವಪೀಠದ ಮೇಲೆ ಸಮಭಂಗಿಯಲ್ಲಿ ನಿಂತ ಸೂರ್ಯನ ಮೂರ್ತಿಶಿಲ್ಪವಿದೆ. ಪೀಠದ ಜಲಹರಿವು ಬಲಭಾಗಕ್ಕಿದೆ.

ಪಶ್ಚಿಮದ ಗರ್ಭಗೃಹದಲ್ಲಿ ಶಿವಲಿಂಗವಿದೆ. ಇಲ್ಲಿನ ಭುವನೇಶ್ವರಿಯು ಪದ್ಮಾಕಾರದಲ್ಲಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಇಕ್ಕೆಲಗಳಲ್ಲಿ ತ್ರಿಶೂಲ ಡಮರು ಹಿಡಿದು ನಿಂತ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಜಾಲಂಧ್ರಗಳಿವೆ. ಮೂರು ಅಂತರಾಳಗಳು ಮಂಟಪಕ್ಕೆ ತೆರೆದುಕೊಂಡಿವೆ. ಮಂಟಪದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು, ಇವು ಪೀಠ, ಪಾದ, ಹದಿನಾರು-ಎಂಟು-ಹದಿನಾರುಕೋನ, ಕಲಶ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಮಂಟಪದ ಮಧ್ಯದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಮಂಟಪದ ಮಧ್ಯಭಾಗದಲ್ಲಿ ಪೀಠದ ಮೇಲೆ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇನ್ನೂ ಮಂಟಪದಲ್ಲಿ ಗಣೇಶ, ದಕ್ಷಬ್ರಹ್ಮ, ರತಿ-ಮನ್ಮಥ, ಸಪ್ತಮಾತೃಕೆಯರ ಪಟ್ಟಿಕೆ, ಉಮಾ-ಮಹೇಶ್ವರ, ನಂದಿ ಮತ್ತು ನಾಗಶಿಲ್ಪಗಳಿವೆ. ಮಂಟಪದ ಬಾಗಿಲುವಾಡ ಸಪ್ತ ಶಾಖೆಗಳಿಂದ ಕೂಡಿದೆ. ಈ ಏಳು ಶಾಖೆಗಳು ಪದ್ಮ, ಲತಾಬಳ್ಳಿ, ವಾದ್ಯಗಾರ, ಕಂಬ, ಬಳೆಗಳ ರಚನೆಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಶಕ್ತಿದೇವತೆ, ಗಣೇಶ, ಸರಸ್ವತಿ ಮುಂತಾದ ಉಬ್ಬುಶಿಲ್ಪಗಳಿವೆ. ಬಾಗಿಲುವಾಡದ ಕೆಳಭಾಗದಲ್ಲಿ ದರ್ಪಣ ಸುಂದರಿ, ನೃತ್ಯಗಾರ್ತಿಯರ ಉಬ್ಬುಶಿಲ್ಪಗಳಿವೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನವಿದ್ದು ಉಪಾನ, ಜಗತಿ ಹಾಗೂ ಪದ್ಮಗಳನ್ನು ಒಳಗೊಂಡಿದೆ. ಭಿತ್ತಿಯು ಕೂಡ ಸರಳವಾಗಿದೆ. ಪ್ರಸ್ತರದಲ್ಲಿ ಕಪೋತ ಪದ್ಮ ರಚನೆಗಳ ಜೊತೆಗೆ ಮಹಿಷಾಸುರಮರ್ದಿನಿ, ಶಿವ, ಗಣೇಶ, ಆನೆ, ಮಕರ, ಕಾಳಿ, ಅಷ್ಟದಿಕ್ಪಾಲಕರು, ಹಂಸ, ಗಂಧರ್ವ, ಬ್ರಹ್ಮ, ನರಸಿಂಹ, ವಿಷ್ಣು, ಭೈರವ, ಮಾಧವ ಶಿಲ್ಪಗಳಿವೆ. ಪೂರ್ವದ ಗರ್ಭಗೃಹದ ಮೇಲೆ ಕದಂಬ ನಾಗರಶೈಲಿಯ ಶಿಖರ ಭಾಗವಿದೆ. ಶಿಖರದ ಎರಡು ಭಾಗ ಕೀರ್ತಿಮುಖಗಳಿಂದ ಕೂಡಿದೆ. ಮೇಲ್ಭಾಗವು ಗಜಪೃಷ್ಠಾಕಾರದಲ್ಲಿದೆ.

**೨೧. ಬ್ಯಾಲಹುಣಸಿಯ ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಕಲ್ಲೇಶ್ವರ ದೇವಾಲಯ ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.

೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ತ್ರಿಕೂಟಾಚಲವಾದ ಈ ದೇವಾಲಯ ಮೂರು ಗರ್ಭಗೃಹಗಳು ಅವುಗಳಿಗೆ ಹೊಂದಿಕೊಂಡು ತೆರೆದ ಅಂತರಾಳಗಳು ಮತ್ತು ಸಭಾಮಂಟಪಗಳಿವೆ. ಈಗ ಪಶ್ಚಿಮ ಭಾಗದ ಗರ್ಭಗೃಹ ಮಾತ್ರ ಉಳಿದಿದ್ದು ಪೂರ್ವ ಮತ್ತು ಉತ್ತರ ಭಾಗದ ಗರ್ಭಗೃಹಗಳು ಹಾಳಾಗಿವೆ. ಪಶ್ಚಿಮ ಭಾಗದ ಗರ್ಭಗೃಹದಲ್ಲಿ ಮೂರು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರ ಮತ್ತು ಎರಡು ದೇವಕೋಷ್ಠಗಳಿವೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಮೂರು ಅಂತರಾಳಗಳು ಮಂಟಪಕ್ಕೆ ತೆರೆದುಕೊಂಡಿವೆ.

ಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರಕಂಬಗಳು ಇವೆ. ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ, ವೃತ್ತ, ಕಲಶ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಮಂಟಪದಲ್ಲಿ ನಂದಿ, ಸಪ್ತಮಾತೃಕೆ ಹಾಗೂ ಗಣೇಶನ ಮೂರ್ತಿಶಿಲ್ಪಗಳಿವೆ. ಮಂಟಪದ ಪ್ರವೇಶದ್ವಾರವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದ್ದು, ಅದರ ಮೇಲೆ ರೇಖಾ ನಾಗರಶೈಲಿಯ ಐದು ಶಿಖರಗಳಿವೆ. ಇತ್ತೀಚೆಗೆ ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ.

**೨೨. ಉತ್ತಂಗಿಯ ಶಂಕರಲಿಂಗ ದೇವಾಲಯ:** ಗ್ರಾಮದ ಬಸ್ ನಿಲ್ದಾಣದ ಹತ್ತಿರದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ ನೆಯ ಶತಮಾನಕ್ಕೆ ಸೇರಿದೆ. ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ವಿಶಾಲವಾದ ಸಭಾಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸರಳವಾಗಿವೆ. ಆದರೆ ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮದಳಾಕಾರವುಳ್ಳ ಜಾಲಂಧ್ರವಿದೆ.

ವಿಶಾಲವಾದ ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪೀಠ, ಪಾದ, ವೃತ್ತ, ಕಲಶ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಮಧ್ಯದ ಭುವನೇಶ್ವರವು ಪದ್ಮದಳಾದಾಕಾರದಲ್ಲಿದೆ. ನವರಂಗದಲ್ಲಿ ಒಟ್ಟು ಐದು ದೇವಕೋಷ್ಠಗಳಿವೆ. ನವರಂಗದ ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ ಹಾಗೂ ಮುಂಭಾಗದಲ್ಲಿ ಎರಡು ಸಣ್ಣ ಕೋಣೆಯ ರಚನೆಗಳಿವೆ. ಸಭಾಮಂಟಪದ ಗೋಡೆಗೆ ಹೊಂದಿಕೊಂಡಿರುವ ಕ್ರಿ.ಶ.೧೧೫೦ರ ಕಲ್ಯಾಣ ಚಾಲುಕ್ಯರ ಶಾಸನದಲ್ಲಿ ಕುತ್ತಂಗಿಯಲ್ಲಿ ಸೌದರ ಬಸವಯ್ಯನು ಕಟ್ಟಿಸಿದ ಬಸವೇಶ್ವರ ದೇವರ ಸೇವಾಕಾರ್ಯಗಳಿಗೆ ಭೂದಾನ ಮಾಡಿದ ಉಲ್ಲೇಖವಿದೆ.

ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ. ಪ್ರಸ್ತಾರದಲ್ಲಿ ಮುಂಚಾಚಿದ ಕಪೋತ ರಚನೆಯಿದ್ದು, ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾದ ಕದಂಬ ನಾಗರ ಶೈಲಿಯ ಶಿಖರವಿದೆ. ಶಿಖರದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿವೆ. ಶಿಖರ ಭಾಗದಲ್ಲಿ ನೃತ್ಯಗಾರರ, ವಾದ್ಯಗಾರರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ದೇವಾಲಯದ ಮುಂಭಾಗದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಮೂರು ಹಂತಗಳಿಂದ ಕೂಡಿದ ವೀರಗಲ್ಲು ಇದೆ.

**೨೩. ಉತ್ತಂಗಿಯ ಈಶ್ವರಲಿಂಗ ದೇವಾಲಯ(ರಾಜೇಶ್ವರಿ ದೇವಾಲಯ):** ಗ್ರಾಮದ ಪೂರ್ವಕ್ಕಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨-೧೩ನೆಯ ಶತಮಾನಕ್ಕೆ ಸೇರಿದೆ. ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪ ಭಾಗಗಳಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಆಧುನಿಕವಾಗಿ ಪ್ರತಿಷ್ಠಾಪಿಸಲಾದ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ಅತ್ಯಂತ ಸರಳವಾಗಿದೆ. ಅಂತರಾಳದ ಭಾಗವು ಸಭಾಮಂಟಪಕ್ಕೆ ತೆರೆದುಕೊಂಡಿದೆ. ಅಂತರಾಳದಲ್ಲಿ ಶಿವಲಿಂಗಕ್ಕೆ ಎದುರಾಗಿ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿದ್ದು, ಈ ಕಂಬಗಳು ಪೀಠ, ಪಾದ, ವೃತ್ತ, ಅಷ್ಟಪಟ್ಟಿಕೆ, ಕಲಶ, ಘಟ, ಫಲಕ, ಬೋದಿಗೆಗಳ ರಚನೆಗಳನ್ನು ಹೊಂದಿವೆ. ನವರಂಗದ ದಕ್ಷಿಣ ಕಡೆಯ ಇನ್ನೊಂದು ಪ್ರವೇಶ ದ್ವಾರವಿದೆ. ನವರಂಗ, ಅಂತರಾಳ, ಗರ್ಭಗೃಹದ ಮೇಲ್ಛಾವಣಿಯಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ನವರಂಗದಲ್ಲಿ ಒಂದು ವಿಶಾಲವಾದ ದೇವಕೋಷ್ಠವಿದೆ. ಪೂರ್ವದ ಬಾಗಿಲುವಾಡ ಸರಳವಾಗಿದೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗಗಳನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ.

**೨೪. ಉತ್ತಂಗಿಯ ರಾಮೇಶ್ವರ ದೇವಾಲಯ:** ಗ್ರಾಮದ ಮಧ್ಯದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಮೂರು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಶಿವಲಿಂಗದ ಎದುರಿಗೆ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿರುವ ಉತ್ತರದ ಒಳಭಿತ್ತಿಯ ಭಾಗವು ಮುಂಚಾಚಿಕೊಂಡಿದ್ದು, ಗರ್ಭಗೃಹದ ಬಾಗಿಲುವಾಡ ಮತ್ತು ಅಂತರಾಳದ ಬಾಗಿಲುವಾಡಗಳು ಸರಳವಾಗಿದ್ದು, ಅವುಗಳನ್ನು ನವೀಕರಿಸಲಾಗಿದೆ.

ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ಅಷ್ಟಪಟ್ಟಿಕೆ, ವೃತ್ತ, ಕಲಶ, ಘಟ, ಫಲಕ, ಬೋದಿಗೆಗಳನ್ನು ಹೊಂದಿದೆ. ಒಂದು ಕಂಬದಲ್ಲಿ ಕ್ರಿ.ಶ. ೧೨೨೮ರ ಹೊಯ್ಸಳರ ಶಾಸನವಿದ್ದು, ರಾಮನಾಥ ದೇವರ ಸೇವಾಕಾರ್ಯಗಳಿಗೆ ದಾನ ನೀಡಿದ ವಿವರ ತಿಳಿಸುತ್ತದೆ. ಸಭಾಮಂಟಪದ ಮಧ್ಯದಲ್ಲಿ ಪದ್ಮದಳದಾಕಾರದ ಭುವನೇಶ್ವರವಿದೆ. ಸಭಾಮಂಟಪದಲ್ಲಿ ವಿಶಾಲವಾದ ಎರಡು ದೇವಕೋಷ್ಠಗಳಿವೆ. ಸಭಾಮಂಟಪದ ಬಾಗಿಲುವಾಡವು ಕೂಡ ಸರಳವಾಗಿದೆ. ದೇವಾಲಯದ ಅಧಿಷ್ಠಾನ ಭಾಗ ಕಾಣಿಸುವುದಿಲ್ಲ. ಆದರೆ ಭಿತ್ತಿಯ ಭಾಗವು ಸರಳವಾಗಿದೆ. ಭಿತ್ತಿಯ ಮೇಲೆ ಪ್ರಸ್ತರವಿದ್ದು, ಕಪೋತ ಮತ್ತು ಪದ್ಮರಚನೆಗಳನ್ನು ಹೊಂದಿದೆ. ದೇವಾಲಯಕ್ಕೆ ಆಧುನಿಕವಾದ ಶಿಖರ ಭಾಗವಿದೆ. ದೇವಾಲಯದ ತಲವಿನ್ಯಾಸವನ್ನು ಗಮನಿಸಿದಾಗ ದೇವಾಲಯವು ಇನ್ನೂ ಮುಂದುವರಿದಿದ್ದು ಸ್ಪಷ್ಟವಾಗಿದೆ.

**೨೫. ಹುಗಲೂರು ರಾಮಲಿಂಗೇಶ್ವರ ದೇವಾಲಯ:** ಗ್ರಾಮದ ಪಶ್ಚಿಮಕ್ಕೆ ಪೂರ್ವಾಭಿಮುಖ ವಾಗಿರುವ ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಮಧ್ಯಮ ಸ್ಥಿತಿಯಲ್ಲಿರುವ ಈ ದೇವಾಲಯದ ನಿರ್ಮಾಣಕ್ಕೆ ಗ್ರಾನೈಟ್ ಮತ್ತು ಕಪ್ಪುಶಿಲೆಯನ್ನು ಬಳಸಲಾಗಿದೆ.

ಎತ್ತರದ ಜಗತಿಯ ಮೇಲೆ ನಿರ್ಮಿಸಲಾದ ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹವು ಸಾದಾ ಬಾಗಿಲುವಾಡ ಮತ್ತು ಭುವನೇಶ್ವರಿಯಿಂದ ಕೂಡಿದೆ. ಅಂತರಾಳದ ಬಾಗಿಲುವಾಡದ ಲಲಾಟದಲ್ಲಿ ಗಜಲಕ್ಷ್ಮೀ, ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಸಭಾಮಂಟಪದಲ್ಲಿ ಸಾದಾ ಭುವನೇಶ್ವರಿ, ಚೌಕಾಕಾರದ ನಾಲ್ಕು ಸ್ವತಂತ್ರ ಕಂಬಗಳು ಇದ್ದು, ಅವು ಫಲಕ, ಬೋದಿಗೆಗಳಿಂದ ಕೂಡಿವೆ. ಸಭಾಮಂಟಪದಲ್ಲಿ ಮೂರು ನಂದಿಶಿಲ್ಪಗಳು, ಗಣೇಶ, ನಾಗ, ನಾಗಿಣಿಯರ ಶಿಲ್ಪಗಳಿವೆ. ಸಭಾಮಂಟಪ ಮತ್ತು ಪ್ರಾಕಾರದ ಗೋಡೆಯನ್ನು ನವೀಕರಿಸಲಾಗಿದೆ. ಸಾದಾ ಭಿತ್ತಿಯಿದೆ. ಗೋಪುರವಿಲ್ಲ. ಮುಂದೆ ಗರುಡಗಂಬವಿದೆ.

**೨೬. ಹೊಳಗುಂದಿಯ ಸೋಮೇಶ್ವರ ದೇವಾಲಯ:** ಗ್ರಾಮದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಇದು ಕ್ರಿ.ಶ.೧೧೬೪ಕ್ಕೆ ಸೇರಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕಣಶಿಲೆಯಲ್ಲಿ ನಿರ್ಮಾಣವಾಗಿದೆ. ಮಧ್ಯಮ ಸ್ಥಿತಿಯಲ್ಲಿರುವ ಈ ದೇವಾಲಯ ಎತ್ತರವಾದ ಜಗತಿಯ ಮೇಲೆ ನಿರ್ಮಾಣವಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲುವಾಡವು ಸರಳವಾಗಿದ್ದು, ಇಕ್ಕೆಲಗಳಲ್ಲಿ ಕುಂಭಗಳಿವೆ. ಲಲಾಟಬಿಂಬದಲ್ಲಿ ತೀರ್ಥಂಕರನ ಉಬ್ಬುಶಿಲ್ಪವಿದೆ. ತೆರೆದ ಅಂತರಾಳದಲ್ಲಿ ನಂದಿ ವಿಗ್ರಹವಿದೆ. ಸಭಾಮಂಟಪದಲ್ಲಿ ನಾಲ್ಕು ಚೌಕಾಕಾರದ ಕಂಬಗಳು ಮೇಲೆ ಕೆಳಗೆ ಚೌಕ ಪಟ್ಟಿಕೆಗಳನ್ನು ಫಲಕ, ಬೋದಿಗೆಗಳನ್ನು ಹೊಂದಿದೆ. ಸಭಾಮಂಟಪದ ಮಧ್ಯ ಅಲಂಕೃತ

ಭುವನೇಶ್ವರಿ ಇದೆ. ಹನ್ನೆರಡು ಅರ್ಧಗಂಬಗಳಿವೆ. ಸಭಾಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಸಭಾಮಂಟಪದ ಬಾಗಿಲುವಾಡವು ಅರ್ಧಗಂಬ, ಹೂವಿನ ಎಸಳು, ಪದ್ಮಗಳಿಂದ ಅಲಂಕೃತಗೊಂಡಿದೆ. ಮುಖಮಂಟಪದ ಸುತ್ತಲೂ ಕಕ್ಷಾಸನವಿದೆ. ಮುಖಮಂಟಪವು ಎರಡು ಪೂರ್ಣಕಂಬ ಎರಡು ಅರ್ಧಗಂಬಗಳಿಂದ ಕೂಡಿದೆ.

ಸೋಮೇಶ್ವರ ದೇವಾಲಯ ಮೂಲತಃ ಜೈನಬಸದಿಯಾಗಿತ್ತು. ನಂತರದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಶೈವ ದೇವಾಲಯವನ್ನಾಗಿ ಪರಿವರ್ತಿಸಲಾಗಿರುವುದನ್ನು ಇಲ್ಲಿನ ವಾಸ್ತು ಕುರುಹುಗಳು ಸೂಚಿಸುತ್ತವೆ. ಅಲ್ಲದೆ ಇಲ್ಲಿರುವ ಶಾಸನವೊಂದು ಇದು ಮೂಲತಃ ಜೈನ ದೇವಾಲಯವಾಗಿತ್ತೆಂಬುದನ್ನು ಉಲ್ಲೇಖಿಸಿದೆ. ಶಾಸನದ ಮೇಲ್ಭಾಗದಲ್ಲಿ ಜಿನ ಶಿಲ್ಪವಿದೆ.

ಇಲ್ಲಿನ ಶಾಸನ ನಾಚಿದೇವನ ಹೆಸರನ್ನು ಉಲ್ಲೇಖಿಸುತ್ತದೆ. ಹೊಳಗುಂದಿಯನ್ನು ಆಳಿದ ಮಲ್ಲಿನಾಥನು ಮಲ್ಲಿನಾಥ ದೇವರಿಗೆ ಬಸದಿ ಕಟ್ಟಿಸಿ, ಮೂಲಸಂಘ ಸೂರಸ್ತಗಣದ ಚಿತ್ರಕೊಟ್ಟೆಗಚ್ಚಕ್ಕೆ ಸೇರಿದ ನಾಗಚಂದ್ರ ಭಟ್ಟಾರಕನ ಎದುರಿನಲ್ಲಿ ದೇವರ ಸೇವಾಕಾರ್ಯಗಳಿಗಾಗಿ ಭೂದಾನ ಮಾಡಿದನು.

**೨೭. ಹಿರೆಬನ್ನಿಮಟ್ಟಿ ರಾಮಲಿಂಗೇಶ್ವರ ದೇವಾಲಯ:** ಗ್ರಾಮದ ವಾಯುವ್ಯ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸಂರಕ್ಷಣೆ ಮತ್ತು ಕನಿಷ್ಠ ಸ್ಥಿತಿ ಹೊಂದಿದೆ.

ಪ್ರಸ್ತುತ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ತೆರೆದ ಅಂತರಾಳ ಮಾತ್ರ ಕಾಣುತ್ತವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ತೆರೆದ ಅಂತರಾಳದ ಇಕ್ಕೆಲಗಳಲ್ಲಿ ಚಾಲುಕ್ಯ ಶೈಲಿಯ ಎರಡು ಚೌಕಾಕಾರದ ಕಂಬಗಳಿವೆ.

**೨೮. ಹಗರನೂರು ಕಲ್ಲೇಶ್ವರ ದೇವಾಲಯ:** ಗ್ರಾಮದ ಆಗ್ನೇಯ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ರಾಜ್ಯ ಪುರಾತತ್ವ ಇಲಾಖೆ ಅಧೀನದಲ್ಲಿದ್ದು ಕನಿಷ್ಠ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ಅಂತರಾಳದಲ್ಲಿ ನಂದಿ ವಿಗ್ರಹಗಳಿವೆ. ಸಭಾಮಂಟಪದಲ್ಲಿ ನಾಲ್ಕು ಕಲ್ಯಾಣ ಚಾಲುಕ್ಯ ಮಾದರಿಯ ಕಂಬಗಳಿದ್ದು, ಫಲಕ, ಬೋದಿಗೆಗಳಿಂದ ಕೂಡಿವೆ. ಸಭಾಮಂಟಪದಲ್ಲಿ ಸಮಭಂಗಿಯ ವಿಷ್ಣುವಿನ ಶಿಲ್ಪ, ನಾಗಶಿಲ್ಪಗಳಿವೆ. ಸಭಾಮಂಟಪಕ್ಕೆ ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ಪ್ರವೇಶ ದ್ವಾರಗಳಿವೆ. ಅತ್ಯಂತ ಕನಿಷ್ಠ ಸ್ಥಿತಿಯಲ್ಲಿದೆ.

**೨೯. ಹರವಿಯ ಕಲ್ಲೇಶ್ವರ ದೇವಾಲಯ:** ಗ್ರಾಮದ ಆಗ್ನೇಯ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಮಧ್ಯಮ ಸ್ಥಿತಿಯಲ್ಲಿದೆ. ಇತ್ತೀಚೆಗೆ ಇದನ್ನು ಪೂರ್ಣ ಪ್ರಮಾಣದಲ್ಲಿ ನವೀಕರಿಸಲಾಗಿದೆ. ಇದರ ಅವಶೇಷಗಳಾದ ಕಲ್ಯಾಣ ಚಾಲುಕ್ಯರ ಕಾಲದ ಶಿವಲಿಂಗಗಳು, ನಂದಿಶಿಲ್ಪಗಳು, ಸಪ್ತಮಾತೃಕೆಯರು, ನಾಗಶಿಲ್ಪಗಳನ್ನು ಅಲ್ಲದೆ ಐದು ವೀರಗಲ್ಲುಗಳನ್ನು ಆವರಣದಲ್ಲಿ ಕಾಣಬಹುದು.

**೩೦. ಅಂಗೂರು ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಮಧ್ಯಮ ಸ್ಥಿತಿಯಲ್ಲಿದೆ.

ತ್ರಿಕೂಟಾಚಲ ದೇವಾಲಯವಾಗಿದೆ. ಮೂರು ಗರ್ಭಗೃಹಗಳು, ಅವುಗಳಿಗೆ ಹೊಂದಿಕೊಂಡಂತೆ ಇರುವ ತೆರೆದ ಅಂತರಾಳಗಳು ಹಾಗೂ ದೊಡ್ಡ ಸಭಾಮಂಟಪದಿಂದ ಕೂಡಿದೆ. ಪಶ್ಚಿಮ ದಿಕ್ಕಿನ ಗರ್ಭಗೃಹದಲ್ಲಿ ಶಿವಲಿಂಗವಿದೆ. ಪದ್ಮಾಲಂಕೃತ ಭುವನೇಶ್ವರಿಯಿಂದ ಕೂಡಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು, ಹೂವಿನ ಎಸಳುಗಳು, ಅರ್ಧಗಂಬ, ವಜ್ರಾಕಾರದ ಕೆತ್ತನೆ, ಪದ್ಮಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ.

ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿರುವ ಚತುರ್ಭುಜಧಾರಿ ಜನಾರ್ಧನನ ಶಿಲ್ಪವಿದೆ. ಮುಂದಿನ ಕೈಗಳು ಹಾಳಾಗಿದ್ದು, ಹಿಂದಿನ ಕೈಗಳಲ್ಲಿ ಶಂಖ, ಚಕ್ರ ಹಿಡಿದಿರುವನು. ಇವನ ಇಕ್ಕೆಲಗಳಲ್ಲಿ ಕೈಗಳಲ್ಲಿ ಪದ್ಮ ಹಿಡಿದು ನಿಂತಿರುವ ಶ್ರೀದೇವಿ–ಭೂದೇವಿಯರ ಸಮಭಂಗಿಯ ಶಿಲ್ಪಗಳಿವೆ. ಹಿಂಭಾಗದಲ್ಲಿ ಕೀರ್ತಿಮುಖದಿಂದ ಕೂಡಿದ ಪ್ರಭಾವಳಿಯಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅದರ ಮೇಲ್ಭಾಗದಲ್ಲಿ ನರಸಿಂಹ, ಆತನ ಅಕ್ಕಪಕ್ಕದಲ್ಲಿ ಲಕ್ಷ್ಮಿ ಹಾಗೂ ಸರಸ್ವತಿಯರ ಶಿಲ್ಪಗಳಿವೆ. ಬಾಗಿಲುವಾಡವು ಹೂವಿನ ಎಸಳುಗಳು, ಅರ್ಧಗಂಬ, ವಜ್ರಾಕಾರದ ಕೆತ್ತನೆ, ಪದ್ಮಗಳಿಂದ ಅಲಂಕೃತವಾಗಿದ್ದು, ಪಂಚಶಾಖೆಗಳಿಂದ ಕೂಡಿದೆ. ಇಲ್ಲಿ ಜನಾರ್ಧನ ಶಿಲ್ಪದಲ್ಲಿ ಕೃಷ್ಣನ ಬದಲಾಗಿ ಬುದ್ದನನ್ನು ತೋರಿಸಲಾಗಿದೆ.

ಪೂರ್ವದ ಗರ್ಭಗೃಹದಲ್ಲಿ ಅಶ್ವಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಸೂರ್ಯನ ಶಿಲ್ಪವಿದೆ. ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿ, ಅದರ ಮೇಲ್ಭಾಗ ಸೂರ್ಯನಾರಾಯಣನ ಶಿಲ್ಪವಿದೆ. ದ್ವಾರಪಾಲಕರಿದ್ದಾರೆ.

ವಿಶಾಲವಾದ ಸಭಾಮಂಟಪದ ಬಾಗಿಲುವಾಡವು ಸಪ್ತಶಾಖೆಗಳಿಂದ ಕೂಡಿದೆ. ಕ್ರಮವಾಗಿ ಹೂವಿನ ಎಸಳುಗಳು, ಪದ್ಮಗಳು, ಮಿಥುನ ಶಿಲ್ಪಗಳು, ಅರ್ಧಗಂಬ, ವಜ್ರಾಕಾರದ ಕೆತ್ತನೆಗಳಿಂದ

ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಪ್ರತಿ ಶಾಖೆಯ ತೋರಣದಡಿಯಲ್ಲಿ ಮೇಲ್ಭಾಗದಲ್ಲಿ ನಟರಾಜ, ಇಬ್ಬರು ಯಕ್ಷಿಯರು, ಗಣೇಶ ಮತ್ತು ಕಾರ್ತಿಕೇಯರ ಶಿಲ್ಪಗಳಿವೆ.

ಸಭಾಮಂಟಪದ ಮಧ್ಯದಲ್ಲಿ ಚೌಕಕಾರದ ನಾಲ್ಕು ಕಂಬಗಳಿವೆ, ಕಂಬಗಳು ಮೇಲೆ, ಕೆಳಗೆ ಚೌಕಾಕಾರ, ಮಧ್ಯ ಎಂಟು–ಹದಿನಾರು ಭಾಗದ ಪಟ್ಟಿಕೆಗಳು, ಮೇಲ್ಭಾಗ ವೃತ್ತಾಕಾರದ ಫಲಕ ಮತ್ತು ಬೋದಿಗೆಗಳಿಂದ ಕೂಡಿವೆ. ಸಭಾಮಂಟಪದಲ್ಲಿ ಗಣೇಶ, ದಕ್ಷಬ್ರಹ್ಮ, ಸಪ್ತಮಾತೃಕೆಯರು, ಮಹಿಷಾಸುರಮರ್ದಿನಿ, ರತಿ–ಮನ್ಮಥ, ಆಲಿಂಗನ ಚಂದ್ರಶೇಖರನ ಮೂರ್ತಿ ಮತ್ತು ನಂದಿ, ನಾಗಶಿಲ್ಪಗಳಿವೆ.

ಅಧಿಷ್ಠಾನವು ಜಗತಿ ಮತ್ತು ಪದ್ಮಗಳಿಂದ ಕೂಡಿದೆ. ಗೋಡೆಯು ಸರಳವಾಗಿದೆ. ಕಪೋತ ಭಾಗದ ಸುತ್ತಲೂ ಶಿವ, ಭೈರವ, ಏಕದಾಸ, ರುದ್ರ, ಗಣೇಶ, ಮಾಧವ, ನರಸಿಂಹ, ಬ್ರಹ್ಮ, ಅಷ್ಟದಿಕ್ಪಾಲಕರು, ಕಾಳಿ, ಮಹಿಷಾಸುರಮರ್ದಿನಿ, ಸರಸ್ವತಿ, ಗಂಧರ್ವರು, ನೃತ್ಯಗಾರರು, ಸಂಗೀತಗಾರರು, ಆನೆ, ಸಿಂಹ, ಹಂಸ, ಮಕರ ಮುಂತಾದ ಶಿಲ್ಪಗಳಿವೆ. ಈ ದೇವಾಲಯದ ಕೆಲವೊಂದು ಭಾಗಗಳನ್ನು ಜೀರ್ಣೋದ್ಧಾರಗೊಳಿಸಲಾಗಿದೆ.

**೩೧. ಆಲಿಪುರದ ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ತೆರೆದ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪೀಠದ ಮೇಲೆ ಉಮಾ-ಮಹೇಶ್ವರನ ಶಿಲ್ಪವಿದೆ. ಈತನ ಹಿಂದಿನ ಕೈಗಳಲ್ಲಿ ತ್ರಿಶೂಲ, ಡಮರು ಮತ್ತು ಮುಂದಿನ ಕೈಗಳು ಅಭಯ ಮುದ್ರೆ ಮತ್ತು ಮಹೇಶ್ವರಿಯನ್ನು ಆವರಿಸಿದೆ. ಉಮಾಳ ಬಲಗೈ ಅಭಯ ಹಸ್ತವಾಗಿದ್ದು, ಎಡಗೈನಲ್ಲಿ ಪುಷ್ಪವಿದೆ. ಅಂತರಾಳ ಸರಳವಾಗಿದ್ದು, ಅದರ ಮುಂದಿನ ಸಭಾಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಮಾದರಿಯ ಚೌಕಾಕಾರದ ಎಂಟು ಕಂಬಗಳಿವೆ. ಭುವನೇಶ್ವರಿಯಲ್ಲಿ ಅಲಂಕೃತ ಪದ್ಮವಿದೆ. ಅಂತರಾಳದಲ್ಲಿ ನಂದಿ ವಿಗ್ರಹವಿದೆ.

**೩೨. ಕತ್ತೆಬೆನ್ನೂರಿನ ಕಲ್ಲೇಶ್ವರ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಮರಳು ಶಿಲೆಯಿಂದ ನಿರ್ಮಿಸಿದ ಈ ದೇವಾಲಯವನ್ನು ಜೀರ್ಣೋದ್ಧಾರ ಗೊಳಿಸಲಾಗಿದ್ದು, ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲುವಾಡವು ಅಲಂಕೃತವಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ಜಾಲಂಧ್ರಗಳು, ಅರ್ಧಗಂಬಗಳಿಂದ ಕೂಡಿದೆ, ಕಂಬಗಳಿವೆ. ಇವು ಕೆಳಗೆ ಮೇಲೆ ಚೌಕಾಕಾರದ ಕಂಬಗಳನ್ನು ಮೇಲ್ಭಾಗದಲ್ಲಿ ಫಲಕ

ಬೋದಿಗೆಗಳಿಂದ ಕೂಡಿವೆ. ಕಂಬದ ಮೇಲೆ ಒಂದು ಸಾಲಿನ ಶಾಸನವಿದೆ. ಮೂರು ಕಡೆಗಳಲ್ಲಿ ಪ್ರವೇಶ ದ್ವಾರಗಳಿವೆ. ಸಭಾಮಂಟಪವು ವಿಶಾಲವಾಗಿದೆ.

**೩೩. ತಿಪ್ಪಾಪುರದ ಈಶ್ವರ ದೇವಾಲಯ:** ತಿಪ್ಪಾಪುರ ಗ್ರಾಮದ ಒಳಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಹಾಗೂ ತೆರೆದ ಸಭಾಮಂಟಪಗಳಿಂದ ಕೂಡಿದೆ. ವಿಶಾಲವಾದ ಸಭಾಮಂಟಪವಿದೆ. ಗರ್ಭಗೃಹದಲ್ಲಿ ಚಾಲುಕ್ಯರ ಕಾಲದ ಈಶ್ವರ ಲಿಂಗ, ಗಣೇಶ ಮತ್ತು ನಂದಿಯ ವಿಗ್ರಹವಿದೆ.

**೩೪. ರಾಜುವಾಳ ಕಲ್ಲೇಶ್ವರ ದೇವಾಲಯ:** ಗ್ರಾಮದ ತುಂಗಭದ್ರಾ ನದಿ ಬಲದಂಡೆಯ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಇದು ಕನಿಷ್ಠ ಸ್ಥಿತಿಯಲ್ಲಿದೆ. ಗರ್ಭಗೃಹ ಮತ್ತು ಮುಂದಿನ ಮಂಟಪದ ಭಾಗ ಮಾತ್ರ ಇದ್ದು, ಉಳಿದ ಭಾಗ ಸಂಪೂರ್ಣವಾಗಿ ಹಾಳಾಗಿದೆ. ಇದನ್ನು ಇಟ್ಟಿಗೆಯಿಂದ ಜೀರ್ಣೋದ್ಧಾರಗೊಳಿಸಲಾಗಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರವಿರುವ ಶಿವಲಿಂಗವಿದೆ. ಗರ್ಭಗೃಹ ಮತ್ತು ಅಂತರಾಳದ ಪ್ರವೇಶದ್ವಾರಗಳು ಸಾದಾ ಕೆತ್ತನೆಯಿಂದ ಕೂಡಿವೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ. ದೇವಾಲಯದ ಮುಂಭಾಗದ ಕಟ್ಟೆಯ ಮೇಲೆ ಕಲ್ಯಾಣ ಚಾಲುಕ್ಯರ ಕಾಲದ ಸುಮಾರು ಒಂದೂವರೆ ಅಡಿ ಎತ್ತರವಿರುವ ಉಮಾ-ಮಹೇಶ್ವರರ ಮೂರ್ತಿಶಿಲ್ಪವಿದೆ. ಶಿಲ್ಪವು ಸುಂದರವಾಗಿದೆ. ಮಹೇಶ್ವರನ ಕೈಗಳಲ್ಲಿ ತ್ರಿಶೂಲ-ಡಮರುಗಳಿದ್ದು, ಉಳಿದೆರಡು ಅಭಯ ಹಾಗೂ ಉಮಾಳನ್ನು ಬಳಸಿವೆ. ಉಮಾಳ ಕೈಗಳಲ್ಲಿ ವರದ, ಫಲಗಳಿವೆ. ಮುಂಭಾಗದಲ್ಲಿ ನೆಲದ ಮೇಲೆ ಮಲಗಿರುವ ಸುಮಾರು ಐದು ಅಡಿ ಎತ್ತರವಿರುವ ಮೂರು ಹಂತಗಳ ವೀರಗಲ್ಲು ಇದ್ದು, ಅಧ್ಯಯನಯೋಗ್ಯವಾಗಿದೆ.

**೩೫. ಶಿವಲಿಂಗನಹಳ್ಳಿಯ ಕಲ್ಲೇಶ್ವರ ದೇವಾಲಯ:** ಗ್ರಾಮದ ಪಶ್ಚಿಮಕ್ಕಿರುವ ಹಾಳೂರಿನಲ್ಲಿರುವ ಈ ದೇವಾಲಯ ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಈ ದೇವಾಲಯದ ಗರ್ಭಗೃಹ ಮತ್ತು ಅಂತರಾಳ ಮಾತ್ರ ಪ್ರಸ್ತುತ ಉಳಿದಿದ್ದು, ಮುಂದಿನ ಭಾಗ ಹಾಳಾಗಿದೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಎರಡು ನಂದಿ ಶಿಲ್ಪಗಳಿವೆ. ಅಂತರಾಳದ ಬಾಗಿಲವಾಡವು ಜಾಲಂಧ್ರಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಕುಂಭವಿದೆ. ಇಲ್ಲಿದ್ದ ಭೈರವಿ ಮತ್ತು ಭೈರವ ಶಿಲ್ಪವು ಈಗ ಹಂಪಿ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿದೆ.

**೩೬. ಬೂದನೂರು ಕಲ್ಲೇಶ್ವರ ದೇವಾಲಯ:** ಬೂದನೂರು ಗ್ರಾಮದ ಒಳಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಎತ್ತರದ ದಿಬ್ಬದ ಮೇಲೆ ಕಣಶಿಲೆಯಿಂದ ನಿರ್ಮಾಣವಾದ ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ. ಗರ್ಭಗೃಹದ ಬಾಗಿಲವಾಡವು ಅರ್ಧಗಂಬ, ಪದ್ಮ, ಹೂವಿನ ಎಸಳುಗಳಿಂದ ಅಲಂಕೃತವಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಹಾಗೂ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಸಭಾಮಂಟಪದಲ್ಲಿರುವ ನಾಲ್ಕು ಚೌಕಾಕಾರದ ಕಂಬಗಳು ಫಲಕ ಮತ್ತು ಬೋದಿಗೆಗಳಿಂದ ಕೂಡಿವೆ. ಗರ್ಭಗೃಹದ ಮೇಲೆ ಇತ್ತೀಚಿನ ಗೋಪುರವಿದೆ. ಜೀರ್ಣೋದ್ಧಾರಗೊಳಿಸಲಾಗಿದೆ.

**೩೭. ನವಲಿ ಕಲ್ಲೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು, ಏಕಕೋಣೆಯನ್ನು ಹೊಂದಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಈ ದೇವಾಲಯವು ಎತ್ತರದ ವೇದಿಕೆಯ ಮೇಲೆ ನಿರ್ಮಾಣಗೊಂಡಿದೆ. ಮುಂಭಾಗದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ನಂದಿ ಮತ್ತು ಗಣೇಶನ ಮೂರ್ತಿಶಿಲ್ಪಗಳಿವೆ.

**೩೮. ಇಟ್ಟಿಗೆ ಕಲ್ಲೇಶ್ವರ ದೇವಾಲಯ:** ಗ್ರಾಮದ ನೈರುತ್ಯ ಭಾಗದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೫ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪ ಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ. ಈ ದೇವಾಲಯದ ಗರ್ಭಗೃಹದ ಬಾಗಿಲುವಾಡದ ಮೇಲೆ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು, ಬಾಗಿಲುವಾಡಗಳ ಇಕ್ಕೆಲಗಳಲ್ಲಿ ಅರ್ಧಗಂಬಗಳು, ಜಾಲಂಧ್ರಗಳು, ಶೈವ ದ್ವಾರಪಾಲಕರ ಶಿಲ್ಪಗಳಿವೆ. ಸಭಾಮಂಟಪದ ಬಾಗಿಲುವಾಡ ಸರಳವಾಗಿವೆ. ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಅಲಂಕೃತ ಕಂಬಗಳಿವೆ. ಅವು ಪೀಠ, ಪಾದ, ದಂಡ, ದಂಡಾಗ್ರ ಮತ್ತು ಬೋದಿಗೆಯನ್ನು ಹೊಂದಿವೆ. ತೆರೆದ ಮುಖಮಂಟಪದಲ್ಲಿ ಎರಡು ಅಲಂಕೃತ ಕಂಬಗಳಿವೆ. ಮುಖಮಂಟಪದ ಮೇಲ್ಚಾವಣಿಯು ಇಳಿಜಾರಾಗಿದೆ. ಗರ್ಭಗೃಹವು ಅಧಿಷ್ಠಾನ ಅಲಂಕಾರರಹಿತ ಭಿತ್ತಿ, ಗೋಪುರ, ಕಳಸವನ್ನು ಹೊಂದಿದೆ. ಗೋಪುರದಲ್ಲಿ ಚಿಕ್ಕದಾದ ಶಿಲ್ಪರಹಿತ ಗೂಡುಗಳನ್ನು ಒಳಗೊಂಡಿದೆ. ಗೋಪುರದ ಸುತ್ತಲೂ ನಾಲ್ಕು ದಿಕ್ಕಿನಲ್ಲಿ ನಂದಿಶಿಲ್ಪಗಳಿವೆ. ಅಂತರಾಳ ಹಾಗೂ ಸಭಾಮಂಟಪವು ಅಧಿಷ್ಠಾನ, ಅಲಂಕಾರರಹಿತ ಭಿತ್ತಿಯನ್ನು, ಸಾದಾ ಮೇಲ್ಚಾವಣಿಯನ್ನು ಹೊಂದಿದೆ.

**೩೯. ಸೋಗಿಯ ವೀರಭದ್ರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಉತ್ತರಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆ, ಇಟ್ಟಿಗೆ ಹಾಗೂ ಗಾರೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ವೀರಭದ್ರನ ಮೂರ್ತಿಶಿಲ್ಪವಿದೆ. ಪೀಠವು ಮೂರು ಅಡಿ ಎತ್ತರವಿದೆ. ಪೀಠದ ಮೇಲೆ ವೀರಭದ್ರನ ಮೂರ್ತಿಯು ಸುಮಾರು ನಾಲ್ಕು ಅಡಿ ಎತ್ತರದಲ್ಲಿದೆ. ಇಲ್ಲಿ ಪದ್ಮದಳದಾಕಾರವುಳ್ಳ ಭುವನೇಶ್ವರವಿದ್ದು, ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ.

ಅಂತರಾಳದಲ್ಲಿ ಎರಡು ದೇವಕೋಷ್ಠಗಳಿವೆ. ದೇವಕೋಷ್ಠದ ಮೇಲೆ ಕದಂಬ ನಾಗರಶೈಲಿಯ ಶಿಖರಗಳಿವೆ. ಅಂತರಾಳದ ಬಾಗಿಲುವಾಡವು ಪದ್ಮ, ಲತಾಬಳ್ಳಿಯನ್ನೊಳಗೊಂಡ ದ್ವಿಶಾಖೆಯಿಂದ ಕೂಡಿದೆ. ಲಲಾಟದಲ್ಲಿ ಶಿವ-ಪಾರ್ವತಿ, ಗಣೇಶನ ಉಬ್ಬುಶಿಲ್ಪವಿದೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮದಾಕಾರವುಳ್ಳ ಜಾಲಂಧ್ರವಿದೆ. ಇದರ ಕೆಳಗಡೆ ಪೂರ್ಣಕುಂಭದ ರಚನೆಯಿದೆ. ವಿಶಾಲವಾದ ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ಅಷ್ಟಪಟ್ಟಿಕೆ, ವೃತ್ತ, ದಂಡ, ಕಲಶ, ಹದಿನಾರು ಕೋನ, ಘಟ, ಫಲಕ, ಬೋದಿಗೆಗಳಿಂದ ಕೂಡಿವೆ. ಕಂಬಗಳಲ್ಲಿ ಸೂಕ್ಷ್ಮವಾಗಿ ತೋರಣ ಮತ್ತು ಪದ್ಮಗಳನ್ನು ಕೆತ್ತಲಾಗಿದೆ. ಸಭಾಮಂಟಪದಲ್ಲಿ ಒಟ್ಟು ಒಂಬತ್ತು ಭುವನೇಶ್ವರಗಳಿವೆ. ಅವುಗಳಲ್ಲಿ ಮಧ್ಯದಲ್ಲಿರುವ ಭುವನೇಶ್ವರವು ಉತ್ತಮವಾದ ಅಲಂಕಾರವನ್ನು ಹೊಂದಿದ್ದು ಆಕರ್ಷಣೀಯವಾಗಿದೆ. ಇದು ಪದ್ಮದಳಾಕಾರವನ್ನು ಹೊಂದಿದ್ದು, ಮಧ್ಯದಲ್ಲಿ ಇಳಿಬಿದ್ದು ಬಾಳೆಹೂವಿನ ಮೊಗ್ಗುವಿನಾಕಾರದಲ್ಲಿದೆ. ಇದನ್ನು ವಿತಾನ ಎಂದು ಕರೆಯಬಹುದು. ಉಳಿದ ಭುವನೇಶ್ವರಗಳು ಸರಳವಾದ ಪದ್ಮದ ಆಕಾರವನ್ನು ಹೊಂದಿವೆ. ಸಭಾಮಂಟಪಕ್ಕೆ ಪೂರ್ವ ಮತ್ತು ಪಶ್ಚಿಮವಾಗಿ ಎರಡು ಉಪ ಪ್ರವೇಶದ್ವಾರಗಳಿವೆ.

ಸಭಾಮಂಟಪದ ಮುಖ್ಯ ಪ್ರವೇಶದ್ವಾರವು ಸಪ್ತಶಾಖೆಗಳಿಂದ ಕೂಡಿದೆ. ಸಪ್ತಶಾಖೆಗಳು ಪದ್ಮ, ನಾಗ-ನಾಗಿಣಿ, ನೃತ್ಯಗಾರರು, ಲತಾಬಳ್ಳಿಯ ಮಧ್ಯದಲ್ಲಿ ಹಾರುತ್ತಿರುವ ಸಿಂಹದ ಉಬ್ಬುಶಿಲ್ಪಗಳನ್ನು ಒಳಗೊಂಡಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಬಾಗಿಲುವಾಡದಲ್ಲಿ ಸ್ತಂಭ ತೋರಣದ ರಚನೆಯಿದೆ. ಬಾಗಿಲುವಾಡದ ಕೆಳಭಾಗದಲ್ಲಿ ಶೈವ ದ್ವಾರಪಾಲಕ, ವರಾಹ, ನೃತ್ಯಗಾರ, ಚಾಮರಧಾರಿಣಿಯರ ಉಬ್ಬುಶಿಲ್ಪಗಳಿವೆ. ಕೆಳಭಾಗದ ಪೀಠವು, ಪಟ್ಟಿಕೆಗಳಿಂದ ಕೂಡಿದೆ. ಈ ದ್ವಾರದ ಎರಡು ಬದಿಯಲ್ಲಿ ನಂದಿಗಳನ್ನು ಇಡಲಾಗಿದೆ. ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿರುವ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಸರಳವಾಗಿದೆ.

ದೇವಾಲಯಕ್ಕೆ ಸರಳ ಹಾಗೂ ಉತ್ತಮವಾದ ಅಧಿಷ್ಠಾನವಿದ್ದು, ಉಪಾನ, ಜಗತಿ, ಕುಮುದ, ಪದ್ಮ ರಚನೆಗಳಿವೆ. ಭಿತ್ತಿಯು ಸರಳ ಸುಂದರವಾಗಿದೆ. ಪ್ರಸ್ತರದಲ್ಲಿ ಮುಂಚಾಚಿದ ಕಪೋತ ಪದ್ಮಗಳಿವೆ. ಪ್ರಸ್ತರ ಭಾಗದಲ್ಲಿ ಶಿಲಾಬಾಲಿಕೆಯರ, ನೃತ್ಯಗಾರರ, ನಂದಿ, ಪದ್ಮ, ದೇವಕೋಷ್ಠಗಳಿವೆ ಮತ್ತು ಅರ್ಪಿತ ಹಾರಗಳ ರಚನೆಗಳಿವೆ. ದೇವಾಲಯಕ್ಕೆ ಆಧುನಿಕವಾಗಿ ನಿರ್ಮಿಸಿರುವ ದ್ರಾವಿಡಶೈಲಿಯ ಶಿಖರ ಭಾಗವಿದೆ. ಈ ದೇವಾಲಯಕ್ಕೆ ವಿಶಾಲವಾದಂತಹ ಪ್ರಾಕಾರ ಗೋಡೆಯಿದ್ದು, ಪ್ರಾಕಾರದಲ್ಲಿ ಜೈನ ತೀರ್ಥಂಕರ, ವೀರಗಲ್ಲುಗಳಿವೆ. ದೇವಾಲಯದ ಮುಂಭಾಗದಲ್ಲಿ ಸುಮಾರು ಹದಿನೈದು ಅಡಿ ಎತ್ತರವುಳ್ಳ ಗರುಡಸ್ತಂಭವನ್ನು ನಿಲ್ಲಿಸಲಾಗಿದೆ.

**೪೦. ಸೋಗಿಯ ಕಲ್ಲೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಕೇಂದ್ರ ಪುರಾತತ್ವ ಇಲಾಖೆಗೆ ಸೇರಿದ ಈ ದೇವಾಲಯದ ತಲವಿನ್ಯಾಸವು ಗರ್ಭಗೃಹ, ಅಂತರಾಳ, ತೆರೆದ ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದಲ್ಲಿರುವ ಉತ್ತರದ ಒಳಭಿತ್ತಿಯು ಮುಂಚಾಚಿಕೊಂಡಿದೆ. ಭುವನೇಶ್ವರವು ಪದ್ಮದಳಗಳಿಂದ ಕೂಡಿದ ಏಳು ವೃತ್ತಗಳನ್ನು ಒಳಗೊಂಡಿದ್ದು ಮಧ್ಯದಲ್ಲಿ ಇಳಿಬಿಟ್ಟ ಬಾಳೆಹೂವಿನ ಮೊಗ್ಗಿನಾಕಾರದ ರಚನೆಯಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು, ಶಾಖೆಯಲ್ಲಿ ಕಂಬರಚನೆ, ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಅನೇಕ ಪಟ್ಟಿಕೆಗಳಿವೆ. ಕೆಳಭಾಗದಲ್ಲಿ ಪೀಠದಲ್ಲಿ ಆನೆ, ಆನೆಕಾಳಗ, ಆನೆಯ ಮೇಲೆ ಕುಳಿತು ಸವಾರಿ ಮಾಡುತ್ತಿರುವ ಸಿಂಹದ ಚಿತ್ರಣವಿದೆ.

ಅಂತರಾಳದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ಪದ್ಮ, ವಿವಿಧ ಭಂಗಿಯಲ್ಲಿ ನಿಂತಿರುವ ಸ್ತ್ರೀ-ಪುರುಷರ, ಕಂಬ, ಬಳೆಗಳ ಆಕಾರವನ್ನು ಒಳಗೊಂಡಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಮುಂಚಾಚಿದ ಕಪೋತವಿದೆ. ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮದಾಕಾರದ ಜಾಲಂಧ್ರವಿದೆ.

ಸಭಾಮಂಟಪವು ಹೊರಭಾಗಕ್ಕೆ ತೆರೆದುಕೊಂಡಿದ್ದು, ಉತ್ತಮ ಗಾಳಿ ಬೆಳಕಿನಿಂದ ಕೂಡಿದೆ. ಸಭಾಮಂಟಪದಲ್ಲಿ ಸುತ್ತಲೂ ಕಕ್ಷಾಸನವಿದೆ. ಸಭಾಮಂಟಪದ ಮಧ್ಯದ ವೇದಿಕೆಯ ಮೇಲಿರುವ ನಾಲ್ಕು ಕಂಬಗಳು ಪದ್ಮಪೀಠ, ಪಾದ, ವೃತ್ತ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಈ ಕಂಬಗಳು ಹೊಯ್ಸಳರ ಕಾಲದ ತಿರುಗಣಿ ಕಂಬಕ್ಕೆ ಹತ್ತಿರವಾಗಿದೆ. ಸಭಾಮಂಟಪದಲ್ಲಿ ೧೨ ಅಂಕಣಗಳಿವೆ. ಸ್ವತಂತ್ರ ಕಂಬಗಳಿದ್ದು. ಜಗತಿಯ ಮೇಲೆ ೧೦ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ವೃತ್ತ, ಕಲಶ, ತಾಟಿಕಾ ಘಟ, ಫಲಕ, ಸರಳ ಬೋದಿಗೆ ರಚನೆಗಳನ್ನು ಹೊಂದಿದ್ದರೂ ಸೂಕ್ಷ್ಮವಾದ ಕೆತ್ತನೆಯಲ್ಲಿ ಮಧ್ಯದಲ್ಲಿರುವ ನಾಲ್ಕು ಸ್ವತಂತ್ರ

ಕಂಬಗಳಿಗಿಂತ ಕಡಿಮೆ ಅಲಂಕಾರವನ್ನು ಹೊಂದಿವೆ. ಸಭಾಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು, ನಾಲ್ಕು ದೇವಕೋಷ್ಠಗಳಿವೆ. ದೇವಾಲಯಕ್ಕೆ ಉತ್ತರ-ದಕ್ಷಿಣವಾಗಿ ಇನ್ನೆರಡು ಉಪ ಪ್ರವೇಶದ್ವಾರಗಳಿವೆ. ಸಭಾಮಂಟಪದಲ್ಲಿ ಗಣೇಶ ಮತ್ತು ಸಪ್ತಮಾತೃಕೆಯರ ಬಿಡಿಶಿಲ್ಪಗಳಿವೆ. ಸಭಾಮಂಟಪದಲ್ಲಿರುವ ಕಂಬಗಳಲ್ಲಿ ಶಾಸನಗಳಿವೆ.

ದೇವಾಲಯಕ್ಕೆ ಉತ್ತಮವಾದ ಅಧಿಷ್ಠಾನವಿದ್ದು, ಅಧಿಷ್ಠಾನದಲ್ಲಿ ಉಪಾನ, ಜಗತಿ, ಗಳಪೀಠ, ಕುಮುದ, ಪದ್ಮಗಳಿವೆ. ಭಿತ್ತಿಯಲ್ಲಿ ದೇವಕೋಷ್ಠಗಳಿದ್ದು ಅವುಗಳಲ್ಲಿ ಮೂರ್ತಿಶಿಲ್ಪಗಳನ್ನು ಇರಿಸಲಾಗಿದೆ. ದೇವಕೋಷ್ಠಗಳು ಅರ್ಧಕಂಬಗಳ ಮಧ್ಯದಲ್ಲಿವೆ ಹಾಗೂ ಭಿತ್ತಿಯಲ್ಲಿ ಸರಳವಾದ ಅರ್ಧಕಂಬಗಳ ರಚನೆಗಳಿವೆ.

ಪ್ರಸ್ತರವು ಅನೇಕ ತೋರಣ, ಹೂಬಳ್ಳಿ, ಉಬ್ಬುಶಿಲ್ಪಗಳಿಂದ ಅಲಂಕೃತಗೊಂಡಿದೆ. ಪ್ರಸ್ತರದಲ್ಲಿ ಪದ್ಮ, ಬೋದಿಗೆ ರಚನೆಗಳಿವೆ. ಪ್ರಸ್ತರದ ಮೇಲೆ ವೇಸರಶೈಲಿಯ ಶಿಖರವಿದೆ. ಈ ಶಿಖರವು ಗ್ರೀವ, ಶಿಖರ, ಸ್ತೂಪಿ ಮತ್ತು ಕಲಶ ಭಾಗಗಳನ್ನು ಒಳಗೊಂಡಿದೆ. ಶಿಖರದಲ್ಲಿ ದೇವಕೋಷ್ಠ, ವಿಷ್ಣು, ಶಿವ, ಬ್ರಹ್ಮ, ಗಣೇಶ, ನೃತ್ಯ ಸರಸ್ವತಿ, ಕಾಳಿ, ಕೇಶವ, ಯಕ್ಷ ಹಾಗೂ ಗರುಡ, ವೀಣಾವಾದಕ, ವಾದ್ಯಗಾರರು, ನೃತ್ಯಗಾರ/ಗಾರ್ತಿಯರ, ಯಾಳಿ, ಪದ್ಮ, ಮಿಥುನ ಶಿಲ್ಪಗಳಿವೆ. ಶಿಖರ ಭಾಗದಲ್ಲಿ ಮಕರತೋರಣಗಳಿವೆ. ಶಿಖರದ ಮುಂಭಾಗದಲ್ಲಿ ಅಂದರೆ ಅಂತರಾಳ ಮೇಲೆ ಮುಂಚಾಚಿದ ಕಪ್ಪುಶಿಲೆಯಲ್ಲಿ ನಿರ್ಮಿಸಲಾದ ಶುಕನಾಸಿ ಇದೆ. ಇಲ್ಲಿಯೂ ತೋರಣ, ದೇವಕೋಷ್ಠ, ಶಿವ, ವಿಷ್ಣು, ನೃತ್ಯಗಾರ ಇನ್ನಿತರೆ ಉಬ್ಬುಶಿಲ್ಪಗಳಿವೆ.

**೪೧. ಸೋಗಿಯ ಈಶ್ವರಲಿಂಗೇಶ್ವರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೪–೧೫ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಗರ್ಭಗೃಹ ಮತ್ತು ಅಂತರಾಳವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅದರ ಮುಂದೆ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿಕೊಂಡಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸರಳವಾಗಿದ್ದು, ಇವುಗಳಲ್ಲಿರುವ ಭುವನೇಶ್ವರಗಳು ವೃತ್ತಾಕಾರದಲ್ಲಿವೆ. ದೇವಾಲಯಕ್ಕೆ ಒರಟಾದ ಭಿತ್ತಿಯ ಭಾಗವಿದೆ. ಶಿಖರದ ಮೇಲೆ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ.

**೪೨. ಸೋಗಿಯ ತೇರು ಬಸಪ್ಪ ದೇವಾಲಯ:** ಗ್ರಾಮದ ತೇರಿನ ಬಜಾರು ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೪–೧೫ ನೆಯ ಶತಮಾನಕ್ಕೆ ಸೇರಿದೆ. ಇದು ಮಧ್ಯಮ ಸ್ಥಿತಿಯಲ್ಲಿದೆ. ಏಕಕೋಣೆಯನ್ನುಳ್ಳ ಈ ದೇವಾಲಯದಲ್ಲಿ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದ ಆವರಣದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ನಾಗಶಿಲ್ಪ, ನಂದಿಶಿಲ್ಪ ಮತ್ತು ವೀರಗಲ್ಲುಗಳಿವೆ. ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ.

**೪೩. ಸೋಗಿಯ ಭಿಷ್ಮೇಶ್ವರಸ್ವಾಮಿ ದೇವಾಲಯ:** ಗ್ರಾಮದ ಹೊರಗೆ ಕಂಠಿ ವೀರಣ್ಣ ಅವರ ಹೊಲದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೪-೧೫ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಮಂಟಪವಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಭುವನೇಶ್ವರವು ಪದ್ಮಾಕಾರದಲ್ಲಿದೆ. ಗರ್ಭಗೃಹದ ಬಾಗಿಲುವಾಡದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ತೆರೆದ ಮಂಟಪದಲ್ಲಿ ಎರಡು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ಅಷ್ಟಪಟ್ಟಿಕೆ, ದಂಡ, ಕಲಶ, ತಾಟಿಕಾ, ಘಟ, ಫಲಕ, ಸರಳ ಬೋದಿಗೆಗಳನ್ನು ಹೊಂದಿವೆ. ದೇವಾಲಯದ ಅಧಿಷ್ಠಾನ ಭಾಗ ಸರಳವಾಗಿದ್ದು, ಭಿತ್ತಿಯಲ್ಲಿ ಆನೆ, ನಾಗ, ಸ್ತ್ರೀಯರ ಕುದುರೆಗಳ ಉಬ್ಬುಶಿಲ್ಪಗಳಿವೆ. ಪ್ರಸ್ತರ ಭಾಗ ಸರಳವಾಗಿದ್ದು, ಶಿಖರದಲ್ಲಿ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ.

**೪೪. ಸೋಗಿಯ ಈಶ್ವರಲಿಂಗ ದೇವಾಲಯ:** ಗ್ರಾಮದ ಬಸ್‌ನಿಲ್ದಾಣ ಹತ್ತಿರದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೪-೧೫ನೆಯ ಶತಮಾನಕ್ಕೆ ಸೇರಿದೆ. ಇದು ಉತ್ತಮ ಸ್ಥಿತಿಯಲ್ಲಿದೆ. ಇದು ಏಕಕೋಣೆಯ ದೇವಾಲಯವಾಗಿದ್ದು, ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಬಾಗಿಲುವಾಡವು ಸರಳವಾಗಿದ್ದು, ಪ್ರಸ್ತರದ ಮೇಲೆ ನಾಲ್ಕು ಆಧುನಿಕ ನಂದಿಯನ್ನು ಇಡಲಾಗಿದೆ. ದೇವಾಲಯದ ಭಿತ್ತಿಯನ್ನು ಆಧುನಿಕವಾಗಿ ನವೀಕರಿಸಲಾಗಿದೆ.

**೪೫. ಸೋಗಿಯ ಪಂಚಲಿಂಗೇಶ್ವರ ದೇವಾಲಯ:** ಗ್ರಾಮದ ಈಶ್ವರಪ್ಪ ಅವರ ಹೊಲದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫-೧೬ನೆಯ ಶತಮಾನಕ್ಕೆ ಸೇರಿದೆ. ಇದು ಮಧ್ಯಮ ಸ್ಥಿತಿಯಲ್ಲಿದೆ.

ಪ್ರಸ್ತುತ ಈ ದೇವಾಲಯವು ಗರ್ಭಗೃಹ, ಅಂತರಾಳ ಭಾಗಗಳನ್ನು ಮಾತ್ರ ಹೊಂದಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಪದ್ಮದಳಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳಿಲ್ಲ. ಅಂತರಾಳವು ತೆರೆದುಕೊಂಡಿದ್ದು ಇಲ್ಲಿ ನಂದಿ ಮತ್ತು ಗಣೇಶ ಶಿಲ್ಪಗಳನ್ನು ತಂದಿರಿಸಲಾಗಿದೆ. ಅಂತರಾಳದ ಮುಂಭಾಗದಲ್ಲಿ ವೇದಿಕೆಯ ಭಾಗವಿದ್ದುದರಿಂದ ದೇವಾಲಯವು ಇನ್ನೂ ಮುಂದುವರಿದಿದ್ದು ಕಾಲಾಂತರದಲ್ಲಿ ಅದು ನಾಶಗೊಂಡಿರಬಹುದು. ವೇದಿಕೆಯ ಮುಂದೆ ಅಶ್ವಪೀಠವಿದೆ. ದೇವಾಲಯದ ಅಧಿಷ್ಠಾನ ಭಾಗ ಮುಚ್ಚಿದ್ದು, ಭಿತ್ತಿಯನ್ನು ಆಧುನೀಕರಿಸಲಾಗಿದೆ.

**೪೬. ಸೋಗಿಯ ಗೌರಮ್ಮ ಗುಡಿ(ಈಶ್ವರ ದೇವಾಲಯ):** ಗ್ರಾಮದ ಕಲ್ಲೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಗರ್ಭಗೃಹ ಮತ್ತು ಅಂತರಾಳ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಉತ್ತರ ದಿಕ್ಕಿನ ಒಳಭಿತ್ತಿಯು ಮುಂಚಾಚಿದೆ. ಗರ್ಭಗೃಹ ಮತ್ತು ಅಂತರಾಳಗಳಲ್ಲಿ ಪದ್ಮಾದಳಾಕಾರವುಳ್ಳ ಸುಂದರವಾದ ಭುವನೇಶ್ವರವಿದೆ. ಹಾಗೆಯೇ ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡ ಸರಳವಾಗಿದೆ. ಅಂತರಾಳದ ಬಾಗಿಲವಾಡದ ಇಕ್ಕೆಲಗಳಲ್ಲಿ ವಜ್ರಾಕಾರವುಳ್ಳ ಜಾಲಂಧ್ರವಿದೆ. ದೇವಾಲಯದ ಭಿತ್ತಿಯನ್ನು ಒರಟಾದ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಶಿಖರ ಭಾಗದಲ್ಲಿ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ. ಇದನ್ನು ಸ್ಥಳೀಯರು ಗೌರಮ್ಮನ ಗುಡಿ ಎಂದು ಕರೆಯುತ್ತಾರೆ. ಕಾರಣ ಅಲ್ಲಿ ಪ್ರತಿ ವರ್ಷ ಗೌರಿಹುಣ್ಣಿಮೆಯಂದು ಗೌರಿಯನ್ನು ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಿ ಹೆಣ್ಣುಮಕ್ಕಳು ಆರತಿ ಬೆಳಗಲು ಬರುತ್ತಾರೆ ಎಂದು ಪೂಜಾರಿ ಹೇಳುತ್ತಾರೆ.

**೪೭. ಮುದೇನೂರು ರಾಮಲಿಂಗೇಶ್ವರ ದೇವಾಲಯ:** ಗ್ರಾಮದ ಮಧ್ಯದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಎತ್ತರವಾದ ಜಗತಿಯ ಮೇಲಿರುವ ಈ ದೇವಾಲಯವು ಪ್ರತ್ಯೇಕವಾದ ಎರಡು ಕೂಟಗಳನ್ನು ಹೊಂದಿದೆ. ದಕ್ಷಿಣ ದಿಕ್ಕಿನಲ್ಲಿರುವ ಕೂಟವು ಗರ್ಭಗೃಹ ಮತ್ತು ಅಂತರಾಳ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇವು ಒಂದು ಅಡಿ ಎತ್ತರದಲ್ಲಿವೆ. ಉತ್ತರ ಭಿತ್ತಿಯ ಭಾಗವು ಮುಂಚಾಚಿದೆ. ಇಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ವಜ್ರ, ಲತಾಬಳ್ಳಿ, ಕಂಬ, ಹೂಬಳ್ಳಿ ರಚನೆಗಳನ್ನೊಳಗೊಂಡ ಪಂಚಶಾಖೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅಂತರಾಳದ ಬಾಗಿಲುವಾಡವು ದ್ವಿಶಾಖೆಯಿಂದ ಕೂಡಿದ್ದು ಇಕ್ಕೆಲಗಳಲ್ಲಿ ಪದ್ಮಾಕಾರವುಳ್ಳ ಜಾಲಂಧ್ರವಿದೆ. ಲಲಾಟಬಿಂಬದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಉಬ್ಬುಶಿಲ್ಪಗಳಿವೆ. ಇವುಗಳ ಸುತ್ತಲೂ ಮಕರ ತೋರಣವಿದೆ.

ಉತ್ತರದ ಕೂಟ ಗರ್ಭಗೃಹದಲ್ಲಿ ಶಿವಲಿಂಗ ಮತ್ತು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಉತ್ತರದ ಭಿತ್ತಿಯ ಭಾಗ ಮುಂಚಾಚಿದೆ. ಗರ್ಭಗೃಹದ ಬಾಗಿಲುವಾಡ ಪಂಚಶಾಖೆಗಳಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಅಂತರಾಳ ಮತ್ತು ಗರ್ಭಗೃಹದ ಮೇಲ್ಛಾವಣಿಯಲ್ಲಿ ವೃತ್ತಾಕಾರ, ಪದ್ಮಾಕಾರವುಳ್ಳ ಭುವನೇಶ್ವರಗಳಿವೆ.

ಅಂತರಾಳದ ಬಾಗಿಲುವಾಡ ದ್ವಿಶಾಖೆಯಿಂದ ಕೂಡಿದೆ. ಇದರ ಇಕ್ಕೆಲಗಳಲ್ಲಿ ಪದ್ಮದಳದ ಆಕಾರವುಳ್ಳ ಜಾಲಂಧ್ರವಿದೆ. ಲಲಾಟಬಿಂಬದಲ್ಲಿ ಶಿವ, ಗಣೇಶ, ಸರಸ್ವತಿ ಉಬ್ಬುಶಿಲ್ಪಗಳಿವೆ.

ಎರಡು ಕೂಟಗಳ ಮುಂಭಾಗದಲ್ಲಿ ಎರಡು ಕಲ್ಯಾಣ ಚಾಲುಕ್ಯ ಕಾಲದ ವೀರಗಲ್ಲುಗಳಿವೆ. ಹಾಗೆಯೇ ಭಿತ್ತಿಯನ್ನು ನವೀಕರಿಸಲಾಗಿದೆ.

**೪೮. ಹೊಳಗುಂದಿಯ ಬಳ್ಳೇಶ್ವರ ವೀರಭದ್ರೇಶ್ವರ ದೇವಾಲಯ :** ಗ್ರಾಮದ ಮಧ್ಯದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಎತ್ತರವಾದ ಜಗತಿಯ ಮೇಲೆ ನಿರ್ಮಾಣಗೊಂಡಿರುವ ಈ ದೇವಾಲಯವು ದ್ವಿಕೂಟಾಚಲವಾಗಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಪ್ರತ್ಯೇಕವಾದ ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗಗಳನ್ನು ಒಳಗೊಂಡಿದೆ.

ಬಳ್ಳೇಶ್ವರ (ಪೂರ್ವಾಭಿಮುಖವಾಗಿರುವ) ದೇವಾಲಯದ ಗರ್ಭಗೃಹದಲ್ಲಿ ಮೂರು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಭುವನೇಶ್ವರವು ವೃತ್ತಾಕಾರವಾಗಿದೆ. ಇದರ ಬಾಗಿಲುವಾಡವು ಸರಳವಾದ ಪಂಚಶಾಖೆಗಳಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಕೆಳಭಾಗದಲ್ಲಿ ಪೀಠ ತೋರಣವಿದೆ. ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಅಂತರಾಳದ ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದ್ದು, ಶಾಖೆಗಳು ಪದ್ಮ, ಲತಾಬಳ್ಳಿ, ಕಂಬ ರಚನೆಗಳಿಂದ ಕೂಡಿವೆ. ಇಕ್ಕೆಲಗಳಲ್ಲಿ ಜಾಲಂಧ್ರವಿದ್ದು, ಇವುಗಳ ಮಧ್ಯದಲ್ಲಿ ತ್ರಿಶೂಲ, ಡಮರು, ಅಭಯ ಮುದ್ರೆಯಲ್ಲಿರುವ ಉಬ್ಬುಶಿಲ್ಪಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಲಲಾಟದ ಮೇಲ್ಭಾಗದಲ್ಲಿ ಸ್ತಂಭ ತೋರಣವಿದೆ. ಬಾಗಿಲುವಾಡದ ಕೆಳಭಾಗದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಭಾಗದ ಪಟ್ಟಿಕೆಗಳು, ದಂಡ, ಕಲಶ, ಕಳಸ, ತಾಟಿಕಾ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ವೇದಿಕೆಯ ಮಧ್ಯದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು, ಮೇಲ್ಛಾವಣಿಯಲ್ಲಿ ಪದ್ಮದಳದ ಆಕಾರವುಳ್ಳ ಭುವನೇಶ್ವರವಿದೆ. ನವರಂಗದಲ್ಲಿ ನಂದಿ, ಗಣೇಶ ಮತ್ತು ಶಾಸನಗಳಿವೆ. ಈ ನವರಂಗಕ್ಕೆ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಎರಡು ಪ್ರವೇಶ ದ್ವಾರಗಳಿವೆ. ನವರಂಗದ ಬಾಗಿಲುವಾಡವು ಸರಳವಾಗಿದ್ದು, ಲಲಾಟದಲ್ಲಿ ಪದ್ಮವಿದೆ. ಇದು ವೀರಭದ್ರೇಶ್ವರ ದೇವಾಲಯಕ್ಕೆ ಪ್ರವೇಶ ಮಾಡುತ್ತದೆ.

ವೀರಭದ್ರೇಶ್ವರವಿರುವ ಇನ್ನೊಂದು ಕೂಟ (ಉತ್ತರಾಭಿಮುಖವಾಗಿರುವ)ದಲ್ಲಿ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗ ಭಾಗಗಳಿವೆ. ಈ ಕೂಟದ ಗರ್ಭಗೃಹ ಮತ್ತು ಅಂತರಾಳ ಭಾಗಗಳು ಎತ್ತರದ ವೇದಿಕೆಯ ಮೇಲಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ನಂದಿಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ವೀರಭದ್ರನ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವನ್ನು

ಆಧುನೀಕರಿಸಲಾಗಿದ್ದು, ಅಂತರಾಳವು ನವರಂಗಕ್ಕೆ ತೆರೆದುಕೊಂಡಿದೆ. ಅಂತರಾಳದ ಮುಂಭಾಗದಲ್ಲಿ ವಿಶಾಲವಾದಂತಹ ಸಭಾಮಂಟಪವಿದೆ. ಸಭಾಮಂಟಪದ ಮಧ್ಯದಲ್ಲಿ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ, ದಂಡ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಕಂಬಗಳ ಪಾದಗಳಲ್ಲಿ ಹಂಸ, ನವಿಲು, ಕೀರ್ತಿಮುಖಗಳನ್ನು ಕೆತ್ತಲಾಗಿದೆ. ಸಭಾಮಂಟಪದಲ್ಲಿ ಒಟ್ಟು ಆರು ಸ್ವತಂತ್ರ ಕಂಬಗಳಿವೆ. ಎರಡು ಕಂಬಗಳು ಸಭಾಮಂಟಪದಲ್ಲಿರುವ ಕಕ್ಷಾಸನದ ಮೇಲಿವೆ. ಸಭಾಮಂಟಪಕ್ಕೆ ಉತ್ತರಾಭಿಮುಖವಾಗಿ ಇನ್ನೊಂದು ಪ್ರವೇಶ ದ್ವಾರವಿದೆ. ಪೂರ್ವಾಭಿಮುಖವಾಗಿರುವ ಮುಖ್ಯ ಪ್ರವೇಶದ್ವಾರವು ತ್ರಿಶಾಖೆಗಳಿಂದ ಕೂಡಿದ್ದು ಸರಳವಾಗಿದೆ. ಲಲಾಟದಲ್ಲಿ ಹಂಸ, ಕೆಳಭಾಗದಲ್ಲಿ ಆನೆಗಳ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಮಧ್ಯಭಾಗದಲ್ಲಿ ಚರ್ತುಕೋನಾಕಾರದ ಮಧ್ಯದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನ ಭಾಗವಿದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಕುಮುದ, ಪದ್ಮಗಳಿವೆ. ಭಿತ್ತಿಯು ಸರಳವಾಗಿದೆ. ಬಳ್ಳೇಶ್ವರ ದೇವಾಲಯದ ಗರ್ಭಗೃಹದ ಮೇಲೆ ಆಧುನಿಕವಾಗಿ ನಿರ್ಮಿಸಲಾಗಿರುವ ಶಿಖರ ಮತ್ತು ಶುಕನಾಸಿಗಳಿವೆ. ಈ ದೇವಾಲಯದ ಹಿಂಭಾಗದಲ್ಲಿ ಗರ್ಭಗೃಹ ಅಂತರಾಳ ಭಾಗಗಳನ್ನು ಹೊಂದಿದ ಸರಳ ವಾಸ್ತುಗಳನ್ನೊಳಗೊಂಡ ಕಲ್ಲೇಶ್ವರ ದೇವಾಲಯವಿದೆ.

**೪೯. ಕೊಂಬಳಿಯ ಗೋಣಿಬಸವೇಶ್ವರ ದೇವಾಲಯ:** ಗ್ರಾಮದ ಹೊರಗೆ ಉತ್ತರ ಭಾಗದಲ್ಲಿರುವ ಇದು ಉತ್ತರಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ. ೧೬-೧೭ನೇ ಶತಮಾನಕ್ಕೆ ಸೇರಿದೆ. ಮರಳುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಆ ದೇವಾಲಯವು ಕೊಂಬಳಿ ಗ್ರಾಮದ ಪಶ್ಚಿಮಕ್ಕೆ ಹರಿಯುವ ತುಂಗಭದ್ರಾ ನದಿಯ ದಂಡೆಯ ಮೇಲಿದೆ. ಇದು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಪೀಠದ ಮೇಲೆ ವೀರಭದ್ರ ಮತ್ತು ನಂದಿಶಿಲ್ಪಗಳಿವೆ. ಅಂತರಾಳದಲ್ಲಿ ಯಾವುದೇ ರೀತಿಯ ಮೂರ್ತಿಶಿಲ್ಪಗಳಾಗಲಿ ಇಲ್ಲ. ಇಂದು ದೇವಾಲಯವು ಅತ್ಯಂತ ಕನಿಷ್ಠ ಸ್ಥಿತಿಯಲ್ಲಿದೆ.

**೫೦. ಹೂವಿನಹಡಗಲಿ ಗೋಣಿಬಸವೇಶ್ವರ ದೇವಾಲಯ:** ಕ್ರಿ.ಶ.೧೭ನೇ ಶತಮಾನದಲ್ಲಿ ನಿರ್ಮಿಸಲಾಗಿರುವ ಈ ದೇವಾಲಯವು ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ನಂದಿಯ ಶಿಲ್ಪವಿದೆ. ಇದನ್ನು ದಿವಂಗತ ಶ್ರೀ ಎಂ.ಪಿ. ಪ್ರಕಾಶ್ ಅವರು ಕ್ರಿ.ಶ.೨೦೦೪ರಲ್ಲಿ ಜೀರ್ಣೋದ್ಧಾರಗೊಳಿಸಿದ್ದಾರೆ. ಆಧುನಿಕ ಗೋಪುರವಿದೆ. ಗೋಣಿ ಬಸವೇಶ್ವರರು ಕೂಲಹಳ್ಳಿಯ ಮದ್ದಾನ ಸ್ವಾಮಿಯ ಕರಕಮಲ ಸಂಜಾತರು ಎಂಬ ಪ್ರತೀತಿಯಿದೆ.

ಈ ದೇವಾಲಯದ ಆವರಣದಲ್ಲಿ ಲಿಪಿಸಹಿತ ವೀರಗಲ್ಲು ಮತ್ತು ನಾಗಗೋಸಾಸವಿದೆ. ಮುಂದುಗಡೆ ಎತ್ತರವಾದ ದೀಪಸ್ತಂಭವಿದೆ. ಅದರ ಮೇಲೆ ಸ್ಕಂದನ ಮೂರ್ತಿಯಿದೆ.

**೫೧. ಕುರುವತ್ತಿಯ ಈಶ್ವರಲಿಂಗ ದೇವಾಲಯ:** ಗ್ರಾಮದ ದಕ್ಷಿಣದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೪-೧೫ನೇ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಏಕಕೋಣೆಯನ್ನು ಹೊಂದಿದೆ. ಏಕಕೋಣೆಯುಳ್ಳ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ. ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ದೇವಾಲಯದ ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ದೊಡ್ಡದಾದ ಶಾಸನ ಮತ್ತು ನಾಗಶಿಲ್ಪಗಳಿವೆ.

**೫೨. ಮೈಲಾರದ ಹೆಗ್ಗಪ್ಪ ದೇವಾಲಯ:** ಗ್ರಾಮದ ಮಧ್ಯಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಶಿವಲಿಂಗವಿದ್ದು ಅದನ್ನು ಹೆಗ್ಗಪ್ಪನೆಂದು ಪೂಜಿಸಲಾಗುತ್ತಿದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದ್ದು, ಅದು ಲತಾಬಳ್ಳಿ, ವಜ್ರಾಲಂಕಾರ, ಸರಳ ಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ದ್ವಾರಶಾಖೆಯ ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ.

ಅಂತರಾಳದ ಬಾಗಿಲುವಾಡವು ಸರಳವಾಗಿದ್ದು, ಅಂತರಾಳದ ಮುಂದೆ ವಿಶಾಲವಾದ ನವರಂಗವಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ ಹದಿನಾರು-ಎಂಟು-ಹದಿನಾರು ಕೋನ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆಗಳನ್ನು ಹೊಂದಿವೆ. ನವರಂಗ, ಅಂತರಾಳ ಮತ್ತು ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ನವರಂಗದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ.

ಮುಖಮಂಟಪದಲ್ಲಿ ಎರಡು ಸ್ವತಂತ್ರ ಕಂಬಗಳಿವೆ. ಈ ಕಂಬಗಳಲ್ಲಿ ಪದ್ಮ, ಸ್ತ್ರೀಯರ, ಉಬ್ಬುಶಿಲ್ಪಗಳಿದ್ದು, ಪಾದ, ಪೀಠ, ಹದಿನಾರು-ಎಂಟು-ಹದಿನಾರು ಕೋನ, ತಾಟಿಕ, ಘಟ, ಫಲಕ ಮತ್ತು ಬೋದಿಗೆಗಳನ್ನು ಹೊಂದಿದೆ. ಮುಖಮಂಟಪ ಮುಂಚಾಚಿಕೊಂಡಿದ್ದು, ಬಿದ್ದ ಮಳೆಯ ನೀರು ಜಾರಿ ಮುಂದೆ ಹೋಗುತ್ತವೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನವಿದ್ದು ಅದರಲ್ಲಿ ಉಪಾನ, ಜಗತಿ, ಪದ್ಮಗಳಿವೆ. ಭಿತ್ತಿಯನ್ನು ಆಧುನೀಕರಿಸಲಾಗಿದೆ. ಪ್ರಸ್ತರದಲ್ಲಿ ಕಪೋತ ಭಾಗವಿದೆ. ಪ್ರಸ್ತರದ ಮೇಲೆ ಅಂದರೆ

ಗರ್ಭಗೃಹದ ಮೇಲೆ ಕದಂಬ ನಾಗರಶೈಲಿಯ ಶಿಖರವಿದೆ. ಶಿಖರದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿವೆ.

**೫೩. ಮಾಗಳದ ಮಹಾಲಿಂಗೇಶ್ವರ ದೇವಾಲಯ:** ಗ್ರಾಮದ ನರಸಿಂಹ ದೇವಾಲಯದ ದಕ್ಷಿಣ ದಿಕ್ಕಿನಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಸಾಧಾರಣ ಸ್ಥಿತಿಯಲ್ಲಿದೆ.

ಈ ದೇವಾಲಯವು ತ್ರಿಕೂಟ ಮಾದರಿಯದ್ದಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದೆ. ಪೂರ್ವಾಭಿಮುಖವಾಗಿರುವ ಕೂಟದಲ್ಲಿ ಗರ್ಭಗೃಹ, ಅಂತರಾಳ ಗಳಿದ್ದು, ಉಳಿದೆರಡು ಕೂಟದಲ್ಲಿ ತೆರೆದ ಅಂತರಾಳಗಳ ರಚನೆಗಳು ಮಾತ್ರ ಇವೆ. ಇವೆಲ್ಲವುಗಳಿಗೆ ವಿಶಾಲವಾದ ಒಂದು ನವರಂಗ ಅಥವಾ ಮಂಟಪವಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ನಂದಿ ವಿಗ್ರಹವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿ ಕೊಂಡಿದೆ ಹಾಗೂ ಮೇಲ್ಛಾವಣಿಯಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ವೃತ್ತ, ದಂಡ, ಕಲಶ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ಮೇಲ್ಛಾವಣಿಯಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನ ಮತ್ತು ಭಿತ್ತಿಯ ರಚನೆಗಳಿವೆ. ಪ್ರಸ್ತರದಲ್ಲಿ ಮುಂಚಾಚಿದ ಕಪೋತ ಮತ್ತು ಪದ್ಮಗಳಿವೆ.

**೫೪. ರಂಗಾಪುರದ ಬಿಸ್ಟಪ್ಪಯ್ಯನ ಮಠ:** ರಂಗಾಪುರ ಗ್ರಾಮದ ಉತ್ತರ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ.

ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಸಭಾಮಂಟಪವನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಗರ್ಭಗೃಹ, ಅಂತರಾಳಗಳು ಮತ್ತು ಪ್ರವೇಶದ್ವಾರಗಳು ಸಾದಾ ಅಲಂಕಾರವನ್ನೊಂದಿವೆ. ಅಂತರಾಳದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸಭಾಮಂಟಪದಲ್ಲಿಯ ವೃತ್ತಾಕಾರದ ಕಂಬಗಳಲ್ಲಿ ಎರಡು ಶಾಸನಗಳಿವೆ. ಇವು ಯಾದವ ದೊರೆ ರಾಮಚಂದ್ರನ ಕಾಲಾವಧಿಯದು. ರಾಮನಾಥ ದೇವರಿಗೆ ದಾನ ನೀಡಿದ ಉಲ್ಲೇಖಗಳು ಕಂಡುಬರುತ್ತವೆ.

**೫೫. ಅಮೃತೇಶ್ವರ(ಆಮೆ ಬ್ರಹ್ಮ) ದೇವಾಲಯ:** ಹೊಳಲು ಗ್ರಾಮದ ದಕ್ಷಿಣ ಹೊರಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಅಂತರಾಳ, ಸಭಾಮಂಟಪಗಳಿವೆ. ಗರ್ಭಗೃಹ ಮತ್ತು ತೆರೆದ ಅಂತರಾಳಗಳು ಸಭಾಮಂಟಪಕ್ಕಿಂತ ಕೆಳಭಾಗದಲ್ಲಿವೆ. ಅಂದರೆ ತಳಮಟ್ಟ ದಲ್ಲಿದೆ. ಸಭಾಮಂಟಪದಿಂದ ಒಂಬತ್ತು ಸೋಪಾನ(ಮೆಟ್ಟಿಲು)ಗಳು ಕೆಳಗಿಳಿದರೆ ಗವಿ ಇದೆ. ಇದರಲ್ಲಿ ಪಾಣಿಪೀಠದ ಮೇಲೆ ಆಮೆ ಆಕಾರದ ಶಿವಲಿಂಗ ಮತ್ತು ಅದರ ಮುಂದೆ ನಂದಿ ವಿಗ್ರಹವಿದೆ. ಗರ್ಭಗೃಹ ಚೌಕಾಕಾರವಾಗಿದೆ. ಇದರ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು ಸರಳವಾಗಿದೆ. ಸಭಾಮಂಟಪದಲ್ಲಿ ಒಟ್ಟು ಹದಿನಾರು ಸ್ವತಂತ್ರ ಕಂಬಗಳಿವೆ. ಮಧ್ಯದ ವೇದಿಕೆಯ ಮೇಲಿರುವ ನಾಲ್ಕು ಕಂಬಗಳು ಪೀಠ, ಪಾದ, ವೃತ್ತ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಇನ್ನುಳಿದ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ ದಂಡ, ಕಲಶ, ಘಟ, ಬೋದಿಗೆಗಳನ್ನು ಹೊಂದಿದೆ. ಬೋದಿಗೆಯ ಮೇಲೆ ಶಾಸನವಿದೆ. ದೇವಾಲಯದ ಮಧ್ಯದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ.

**೫೬. ಹೊಳಲು ವೀರಭದ್ರ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ನವರಂಗ ಮತ್ತು ಆಧುನಿಕವಾಗಿ ನಿರ್ಮಿಸಿರುವ ತೆರೆದ ಮುಖ ಮಂಟಪವಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಪೀಠದ ಮೇಲೆ ಆಸೀನವಾಗಿರುವ ವೀರಭದ್ರನ ಇತ್ತೀಚಿನ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳನ್ನೊಳಗೊಂಡಿದ್ದು ಸರಳವಾಗಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಕಲ್ಯಾಣ ಚಾಲುಕ್ಯ ಮಾದರಿಯ ಸ್ವತಂತ್ರ ಕಂಬಗಳಿವೆ. ಈ ಕಂಬಗಳು, ಪೀಠ, ಪಾದ, ವೃತ್ತ, ಕಲಶ, ತಾಟಿಕಾ ಘಟ, ಫಲಕ, ಬೋದಿಗೆಗಳನ್ನು ಹೊಂದಿದೆ. ನವರಂಗಕ್ಕೆ ಉತ್ತರ ಭಾಗದಲ್ಲಿ ಇನ್ನೊಂದು ಪ್ರವೇಶದ್ವಾರವಿದೆ. ಆಧುನಿಕವಾಗಿ ನಿರ್ಮಿಸಲಾಗಿರುವ ತೆರೆದ ಮುಖಮಂಟಪದಲ್ಲಿ ಎತ್ತರವಾದ ಕಂಬಗಳಿವೆ. ದೇವಾಲಯದ ಪಾರ್ಶ್ವಭಾಗವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ. ಪ್ರಾಕಾರದಲ್ಲಿ ವೀರಗಲ್ಲು, ಗಣೇಶ ಹಾಗೂ ಶಿವಲಿಂಗದ ಶಿಲ್ಪಗಳಿವೆ.

**೫೭. ಹೊಳಲು ಗೌರಿಶಂಕರ ದೇವಾಲಯ:** ಗ್ರಾಮದ ವೀರಭದ್ರ ದೇವಾಲಯದ ಹತ್ತಿರಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ. ೧೨ ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪಗಳಿವೆ. ವಿಶಾಲವಾದಂತಹ ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದ್ದು, ಇದರ ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದ್ದು ತ್ರಿಶಾಖೆಯಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಮೇಲೆ ಸ್ತಂಭ ತೋರಣ, ಇಕ್ಕೆಲಗಳಲ್ಲಿ ಚೌಕಾಕಾರವುಳ್ಳ ಜಾಲಂಧ್ರಗಳಿವೆ. ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿದ್ದು, ಈ ಕಂಬಗಳು ಪೀಠ, ಪಾದ, ಅಷ್ಟಪಟ್ಟಿಕೆ, ವೃತ್ತ, ಕಲಶ, ತಾಟಿಕಾ ಘಟ, ಫಲಕ, ಬೋದಿಗೆಗಳನ್ನು ಹೊಂದಿವೆ. ಸಭಾಮಂಟಪದ ಮಧ್ಯದಲ್ಲಿ ಹಾಗೂ ಗರ್ಭಗೃಹದಲ್ಲಿ ಪದ್ಮದಳದಾಕಾರವುಳ್ಳ ಭುವನೇಶ್ವರ ಗಳಿವೆ. ಸಭಾಮಂಟಪದಲ್ಲಿ ದೇವಕೋಷ್ಠಗಳಿವೆ. ಸಭಾಮಂಟಪದ ಮುಂಭಾಗದಲ್ಲಿ ಮುಖ ಮಂಟಪವಿದೆ. ದೇವಾಲಯದ ಅಧಿಷ್ಠಾನ ಭಾಗ ಕಾಣಿಸುವುದಿಲ್ಲ. ಭಿತ್ತಿಯನ್ನು ಆಧುನೀಕರಿಸಲಾಗಿದೆ. ಶಿಖರದಲ್ಲಿ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ.

**೫೮. ಕೋಟೆಹಾಳು ಕಲ್ಲೇಶ್ವರ ದೇವಾಲಯ:** ಕೋಟೆಹಾಳು ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿತ್ತು. ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ಜಾಲಂಧ್ರಗಳಿಂದ ಕೂಡಿದೆ. ನಂದಿ, ಗಣೇಶ, ಸಪ್ತಮಾತೃಕೆ ಮತ್ತು ಕಾರ್ತಿಕೇಯನ ಶಿಲ್ಪಗಳಿವೆ. ಸಭಾಮಂಟಪದಲ್ಲಿ ನಾಲ್ಕು ಚಾಲುಕ್ಯ ಮಾದರಿಯ ಚೌಕಾಕಾರದ ಕಂಬಗಳಿವೆ. ಈ ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ.

**೫೯. ಕೋಟಿಶಂಕರಲಿಂಗ ದೇವಾಲಯ:** ಕೊಟ್ನೆಕಲ್ ಕ್ಯಾಂಪ್ ಗ್ರಾಮದ ನೈರುತ್ಯ ದಿಕ್ಕಿನಲ್ಲಿರುವ ಲಕ್ಷ್ಮೀನಾರಾಯಣ ದೇವಾಲಯದ ಪಕ್ಕದಲ್ಲಿ ಈ ಕೋಟಿಶಂಕರಲಿಂಗ ದೇವಾಲಯವಿದೆ. ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧-೧೨ ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಜೀರ್ಣೋದ್ಧಾರಗೊಂಡಿದೆ.

ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ. ಅಂತರಾಳ ಮತ್ತು ನವರಂಗ ಭಾಗಗಳನ್ನು ಹೊಂದಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಒಂದು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಶಿವಲಿಂಗದ ಎದುರಿಗೆ ನಂದಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡ ತ್ರಿಶಾಖೆಯಿಂದ ಕೂಡಿದ್ದು, ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರಣವಿದೆ. ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ವಜ್ರಾಕಾರದ ಜಾಲಂಧ್ರವಿದ್ದು, ಮೇಲ್ಭಾಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಶಿಲ್ಪಗಳ ಬದಿಯಲ್ಲಿ ಮಕರತೋರಣವಿದೆ. ಅಂತರಾಳದ ಮುಂಭಾಗದಲ್ಲಿ ವಿಶಾಲವಾದ ನವರಂಗವಿದೆ. ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪಾದ, ಪೀಠ,

ಹದಿನಾರು-ಎಂಟು-ಹದಿನಾರು, ಕಲಶ, ವೃತ್ತ, ಘಟ, ಮಂಡಿ, ಫಲಕ, ಬೋದಿಗೆಯನ್ನು ಹೊಂದಿವೆ. ಅರ್ಧಗಂಬಗಳು ಸ್ವತಂತ್ರ ಕಂಬಗಳಷ್ಟು ಕೆತ್ತನೆಯನ್ನು ಹೊಂದಿಲ್ಲ. ನವರಂಗದಲ್ಲಿ ಒಂದು ಶಾಸನ ಮತ್ತು ನಾಗಶಿಲ್ಪವಿದೆ. ನವರಂಗ, ಅಂತರಾಳ, ಗರ್ಭಗೃಹಗಳಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ನವರಂಗಕ್ಕೆ ಉತ್ತರ ದಿಕ್ಕಿನಲ್ಲಿ ಪ್ರವೇಶ ದ್ವಾರವಿದೆ.

ದೇವಾಲಯದ ಹೊರಭಾಗದಲ್ಲಿನ ಅಧಿಷ್ಠಾನ, ಭಿತ್ತಿ, ಪ್ರಸ್ತರ ಭಾಗಗಳನ್ನು ಇಂದು ನವೀಕರಿಸಲಾಗಿದೆ.

**೬೦. ಮಾಗಳದ ವೀರಭದ್ರ ದೇವಾಲಯ:** ಗ್ರಾಮದ ಒಳಭಾಗದಲ್ಲಿರುವ ಇದು ದಕ್ಷಿಣಾಭಿಮುಖ ವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೬ನೆಯ ಶತಮಾನಕ್ಕೆ ಸೇರಿದೆ. ಇದು ಕನಿಷ್ಠ ಸ್ಥಿತಿಯಲ್ಲಿದೆ. ದೇವಾಲಯವನ್ನು ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಇಂದು ದೇವಾಲಯದಲ್ಲಿ ಗರ್ಭಗೃಹ ಮಾತ್ರ ಉಳಿದಿದೆ. ಗರ್ಭಗೃಹದ ಬಾಗಿಲುವಾಡ ಸಾದಾ ಕೆತ್ತನೆಯಿಂದ ಕೂಡಿದೆ. ಗರ್ಭಗೃಹದಲ್ಲಿ ತ್ರಿಭಂಗಿಯ ವೀರಭದ್ರನ ಶಿಲ್ಪವಿದೆ.

**೬೧. ಬೂದನೂರು ವೀರಭದ್ರ ದೇವಾಲಯ:** ಗ್ರಾಮದ ಒಳಗಿರುವ ಇದು ಉತ್ತರಾಭಿಮುಖ ವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಹಾಳಾಗಿರುವ ಒಂದು ದೇವಾಲಯದ ತಳಪಾಯದ ಮೇಲೆ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಗರ್ಭಗೃಹವನ್ನು ಶಿಲೆ ಮತ್ತು ಸಿಮೆಂಟಿನಿಂದ ನಿರ್ಮಿಸಲಾಗಿದ್ದು, ಒಳಗಡೆ ಇತ್ತೀಚಿನ ನವೀಕರಿಸಿದ ವೀರಭದ್ರನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಗಜಲಕ್ಷ್ಮಿ, ಗಣೇಶ, ವಿಷ್ಣು ಹಾಗೂ ಎರಡು ವೀರಗಲ್ಲು ಶಿಲ್ಪಗಳಿವೆ.

**೬೨. ಹೊಳಗುಂದಿಯ ಶ್ರೀ ಮರುಳಸಿದ್ಧೇಶ್ವರ ದೇವಾಲಯ:** ಇದು ಗ್ರಾಮದ ಪಶ್ಚಿಮಕ್ಕೆ ಗುಡ್ಡದ ಮೇಲೆ ಇದ್ದು, ಉತ್ತರಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಬೆಟ್ಟದ ಮೇಲೆ ವಿಶಾಲವಾದ ಆವರಣದಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಲ್ಲದೆ ಇತ್ತೀಚಿನ ಎರಡು ಶಿವಲಿಂಗಗಳು ಮತ್ತು ಉದ್ಭವಗೊಂಡಿರುವ ಸಿದ್ಧೇಶ್ವರನ ಮೂರ್ತಿಶಿಲ್ಪಗಳಿವೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸಾದಾ ಕೆತ್ತನೆಯಿಂದ ಕೂಡಿವೆ. ಸಭಾಮಂಟಪದಲ್ಲಿ ನಾಲ್ಕು ಚೌಕಾಕಾರದ ಕಂಬಗಳಿವೆ. ಆವರಣದಲ್ಲಿ ಭೈರವ, ಭೈರವಿ, ನಾಗ ಮುಂತಾದ ಪ್ರಾಚೀನ ಶಿಲ್ಪಗಳಿವೆ.

**೬೩. ಹ್ಯಾರಡದ ಸಂಗಮೇಶ್ವರ ದೇವಾಲಯ:** ಗ್ರಾಮದ ಪಶ್ಚಿಮ ಭಾಗದಲ್ಲಿರುವ ಇದು ಉತ್ತರಾಭಿಮುಖವಾಗಿದೆ. ಈ ದೇವಾಲಯ ಆಧುನಿಕ ಶೈಲಿಯಲ್ಲಿದ್ದು, ಕ್ರಿ.ಶ.೨೧ನೆಯ ಶತಮಾನಕ್ಕೆ

ಸೇರಿದೆ. ಕಣಶಿಲೆ ಹಾಗೂ ಸಿಮೆಂಟ್‌ನಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಸುಮಾರು ೪೦ ವರ್ಷಗಳ ಹಿಂದೆ ನಿರ್ಮಿಸಿರಬಹುದಾದ ಈ ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗ, ನಂದಿ, ಗಣೇಶ, ಭೈರವಿ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ಇಲ್ಲಿಯ ಕ್ರಿ.ಶ.೧೨೬೭ರ ಶಾಸನದಲ್ಲಿ, ಯಾದವ ದೊರೆ ಮಹಾದೇವರಾಯನ ಆಳ್ವಿಕೆಯಲ್ಲಿ ಶ್ರೀಪರ್ವತದಲ್ಲಿನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗಾಗಿ ಹೆರಡ ಗ್ರಾಮವನ್ನು ಮಹಾ ಪಸಾಯಿತ ದಳವಯ್ಯ ಸೋಯಿದೇವನು ದಾನ ಮಾಡಿದ ಉಲ್ಲೇಖವಿದೆ.

**೬೪. ಮಹಾಜನದಹಳ್ಳಿಯ ವೀರಭದ್ರ ದೇವಾಲಯ:** ಊರ ಹೊರಭಾಗದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ತಲವಿನ್ಯಾಸ ಗರ್ಭಗೃಹ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಕಲ್ಲುಗುಂಡಿನಲ್ಲಿ ಕೆತ್ತಿರುವ ವೀರಭದ್ರನ ಬೃಹದಾಕಾರದ ಏಕಶಿಲಾ ಮೂರ್ತಿಯಿದೆ. ಮುಖಮಂಟಪದಲ್ಲಿ ಎರಡು ಪೂರ್ಣ ಕಂಬಗಳಿವೆ. ಕ್ರಿ.ಶ.೧೯೦೧ರಲ್ಲಿ ದೇವಾಲಯ ಜೀರ್ಣೋದ್ಧಾರಗೊಂಡಿದೆ.

### ೫.೩.೨. ವೈಷ್ಣವ ದೇವಾಲಯಗಳು

ಹೂವಿನಹಡಗಲಿ ತಾಲೂಕಿನ ಅನೇಕ ಕಡೆ ಶೈವ ದೇವಸ್ಥಾನಗಳು ಪ್ರಧಾನವಾಗಿ ಕಂಡುಬರುತ್ತವೆ. ಇಲ್ಲಿನ ಶೈವ ದೇವಸ್ಥಾನಗಳನ್ನು ಬಿಟ್ಟರೆ ನಂತರದ ಸ್ಥಾನವನ್ನು ಇಲ್ಲಿನ ವೈಷ್ಣವ ದೇವಸ್ಥಾನಗಳು ಪಡೆದುಕೊಂಡಿವೆ. ಅವುಗಳಲ್ಲಿ ಮಹತ್ವದ ದೇವಾಲಯಗಳ ವೈಶಿಷ್ಟ್ಯತೆ ಈ ಕೆಳಕಂಡಂತಿದೆ.

**೧. ರಂಗಾಪುರದ ನರಸಿಂಹ ದೇವಾಲಯ:** ಕೇಂದ್ರ ಪುರಾತತ್ವ ಇಲಾಖೆಯ ಅಧೀನಕ್ಕೊಳಪಟ್ಟ ಈ ದೇವಾಲಯ ತುಂಗಭದ್ರಾ ನದಿ ದಂಡೆಯ ಮೇಲಿದ್ದು, ದ್ವಿಕೂಟಾಚಲ ದೇವಾಲಯ ಎನಿಸಿದೆ. ಗ್ರಾಮದ ಹೊರಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದ ಮುಂಭಾಗದಲ್ಲಿ ಮಂಟಪವಿದೆ. ಇದರ ಮೇಲೆ ಕದಂಬ ನಾಗರಶೈಲಿಯ ಗೋಪುರವಿದೆ. ಗೋಪುರವನ್ನು ಅಧಿಷ್ಠಾನ ಮತ್ತು ಸರಳವಾದ ಭಿತ್ತಿಯ ಮೇಲ್ಭಾಗದಲ್ಲಿ ನಿರ್ಮಿಸಲಾಗಿದೆ. ಇದು ಪೂರ್ವಾಭಿಮುಖವಾಗಿದೆ. ಇದರ ಇಕ್ಕೆಲಗಳಲ್ಲಿ ಕಕ್ಷಾಸನವಿದ್ದು, ಎರಡು ಪೂರ್ಣಗಂಬಗಳು ಹತ್ತು ಅರ್ಧಗಂಬಗಳಿಂದ ಕೂಡಿದೆ.

ದೇವಾಲಯದ ತಲವಿನ್ಯಾಸದಲ್ಲಿ ಎರಡು ಗರ್ಭಗೃಹ, ಅಂತರಾಳಗಳು ಮತ್ತು ಒಂದು ನವರಂಗ, ಮುಖಮಂಟಪಗಳಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಉಗ್ರನರಸಿಂಹನ ಆಕರ್ಷಕ ಮೂರ್ತಿಶಿಲ್ಪವಿದೆ. ಇದು ಸುಮಾರು ಮೂರು ಅಡಿ ಎತ್ತರವಿದೆ.

ನರಸಿಂಹನು ಹಿರಣ್ಯಕಶ್ಯಪನನ್ನು ತನ್ನ ಕಾಲ ಮೇಲೆ ಹಾಕಿಕೊಂಡು ತನ್ನೆರಡು ಕೈಗಳಿಂದ ಹೊಟ್ಟೆ ಬಗೆಯುತ್ತಿರುವಂತೆ ಕಂಡರಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಪದ್ಮದಳಾಕಾರವುಳ್ಳ ಭುವನೇಶ್ವರವಿದೆ.

ಗರ್ಭಗೃಹದ ಬಾಗಿಲುವಾಡ ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅಂತರಾಳದ ಬಾಗಿಲುವಾಡವು ಪದ್ಮ, ಕಂಬ, ಹೂಬಳ್ಳಿಯಿಂದ ಅಲಂಕಾರವನ್ನೊಳಗೊಂಡ ಪಂಚಶಾಖೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಮುಂಚಾಚಿದ ಕಪೋತ ರಚನೆಯಿದೆ.

ಪಶ್ಚಿಮಕ್ಕಿರುವ ಇನ್ನೊಂದು ಕೂಟದ ಗರ್ಭಗೃಹದಲ್ಲಿ ಶಿವಲಿಂಗ ಹಾಗೂ ನಂದಿಶಿಲ್ಪಗಳಿವೆ. ಇಲ್ಲಿನ ಅಂತರಾಳವು ನವರಂಗಕ್ಕೆ ತೆರೆದುಕೊಂಡಿದೆ.

ನವರಂಗದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ, ಕಲಶ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ನವರಂಗದ ಮಧ್ಯದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ನವರಂಗದಲ್ಲಿ ನಂದಿಶಿಲ್ಪ, ಸಪ್ತಮಾತೃಕೆಯರ ಪಟ್ಟಿಕೆ, ಗಣೇಶ, ಲಕ್ಷ್ಮಿ, ಸೂರ್ಯ, ದುರ್ಗಿ, ವಿಷ್ಣುವಿನ ಮೂರ್ತಿಶಿಲ್ಪಗಳಿವೆ. ನವರಂಗದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದ್ದು, ಈ ಶಾಖೆಗಳು ಪದ್ಮ, ಅರ್ಧಗಂಬ, ಲತಾಬಳ್ಳಿ, ಬಳೆಗಳ ರಚನೆಗಳನ್ನು ಹೊಂದಿದೆ. ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮಾಕಾರದಲ್ಲಿರುವ ಜಾಲಂಧ್ರವಿದೆ. ನವರಂಗದ ಮುಂಭಾಗದಲ್ಲಿ ತೆರೆದ ಮುಖಮಂಟಪವಿದೆ. ಮುಖಮಂಟಪದಲ್ಲಿರುವ ಕಂಬಗಳು ಸರಳವಾಗಿದ್ದು, ಎರಡು ಪೂರ್ಣಗಂಬ ಹಾಗೂ ಎರಡು ಅರ್ಧಗಂಬಗಳಿವೆ. ಎರಡು ಕಂಬದಲ್ಲಿ ಶಾಸನಗಳನ್ನು ಹಾಕಿಸಲಾಗಿದೆ. ಮುಖಮಂಟಪದಲ್ಲಿ ನಾಗಶಿಲ್ಪಗಳನ್ನು ಬೇರೆಡೆಯಿಂದ ತಂದು ಇರಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿರುವ ಕಟ್ಟೆಯ ಮೇಲೆ ಆಂಜನೇಯನ ಮೂರ್ತಿಶಿಲ್ಪವಿದೆ.

ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗಗಳು ಸರಳವಾಗಿವೆ. ಪ್ರಸ್ತರದಲ್ಲಿ ಮೇಲೆ ಅರ್ಪಿತ ಹಾರಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣಗೊಂಡ ಶಿಖರ ಭಾಗವಿದೆ. ಶಿಖರದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿವೆ.

ಈ ದೇವಾಲಯದ ಎಡಭಾಗದಲ್ಲಿ ವಿಶಾಲವಾದ ಮಂಟಪವಿದೆ. ಒಟ್ಟು ೧೨ ಸ್ವತಂತ್ರ ಕಂಬಗಳನ್ನು ಹೊಂದಿದೆ.

**೨. ಕೊಟ್ನೆಕಲ್ ಕ್ಯಾಂಪ್‌ನ ಲಕ್ಷ್ಮೀನಾರಾಯಣ ದೇವಾಲಯ:** ಕೊಟ್ನೆಕಲ್ ಕ್ಯಾಂಪ್ ಗ್ರಾಮದ ಹೊರಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಮರಳುಶಿಲೆಯಲ್ಲಿ ನಿರ್ಮಾಣವಾಗಿರುವ

ಇದು ಕನಿಷ್ಠ ಸ್ಥಿತಿಯಲ್ಲಿದೆ. ಪ್ರಸ್ತುತ ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳಗಳನ್ನು ಹೊಂದಿದ್ದು, ಇನ್ನುಳಿದ ಮುಂಭಾಗವು ನಾಶವಾಗಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಲಕ್ಷ್ಮೀನಾರಾಯಣ ಮೂರ್ತಿಶಿಲ್ಪವಿದೆ. ನಾರಾಯಣನ ತೊಡೆಯ ಮೇಲೆ ಲಕ್ಷ್ಮಿಯು ಕುಳಿತಿದ್ದಾಳೆ. ಗರ್ಭಗೃಹದ ಒಳಭಿತ್ತಿಯು(ಉತ್ತರ) ಮುಂಚಾಚಿದ್ದು, ಇದನ್ನು ಪೂಜಾ ಸಾಮಾಗ್ರಿಗಳನ್ನು ಇಡಲು ಬಳಸುತ್ತಿದ್ದಾರೆ. ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರಣವಿದೆ. ಇದು ತ್ರಿಶಾಖೆಯಿಂದ ಕೂಡಿದೆ. ಬಾಗಿಲುವಾಡವು ಅರ್ಧಗಂಬಗಳಿಂದ ಕೂಡಿದ್ದು ಸರಳವಾಗಿದೆ. ಅಂತರಾಳದಲ್ಲಿ ವೃತ್ತಾಕಾರವಾದ ಭುವನೇಶ್ವರವಿದೆ. ಅಂತರಾಳದ ಬಾಗಿಲುವಾಡವು ಸರಳವಾಗಿದ್ದು, ಇಕ್ಕೆಲಗಳಲ್ಲಿ ಸರಳ ಸುಂದರವಾದ ವಜ್ರಾಕಾರದಲ್ಲಿರುವ ಜಾಲಂಧ್ರವಿದೆ. ಲಲಾಟದ ಮೇಲ್ಭಾಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಉಬ್ಬುಶಿಲ್ಪಗಳಿವೆ. ಇವುಗಳಿಗೆ ಮಕರತೋರಣವಿದೆ. ಕೆಳಭಾಗದಲ್ಲಿ ಕುಂಬ ರಚನೆಯಿದೆ. ಅಂತರಾಳದ ಮುಂಭಾಗದಲ್ಲಿನ ತಲವಿನ್ಯಾಸವನ್ನು ಗಮನಿಸಿದಾಗ ದೇವಾಲಯವು ಇನ್ನೂ ಮುಂದುವರಿದಿದ್ದು ತಿಳಿದುಬರುತ್ತದೆ. ಆದರೆ ಇಂದು ಅದು ಸಂಪೂರ್ಣ ನಾಶವಾಗಿದೆ.

ದೇವಾಲಯದ ಅಧಿಷ್ಠಾನ ಭಾಗವು ಇಂದು ಕಾಣಿಸುವುದಿಲ್ಲ. ಭಿತ್ತಿಯನ್ನು ಒರಟಾದ ಕಲ್ಲುಗಳಿಂದ ನಿರ್ಮಿಸಲಾಗಿದೆ. ಶಿಖರದಲ್ಲಿ ಒರಟಾದ ಕಲ್ಲು ಹಾಸುಗಳನ್ನು ಹಾಕಲಾಗಿದೆ.

**೩. ಹೂವಿನಹಡಗಲಿಯ ಯೋಗನಾರಾಯಣ ದೇವಾಲಯ:** ನಗರದ ಒಳಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪಗಳಿಂದ ಕೂಡಿದೆ. ಈಗ ಗರ್ಭಗೃಹ, ಅಂತರಾಳಗಳು ಮಾತ್ರ ಗೋಚರಿಸುತ್ತವೆ. ಗರ್ಭಗೃಹವು ಚೌಕಾಕಾರವಾಗಿದ್ದು, ಎತ್ತರದ ಗರುಡಪೀಠದ ಮೇಲೆ ನಾರಾಯಣ ಶಿಲ್ಪವು ಯೋಗಭಂಗಿಯಲ್ಲಿದೆ. ಇದು ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಎರಡು ಕೈಗಳಲ್ಲಿ ಶಂಖ ಹಾಗೂ ಚಕ್ರ, ಕೆಳಭಾಗದ ಕೈಗಳು ತೊಡೆಯ ಮೇಲಿವೆ. ಇದಕ್ಕೆ ಕೊರಳಹಾರ ಕಿರೀಟಮಕುಟ ಹಾಗೂ ಸುತ್ತಲೂ ಪ್ರಭಾವಳಿ ಇದೆ. ಗರ್ಭಗೃಹದ ಪ್ರವೇಶದ್ವಾರವು ಐದು ಶಾಖೆಗಳಿಂದ ಕೂಡಿದೆ. ಇವುಗಳಲ್ಲಿ ವಿವಿಧ ಕೆತ್ತನೆಗಳಲ್ಲದೆ, ವೈಷ್ಣವ ದ್ವಾರಪಾಲಕರು ಹಾಗೂ ನೃತ್ಯಭಂಗಿಯಲ್ಲಿರುವ ಸ್ತ್ರೀಯರು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪಗಳಿವೆ.

ಅಂತರಾಳದ ಲಲಾಟಬಿಂಬದ ಪಟ್ಟಿಕೆಯಲ್ಲಿ ಮಕರತೋರಣಗಳಿಂದ ಅಲಂಕೃತಗೊಂಡ ಕೋಷ್ಠದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಉಬ್ಬುಗೆತ್ತನೆಗಳಿವೆ. ಇದರ ಪಾರ್ಶ್ವಗಳಲ್ಲಿ ಜಾಲಂಧ್ರಗಳು ಕೆಳಭಾಗದಲ್ಲಿ ಪೂರ್ಣಕುಂಬಗಳಿವೆ. ಕಪ್ಪುಶಿಲೆಯಿಂದ ನಿರ್ಮಾಣವಾದ ಈ ದೇವಾಲಯದ ಅಧಿಷ್ಠಾನ ಹಾಗೂ ಹೊರಗೋಡೆಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ.

**೪. ಹೂವಿನಹಡಗಲಿಯ ರಾಮ-ಲಕ್ಷ್ಮಣ ದೇವಾಲಯ:** ನಗರದ ಮಧ್ಯಭಾಗದಲ್ಲಿರುವ ಇದು ಉತ್ತರಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಈ ದೇವಾಲಯವು ಗರ್ಭಗೃಹ, ತೆರೆದ ಮಂಟಪಗಳನ್ನು ಹೊಂದಿದೆ. ಇಂದು ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದ್ದು, ಗರ್ಭಗೃಹದಲ್ಲಿರುವ ಮೂರ್ತಿಶಿಲ್ಪಗಳು ಮಾತ್ರ ಪ್ರಾಚೀನ ಕಾಲದವುಗಳಾಗಿವೆ. ಸ್ಥಾನಿಕ ಭಂಗಿಯಲ್ಲಿರುವ ರಾಮ-ಲಕ್ಷ್ಮಣ, ಸೀತೆಯರ ಮೂರ್ತಿಶಿಲ್ಪಗಳು ಆಕರ್ಷಣೀಯವಾಗಿವೆ. ರಾಮ-ಲಕ್ಷ್ಮಣರ ಕೆಳಭಾಗದಲ್ಲಿ ಆಂಜನೇಯ ಇದ್ದಾನೆ. ಗರ್ಭಗೃಹದ ಬಾಗಿಲುವಾಡ ಸರಳವಾಗಿದೆ. ತೆರೆದ ಮಂಟಪದಲ್ಲಿರುವ ಕಂಬಗಳು ಆಧುನಿಕ ಕಾಲದವುಗಳಾಗಿವೆ.

**೫. ಕತ್ತೆಬೆನ್ನೂರು ನಾರಾಯಣ ದೇವಾಲಯ:** ಗ್ರಾಮದ ಒಳಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಎತ್ತರವಾದ ದಿಬ್ಬದ ಮೇಲೆ ನಿರ್ಮಾಣವಾದ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳಗಳು ಮಾತ್ರ ಉಳಿದಿವೆ. ಉಳಿದ ಭಾಗ ಹಾಳಾಗಿದೆ. ಗರ್ಭಗೃಹ, ಅಂತರಾಳದ ಬಾಗಿಲುವಾಡಗಳು ಸರಳವಾಗಿವೆ. ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಗರುಡ ಪೀಠದ ಮೇಲೆ ಯೋಗನರಸಿಂಹನ ಶಿಲ್ಪವಿದೆ. ಇದು ಕಿರೀಟಮಕುಟ ಹಾಗೂ ಕಂಠಾಭರಣಗಳನ್ನು ಧರಿಸಿದೆ. ಹಿಂದಿನ ಕೈಗಳು ಹಾಳಾಗಿದ್ದು, ಮುಂದಿನ ಕೈಗಳು ಯೋಗಮುದ್ರೆಯಲ್ಲಿವೆ.

**೬. ಮಾಗಳದ ಸೂರ್ಯನಾರಾಯಣ ದೇವಾಲಯ:** ಗ್ರಾಮದ ಹೊರಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨೦೯ಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕೇಂದ್ರ ಪುರಾತತ್ವ ಇಲಾಖೆಯ ಸಂರಕ್ಷಣೆಯಲ್ಲಿದ್ದು, ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯವು ತ್ರಿಕೂಟಾಚಲವಾಗಿದ್ದು, ತಲವಿನ್ಯಾಸದಲ್ಲಿ ಮೂರು ಪ್ರತ್ಯೇಕ ಗರ್ಭಗೃಹ, ಅಂತರಾಳಗಳು ಹಾಗೂ ಇವೆಲ್ಲವುಗಳಿಗೆ ಹೊಂದಿಕೊಂಡಂತೆ ಒಂದು ಸಭಾಮಂಟಪ ಹಾಗೂ ಮುಖಮಂಟಪಗಳಿವೆ. ದಕ್ಷಿಣಾಭಿಮುಖವಾಗಿರುವ ಕೂಟದ ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಪಂಚಶಾಖೆಗಳು ಪದ್ಮ, ಲತಾಬಳ್ಳಿ, ಕಂಬ, ಹೂಬಳ್ಳಿ ರಚನೆಗಳಿಂದ ಕೂಡಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅಂತರಾಳದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ. ಮೊದಲ ಶಾಖೆ ಪದ್ಮ, ಎರಡನೇ ಶಾಖೆ ಕಂಬ, ಮೂರನೆಯ ಶಾಖೆ ಲತಾಬಳ್ಳಿಯಿಂದ ಕೂಡಿದೆ. ಇವುಗಳ ಇಕ್ಕೆಲ ಗಳಲ್ಲಿ ವಜ್ರಾಕಾರದ ಜಾಲಂಧ್ರವಿದೆ. ಲಲಾಟದಲ್ಲಿ ಗಜಲಕ್ಷ್ಮಿಯಿದ್ದಾಳೆ. ಲಲಾಟದ ಮೇಲ್ಭಾಗದಲ್ಲಿ ಮುಂಚಾಚಿದ ಕಪೋತ ರಚನೆಯಿದೆ. ಕಪೋತ ಮೇಲೆ ರೇಖಾನಾಗರ ಶೈಲಿಯ ಐದು ಶಿಖರ, ಎರಡು ಕಾಲು ಮೇಲೆತ್ತಿರುವ ಸಿಂಹಗಳ ಶಿಲ್ಪಗಳಿವೆ.

ಪೂರ್ವಾಭಿಮುಖವಾಗಿರುವ ಕೂಟದ ಗರ್ಭಗೃಹದಲ್ಲಿ ಎರಡು ಅಡಿ ಎತ್ತರವುಳ್ಳ ಶಿವಲಿಂಗವಿದೆ. ಗರ್ಭಗೃಹದ ಪೂರ್ವ ಮತ್ತು ದಕ್ಷಿಣ ಒಳಭಿತ್ತಿಯು ಮುಂಚಾಚಿಕೊಂಡಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ವಜ್ರಾಕಾರ, ಲತಾಬಳ್ಳಿ, ಕಂಬ, ಪದ್ಮ, ಹೂಬಳ್ಳಿಯಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲ್ಭಾಗದಲ್ಲಿ ಮುಂಚಾಚಿದ ಕಪೋತ ಭಾಗವಿದೆ. ಇದರ ಮೇಲೆ ವೇಸರಶೈಲಿಯ ಶಿಖರ ಮತ್ತು ಸಿಂಹಗಳ ಉಬ್ಬುಶಿಲ್ಪಗಳಿವೆ. ಅಂತರಾಳದಲ್ಲಿ ಗರ್ಭಗೃಹದ ಶಿವಲಿಂಗಕ್ಕೆ ಎದುರಾಗಿ ಪೀಠದ ಮೇಲೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹ ಮತ್ತು ಅಂತರಾಳದಲ್ಲಿ ಪದ್ಮದಳದ ಆಕಾರದಲ್ಲಿರುವ ಸುಂದರವಾದ ಭುವನೇಶ್ವರಗಳಿವೆ. ಅಂತರಾಳದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ಪದ್ಮ, ಲತಾಬಳ್ಳಿ, ಕಂಬ, ನೃತ್ಯಗಾರ್ತಿಯರು, ಆನೆ ಮತ್ತು ಸಿಂಹಗಳ ಉಬ್ಬುಶಿಲ್ಪಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಮುಂಚಾಚಿದ ಕಪೋತವಿದೆ. ಕಪೋತದ ಮೇಲೆ ನಾಗರಶೈಲಿಯ ಐದು ಗೋಪುರಗಳಿವೆ. ಮಧ್ಯದಲ್ಲಿ ಕಂಬ ಹಾಗೂ ಕಂಬದ ಮೇಲೆ ಸಣ್ಣ ಗೋಪುರಗಳಿವೆ. ಕೆಳಭಾಗದಲ್ಲಿ ಚಾಮರಧಾರಿಣಿಯರ, ವಿಷ್ಣು, ವೇಣುಗೋಪಾಲನ ಉಬ್ಬುಶಿಲ್ಪಗಳಿವೆ. ಇವುಗಳ ಸುತ್ತ ಪ್ರಭಾವಳಿ ರಚನೆಯಿದೆ.

ಪಶ್ಚಿಮಾಭಿಮುಖವಾಗಿರುವ ಕೂಟದ ಗರ್ಭಗೃಹದಲ್ಲಿ ಅಶ್ವಪೀಠದ ಮೇಲೆ ಸುಮಾರು ಮೂರು ಅಡಿ ಎತ್ತರದಲ್ಲಿ ಸಮಭಂಗಿಯಲ್ಲಿ ನಿಂತಿರುವ ಸೂರ್ಯನ ಸುಂದರವಾದ ಮೂರ್ತಿಶಿಲ್ಪವಿದೆ. ಸೂರ್ಯನು ಅನೇಕ ರೀತಿಯಲ್ಲಿ ಅಲಂಕರಣಗೊಂಡಿದ್ದಾನೆ. ಸೂರ್ಯನ ಅಕ್ಕಪಕ್ಕದಲ್ಲಿ ಉಷಾ–ಪ್ರತ್ಯುಷಾದೇವಿಯರ ಶಿಲ್ಪಗಳಿವೆ. ಇವೆಲ್ಲವುಗಳ ಸುತ್ತ ಮಕರತೋರಣವಿದೆ. ಗರ್ಭಗೃಹದಲ್ಲಿ ಅಷ್ಟಪದ್ಮದಳದ ಮಧ್ಯ ಬಾಳೆಹೂವಿನ ಮೊಗ್ಗುವಿನ ಇಳಿಬಿಟ್ಟ ರಚನೆಯುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಇದರ ಮೇಲೆ ಮುಂಚಾಚಿದ ಕಪೋತದ ರಚನೆ ಮತ್ತು ರೇಖಾನಾಗರ ಮಾದರಿಯ ಐದು ಶಿಖರ ಭಾಗಗಳಿವೆ. ಅಂತರಾಳದಲ್ಲಿ ವೇಣುಗೋಪಾಲನ ಸುಂದರವಾದ ಮೂರ್ತಿಶಿಲ್ಪವಿದೆ. ಮೂರ್ತಿಶಿಲ್ಪವನ್ನು ಪೀಠದ ಮೇಲೆ ನಿಲ್ಲಿಸಲಾಗಿದೆ. ಅಂತರಾಳದಲ್ಲಿ ಅಷ್ಟಪದ್ಮದಳದ ಆಕಾರವುಳ್ಳ ಭುವನೇಶ್ವರವಿದೆ. ಅಂತರಾಳದ ಬಾಗಿಲುವಾಡವು ಪದ್ಮ, ಕಂಬ, ಲತಾಬಳ್ಳಿ, ಹೂಬಳ್ಳಿಗಳ ಅಲಂಕರಣೆಯನ್ನೊಳಗೊಂಡ ಪಂಚಶಾಖೆಗಳಿಂದ ಕೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಅದರ ಮೇಲೆ ಮುಂಚಾಚಿದ ಕಪೋತ ರಚನೆ ಮತ್ತು ಐದು ರೇಖಾನಾಗರ ಮಾದರಿಯ ಶಿಖರ ಭಾಗಗಳಿವೆ.

ಪ್ರತ್ಯೇಕವಾದ ಮೂರು ಗರ್ಭಗೃಹ, ಅಂತರಾಳಗಳಿಗೆ ಒಂದು ವಿಶಾಲವಾದ ಸಭಾಮಂಟಪವಿದೆ. ಈ ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳನ್ನೊಳಗೊಂಡು ಒಟ್ಟು ೧೦ ಸ್ವತಂತ್ರ ಕಂಬಗಳಿವೆ. ಮಧ್ಯದ ವೇದಿಕೆಯ ಮೇಲಿರುವ ನಾಲ್ಕು ಸ್ವತಂತ್ರ ಕಂಬಗಳು

ಸೂಕ್ಷ್ಮ ಕೆತ್ತನೆಯಿಂದ ಕೂಡಿದವುಗಳಾಗಿವೆ. ಇವು ಪೀಠ, ಪಾದ, ವೃತ್ತ, ಕಲಶ, ಘಟ, ಫಲಕ, ಬೋದಿಗೆ ರಚನೆಗಳನ್ನು ಹೊಂದಿವೆ. ಈ ಕಂಬಗಳಲ್ಲಿ ಅಲ್ಲಲ್ಲಿ ಸೂಕ್ಷ್ಮವಾಗಿ ಕೆತ್ತಿರುವ ತೋರಣಗಳಿವೆ. ಕಂಬದ ಬೋದಿಗೆಯಲ್ಲಿ ದರ್ಪಣ ಸುಂದರಿ, ಗಣೇಶ, ಶಿಲಾಬಾಲಿಕೆ ಇನ್ನಿತರೆ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಸಭಾಮಂಟಪದಲ್ಲಿರುವ ಎರಡು ಕಂಬಗಳು ಸರಳವಾಗಿದ್ದು ಪೀಠ, ಪಾದ, ಅಷ್ಟಪಟ್ಟಿಕೆ, ಕಲಶ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ಸಭಾಮಂಟಪದಲ್ಲಿ ಎರಡು ಅಡಿ ಎತ್ತರವುಳ್ಳ ಕಕ್ಷಾಸನವಿದೆ. ಈ ಕಕ್ಷಾಸನದ ಮೇಲೆ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳಲ್ಲಿ ಪ್ರಮುಖವಾಗಿ ಪದ್ಮ, ತೋರಣಗಳು ಆಕರ್ಷಣೀಯವಾಗಿವೆ.

ಸಭಾಮಂಟಪದಲ್ಲಿ ಒಟ್ಟು ಹನ್ನೆರಡು ವಿತಾನಗಳಿವೆ. ಇವುಗಳಲ್ಲಿ ಮಧ್ಯದಲ್ಲಿರುವ ವಿತಾನವು ಅತ್ಯಂತ ಆಕರ್ಷಣೀಯವಾಗಿದೆ. ಇದು ಮೂರು ಹಂತದ ವಿತಾನವಾಗಿದ್ದು, ಪದ್ಮ, ಚಕ್ರ, ಬಾಳೆಹೂವಿನ ಮೊಗ್ಗುವಿನ ರಚನೆಗಳನ್ನು ಹೊಂದಿದೆ. ಈ ಭುವನೇಶ್ವರದಲ್ಲಿ ಅನೇಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಇನ್ನುಳಿದ ಹನ್ನೊಂದು ವಿತಾನಗಳು ಹೆಚ್ಚಾಗಿ ಪದ್ಮದಳದ ಆಕಾರದಲ್ಲಿವೆ. ಸಭಾಮಂಟಪ ದಲ್ಲಿ ನಾಲ್ಕು ದೇವಕೋಷ್ಠಗಳಿವೆ. ದೇವಕೋಷ್ಠಗಳು ಎರಡು ಅರ್ಧಗಂಬಗಳ ಮಧ್ಯದಲ್ಲಿವೆ ಹಾಗೂ ಮೇಲ್ಭಾಗದಲ್ಲಿ ವೇಸರಶೈಲಿಯ ಶಿಖರವಿದೆ. ಸಭಾಮಂಟಪದಲ್ಲಿ ಸಪ್ತಮಾತೃಕೆಯರ ಪಟ್ಟಿಕೆ ಇದೆ. ಸಭಾಮಂಟಪದ ಪ್ರಮುಖ ಪ್ರವೇಶದ್ವಾರವು(ದಕ್ಷಿಣಾಭಿಮುಖ) ತ್ರಿಶಾಖೆಯಿಂದ ಕೂಡಿದ್ದು, ಶಾಖೆಗಳು ಲತಾಬಳ್ಳಿ, ನೃತ್ಯನಿರತ ಸ್ತ್ರೀ, ಬಳೆಗಳ ರಚನೆಗಳನ್ನು ಹೊಂದಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ.

ದೇವಾಲಯದ ಪಾರ್ಶ್ವನೋಟವನ್ನು ನೋಡಿದಾಗ ದೇವಾಲಯಕ್ಕೆ ಉತ್ತಮವಾದ ಅಧಿಷ್ಠಾನ ವಿರುವುದು ಗೊತ್ತಾಗುತ್ತದೆ. ಅಧಿಷ್ಠಾನವು ಜಗತಿ, ಉಪಾನ, ಗಳಪೀಠ, ಕುಮುದ, ಪದ್ಮಗಳ ನ್ನೊಳಗೊಂಡಿದೆ. ಅಧಿಷ್ಠಾನದಲ್ಲಿ ಸಿಂಹ, ಗಣೇಶ, ಆನೆಕಾಳಗ ಇನ್ನೂ ಮುಂತಾದ ಉಬ್ಬುಶಿಲ್ಪಗಳಿವೆ. ಭಿತ್ತಿಯು ಅಲಂಕೃತಗೊಂಡಿದ್ದು, ಭಿತ್ತಿಯಲ್ಲಿ ದೇವಕೋಷ್ಠಗಳು, ಅರ್ಧಗಂಬಗಳು, ಜಾಲಂಧ್ರಗಳಿವೆ. ಇಲ್ಲಿ ವಿಷ್ಣು, ಕೇಶವ, ಯೋಗಾನರಸಿಂಹ, ಬ್ರಹ್ಮ, ಶಿವ, ಭೈರವ, ಭೈರವಿ, ಗಣೇಶ, ಕಾಳಿ, ಸರಸ್ವತಿ, ಯಕ್ಷರ ಉಬ್ಬು ಕೆತ್ತನೆಗಳಿವೆ. ಭಿತ್ತಿಯಲ್ಲಿ ನಂತರ ಪ್ರಸ್ತರ ಭಾಗವಿದೆ. ಪ್ರಸ್ತರದಲ್ಲಿ ತೋರಣ, ಕೀರ್ತಿಮುಖ, ಪದ್ಮ, ವಿಷ್ಣು, ಸಿಂಹ ಹಾಗೂ ಇನ್ನಿತರ ಉಬ್ಬುಶಿಲ್ಪಗಳ ಜೊತೆಗೆ ಕಪೋತ ರಚನೆಯಿದೆ.

**೭. ಹೊಳಲಿನ ಅನಂತಶಯನ ದೇವಾಲಯ:** ಗ್ರಾಮದ ದಕ್ಷಿಣ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕ್ರಿ.ಶ.೧೪ನೆಯ ಶತಮಾನಕ್ಕೆ ಸೇರಿದ್ದು, ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ಆಯತಾಕಾರವುಳ್ಳ ಗರ್ಭಗೃಹ ಮತ್ತು ವಿಶಾಲವಾದ ಸಭಾಮಂಟಪ ಗಳನ್ನೊಳಗೊಂಡಿದೆ. ಆಯತಾಕಾರವಾಗಿರುವ ಗರ್ಭಗೃಹದಲ್ಲಿ ಶಯನ ಭಂಗಿಯಲ್ಲಿರುವ ಸುಮಾರು ೧೦ ಅಡಿ ಉದ್ದದ ಸುಂದರವಾದ ಅನಂತಶಯನ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು

ಸರಳವಾಗಿದ್ದು ತ್ರಿಶಾಖೆಯಿಂದ ಕೂಡಿದೆ. ಸಭಾಮಂಟಪದಲ್ಲಿ ಇತ್ತೀಚಿನ ಆಧುನಿಕವಾದ ಕಂಬಗಳನ್ನು ಇರಿಸಲಾಗಿದೆ. ಈ ಕಂಬಗಳು ಸರಳವಾಗಿವೆ. ದೇವಾಲಯ ಮೂಲಕಂಬಗಳನ್ನು ಹಿಂಭಾಗದಲ್ಲಿ ಅಸ್ತವ್ಯಸ್ತವಾಗಿ ಹರಡಲಾಗಿದೆ. ಈ ಕಂಬಗಳು, ಪೀಠ, ಪಾದ, ವೃತ್ತ, ಕಲಶ, ಘಟ, ಫಲಕ ಭಾಗಗಳನ್ನು ಹೊಂದಿವೆ. ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ. ಮುಂಭಾಗದಲ್ಲಿ ಐದು ಅಡಿ ಎತ್ತರವುಳ್ಳ ಸೂರ್ಯನಾರಾಯಣನ ಮೂರ್ತಿಶಿಲ್ಪವಿದೆ. ಅಸ್ಪಷ್ಟವಾದ ಶಿಲಾಶಾಸನವಿದೆ. ಈ ಅನಂತಶಯನ ಮೂರ್ತಿಯನ್ನು ಹೊಸಪೇಟೆ ಹತ್ತಿರವಿರುವ ಅನಂತಶಯನ ಗುಡಿಯಲ್ಲಿ ಪ್ರತಿಷ್ಠಾಪಿಸಲು ನಿರ್ಮಿಸಲಾಗಿತ್ತೆಂಬ ಪ್ರತೀತಿ ಇದೆ.

**೮. ಹೊಳಲಿನ ಆಂಜನೇಯ ದೇವಾಲಯ:** ಗ್ರಾಮದ ದಕ್ಷಿಣ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕ್ರಿ.ಶ.೧೪ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ವಿಶಾಲವಾದ ಬಾವಿಯ ಉತ್ತರ ಗೋಡೆಗೆ ಹೊಂದಿಕೊಂಡಿದೆ. ಕೇವಲ ಗರ್ಭಗೃಹವಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಗರ್ಭಗೃಹದಲ್ಲಿ ಎರಡು ಚೌಕಾಕಾರದ ಕಂಬಗಳು, ಮಧ್ಯ ಆಂಜನೇಯ ಮತ್ತು ಗಣೇಶನ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದು ಮೂಲತಃ ಗಣೇಶನ ದೇವಾಲಯ ವಿರಬಹುದು. ನಂತರ ಆಂಜನೇಯ ವಿಗ್ರಹವನ್ನು ಪ್ರತಿಷ್ಠಾಪಿಸಿದಂತೆ ಕಾಣುತ್ತದೆ.

**೯. ಸೋಗಿಯ ದಬ್ಬಗುಡಿ(ಕೇಶವ ದೇವಾಲಯ):** ಗ್ರಾಮದ ಕಲ್ಲೇಶ್ವರ ದೇವಾಲಯದ ಎಡ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ರಾಜ್ಯ ಪುರಾತತ್ವ ಇಲಾಖೆಯ ಸಂರಕ್ಷಣೆಯಲ್ಲಿ ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸವು ಗರ್ಭಗೃಹ, ತೆರೆದ ಅಂತರಾಳ, ಸಭಾಮಂಟಪ ಹಾಗೂ ತೆರೆದ ಮುಖಮಂಟಪಗಳನ್ನೊಳಗೊಂಡಿದೆ. ಇಂದು ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪಗಳಿರುವುದು ಕಾಣಿಸುವುದಿಲ್ಲ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು, ಪಂಚಶಾಖೆಗಳಿಂದ ಕೂಡಿದೆ. ಅಂತರಾಳವು ಸಭಾಮಂಟಪಕ್ಕೆ ತೆರೆದುಕೊಂಡಿದೆ. ಅಂತರಾಳದಲ್ಲಿ ಎರಡು ದೇವಕೋಷ್ಠಗಳಿವೆ. ಸಭಾಮಂಟಪದಲ್ಲಿ ಒಟ್ಟು ಆರು ಸ್ವತಂತ್ರ ಕಂಬಗಳಿದ್ದು ಎರಡು ಮಧ್ಯದಲ್ಲಿದ್ದರೆ ನಾಲ್ಕು ಕಕ್ಷಾಸನದ ಮೇಲಿವೆ. ಮಧ್ಯದ ಕಂಬಗಳು ಪೀಠ, ಪಾದ, ಹದಿನಾರು-ಎಂಟು-ಹದಿನಾರು ಕೋನ, ದಂಡ, ಕಲಶ, ಘಟ, ಫಲಕ, ಪುಷ್ಪಬೋದಿಗೆಯನ್ನು ಹೊಂದಿದೆ. ಕಕ್ಷಾಸನದ ಮೇಲಿರುವ ಕಂಬಗಳು ಸರಳವಾದ ವಾಸ್ತುವನ್ನು ಹೊಂದಿವೆ. ಕಂಬದ ಮೇಲೆ ಶಾಸನವಿದೆ. ದಕ್ಷಿಣಕ್ಕೆ ಮುಖಮಂಟಪವಿದ್ದು, ಮಳೆಯ ನೀರು ಬಿದ್ದು ಮುಂದೆ ಜಾರಿ ಹೋಗುವಂತೆ ಕಪೋತವನ್ನು ರಚಿಸಲಾಗಿದೆ. ಮುಖಮಂಟಪದ ಪ್ರವೇಶಕ್ಕೆ ಸುರುಳಿಯಾಳಿಗಳಿಂದ ಕೂಡಿದ ಸೋಪಾನಗಳಿವೆ.

ದೇವಾಲಯದ ಅಧಿಷ್ಠಾನ ಭಾಗದಲ್ಲಿ ಉಪಾನ, ಜಗತಿ, ಕುಮುದ, ಪದ್ಮ ಭಾಗಗಳನ್ನು ಹೊಂದಿದೆ. ಸರಳವಾದ ಭಿತ್ತಿಯ ಭಾಗವಿದ್ದು ಪ್ರಸ್ತರದಲ್ಲಿ ಕಪೋತ ಮತ್ತು ಪದ್ಮ ಭಾಗಗಳಿವೆ.

**೧೦. ಉತ್ತಂಗಿಯ ಆಂಜನೇಯ ದೇವಾಲಯ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ತೆರೆದ ಸಭಾಮಂಟಪವನ್ನು ಹೊಂದಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಕಲ್ಲುಬಂಡೆಯ ಮೇಲೆ ಮಾಡಿರುವ ಆಂಜನೇಯನ ಉಬ್ಬುಶಿಲ್ಪವಿದೆ. ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಇದರ ಬಾಗಿಲುವಾಡ ಸರಳವಾಗಿದೆ.

ತೆರೆದ ಮಂಟಪದಲ್ಲಿರುವ ಕಂಬಗಳು ಸರಳವಾಗಿದ್ದು, ಚೌಕಪಟ್ಟಿಕೆಯನ್ನು ಹೊಂದಿವೆ. ತೆರೆದ ಮಂಟಪದ ಮಧ್ಯದಲ್ಲಿರುವ ನಾಲ್ಕು ಕಂಬಗಳು ಚೌಕಪಟ್ಟಿಕೆಯಲ್ಲಿವೆ. ಮುಂಭಾಗದಲ್ಲಿರುವ ಎರಡು ಕಂಬಗಳು ಚಪ್ಪಟೆಯಾಕಾರದಲ್ಲಿವೆ. ದೇವಾಲಯದ ಮುಂಭಾಗದ ಕಟ್ಟೆಯ ಮೇಲೆ ಗರುಡಸ್ತಂಭವಿದೆ. ಈ ದೇವಾಲಯದ ಪ್ರಾಕಾರದಲ್ಲಿ ಸಣ್ಣದಾದ ಬೀರಲಿಂಗೇಶ್ವರ ದೇವಾಲಯವಿದೆ. ಇದು ಗರ್ಭಗೃಹ, ಅಂತರಾಳ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಆಧುನಿಕವಾದ ಶಿವಲಿಂಗವಿದ್ದು, ಒಳಭಿತ್ತಿಯು ಮುಂಚಾಚಿಕೊಂಡಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡವು ಸರಳವಾಗಿದೆ. ಹಾಗೆಯೇ ಪ್ರಾಕಾರದಲ್ಲಿ ವಿಷ್ಣು, ಚತುರ್ಮುಖ ಬ್ರಹ್ಮ, ನಂದಿಶಿಲ್ಪಗಳಿವೆ. ಆಂಜನೇಯ ದೇವಾಲಯವನ್ನು ಇಂದು ಜೀರ್ಣೋದ್ಧಾರಗೊಳಿಸಲಾಗಿದೆ.

**೧೧. ಹೂವಿನಹಡಗಲಿಯ ಕೇಶವ ದೇವಾಲಯ:** ಇದು ನಗರದ ಕಲ್ಲೇಶ್ವರ ದೇವಾಲಯದ ಪೂರ್ವಕ್ಕಿದ್ದು, ಉತ್ತರಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧೮೦ನೆಯ ಶತಮಾನಕ್ಕೆ ಸೇರಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿರುವ ನಾಲ್ಕು ಅಡಿ ಎತ್ತರವುಳ್ಳ ಕೇಶವನ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು ಪದ್ಮ, ನವಿಲುಗರಿ, ಲತಾಬಳ್ಳಿ, ನೃತ್ಯಗಾರ–ವಾದ್ಯಗಾರ, ಬಳೆ, ಹೂಬಳ್ಳಿಯ ಉಬ್ಬುಕೆತ್ತನೆಗಳಿವೆ. ಕೆಳಭಾಗದಲ್ಲಿ ಸ್ತ್ರೀಯರ, ವರಾಹ, ವೈಷ್ಣವ ದ್ವಾರಪಾಲಕರ, ದರ್ಪಣ ಸುಂದರಿಯರ ಉಬ್ಬುಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ಲಲಾಟದ ಮೇಲೆ ಮುಂಚಾಚಿದ ಕಪೋತ ಭಾಗವಿದೆ. ಭುವನೇಶ್ವರಿ ಪದ್ಮದಳಾಕಾರದಲ್ಲಿದೆ.

ಅಂತರಾಳದ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅಂತರಾಳದ ಬಾಗಿಲುವಾಡದ ಇಕ್ಕೆಲಗಳಲ್ಲಿ ಪದ್ಮರಚನೆಯುಳ್ಳ ಜಾಲಂಧ್ರವಿದೆ. ಕೆಳಭಾಗದಲ್ಲಿ ಪೂರ್ಣಕುಂಬದ ರಚನೆಯಿದೆ. ಸಭಾಮಂಟಪದ ಮಧ್ಯದ ವೇದಿಕೆಯ ಮೇಲೆ ನಾಲ್ಕು ಸ್ವತಂತ್ರ ಕಂಬಗಳಿವೆ. ಕಂಬಗಳು ಪದ್ಮಪೀಠ, ಪಾದ, ಅಷ್ಟಕೋನ, ವೃತ್ತ, ದಂಡ, ಕಲಶ, ತಾಟಿಕಾ, ಘಟ, ಮಂಡಿ, ಫಲಕ,

ವೀರಕಂಠ, ಬೋದಿಗೆಗಳನ್ನು ಹೊಂದಿವೆ. ಪಾದದ ನಾಲ್ಕು ಪಟ್ಟಿಕೆಗಳಲ್ಲಿ ಗಣೇಶ, ವಿಷ್ಣು, ದರ್ಪಣ ಸುಂದರಿ, ಸ್ತ್ರೀಯರ, ದುರ್ಗಿ, ನೃತ್ಯಗಾರರ ಹಾಗೂ ಇನ್ನಿತರೆ ಉಬ್ಬುಶಿಲ್ಪಗಳಿವೆ. ನವರಂಗದ ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಈ ಶಾಖೆಗಳು ಪದ್ಮ, ಲತಾಬಳ್ಳಿ, ನೃತ್ಯಗಾರರ ನಾಗ-ನಾಗಿಣಿಯರ ಉಬ್ಬುಶಿಲ್ಪಗಳಿಂದ ಕೂಡಿದೆ. ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪದಲ್ಲಿ ಪದ್ಮದಳಾಕಾರದ ಭುವನೇಶ್ವರಗಳಿವೆ.

ದೇವಾಲಯದ ಅಧಿಷ್ಠಾನ ಭಾಗವು ಪ್ರಸ್ತುತವಾಗಿ ಕಾಣಿಸುವುದಿಲ್ಲ. ಭಿತ್ತಿಯಲ್ಲಿ ಕಂಬ, ಪಂಜರ ಕೋಷ್ಟಕ, ಕಂಬದ ಮೇಲೆ ಗೋಪುರದ ರಚನೆಯಿದೆ ಹಾಗೂ ದೇವಕೋಷ್ಠದ ಮೇಲೆ ವೇಸರಶೈಲಿಯ ಗೋಪುರವಿದೆ. ಪ್ರಸ್ತರದಲ್ಲಿ ಹಲ್ಲಿನ ಮಾದರಿ ರಚನೆ, ತೋರಣ, ಹೂಬಳ್ಳಿಯ ರಚನೆಗಳಿವೆ. ದೇವಾಲಯಕ್ಕೆ ಶಿಖರ ಭಾಗವಿಲ್ಲ. ನವರಂಗಕ್ಕೆ ಪೂರ್ವದಿಕ್ಕಿನಲ್ಲಿ ಪ್ರವೇಶ ದ್ವಾರವಿದೆ. ದ್ವಾರದ ಮುಂಭಾಗದಲ್ಲಿ ಮುಖಮಂಟಪವಿದೆ. ಮುಖಮಂಟಪದ ಕಂಬಗಳು ಅನೇಕ ಪಟ್ಟಿಕೆಗಳಿಂದ ಕೂಡಿವೆ. ಪ್ರಾಕಾರದಲ್ಲಿ ಶಾಸನವಿದೆ.

**೧೨. ಹಿರೇಹಡಗಲಿ ಲಕ್ಷ್ಮೀನರಸಿಂಹ ದೇವಾಲಯ:** ಗಣೇಶ ದೇವಾಲಯದ ಪಕ್ಕದಲ್ಲಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿದ್ದು, ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದೆ. ಕನಿಷ್ಠ ಸ್ಥಿತಿಯಲ್ಲಿದೆ. ಏಕಕೋಣೆಯನ್ನು ಹೊಂದಿದೆ. ಇದರಲ್ಲಿ ಲಕ್ಷ್ಮೀನರಸಿಂಹನ ಸುಂದರ ಮೂರ್ತಿಶಿಲ್ಪವಿದೆ. ಒಂದು ಅಡಿ ಎತ್ತರವಿರುವ ಗರುಡಪೀಠದ ಮೇಲೆ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪೀಠದ ಜಲಹರಿವು ಬಲಭಾಗಕ್ಕಿದೆ.

ಏಕಕೋಣೆಯ ಒಳಭಿತ್ತಿಯು ಮುಂಚಾಚಿಕೊಂಡಿದ್ದು, ಮೇಲ್ಚಾವಣಿಯಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ದೇವಾಲಯದ ಬಾಗಿಲುವಾಡ ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿದೆ.

ದೇವಾಲಯದ ಅಧಿಷ್ಠಾನ ಭಾಗ ಕಾಣುವುದಿಲ್ಲ. ನೆಲದಲ್ಲಿ ಹೂತುಹೋಗಿದೆ. ಭಿತ್ತಿಯನ್ನು ಒರಟಾದ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಶಿಖರ ಭಾಗದಲ್ಲಿ ಒರಟಾದ ಕಲ್ಲುಹಾಸುಗಳನ್ನು ಹಾಕಲಾಗಿದೆ.

**೧೩. ಮದಲಘಟ್ಟ ಆಂಜನೇಯ ದೇವಾಲಯ:** ಗ್ರಾಮದ ತುಂಗಭದ್ರಾ ನದಿ ದಂಡೆಯ ಮೇಲಿನ ಭಾಗದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದೆ. ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ತೆರೆದ ಮಂಟಪಗಳಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಸುಮಾರು ಆರು ಅಡಿ ಎತ್ತರವುಳ್ಳ ಆಂಜನೇಯನ ಮೂರ್ತಿಶಿಲ್ಪವಿದೆ. ಗರ್ಭಗೃಹದಲ್ಲಿ ಸರಳವಾದ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡಕ್ಕೆ ಹಿತ್ತಾಳೆಯ ಹೊದಿಕೆಯನ್ನು ಹಾಕಲಾಗಿದೆ. ಅಂತರಾಳದ ಬಾಗಿಲುವಾಡವು ಸರಳವಾಗಿದ್ದು,

ಲಲಾಟಬಿಂಬದಲ್ಲಿ ಪದ್ಮವಿದೆ. ತೆರೆದ ಮಂಟಪದಲ್ಲಿ ಒಟ್ಟು ಎಂಟು ಸ್ವತಂತ್ರ ಕಂಬಗಳಿವೆ. ಹನ್ನೆರಡು ಅರ್ಧಗಂಬಗಳಿವೆ. ಮಧ್ಯದ ನಾಲ್ಕು ಕಂಬಗಳು ಪಾದ, ಘಟ, ಸರಳ ಬೋದಿಗೆಯನ್ನು ಹೊಂದಿವೆ. ಸಭಾಮಂಟಪಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಪ್ರವೇಶದ್ವಾರವಿದೆ. ದೇವಾಲಯದ ಅಧಿಷ್ಠಾನ, ಭಿತ್ತಿ, ಪ್ರಸ್ತರ ಮತ್ತು ಶಿಖರ ಭಾಗಗಳನ್ನು ಆಧುನೀಕರಿಸಲಾಗಿದೆ. ಅಲ್ಲದೆ ಇಲ್ಲಿ ಹರಪನಹಳ್ಳಿ ಪಾಳೆಯಗಾರರ ಸಂಸ್ಥಾಪಕ ದಾದೇನಾಯಕನ ಶಿಲ್ಪವಿದೆ.

**೧೪. ಹೊನ್ನೂರು ಆಂಜನೇಯ ದೇವಾಲಯ:** ಗ್ರಾಮದ ಕೊನೆಯ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಪಾಳೆಯಗಾರ ಶೈಲಿಯಲ್ಲಿದ್ದು, ಕ್ರಿ.ಶ.೧೮-೧೯ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಸಂಪೂರ್ಣ ಜೀರ್ಣೋದ್ಧಾರಗೊಂಡಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಮಂಟಪ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಸ್ಥಾನಿಕ ಭಂಗಿಯಲ್ಲಿರುವ ಆಂಜನೇಯನ ಮೂರ್ತಿಶಿಲ್ಪವಿದೆ. ಗರ್ಭಗೃಹದಲ್ಲಿ ಭುವನೇಶ್ವರ, ಬಾಗಿಲುವಾಡಗಳು ಸರಳವಾಗಿವೆ. ಲಲಾಟದಲ್ಲಿ ಪದ್ಮದಳದ ರಚನೆಯಿದೆ. ತೆರೆದ ಮಂಟಪದಲ್ಲಿ ಅತ್ಯಂತ ಸರಳವಾದ ನಾಲ್ಕು ಸ್ವತಂತ್ರ ಕಂಬಗಳಿವೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯನ್ನು ನವೀಕರಿಸಲಾಗಿದೆ. ತೆರೆದ ಮಂಟಪದಲ್ಲಿ ಗಣೇಶ ಮತ್ತು ನಾಗಶಿಲ್ಪಗಳಿವೆ. ಮುಂಭಾಗದಲ್ಲಿ ಬೇಟೆಗಾರ್ತಿಯ ಶಿಲ್ಪವಿದೆ.

**೧೫. ಇಟ್ಟಿಗೆಯ ಹಳ್ಳಿ ಆಂಜನೇಯ ದೇವಾಲಯ:** ಗ್ರಾಮದ ಹೊರಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಆಧುನಿಕ ಶೈಲಿಯಲ್ಲಿದ್ದು, ಕ್ರಿ.ಶ.೧೮-೧೯ನೆಯ ಶತಮಾನಕ್ಕೆ ಸೇರಿದೆ. ಕಣಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಇಂದು ಈ ದೇವಾಲಯವು ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹದಲ್ಲಿರುವ ಸುಮಾರು ಐದು ಅಡಿ ಎತ್ತರವುಳ್ಳ ಆಂಜನೇಯ ಮೂರ್ತಿಯು ಪ್ರಾಚೀನ ಕಾಲದ್ದಾಗಿದೆ. ಸ್ಥಾನಿಕ ಭಂಗಿಯಲ್ಲಿರುವ ಆಂಜನೇಯನ ಬಲಗೈ ಅಭಯ ಮುದ್ರೆ, ಎಡಗೈಯನ್ನು ನಡುವಿನ ಮೇಲೆ ಇಟ್ಟುಕೊಂಡಿದ್ದಾನೆ. ಮಂಟಪವು ಹೊರಭಾಗಕ್ಕೆ ತೆರೆದುಕೊಂಡಿದೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯ ಭಾಗವನ್ನು ನವೀಕರಿಸಲಾಗಿದೆ.

**೧೬. ಇಟಗಿ ಆಂಜನೇಯ ದೇವಾಲಯ:** ಗ್ರಾಮದ ಬಸ್‌ನಿಲ್ದಾಣ ಹತ್ತಿರದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ ಶೈಲಿಯಲ್ಲಿದ್ದು, ಕ್ರಿ.ಶ.೧೮೬೦ಕ್ಕೆ ಸೇರಿದ್ದು, ಉತ್ತಮ ಸ್ಥಿತಿಯಲ್ಲಿದೆ. ಕ್ರಿ.ಶ.೧೮೬೦ರಲ್ಲಿ ಶ್ರೀ ದೊಡ್ಡ ನರಸಿಂಗಜ್ಜ ಎಂಬುವರು ನಿರ್ಮಿಸಿದರು. ಈ ದೇವಾಲಯದ ನಿರ್ಮಾಣದಲ್ಲಿ ಸ್ಥಳೀಯ ಬಡಗಿಗಳಾದ ಮಡಿವಾಳಚಾರ್ ಮತ್ತು ಮಾನಾಚಾರ್ ಎಂಬುವರು ಬೇವಿನ ಮರವನ್ನು ಬಳಸಿದ್ದಾರೆ. ಈ ದೇವಾಲಯವು ಗರ್ಭಗೃಹ, ಸಭಾಮಂಟಪ ಮತ್ತು ತೆರೆದ ಮಂಟಪವಿದೆ. ಚೌಕಾಕಾರವಾದಂತಹ ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರವುಳ್ಳ ಆಂಜನೇಯನ ಮೂರ್ತಿಶಿಲ್ಪವಿದೆ. ಸ್ಥಾನಿಕ ಭಂಗಿಯಲ್ಲಿರುವ

ಆಂಜನೇಯನು ಅಲಂಕೃತಗೊಂಡಿದ್ದಾನೆ. ಗರ್ಭಗೃಹದ ಉತ್ತರ ಮತ್ತು ದಕ್ಷಿಣ ಭಿತ್ತಿಯ ಒಳಭಾಗವು ಮುಂಚಾಚಿಕೊಂಡಿದೆ. ಗರ್ಭಗೃಹದ ಒಳಭಿತ್ತಿಯಲ್ಲಿ ಗರುಡನ ಉಬ್ಬುಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವನ್ನು ಹಿತ್ತಾಳೆಯಿಂದ ಅಲಂಕೃತಗೊಳಿಸಲಾಗಿದೆ. ಬಾಗಿಲುವಾಡವು ಪಂಚಶಾಖೆಗಳಿಂದ ಕೂಡಿದೆ. ಶಾಖೆಗಳು, ಲತಾ, ಹೂಬಳ್ಳಿಯಿಂದ ಕೂಡಿವೆ. ಕೆಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ತೆರೆದ ಮಂಟಪದಲ್ಲಿ ಕಟ್ಟಿಗೆಯ ಕಂಬಗಳು ಇವೆ. ಕಂಬಗಳ ಬೋದಿಗೆಗಳ ಮೇಲೆ ಮಹಾಕಾವ್ಯಗಳಿಗೆ ಸಂಬಂಧಿಸಿದ ದೃಶ್ಯಗಳನ್ನು ಸೂಕ್ಷ್ಮವಾಗಿ ಅಲಂಕೃತವಾಗಿ ಕೆತ್ತಲಾಗಿದೆ.

ದೇವಾಲಯದ ಪ್ರವೇಶ ಮಂಟಪದ ಕಂಬಗಳು ಅಷ್ಟಮುಖಾಕೃತಿಯನ್ನು ಹೊಂದಿವೆ. ಇವುಗಳನ್ನು ಒಂಬತ್ತು ಅಂಗುಲ ಎತ್ತರ ಮತ್ತು ಹದಿನೈದು ಅಂಗುಲ ಅಗಲವಿರುವ ಮರದ ಪೀಠಗಳ ಮೇಲೆ ನಿಲ್ಲಿಸಲಾಗಿದೆ.

ಸಭಾಮಂಟಪದ ಕಂಬಗಳು ಕೆಳಭಾಗದಲ್ಲಿ ಕನ್ನಡದ ಸಂಖ್ಯೆಯನ್ನೊಂದಿದ್ದು, ಇವು ಕಂಬದ ಸಂಖ್ಯೆಯಾಗಿವೆ. ಕಂಬಗಳ ನಾಲ್ಕು ಬದಿಗೂ ಲತಾಬಳ್ಳಿಗಳ ಕೆತ್ತನೆಯಿದೆ. ಇದರ ನಡುವೆ ಹಂಸ, ಗಂಡಭೇರುಂಡ ಮುಂತಾದ ಚಿತ್ರಗಳಿಂದ ಅಲಂಕರಿಸಲಾಗಿದೆ. ಅಡ್ಡ ಬೋಧಿಗೆಗಳಲ್ಲಿ ಸಾದಾ ಕಮಾನನ್ನು ಬಿಡಿಸಲಾಗಿದೆ. ನೇರ ಬೋಧಿಗೆಗಳ ಎರಡೂ ಬದಿಗಳಲ್ಲಿ ರಾಮಾಯಣ ಮಹಾಕಾವ್ಯದ ದೃಶ್ಯಗಳು, ಕಾಮಧೇನು ಮತ್ತು ಲತಾಬಳ್ಳಿಗಳ ಸೂಕ್ಷ್ಮ ಕೆತ್ತನೆಯನ್ನು ಕಾಣುತ್ತೇವೆ. ಉದಾ: ಅಶೋಕವನದಲ್ಲಿ ಸೀತಾದೇವಿಗೆ ಆಂಜನೇಯ ಉಂಗುರ ನೀಡುತ್ತಿರುವ ದೃಶ್ಯ, ಶ್ರೀರಾಮನ ಬಂಟ ಆಂಜನೇಯ ಮತ್ತು ಸುಗ್ರೀವನ ಚಿತ್ರಗಳು ಪ್ರಮುಖವಾಗಿವೆ. ಬೋದಿಗೆಯ ತುದಿಯಲ್ಲಿ ತಲೆಕೆಳಗಾದ ಕಮಲದ ಮೊಗ್ಗು, ಮಾವಿನಕಾಯಿ, ಗಿಳಿ ಮತ್ತು ಬಾಳೆಮೊಗ್ಗಿನ ಆಕೃತಿಗಳನ್ನು ಬಿಡಿಸಲಾಗಿದೆ. ದೇವಾಲಯದಲ್ಲಿ ಜಂತಿಯನ್ನು ಅಳವಡಿಸಲಾಗಿದೆ. ಚಾವಣಿಯಲ್ಲಿ ಮರದ ಹಲಗೆಗಳನ್ನು ಹಾಸಿ, ಅದರ ಮೇಲೆ ಗಾರೆಗಚ್ಚನ್ನು ಮಾಡಲಾಗಿದೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನ ಭಾಗವಿದೆ. ಅಧಿಷ್ಠಾನವು ಉಪಾನ, ಜಗತಿ, ಕುಮುದ ಭಾಗಗಳನ್ನು ಹೊಂದಿವೆ. ಭಿತ್ತಿಯಲ್ಲಿ ಹಸು, ಎತ್ತು, ಲಜ್ಜಾಗೌರಿ, ಮೀನು, ಮತ್ಸಸ್ತ್ರೀ, ಆನೆಕಾಳಗ, ಹಂಸ ಇನ್ನು ಮುಂತಾದ ಉಬ್ಬುಶಿಲ್ಪಗಳಿವೆ. ಮಂಟಪದ ಭಿತ್ತಿಯನ್ನು ಹಿಂದೆ ನವೀಕರಿಸಲಾಗಿದೆ. ಪ್ರಸ್ತರವು ಸರಳವಾಗಿದೆ. ಪ್ರಸ್ತರದ ಮೇಲೆ ವೇಸರಶೈಲಿಯ ಶಿಖರ ಭಾಗವಿದ್ದು, ಶಿಖರದಲ್ಲಿ ಗ್ರೀವ, ಶಿಖರ ಮತ್ತು ಸ್ತೂಪಿ ಭಾಗಗಳಿವೆ. ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದೆ. ಸುತ್ತಲೂ ಪ್ರಾಕಾರ ಗೋಡೆ ಇದೆ.

೧೭. **ಹೂವಿನಹಡಗಲಿಯ ಬಾಲಕೃಷ್ಣ ದೇವಾಲಯ:** ನಗರದ ಯೋಗನಾರಾಯಣ ದೇವಾಲಯದ ಪಕ್ಕದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ

ಇದು ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ಅಂತರಾಳ ಭಾಗಗಳಿವೆ. ಚೌಕಾಕಾರದ ಗರ್ಭಗೃಹದಲ್ಲಿ ಪದ್ಮಾಲಂಕೃತ ಪೀಠದ ಮೇಲೆ ಒಂದು ಅಡಿಯಷ್ಟು ಎತ್ತರವುಳ್ಳ ಬಾಲಕೃಷ್ಣನ ಸುಂದರವಾದ ಮೂರ್ತಿಶಿಲ್ಪವಿದೆ. ಬಾಲಕೃಷ್ಣನ ಮೂರ್ತಿಯು ಅಂಬೆಗಾಲಿನ ಭಂಗಿಯಲ್ಲಿದ್ದು, ಒಂದು ಕೈಯಲ್ಲಿ ಬೆಣ್ಣೆಯ ಹುಂಡಿ, ಇನ್ನೊಂದು ಕೈ ಪೀಠ ಮುಟ್ಟಿದೆ. ಇದರಿಂದಾಗಿ ಸ್ಥಳೀಯರು ಈ ಬಾಲಕೃಷ್ಣನನ್ನು ಬೆಣ್ಣೆಕೃಷ್ಣ ಎಂದು ಕರೆಯುವರು. ಬಾಲಕೃಷ್ಣನು ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದ್ದಾನೆ. ಗರ್ಭಗೃಹದಲ್ಲಿ ಗಣೇಶ, ಆಂಜನೇಯ ಮತ್ತು ನಾಗಶಿಲ್ಪಗಳಿವೆ. ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರವಿದೆ. ಗರ್ಭಗೃಹದ ಬಾಗಿಲುವಾಡವು ಲತಾಬಳ್ಳಿ, ಹೂಬಳ್ಳಿ, ವಾದ್ಯ ಹಿಡಿದು ನರ್ತಿಸುತ್ತಿರುವ ಸ್ತ್ರೀ-ಪುರುಷ, ಪದ್ಮದಳ, ಕುದುರೆ, ಲತಾಬಳ್ಳಿಯಿಂದ ಕೂಡಿದ ಒಟ್ಟು ಏಳು ಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮಿ ಹಾಗೂ ಮೇಲ್ಭಾಗ ಮಯೂರ ಶಿಲ್ಪಗಳಿವೆ. ಲಲಾಟದ ಮೇಲ್ಭಾಗದಲ್ಲಿ ಮುಂಚಾಚಿರುವ ಕಪೋತವಿದೆ. ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರು, ವರಾಹ ಇನ್ನಿತರೆ ಉಬ್ಬುಶಿಲ್ಪಗಳಿವೆ.

ಅಂತರಾಳದ ಪ್ರವೇಶದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಮಕರತೋರಣಗಳಿಂದ ಕೂಡಿದ ಅಲಂಕೃತಗೊಂಡಿರುವ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ಉಬ್ಬುಶಿಲ್ಪಗಳಿವೆ. ಇವುಗಳ ಸುತ್ತ ಮಕರತೋರಣವಿದೆ. ಇದರ ಪಾರ್ಶ್ವ ಹಾಗೂ ಮೇಲ್ಭಾಗದಲ್ಲಿ ಜಾಲಂಧ್ರಗಳನ್ನು ಜೋಡಿಸಲಾಗಿದೆ. ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಚಂದ್ರಶಿಲೆಯು ಅಲಂಕೃತವಾಗಿದೆ. ಭಿತ್ತಿಯು ಒರಟಾಗಿದ್ದು ಶಿಖರ ಭಾಗವಿಲ್ಲ.

ಯೋಗನಾರಾಯಣ ಮತ್ತು ಬಾಲಕೃಷ್ಣ ದೇವಾಲಯದ ಮಧ್ಯಭಾಗದಲ್ಲಿ ಕಾಶಿವಿಶ್ವನಾಥನ ದೇವಾಲಯವಿದೆ. ಈ ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ. ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗ ಮತ್ತು ನಂದಿಶಿಲ್ಪಗಳು ಪ್ರಾಚೀನ ಕಾಲದವುಗಳಾಗಿವೆ.

**೧೮. ಕೊಂಬಳಿಯ ಆಂಜನೇಯ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿರುವ ಇದು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಾಣವಾಗಿರುವ ಈ ದೇವಾಲಯವನ್ನು ಇಂದು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದ್ದು, ಉತ್ತಮ ಸ್ಥಿತಿಯಲ್ಲಿದೆ.

ಈ ದೇವಾಲಯವು ಗರ್ಭಗುಡಿ ಮತ್ತು ತೆರೆದ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರವುಳ್ಳ ಆಂಜನೇಯನ ಮೂರ್ತಿಶಿಲ್ಪವಿದೆ. ಆಂಜನೇಯನು ಸ್ಥಾನಿಕ ಭಂಗಿಯಲ್ಲಿದ್ದಾನೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದೆ. ತೆರೆದ ಮಂಟಪದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಎರಡು ವೀರಗಲ್ಲುಗಳಿವೆ.

**೧೯. ಹಿರೇಹಡಗಲಿಯ ಹನುಮಂತ ದೇವಾಲಯ:** ನಗರದ ಹೊರಭಾಗದ ಕೆರೆದಂಡೆಯ ಮೇಲೆ ಇರುವ ಈ ದೇವಾಲಯ ಉತ್ತರಾಭಿಮುಖವಾಗಿದೆ. ಈ ದೇವಾಲಯ ವಿಜಯನಗರೋತ್ತರ

ಶೈಲಿಯಲ್ಲಿದ್ದು, ಅದು ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದೆ. ಚಪ್ಪಡಿಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಮಧ್ಯಮ ಸ್ಥಿತಿಯಲ್ಲಿದೆ.

ಈ ದೇವಾಲಯದಲ್ಲಿ ಗರ್ಭಗುಡಿ ಮಾತ್ರವಿದ್ದು, ಅದರಲ್ಲಿ ಯಾವುದೇ ಮೂರ್ತಿಗಳಿಲ್ಲ. ಇದರ ಬಾಗಿಲುವಾಡವು ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ದೇವಾಲಯದ ಸುತ್ತಮುತ್ತ ಕಲ್ಯಾಣ ಚಾಲುಕ್ಯರ ಕಾಲದ ಕಂಬ, ಬಾಗಿಲುವಾಡ ಇನ್ನಿತರೆ ಅಸ್ಪಷ್ಟ ಅವಶೇಷಗಳು ಇಲ್ಲಿ ಕಾಣಸಿಗುತ್ತವೆ. ಇದರಿಂದ ಈ ದೇವಾಲಯವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳ್ಳುತ್ತಾ ಬಂದಿದೆ ಎಂಬುದು ತಿಳಿದುಬರುತ್ತದೆ. ದೇವಾಲಯದ ಅಧಿಷ್ಠಾನ ಸರಳವಾಗಿದ್ದು, ಭಿತ್ತಿಯನ್ನು ಸಣ್ಣ ಸಣ್ಣ ಕಲ್ಲು, ಚಪ್ಪಡಿಗಳನ್ನು ಬಳಸಿ ಕಟ್ಟಲಾಗಿದೆ.

**೨೦. ಶಿವಪುರ ಹಾಳೂರು ಹನುಮಪ್ಪ ದೇವಾಲಯ:** ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮುಖಮಂಟಪವನ್ನೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಮೂರ್ತಿಯಿದೆ. ಗರ್ಭಗೃಹದ ಭುವನೇಶ್ವರಿ ಅಷ್ಟಭುಜಾಕಾರದಲ್ಲಿದೆ. ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಗಿದೆ.

### ೫.೩.೩. ಶಾಕ್ತ ದೇವಾಲಯಗಳು

ಹೂವಿನಹಡಗಲಿ ತಾಲೂಕಿನ ಅನೇಕ ಕಡೆ ಶೈವ ದೇವಾಲಯಗಳು ಪ್ರಧಾನವಾಗಿ ಕಂಡುಬರುತ್ತವೆ. ಇಲ್ಲಿನ ಶೈವ ದೇವಾಲಯಗಳನ್ನು ಬಿಟ್ಟರೆ ನಂತರದ ಸ್ಥಾನವನ್ನು ಇಲ್ಲಿನ ವೈಷ್ಣವ ದೇವಾಲಯಗಳು ಪಡೆದುಕೊಂಡಿವೆ. ಆದರೆ ಶೈವ, ವೈಷ್ಣವ ದೇವಾಲಯಗಳನ್ನು ಹೊರತುಪಡಿಸಿದರೆ ಶಾಕ್ತ ದೇವಾಲಯಗಳು ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಅವುಗಳಲ್ಲಿ ಮಹತ್ವದ ಕೆಲ ದೇವಾಲಯಗಳ ವೈಶಿಷ್ಟ್ಯತೆ ಈ ಕೆಳಕಂಡಂತಿದೆ.

**೧. ಮಾಗಳದ ಲಕ್ಷ್ಮೀ ದೇವಾಲಯ:** ಗ್ರಾಮದ ಹಿರೇಹಡಗಲಿ-ಮಾಗಳ ರಸ್ತೆ ಮಧ್ಯ ಭಾಗದಲ್ಲಿರುವ ಇದು ದಕ್ಷಿಣಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಕನಿಷ್ಠ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶ ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಗರ್ಭಗೃಹದಲ್ಲಿ ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿ ತನ್ನ ಕೈಗಳಲ್ಲಿ ಪದ್ಮಗಳನ್ನು ಹಿಡಿದಿರುವಳು. ಚತುಷ್ಕೋನ ಭುವನೇಶ್ವರಿಯಿದೆ. ಮುಂಭಾಗದಲ್ಲಿ ಒಂದು ವೈಷ್ಣವ ಇನ್ನೊಂದು ತ್ರುಟಿತ ಶಾಸನಗಳಿವೆ.

ದೇವಾಲಯಕ್ಕೆ ಅಧಿಷ್ಠಾನ ಭಾಗವಿದ್ದು, ಇದು ಉಪಾನ, ಜಗತಿ, ಕುಮುದ, ಪದ್ಮ ಭಾಗಗಳನ್ನು ಹೊಂದಿದೆ. ಸರಳವಾದ ಭಿತ್ತಿಯ ಭಾಗವಿದ್ದು ಪ್ರಸ್ತರದಲ್ಲಿ ಕಪೋತ ಮತ್ತು ಪದ್ಮ ಭಾಗಗಳಿವೆ.

**೨. ಸೋಗಿಯ ಎಲ್ಲಮ್ಮ ಗುಡಿ:** ಗ್ರಾಮದ ಉತ್ತರ ಭಾಗದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಈ ದೇವಾಲಯ ಆಧುನಿಕ ಶೈಲಿಯಲ್ಲಿದ್ದು, ಕ್ರಿ.ಶ.೧೯ನೆಯ ಶತಮಾನಕ್ಕೆ ಸೇರಿದೆ. ಇದು

ಮಧ್ಯಮ ಸ್ಥಿತಿಯಲ್ಲಿದೆ. ಈ ದೇವಾಲಯದ ತಲವಿನ್ಯಾಸವು ಗರ್ಭಗೃಹ, ಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಆಧುನಿಕವಾದ ಎಲ್ಲಮ್ಮನ ಮೂರ್ತಿಯಿದೆ. ಬಾಗಿಲುವಾಡವು ಸರಳವಾಗಿದೆ. ಮಂಟಪದಲ್ಲಿ ಒಟ್ಟು ಆರು ಚಪ್ಪಟೆಯಾಕಾರವುಳ್ಳ ಸ್ವತಂತ್ರ ಕಂಬಗಳಿವೆ. ಮುಖಮಂಟಪದಲ್ಲಿ ಎರಡು ಸರಳವಾದ ಕಂಬಗಳಿವೆ. ಈ ದೇವಾಲಯವನ್ನು ನವೀಕರಿಸಲಾಗಿದೆ.

**೩. ಕತ್ತೆಬೆನ್ನೂರಿನ ಉಡುಚಲಮ್ಮ ದೇವಾಲಯ:** ೬x೨೦ ವಿಸ್ತೀರ್ಣದ ಈ ದೇವಾಲಯವು ೨೦೦ ವರ್ಷಗಳಿಂದ ಇದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗುಡಿ, ಮುಖಮಂಟಪಗಳಿಂದ ಕೂಡಿದೆ. ಗರ್ಭಗುಡಿಯಲ್ಲಿ ಉಡಚಲಮ್ಮನ ವಿಗ್ರಹವಿದೆ. ಪ್ರವೇಶದ್ವಾರ ಅಲಂಕಾರಿಕವಾಗಿದ್ದು, ಜಾಲಂಧ್ರಗಳಿಂದ, ಅರ್ಧಗಂಬಗಳಿಂದ ಕೂಡಿದ್ದು, ಲಲಾಟದಲ್ಲಿ ಹೂವಿನ ಚಿತ್ರ, ಕೆಳಗಡೆ ಇಕ್ಕೆಲಗಳಲ್ಲಿ ಕಳಸಗಳಿಂದ ಕೂಡಿದೆ. ಮುಖಮಂಟಪದಲ್ಲಿ ನಾಲ್ಕು ಕಂಬಗಳಿವೆ. ಪ್ರಾಕಾರವಿದೆ. ಮುಂದೆ ಪಾದಗಟ್ಟೆ ಇದೆ. ಬಾರಿಕೇರ ಜನಾಂಗದವರು ಪೂಜೆ ಮಾಡುವರು. ಐದು ವರ್ಷಕ್ಕೊಮ್ಮೆ ಜಾತ್ರೆ ನಡೆಯುವುದು.

**೪. ಮೈಲಾರದ ಗಂಗಿಮಾಳಮ್ಮ ದೇವಾಲಯ:** ಮೈಲಾರಲಿಂಗೇಶ್ವರ ದೇವಾಲಯದ ಎಡಭಾಗದಲ್ಲಿದೆ. ವಿಜಯನಗರ ಕಾಲದ್ದಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ಸಭಾ ಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಗಂಗಿಮಾಳಮ್ಮನ ಮೂರ್ತಿ ಹಾಗೂ ಶಿವಲಿಂಗವಿದೆ. ಗರ್ಭಗೃಹ, ಅಂತರಾಳಗಳ ಬಾಗಿಲುವಾಡವು ಸರಳವಾಗಿವೆ. ಸಭಾಮಂಟಪದಲ್ಲಿ ಚಾಲುಕ್ಯ ಶೈಲಿಯ ಚೌಕಾಕಾರದ ನಾಲ್ಕು ಕಂಬಗಳಿವೆ. ಕಂಬಗಳ ಕೆಳಗಡೆ ಗರುಡ, ನಾಗ, ನರ್ತಕಿಯರ ಉಬ್ಬುಶಿಲ್ಪಗಳಿವೆ. ಸಭಾಮಂಟಪಕ್ಕೆ ಉತ್ತರದಲ್ಲಿ ಪ್ರವೇಶದ್ವಾರವಿದೆ. ಪೂರ್ವದ ಪ್ರವೇಶದ್ವಾರವು ಪಂಚಶಾಖೆಗಳಿಂದ ಲತಾಬಳ್ಳಿ, ಕಂಬ, ಪದ್ಮ, ಬಳೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಮೇಲ್ಭಾಗ ಶಿವನ ಉಬ್ಬುಶಿಲ್ಪವಿದೆ. ಕೆಳಗಡೆ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಿದ್ದಾರೆ.

ಅಧಿಷ್ಠಾನವು ಉಪಾನ, ಜಗತಿ, ಗಳ, ಪೀಠ, ಕುಮುದ, ಪದ್ಮ ರಚನೆಯನ್ನೊಂದಿದೆ. ಭಿತ್ತಿಯು ಸರಳವಾಗಿದೆ. ಪ್ರಸ್ತರದಲ್ಲಿ ಹಲ್ಲಿನ ಮಾದರಿ, ಕಪೋತ ರಚನೆಗಳಿವೆ. ಆಧುನಿಕ ಶಿಖರ ಭಾಗವಿದೆ.

**೫. ಮೈಲಾರದ ತುಪ್ಪದ ಮಾಳಮ್ಮ ದೇವಾಲಯ:** ೪.೦೦x೪.೦೦ ಉದ್ದಳತೆಯ ಚಿಕ್ಕ ದೇವಾಲಯ. ದಕ್ಷಿಣಾಭಿಮುಖವಾಗಿದೆ. ಏಕಕೋಣೆಯ ಗರ್ಭಗೃಹವನ್ನು ಹೊಂದಿದೆ. ಕಟ್ಟಡ ಇತ್ತೀಚಿನದು. ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಪುರಾತನ ಮಾಳಮ್ಮನ ಶಿಲ್ಪವಿದೆ. ಮೇಲ್ಭಾಗ ಕೀರ್ತಿಮುಖ, ಶಿರಭಾಗ ಕಿರೀಟ, ಕೊರಳಲ್ಲಿ ಹಾರ, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಪಾನಪಾತ್ರೆಗಳಿವೆ.

**೬. ಮೈಲಾರದ ಏಕನಾಥೇಶ್ವರಿ ದೇವಾಲಯ:** ೪.೫೦x೪.೦೦ ಉದ್ದಳತೆಯ ಚಿಕ್ಕ ದೇವಾಲಯ. ದಕ್ಷಿಣಾಭಿಮುಖವಾಗಿದೆ. ಏಕನಾಥೇಶ್ವರಿಯನ್ನು ಮೈಲಾರಲಿಂಗಪ್ಪನ ತಂಗಿ ಎಂದು ಕರೆಯುವರು. ಏಕಕೋಣೆಯ ಗರ್ಭಗೃಹವನ್ನು ಹೊಂದಿದೆ. ಕಟ್ಟಡ ಇತ್ತೀಚಿನದು. ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಶಿರಸ್ಸು ಮಾತ್ರವಿದೆ. ಕಣ್ಣು, ಮೂಗು, ಬಾಯಿಗಳು ಎದ್ದು ಕಾಣುವವು. ಕರಂಡಮಕುಟ, ಕಿವಿಯೋಲೆ, ಇಕ್ಕೆಲಗಳಲ್ಲಿ ನಾಗಶಿಲ್ಪಗಳನ್ನಿಡಲಾಗಿದೆ. ಹಿಂಭಾಗ ಪ್ರಭಾವಳಿ ಇದೆ.

**೭. ಹ್ಯಾರಡದ ಕಾಳಮ್ಮನ ದೇವಾಲಯ:** ದೇವಾಲಯವು ಇತ್ತೀಚಿನ ನಿರ್ಮಿತಿಯಾಗಿದೆ. ಏಕಕೋಣೆಯ ದೇವಾಲಯವಾಗಿದೆ. ಗರ್ಭಗೃಹದಲ್ಲಿ ಕಾಳಮ್ಮನ ಕಾಷ್ಠ ವಿಗ್ರಹವಿದೆ. ಗರ್ಭಗೃಹದ ಹಿಂಬದಿಯ ಒಳಭಿತ್ತಿಯಲ್ಲಿ ದೇವಿಯ ಪ್ರತಿರೂಪದಂತೆ ಕಾಣುವ ಉಬ್ಬುಶಿಲ್ಪವಿದೆ.

**೮. ಹೊಳಲು ಕಾಳಿಕಾದೇವಿ ದೇವಾಲಯ:** ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ದೇವಿಯ ಅಲಂಕಾರಿಕ ಮೂರ್ತಿಯಿದೆ.

### ೫.೩.೪. ಜೈನ ಬಸದಿಗಳು

ಹೂವಿನಹಡಗಲಿ ತಾಲೂಕಿನ ಕೆಲವು ಕಡೆ ಮಾತ್ರ ಜೈನಬಸದಿಗಳು ಕಂಡುಬಂದಿವೆ. ಕೆಲವು ಕಡೆ ತನ್ನ ಮೂಲರೂಪ ಕಳೆದುಕೊಂಡು ಇಂದು ದೇವಾಲಯಗಳಾಗಿ ಮಾರ್ಪಾಡಾಗಿರುವ ಕೆಲ ದೇವಾಲಯಗಳು ಇಲ್ಲಿದ್ದು ಅವುಗಳ ವೈಶಿಷ್ಟ್ಯತೆ ಕುರಿತು ವಿಶ್ಲೇಷಿಸಲಾಗಿದೆ.

**೧. ಹೊಳಗುಂದಿಯ ಸೋಮೇಶ್ವರ ದೇವಾಲಯ:** ಗ್ರಾಮದಲ್ಲಿರುವ ಇದು ಪೂರ್ವಾಭಿಮುಖ ವಾಗಿದೆ. ಇದು ಕ್ರಿ.ಶ.೧೧ನೇಕ್ಕೆ ಸೇರಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕಣಶಿಲೆಯಲ್ಲಿ ನಿರ್ಮಾಣವಾಗಿದೆ. ಮಧ್ಯಮ ಸ್ಥಿತಿಯಲ್ಲಿರುವ ಈ ದೇವಾಲಯ ಎತ್ತರವಾದ ಜಗತಿಯ ಮೇಲೆ ನಿರ್ಮಾಣವಾಗಿದೆ.

ಇದು ಮೂಲತಃ ಜೈನಬಸದಿಯಾಗಿತ್ತು. ನಂತರದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಶೈವ ದೇವಾಲಯವನ್ನಾಗಿ ಪರಿವರ್ತಿಸಲಾಗಿರುವುದನ್ನು ಇಲ್ಲಿನ ವಾಸ್ತು ಕುರುಹುಗಳು ಸೂಚಿಸುತ್ತವೆ. ಅಲ್ಲದೆ ಇಲ್ಲಿರುವ ಶಾಸನವೊಂದು ಇದು ಮೂಲತಃ ಜೈನ ದೇವಾಲಯವಾಗಿತ್ತೆಂಬುದನ್ನು ಉಲ್ಲೇಖಿಸಿದೆ.

ಇಲ್ಲಿನ ಶಾಸನ ನಾಚಿದೇವನ ಹೆಸರನ್ನು ಉಲ್ಲೇಖಿಸುತ್ತದೆ. ಹೊಳಗುಂದಿಯನ್ನು ಆಳಿದ ಮಲ್ಲಿನಾಥನು ಮಲ್ಲಿನಾಥ ದೇವರಿಗೆ ಬಸದಿ ಕಟ್ಟಿಸಿ, ಮೂಲಸಂಘ ಸೂರಸ್ತಗಣದ ಚಿತ್ರಕೊಟ್ಟೆಗಚ್ಚಕ್ಕೆ ಸೇರಿದ ನಾಗಚಂದ್ರ ಭಟ್ಟಾರಕನ ಎದುರಿನಲ್ಲಿ ದೇವರ ಸೇವಾಕಾರ್ಯಗಳಿಗಾಗಿ ಭೂದಾನ ಮಾಡಿದನು.

ದೇವಾಲಯವು ಎತ್ತರದ ಜಗತಿಯ ಮೇಲೆ ನಿರ್ಮಾಣವಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ.

ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ತೀರ್ಥಂಕರನ ಉಬ್ಬುಶಿಲ್ಪವಿದೆ. ತೆರೆದ ಅಂತರಾಳದಲ್ಲಿ ನಂದಿ ವಿಗ್ರಹವಿದೆ. ಸಭಾಮಂಟಪದಲ್ಲಿ ೪ ಚೌಕಾಕಾರದ ಕಂಬಗಳು ಮೇಲೆ ಕೆಳಗೆ ಚೌಕಪಟ್ಟಿಕೆಗಳನ್ನು, ಫಲಕ, ಬೋದಿಗೆಗಳನ್ನು ಹೊಂದಿವೆ. ಸಭಾಮಂಟಪದ ಮಧ್ಯ ಅಲಂಕೃತ ಭುವನೇಶ್ವರಿ ಇದೆ. ಹನ್ನೆರಡು ಅರ್ಧಗಂಬಗಳಿವೆ. ಸಭಾಮಂಟಪದಲ್ಲಿ ಎತ್ತರವಾದ ಶಿಲಾಶಾಸನವಿದೆ. ಅದರ ಮೇಲ್ಭಾಗ ಜಿನ ಶಿಲ್ಪವಿದೆ. ಸಭಾಮಂಟಪದ ಬಾಗಿಲುವಾಡವು ಅರ್ಧಗಂಬ, ಹೂವಿನ ಎಸಳು, ಪದ್ಮಗಳಿಂದ ಅಲಂಕೃತಗೊಂಡಿದ್ದು, ಲಲಾಟಬಿಂಬದಲ್ಲಿ ತೀರ್ಥಂಕರನ ಉಬ್ಬುಶಿಲ್ಪದಿಂದ ಕೂಡಿದೆ. ಸಭಾಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಮುಖಮಂಟಪದ ಸುತ್ತಲೂ ಕಕ್ಷಾಸನವಿದೆ. ಮುಖಮಂಟಪವು ಎರಡು ಪೂರ್ಣಕಂಬ ಎರಡು ಅರ್ಧಗಂಬಗಳಿಂದ ಕೂಡಿದೆ.

**೨. ಹಿರೇಹಡಗಲಿಯ ಗಣೇಶ ದೇವಾಲಯ:** ಗ್ರಾಮದ ವೀರಭದ್ರೇಶ್ವರ ದೇವಾಲಯದ ಪಕ್ಕದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫-೧೬ನೆಯ ಶತಮಾನಕ್ಕೆ ಸೇರಿದೆ. ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ತೆರೆದ ಮಂಟಪಗಳನ್ನು ಹೊಂದಿದೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಗಣೇಶ ಮೂರ್ತಿಶಿಲ್ಪವಿದೆ. ಗರ್ಭಗೃಹದ ಒಳಭಿತ್ತಿಯು ಮುಂಚಾಚಿಕೊಂಡಿದೆ. ಗರ್ಭಗೃಹದ ಬಾಗಿಲುವಾಡ ದ್ವಿಶಾಖೆಯಿಂದ ಕೂಡಿದ್ದು, ಅತ್ಯಂತ ಸರಳವಾಗಿದೆ. ಲಲಾಟಬಿಂಬದಲ್ಲಿ ಜೈನ ತೀರ್ಥಂಕರನ ಉಬ್ಬುಶಿಲ್ಪವಿದೆ. ತೆರೆದ ಮಂಟಪದ ಮಧ್ಯದಲ್ಲಿ ಎರಡು ಸ್ವತಂತ್ರಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಪದ್ಮಪೀಠ, ಪಾದ, ಹದಿನಾರು-ಎಂಟು-ಹದಿನಾರುಕೋನ, ದಂಡ, ಕಲಶ, ಪಾಟಿಕಾ, ಘಟ, ಬೋದಿಗೆ ರಚನೆಗಳನ್ನು ಹೊಂದಿವೆ. ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿಯನ್ನು ನವೀಕರಿಸಲಾಗಿದೆ. ದೇವಾಲಯಕ್ಕೆ ಆಧುನಿಕವಾಗಿ ನಿರ್ಮಿಸಲಾದ ಶಿಖರ ಭಾಗವಿದೆ.

**೩. ಮಾನ್ಯರ ಮಸಲವಾಡದ ಪಾರ್ಶ್ವನಾಥ ಬಸದಿ:** ಇದರ ಉಲ್ಲೇಖ ಶಾಸನದಲ್ಲಿದೆ. ಇಂದು ಇದು ಸಂಪೂರ್ಣವಾಗಿ ನಾಶವಾಗಿದೆ.

ಕ್ರಿ.ಶ.೧೨೯೭ರ ಮಸಲವಾಡದ ಶಾಸನದಲ್ಲಿ ಮೊಸಳೆವಾಡದ ಪಾರ್ಶ್ವನಾಥ ಬಸದಿಯನ್ನು ಕೇಶವಪಂಡಿತನ ತಾಯಿ ಕನ್ನಾಯಿ ಮಾಡಿಸಿದಳು ಎಂಬ ಉಲ್ಲೇಖವಿದೆ. ಯಾದವ ದೊರೆ ರಾಮಚಂದ್ರದೇವನ ಆಳ್ವಿಕೆಯಲ್ಲಿ ಮೂಲಸಂಘದ ನೇಮಿಚಂದ್ರ ರಾವುಳನ ಶಿಷ್ಯ ವಿನಯಚಂದ್ರ ದೇವನಿಗೆ ಭೂದಾನ ಮಾಡಿದ್ದರ ಉಲ್ಲೇಖವಿದೆ. ಸಾವಂತಪಂಡಿತನ ಮಗ ಕೇಶವಪಂಡಿತನು ಮೊಸಳೆವಾಡದ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದಾಗ ವೈಷ್ಣವ ಭಕ್ತ ಮಹಾಮಂಡಳೇಶ್ವರ ಭೈರವ ದೇವರಸನು ಕೆಲವು ಗೌಡರೊಡಗೂಡಿ ದಾನವನ್ನು ಮಾಡಿದನು.

೪. **ಕತ್ತೆಬೆನ್ನೂರಿನ ಬಸದಿ:** ಇದರ ಉಲ್ಲೇಖ ಹಡಗಲಿಯ ಶಾಸನ ಸಂಖ್ಯೆ-೪೯ರಲ್ಲಿದೆ. ಇಂದು ಇದು ಸಂಪೂರ್ಣವಾಗಿ ನಾಶವಾಗಿದೆ. ಪಾಳುಬಿದ್ದ ಜೈನ ಬಸದಿಯ 'ಧಾರಾವಟ್ಟ'ವನ್ನು ಹನುಮಂತ ದೇವರ ದೇವಾಲಯವನ್ನು ಕಟ್ಟಲಿಕ್ಕೆ ಬಳಸಿಕೊಂಡಿರುವುದು ಶಾಸನದಲ್ಲಿ ಕಂಡುಬರುತ್ತದೆ. ಅಂದರೆ ಕತ್ತೆಬೆನ್ನೂರಿನಲ್ಲಿ ಜೈನ ಧರ್ಮದ ಅಸ್ತಿತ್ವವಿತ್ತೆಂದು ತಿಳಿಯವುದು. ಹಡಗಲಿ ಪರಿಸರದ ಕೋಗಳಿ, ಬಾಗಳಿ ಮತ್ತು ಮೋರಿಗೆರೆ ಸ್ಥಳಗಳು ಜೈನರ ಪುಣ್ಯಕ್ಷೇತ್ರಗಳಾಗಿದ್ದವು.

**೫.೩.೫. ಇತರೆ ಪಂಥದ ದೇವಾಲಯಗಳು**

ಹೂವಿನಹಡಗಲಿ ತಾಲೂಕಿನ ಅನೇಕ ಕಡೆ ಶೈವ ದೇವಾಲಯಗಳು ಪ್ರಧಾನವಾಗಿ ಕಂಡುಬರುತ್ತವೆ. ಇಲ್ಲಿನ ಶೈವ ದೇವಾಲಯಗಳನ್ನು ಬಿಟ್ಟರೆ ನಂತರದ ಸ್ಥಾನವನ್ನು ಇಲ್ಲಿನ ವೈಷ್ಣವ ಮತ್ತು ಶಾಕ್ತ ದೇವಾಲಯಗಳು ಪಡೆದುಕೊಂಡಿವೆ. ಆದರೆ ಶೈವ, ವೈಷ್ಣವ, ಶಾಕ್ತ ದೇವಾಲಯಗಳನ್ನು ಹೊರತುಪಡಿಸಿದರೆ ಸಮ್ಮಿಶ್ರ ಪಂಥ ಇಲ್ಲವೇ ಯಾವುದೇ ಪಂಥಕ್ಕೆ ಸೇರಿಸಲಾಗದ ಕೆಲ ದೇವಾಲಯಗಳು ಇಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಮಹತ್ವದ ಕೆಲ ದೇವಾಲಯಗಳು ವೈಶಿಷ್ಟ್ಯತೆಯಿಂದ ಕೂಡಿವೆ.

೧. **ಮೈಲಾರದ ಹೆಗ್ಗಪ್ಪ ದೇವಾಲಯ:** ಗ್ರಾಮದ ಮಧ್ಯಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು, ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದೆ. ಕಪ್ಪುಶಿಲೆಯಲ್ಲಿ ನಿರ್ಮಾಣವಾಗಿರುವ ಇದು ಉತ್ತಮ ಸ್ಥಿತಿಯಲ್ಲಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಶಿವಲಿಂಗವಿದ್ದು ಅದನ್ನು ಹೆಗ್ಗಪ್ಪನೆಂದು ಪೂಜಿಸಲಾಗುತ್ತಿದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಗಳಿಂದ ಕೂಡಿದ್ದು, ಅದು ಲತಾಬಳ್ಳಿ, ವಜ್ರಾಲಂಕಾರ, ಸರಳ ಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮಿ ಇದ್ದಾಳೆ. ದ್ವಾರಶಾಖೆಯ ಕೆಳಭಾಗದಲ್ಲಿ ಶೈವ ದ್ವಾರಪಾಲಕರಿದ್ದಾರೆ.

ಅಂತರಾಳದ ಬಾಗಿಲುವಾಡವು ಸರಳವಾಗಿದ್ದು, ಅಂತರಾಳದ ಮುಂದೆ ವಿಶಾಲವಾದ ನವರಂಗವಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಈ ಕಂಬಗಳು ಪೀಠ, ಪಾದ ಹದಿನಾರು-ಎಂಟು-ಹದಿನಾರು ಕೋನ, ಕಲಶ, ತಾಟಿಕಾ, ಘಟ, ಫಲಕ, ಬೋದಿಗೆಗಳನ್ನು ಹೊಂದಿವೆ. ನವರಂಗ, ಅಂತರಾಳ ಮತ್ತು ಗರ್ಭಗೃಹದಲ್ಲಿ ವೃತ್ತಾಕಾರವುಳ್ಳ ಭುವನೇಶ್ವರಗಳಿವೆ. ನವರಂಗದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ.

ಮುಖಮಂಟಪದಲ್ಲಿ ಎರಡು ಸ್ವತಂತ್ರ ಕಂಬಗಳಿವೆ. ಈ ಕಂಬಗಳಲ್ಲಿ, ಪದ್ಮ, ಸ್ತ್ರೀಯರ, ಉಬ್ಬುಶಿಲ್ಪಗಳಿದ್ದು, ಪಾದ, ಪೀಠ, ಹದಿನಾರು-ಎಂಟು-ಹದಿನಾರು ಕೋನ, ತಾಟಿಕ, ಘಟ, ಫಲಕ ಮತ್ತು ಬೋದಿಗೆಗಳನ್ನು ಹೊಂದಿದೆ. ಮುಖಮಂಟಪ ಮುಂಚಾಚಿಕೊಂಡಿದ್ದು, ಬಿದ್ದ ಮಳೆಯ ನೀರು ಜಾರಿ ಮುಂದೆ ಹೋಗುತ್ತವೆ.

ದೇವಾಲಯಕ್ಕೆ ಸರಳವಾದ ಅಧಿಷ್ಠಾನವಿದ್ದು ಅಧಿಷ್ಠಾನದಲ್ಲಿ ಉಪಾನ, ಜಗತಿ, ಪದ್ಮಗಳಿವೆ. ಭಿತ್ತಿಯನ್ನು ಆಧುನೀಕರಿಸಲಾಗಿದೆ. ಪ್ರಸ್ತರದಲ್ಲಿ ಕಪೋತ ಭಾಗವಿದೆ. ಪ್ರಸ್ತರದ ಮೇಲೆ ಅಂದರೆ ಗರ್ಭಗೃಹದ ಮೇಲೆ ಕದಂಬ ನಾಗರಶೈಲಿಯ ಶಿಖರವಿದೆ. ಶಿಖರದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿವೆ.

**೨. ಹಿರೇಹಡಗಲಿಯ ಬೀರಪ್ಪ ದೇವಾಲಯ:** ನಗರದ ದಕ್ಷಿಣ ಭಾಗದಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಪಾಳೆಯಗಾರ ಶೈಲಿಯಲ್ಲಿದ್ದು, ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದೆ. ಕನಿಷ್ಠ ಸ್ಥಿತಿಯಲ್ಲಿದೆ. ಈ ದೇವಾಲಯವು ಇಂದು ಬಹುತೇಕವಾಗಿ ನಾಶಗೊಂಡಿದ್ದು ಸುತ್ತಲೂ ಗೋಡೆ ಭಾಗವೂ ಕೂಡ ಇಲ್ಲದಾಗಿದೆ. ಮಂಟಪದ ಆಕಾರದಲ್ಲಿರುವ ಈ ದೇವಾಲಯದಲ್ಲಿ ಚಪ್ಪಟೆಯಾಕಾರವುಳ್ಳ ಕಂಬಗಳಿವೆ. ಮೇಲ್ಚಾವಣಿಯಲ್ಲಿ ಕಲ್ಲುಹಾಸುಗಳನ್ನು ಹಾಕಲಾಗಿದೆ. ದೇವಾಲಯದ ಮಧ್ಯದಲ್ಲಿ ವಿಜಯನಗರ ಕಾಲದ ನಾಗಶಿಲ್ಪವಿದೆ.

**೩. ಮಾಗಳದ ಕನಕಪ್ಪ ದೇವಾಲಯ:** ಗ್ರಾಮದ ಹೊರಭಾಗದಲ್ಲಿರುವ ಇದು ದಕ್ಷಿಣಾಭಿಮುಖ ವಾಗಿದೆ. ಈ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಕ್ರಿ.ಶ.೧೫-೧೬ನೆಯ ಶತಮಾನಕ್ಕೆ ಸೇರಿದೆ. ಮಧ್ಯಮ ಸ್ಥಿತಿಯಲ್ಲಿದೆ.

ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ಮಂಟಪ ಭಾಗಗಳಿವೆ. ಚೌಕಾಕಾರ ಗರ್ಭಗೃಹದ ಮಧ್ಯದಲ್ಲಿ ಗರುಡಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಗಣೇಶನ ಅಸ್ಪಷ್ಟವಾದ ಮೂರ್ತಿಶಿಲ್ಪವಿದೆ. ಇದರ ಪಕ್ಕದಲ್ಲಿ ಉಮಾಮಹೇಶ್ವರಿಯ ಮೂರ್ತಿಶಿಲ್ಪವಿದೆ. ಗರ್ಭಗೃಹದ ಮೇಲ್ಚಾವಣಿಯಲ್ಲಿ ಪದ್ಮಾಕಾರವುಳ್ಳ ಭುವನೇಶ್ವರವಿದ್ದು, ಮಧ್ಯದ ಭಾಗ ಇಳಿಬಿಟ್ಟಿದೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದ್ದಾಳೆ. ಮಂಟಪ ಭಾಗವು ಹೊರಭಾಗಕ್ಕೆ ತೆರೆದುಕೊಂಡಿದೆ. ದೇವಾಲಯಕ್ಕೆ ಅಧಿಷ್ಠಾನ ಭಾಗವಿರುವುದು ಕಾಣಿಸುವುದಿಲ್ಲ. ಭಿತ್ತಿಯನ್ನು ಸರಳವಾದ ಕಲ್ಲುತುಂಡುಗಳನ್ನು ಬಳಸಿ ನಿರ್ಮಿಸಲಾಗಿದೆ. ಸರಳವಾದ ಪ್ರಸ್ತರ ಭಾಗವಿದೆ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳಿರುವುದನ್ನು ಕಾಣುತ್ತೇವೆ. ಇಲ್ಲಿ ಧಾರ್ಮಿಕ ಶ್ರದ್ಧೆಯು ಒಂದು ಪ್ರಮುಖ ಅಂಶವಾಗಿ ಕಂಡುಬರುವುದರಿಂದ ಇಲ್ಲಿನ ಪ್ರತಿಯೊಂದು ಹಳ್ಳಿಗಳಲ್ಲಿಯೂ, ನಗರ ಪಟ್ಟಣಗಳಲ್ಲಿಯೂ ದೇವಾಲಯಗಳಿವೆ. ಇವುಗಳು ಹೆಚ್ಚಾಗಿ ನದಿ ದಡದಲ್ಲಿ, ಬೆಟ್ಟದ ಮೇಲೆ, ಊರಿನ ಮಧ್ಯದಲ್ಲಿ, ಊರಿನ ಹೊರಗೆ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಹೀಗೆ ಪ್ರತಿಯೊಂದು ಸ್ಥಳಗಳಲ್ಲಿ ಕಂಡುಬರುತ್ತವೆ. ಈ ದೇವಾಲಯಗಳು ಶೈವ, ವೈಷ್ಣವ, ಶಾಕ್ತ ಮತ್ತು ಜೈನ ಹೀಗೆ ಹಲವಾರು ಪಂಥಗಳಿಗೆ ಸೇರಿವೆ. ಗ್ರಾಮೀಣ ಭಾಗದಲ್ಲಿ ಒಂದು ಪಂಗಡದ ಅಥವಾ ಒಂದು ಸಮುದಾಯದ ಗ್ರಾಮದೇವತೆಗಳು ಕಂಡುಬರುತ್ತವೆ. ಕೆಲವು ಸಂದರ್ಭಗಳಲ್ಲಿ ದೇವಾಲಯವನ್ನು ಕಟ್ಟಿಸಿ ಪೋಷಿಸಿದವರ ಇಷ್ಟದೇವತೆಗಳು ಇರುವುದನ್ನು

ಕಾಣುತ್ತೇವೆ. ಈ ದೇವಾಲಯಗಳು ಹಲವಾರು ಜನರ ಪೋಷಣೆಯಲ್ಲಿಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ. ಅಂದರೆ ಈ ದೇವಾಲಯಗಳ ಪೋಷಣೆಯು ಒಂದು ವರ್ಗದವರಿಗೆ ಮಾತ್ರ ಸೀಮಿತವಾಗಿರದೆ ಸಮಾಜದ ಎಲ್ಲಾ ಜನರಿಗೂ ಸೇರಿರುತ್ತದೆ. ಆದರೆ ದೇವರ ಪೂಜೆ, ಪುನಸ್ಕಾರಗಳನ್ನು ಮಾಡುವವರು ಮಾತ್ರ ಒಂದು ಕೋಮಿನವರಾಗಿರುತ್ತಾರೆ. ಈ ದೇವಾಲಯಗಳು ಕೇವಲ ಪ್ರಾರ್ಥನಾ ಕೇಂದ್ರ, ವಿದ್ಯಾಕೇಂದ್ರಗಳಾಗಿರದೆ, ಮನೋರಂಜನಾ ಕೇಂದ್ರ, ಸಾಂಸ್ಕೃತಿಕ ಅಂದರೆ ಸಂಗೀತ, ನೃತ್ಯ, ಕಲೆ ಮತ್ತು ವಾಸ್ತುಶಿಲ್ಪ, ನ್ಯಾಯಕೇಂದ್ರಗಳಾಗಿದ್ದವು. ಇತಿಹಾಸದ ಪುಟಗಳನ್ನು ನಾವು ನೋಡಿದರೆ ದೇವಾಲಯಗಳು ಹಲವಾರು ರಾಜಮಹಾರಾಜರ, ಸಾಮಂತರ, ದಂಡನಾಯಕರ, ಅಧಿಕಾರಿಗಳ ಆಶ್ರಯದಲ್ಲಿಯೇ ಅಭಿವೃದ್ಧಿಯನ್ನು ಹೊಂದುತ್ತಾ ಬಂದಿರುವುದನ್ನು ಕಾಣುತ್ತೇವೆ. ರಾಜರು ಹಲವಾರು ದಾನ-ದತ್ತಿಗಳನ್ನು ಕೊಡುವುದರ ಮೂಲಕ ದೇವಾಲಯಗಳನ್ನು ಪೋಷಿಸುತ್ತಿದ್ದರು.

ಒಟ್ಟಿನಲ್ಲಿ ಹಿಂದಿನಿಂದಲೂ ರಾಜರ, ಅಧಿಕಾರಿಗಳ ಆಶ್ರಯದೊಂದಿಗೆ ಊರಿನ ಜನರ ಪೋಷಣೆಯಲ್ಲಿ ದೇವಾಲಯಗಳು ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಐತಿಹಾಸಿಕವಾಗಿ ನೂರಾರು ದೇವಾಲಯಗಳು ಕರ್ನಾಟಕದಲ್ಲಿ ಇವೆ. ಹಾಗೆಯೇ ಬಳ್ಳಾರಿ ಜಿಲ್ಲೆಯು ಅನೇಕ ಐತಿಹಾಸಿಕ ದೇವಾಲಯಗಳ ತಾಣವಾಗಿದೆ. ಈ ದೇವಾಲಯಗಳು ರಾಜಮಹಾರಾಜರುಗಳ ಕಾಲದಲ್ಲಿ ಕಟ್ಟಿಸಿದವು ಗಳಾಗಿವೆ. ಒಂದೊಂದು ರಾಜವಂಶಸ್ಥರು ತಮ್ಮ ಇಷ್ಟದೈವಂದಿರ ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಜನರ ಹಿತಾಸಕ್ತಿಗನುಗುಣವಾಗಿ ದೇವಾಲಯಗಳನ್ನು ಕಟ್ಟಿಸಿಕೊಟ್ಟಿರುವ ಉದಾಹರಣೆಗಳು ಇತಿಹಾಸದಲ್ಲಿ ದೊರೆಯುತ್ತದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿಯ ಹಡಗಲಿ ತಾಲೂಕು ಸಹ ಅನೇಕ ಐತಿಹಾಸಿಕ ಪ್ರಾಚೀನ ದೇವಾಲಯಗಳ ತಾಣವಾಗಿದೆ. ಇಲ್ಲಿ ಹಲವಾರು ರಾಜಮನೆತನಗಳು ಆಳ್ವಿಕೆಯನ್ನು ನಡೆಸಿದ್ದು, ಅವರವರ ಕಾಲಾವಧಿಯಲ್ಲಿ ಹಲವಾರು ದೇವಾಲಯಗಳನ್ನು ಕಟ್ಟಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ಇತಿಹಾಸ ಪ್ರಸಿದ್ಧ ದೇವಾಲಯಗಳು ಕಂಡುಬರುತ್ತವೆ. ಜೊತೆಗೆ ಇತ್ತೀಚಿನ ಸಂದರ್ಭದಲ್ಲಿ ನಿರ್ಮಾಣಗೊಂಡ ದೇವಾಲಯಗಳೂ ಸಹ ಹಲವಾರು ಇವೆ. ಈ ದೇವಾಲಯಗಳು ಬೇರೆ ಬೇರೆ ಕಾಲಮಾನಗಳಲ್ಲಿ ನಿರ್ಮಾಣಗೊಂಡಿವೆ.

ಇವುಗಳಲ್ಲಿ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು ಮತ್ತು ಜೈನ ಮತ್ತು ಶಾಕ್ತ ದೇವಾಲಯಗಳು, ಇತರೆ ಪಂಥದ ದೇವಾಲಯಗಳು ಇರುವುದನ್ನು ಕಾಣುತ್ತೇವೆ. ಈ ದೇವಾಲಯ ಗಳಲ್ಲಿ ಹೆಚ್ಚಿನವು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿಯೇ ಕಟ್ಟಲ್ಪಟ್ಟಿವೆ. ಕಲ್ಯಾಣದ ಚಾಲುಕ್ಯರು ಕ್ರಿ.ಶ.೭೩೩ರಿಂದ ಕ್ರಿ.ಶ.೧೧೫೦ರವರೆಗೆ ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರು ತಮಗಿಂತ ಹಿಂದೆ ಬಳಸುತ್ತಿದ್ದ ಉಸುಕು ಕಲ್ಲಿನ ಬದಲಾಗಿ ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯನ್ನು ಉಪಯೋಗಿಸಿದರು. ಇವರು ಬಾದಾಮಿ ಚಾಲುಕ್ಯರ ವಾಸ್ತುಮಾದರಿಯನ್ನೇ ಮುಂದುವರೆಸಿದರಾದರೂ ಅದರಲ್ಲಿ ಅನೇಕ

ಬದಲಾವಣೆಗಳನ್ನು ತಂದರು. ಇವರು ನಿರ್ಮಿಸಿರುವ ದೇವಾಲಯಗಳಲ್ಲಿ ಏಕಕೂಟ ಶೈಲಿಯ ದೇವಾಲಯಗಳೇ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇವುಗಳ ಜೊತೆಗೆ ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ದೇವಾಲಯಗಳು ಅಸ್ತಿತ್ವಕ್ಕೆ ಬಂದವು. ಕ್ರಿ.ಶ. ೧೧ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿಯೇ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ನಂತರ ೧೪ನೇ ಶತಮಾನದಿಂದ ೧೬ನೇ ಶತಮಾನದ ಅವಧಿಯಲ್ಲಿ ವಿಜಯನಗರ ಶೈಲಿಯಲ್ಲಿ ದೇವಾಲಯಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ವಿಜಯನಗರ ಶೈಲಿಯಲ್ಲಿನ ದೇವಾಲಯಗಳ ತಲವಿನ್ಯಾಸ ಹೆಚ್ಚು ವಿಸ್ತಾರವಾಗಿರುತ್ತದೆ. ವಿಶಾಲವಾದ ಪ್ರಾಕಾರದಲ್ಲಿ ಗರ್ಭಗೃಹ, ಅಂತರಾಳ, ಅರ್ಧಮಂಟಪ, ಮೂರು ಪ್ರವೇಶಗಳನ್ನು ಹೊಂದಿರುವ ಸಭಾಮಂಟಪ, ತೆರೆದ ಮಹಾಮಂಟಪವಿರುತ್ತದೆ. ಸುತ್ತಲೂ ನಿರ್ದಿಷ್ಟಪಡಿಸಿದ ಪರಿವಾರ ದೇವತೆಗಳಿಗಾಗಿ ಚಿಕ್ಕ ಚಿಕ್ಕ ರಥೋತ್ಸವ ಮಂಟಪ, ಕನ್ನಡಿ ಮಂಟಪ ಇತ್ಯಾದಿಗಳು ಇದ್ದು ಪ್ರಾಕಾರಕ್ಕೆ ಎರಡು ಅಥವಾ ಮೂರು ಗೋಪುರಗಳನ್ನು ಹೊಂದಿದ ಪ್ರವೇಶ ದ್ವಾರಗಳಿರುತ್ತವೆ. ಈ ರೀತಿಯ ವಾಸ್ತುಶೈಲಿಯನ್ನು ಹೊಂದಿರುವ ದೇವಾಲಯಗಳು ಹಡಗಲಿ ತಾಲೂಕಿನಲ್ಲಿ ಕಂಡುಬರುತ್ತವೆ. ಇದರ ಜೊತೆಗೆ ವಿಜಯನಗರೋತ್ತರ ಕಾಲದಲ್ಲಿಯೂ ಅಂದರೆ ಕ್ರಿ.ಶ. ೧೬-೧೮ನೇ ಶತಮಾನದಲ್ಲಿ ದೇವಾಲಯಗಳು ನಿರ್ಮಾಣಗೊಂಡಿದ್ದು, ಅವುಗಳನ್ನು ಸಹ ವ್ಯವಸ್ಥಿತವಾಗಿ ದಾಖಲಿಸಲಾಗಿದೆ. ಅಲ್ಲದೆ ಇದೇ ತಾಲೂಕಿನಲ್ಲಿ ಆಧುನಿಕ ಕಾಲದಲ್ಲಿ ನಿರ್ಮಾಣವಾದ ಕೆಲವು ದೇವಾಲಯಗಳಿದ್ದು, ಅವುಗಳನ್ನು ಸಹ ಅಧ್ಯಯನ ಮಾಡಿ ಪ್ರಾಸಂಗಿಕವಾಗಿ ಇಲ್ಲಿ ದಾಖಲಿಸಲಾಗಿದೆ. ಒಟ್ಟಾರೆಯಾಗಿ ಹಡಗಲಿ ತಾಲೂಕಿನಲ್ಲಿ ಇಂದು ಕಂಡುಬರುವ ಐತಿಹಾಸಿಕ ದೇವಾಲಯಗಳು ಅಂದಿನ ನಮ್ಮ ನಾಡಿನ ಜನರ ಅಭಿರುಚಿಯನ್ನು ಮತ್ತು ಸಾಂಸ್ಕೃತಿಕ ಇತಿಹಾಸದ ಕೈಗನ್ನಡಿಗಳಾಗಿವೆ ಎಂಬುದನ್ನು ನಾವು ಮರೆಯುವಂತಿಲ್ಲ.

### ೫.೪. ಪ್ರಮುಖ ಮೂರ್ತಿಶಿಲ್ಪ ಮತ್ತು ಅವುಗಳ ಮಹತ್ವ

ಯಾವುದೇ ಸಮುದಾಯದ ಧಾರ್ಮಿಕ ಇತಿಹಾಸ ಅರಿಯಲು ಆಯಾ ಧರ್ಮದ ಮೂರ್ತಿಗಳು ನಮಗೆ ಏಕಮೇವ ಆಕರಗಳಾಗಿವೆ. ಹಡಗಲಿ ತಾಲೂಕಿನ ವಿವಿಧೆಡೆ ಧಾರ್ಮಿಕ ಇತಿಹಾಸದ ಆಕರ ಗಳಾದ ವಿಭಿನ್ನ ಧರ್ಮಕ್ಕೆ ಸೇರಿದ ಹಲವಾರು ಮೂರ್ತಿಗಳಿವೆ. ಇವು ಕೆಲವು ಕಡೆ ದೇವಾಲಯಗಳಲ್ಲಿ ಸುರಕ್ಷಿತವಾಗಿದ್ದರೆ ಇನ್ನು ಕೆಲವು ಕಡೆ ಸೂಕ್ತ ರಕ್ಷಣೆ ಇಲ್ಲದೆ ಅನಾಥವಾಗಿ ಬಿದ್ದಿವೆ. ಇವುಗಳ ದಾಖಲೀಕರಣ ಅವಶ್ಯಕವೆನಿಸಿರುವ ಹಿನ್ನೆಲೆಯಲ್ಲಿ ಇಲ್ಲಿನ ಮೂರ್ತಿಗಳ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

**ಮೂರ್ತಿಶಿಲ್ಪದ ಉಗಮ, ವಿಕಾಸ, ಹಿನ್ನೆಲೆ:** ಮೂರ್ತಿಶಿಲ್ಪ ವಾಸ್ತುಶಿಲ್ಪಕ್ಕೆ ಪೂರಕವಾಗಿ ಅದರ ಜೊತೆ ಜೊತೆಯಾಗಿಯೇ ಬೆಳೆದುಬಂದಿತು. ಇವು ಒಂದಕ್ಕೊಂದು ಅವಿನಾಭಾವ ಸಂಬಂಧದಿಂದ ಬೆಳೆದುಬಂದಿದೆ. ಧಾರ್ಮಿಕ ಶ್ರದ್ಧೆಯೇ ಶಿಲ್ಪಕ್ಕೆ ಮೂಲಭೂತ ಪ್ರಚೋದನೆಯಾಯಿತು.

ಮೂರ್ತಿಶಿಲ್ಪವು ವಾಸ್ತುಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಹೊಂದಿದೆ. ಸಿಂಧೂ ನಾಗರಿಕತೆಯಲ್ಲಿ ಲಿಂಗ, ವೃಷಭ, ಪಾಣಿಪಟ್ಟ ಮತ್ತು ಇತರ ವಿಗ್ರಹಗಳು ದೊರೆತಿವೆ. ಇಲ್ಲಿ ದೊರೆತಿರುವ ಸ್ತ್ರೀ ವಿಗ್ರಹಗಳೇ ಅತ್ಯಂತ ಪ್ರಾಚೀನ ಮೂರ್ತಿಗಳು. ಇಲ್ಲಿ ದೊರೆತ ಪ್ರಾಣಿಗಳ ಶಿಲ್ಪ, ನರ್ತನ ಶಿಲ್ಪ, ಅಲ್ಲಿನ ಮುದ್ರೆಗಳ ಮೇಲೆ ದೊರೆತಿರುವ ವಿಗ್ರಹಗಳಲ್ಲಿ ಮುಖ್ಯವಾಗಿ ಪಶುಪತಿ ಶಿವನೆಂದು ಗುರುತಿಸಲ್ಪಟ್ಟ ಧ್ಯಾನಸ್ಥ ಮೂರ್ತಿಗಳು ಪ್ರಮುಖ ಮೂರ್ತಿಶಿಲ್ಪಗಳಾಗಿವೆ. ವೇದಗಳ ಯುಗದಲ್ಲಿ ವಿಗ್ರಹಗಳಿಗೆ ಪ್ರಾಮುಖ್ಯತೆ ಇರಲಿಲ್ಲವೆಂದು ಪ್ರಕೃತಿ ಶಕ್ತಿಗಳನ್ನು ಪೂಜಿಸುತ್ತಿದ್ದರೆಂದು ಹೇಳಲಾಗುತ್ತದೆ. ಆದರೂ ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಕಂಡುಬರುತ್ತದೆ. ರಾಮಾಯಣ, ಮಹಾಭಾರತಗಳಲ್ಲಿಯೂ ದೇವಾಲಯಗಳ ಉಲ್ಲೇಖ ಬರುವುದರಿಂದ ಆ ಕಾಲದಲ್ಲಿಯೇ ವಿಗ್ರಹರಾಧನೆ ತಕ್ಕಮಟ್ಟಿಗೆ ಪ್ರಚಲಿತವಾಗಿರಬೇಕು.

ವೈದಿಕ ಸಂಸ್ಕೃತಿಯಲ್ಲಿ ಸಾರ್ವಜನಿಕವಾಗಿ ಶಿಲ್ಪಗಳ ಆರಾಧನೆ ಪ್ರಚಲಿತದಲ್ಲಿರಲಿಲ್ಲ. ಅಂದು ಜನರು ತಮ್ಮ ಮನೆಗಳಲ್ಲಿಯೇ ದೇವತಾ ಪ್ರತಿಮೆಗಳನ್ನು ಇಟ್ಟುಕೊಂಡು ವೈಯಕ್ತಿಕ ನೆಮ್ಮದಿಯನ್ನು ಬಯಸಿ ಪೂಜೆ ಮಾಡುತ್ತಿದ್ದರು. ತದನಂತರದಲ್ಲಿ ಆರ್ಯರ ಅನಾರ್ಯರ(ದ್ರಾವಿಡರ) ದೈವಗಳನ್ನು ಪರಿಗ್ರಹಿಸಿ ಅವಕ್ಕೆಲ್ಲ ಒಂದೊಂದು ಸ್ವರೂಪ ವಹಿಸಿಕೊಟ್ಟರು.[೧೫] ವೈದಿಕ ಪ್ರಭಾವವನ್ನೇ ಅಳವಡಿಸಿಕೊಂಡು ಶಿಲ್ಪಶಾಸ್ತ್ರಗಳು ಈ ದೇವತೆಗಳನ್ನು ಚತುರ್ದೇವತೆಗಳ ಪರಿವಾರ ದೇವತೆಗಳೆಂದು ಒಪ್ಪಿ ಅವುಗಳನ್ನು ಸಿದ್ಧಪಡಿಸುವ ವಿಧಿ-ವಿಧಾನಗಳನ್ನು ರೂಪಿಸಿದವು. ಭಾರತದ ಚಾರಿತ್ರಿಕ ಯುಗದಲ್ಲಿ ಪ್ರಪ್ರಥಮವಾಗಿ ದೊರೆತಿರುವ ಶಿಲ್ಪವು ಮೌರ್ಯರ(ಕ್ರಿ.ಪೂ.೩೨೪) ಕಾಲದ್ದಾಗಿದೆ.[೧೬]

ವೇದೋತ್ತರ ಕಾಲದ ಗೃಹ್ಯಸೂತ್ರಗಳಲ್ಲಿ ಮೂರ್ತಿಪೂಜೆಯ ಮೊದಲ ಉಲ್ಲೇಖ ಸಿಗುತ್ತದೆ. ನಂತರದ ಸಾಹಿತ್ಯವಾದ ಶತರುದ್ರೀಯದಲ್ಲಿ ಬ್ರಾಹ್ಮಣ ಸಂಸ್ಕೃತಿಯ ಕೆಲ ಮುಖ್ಯ ದೇವತೆಗಳಾದ ವಿಷ್ಣು, ಶಿವ, ಬ್ರಹ್ಮ, ಕುಮಾರ, ವಕ್ರತುಂಡ, ದುರ್ಗ, ಆದಿತ್ಯ ಮುಂತಾದ ದೇವತೆಗಳ ಉಲ್ಲೇಖ ಬರುತ್ತದೆ ಹಾಗೂ ದೇವತಾ ತನಯಗಳಿಗೆ ಗ್ರಾಂಥಿಕ ಆಧಾರಗಳು ಆ ಕಾಲದಲ್ಲೇ ಸಿಗುತ್ತವೆ.[೧೭]

ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು ನಾವು ಸ್ಥೂಲವಾಗಿ 'ಮೂರ್ತಿಶಾಸ್ತ್ರ' ಎಂದು ಕರೆಯಬಹುದು.

'ಮೂರ್ತಿ' ಎಂಬ ಶಬ್ದಗಳನ್ನೊಳಗೊಂಡು ಅದಕ್ಕೆ ಪರ್ಯಾಯವಾಗಿ ಬಳಸಿದ ಶಬ್ದಗಳಲ್ಲಿ ಅದೊಂದು ಭೌತಿಕವಸ್ತು ಎಂಬಂತೆಯೇ ಗ್ರಹಿಸಲಾಗುತ್ತದೆ. ಏಕೆಂದರೆ 'ದೇವತಾಮೂರ್ತಿ' ಎಂಬ ಶಬ್ದದಲ್ಲಿ ಮೂರ್ತಿಯೇ ದೇವತೆಯಲ್ಲ, ಮೂರ್ತಿ ದೇವತೆಯದು. ಈ ಕುರಿತು ಇರುವ 'ಪ್ರತಿಮಾ', 'ಬಿಂಬ', 'ಪ್ರಕೃತಿ', 'ವಿಗ್ರಹ' ಮುಂತಾದ ಶಬ್ದಗಳು ಇದನ್ನು ಇನ್ನೂ ಸ್ಪಷ್ಟವಾಗಿ ಸೂಚಿಸುತ್ತವೆ. ಇಲ್ಲೆಲ್ಲ ಒಂದು ನಿರಾಕಾರ ಕಲ್ಪನೆಯನ್ನು ಯಥಾವತ್ತಾಗಿ ಅನುಕರಿಸಿದ 'ಸಾಕಾರ ವಸು' ಎಂಬ ಪರಿಕಲ್ಪನೆ ಇದೆ.[೧೮] 'ಅರ್ಚ್ಯ' ಎಂಬ ಶಬ್ದ 'ಪೂಜಿಸಲ್ಪಡುವಂಥದ್ದು' ಎಂದಾದರೆ 'ತನು' 'ವಪು' ಮುಂತಾದ ಶಬ್ದಗಳು ಮೂರ್ತಿಯನ್ನು ದೇವರನ್ನಾಗಿ ಗ್ರಹಿಸುವಲ್ಲಿ ಹಾಗೂ

ದೇವರನ್ನು ಅದರ ಆತ್ಮವನ್ನಾಗಿ ಪ್ರತ್ಯೇಕಿಸುತ್ತವೆ.[೧೯] ಮೂರ್ತಿ ಎಂಬ ಪದಕ್ಕೆ ಸಮಾನಾರ್ಥವಾಗಿ 'ಪ್ರತಿಮೆ' ಎಂಬ ಪದ ಪ್ರಯೋಗದಲ್ಲಿದೆ. ಮೂರ್ತಿಶಾಸ್ತ್ರವನ್ನು 'ಪ್ರತಿಮಾಶಾಸ್ತ್ರ' ಎಂದು ಕರೆಯಲಾಗುತ್ತಿದೆ. ಪ್ರತಿಮಾ ಲಕ್ಷಣವೆಂದರೆ, ಒಂದು ದೇವತೆಯ ಲಕ್ಷಣವನ್ನು ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೇಗೆ ಹಿಡಿಯಬೇಕೆಂಬುದನ್ನು ವಿಧಿಸುವ ಶಾಸ್ತ್ರ. ಶಾಸ್ತ್ರೀಯ ನಿರೂಪಣೆ ಪ್ರಕಾರ ಮೂರ್ತಿಯು ಒಂದು ರೂಪ ಒಂಬತ್ತು ಅಂಗಗಳನ್ನು ಒಳಗೊಂಡಿರುತ್ತದೆ. ಅವೆಂದರೆ ನ್ಯಾಸ(ರೂಪ ಸಂಯೋಜನೆ), ಅಲಂಕಾರ(ಆಭರಣ, ವಸ್ತ್ರ, ಕೇಶ ಮುಂತಾದವು), ಮುದ್ರಾ(ಹಸ್ತಮುದ್ರಗಳು), ಆಯುಧ(ದೇವತೆಯ ಕೈಯಲ್ಲಿರುವ ಆಯುಧಗಳು), ಭಾಪ್ರಕಕ್ಷ (ಆಸನ), ವಾಹನ, ಉಪದೇವ(ಪ್ರಧಾನ ದೇವತೆಯಂತೆ ತೋರಿಸಲ್ಪಡುವ ಇತರ ಕಡಿಮೆ ಮಹತ್ವದ ದೇವತೆಗಳು, ಪುರುಷ ದೇವತೆಗಳ ಸಂದರ್ಭದಲ್ಲಿ ಅವರ 'ಸ್ತ್ರೀ' ದೇವತೆಗಳು), ಅರಿ(ದೇವತೆಯ ವೈರಿ) ಹಾಗೂ ಸ್ತುವಕ[೨೦](ಭಕ್ತರು ಹಾಗೂ ಇತರ ಸೇವಕರು) ಈ ಶಾಸ್ತ್ರೀಯ ಸಂಪ್ರದಾಯಕ್ಕೆ ಅನುಗುಣವಾಗಿಯೇ ದೇವತಾಮೂರ್ತಿಗಳು ರೂಪುಗೊಳ್ಳುತ್ತವೆ. ಮೂರ್ತಿಶಿಲ್ಪಕ್ಕೆ ಪ್ರಾಗೈತಿಹಾಸಿಕ ಕಾಲದಿಂದಲೂ ಆಧಾರಗಳು ದೊರಕುತ್ತವೆ. ಭಾರತದ ವಿವಿಧ ನೆಲೆಗಳ ಉತ್ಖನನದಿಂದ ಹಲವಾರು ಮಾಹಿತಿಗಳು ದೊರಕಿವೆ. ಅವುಗಳಲ್ಲಿ ಬಿಹಾರ ರಾಜ್ಯದ ಚಿರಾಂಡ, ರಾಜಸ್ಥಾನದ ಅಹಾರ್, ಮಧ್ಯಪ್ರದೇಶದ ಕಾಯಥ, ನವದಾತೋಲಿ ಹಾಗೂ ಪ್ರಕಾಶ ಮತ್ತು ಮಹಾರಾಷ್ಟ್ರದ ನೆವಾಸ, ಇನಾಂಗಾಂವ್ ಉತ್ತರ ಪ್ರದೇಶದ ಲಾಲ್-ಖಿಲಾದಲ್ಲಿ ಪ್ರಾಣಿ ಹಾಗೂ ಮಾತೃದೇವತೆಯ ಮೃಣ್ಮೂರ್ತಿಗಳು ದೊರೆತಿವೆ. ಹಾಗೂ ಗಂಗಾ ಬಯಲಿನ ಪಟ್ಟಣಗಳಾದ ಮಥುರಾ, ಅಹಿಚ್ಛತ್ರ ಮೊದಲಾದ ಪಟ್ಟಣಗಳಲ್ಲಿ ಕ್ರಿ.ಪೂ. ಐದನೇ ಶತಮಾನದಿಂದಲೇ ಮೃಣ್ಮೂರ್ತಿಗಳನ್ನು ಪತ್ತೆ ಹಚ್ಚಲಾಗಿದೆ. ಇವುಗಳು ನಂತರದ ಭಾರತೀಯ ಮೂರ್ತಿಲಕ್ಷಣಗಳಿಗೆ ಪ್ರೇರಕವಾಗಿವೆ. ಕರ್ನಾಟಕದ ಕಪ್ಪಗಲ್, ಪಿಕ್ಲಿಹಾಳ, ಸಂಗನಕಲ್ಲು, ತೆಕ್ಕಲಕೋಟೆ ಮುಂತಾದ ಕಡೆ ನಡೆದ ಉತ್ಖನನಗಳಿಂದ ನೂತನ ಶಿಲಾಯುಗಕ್ಕೆ ಸೇರಿದ ಸುಡಾವೆ ಮಣ್ಣಿನ ಗೊಂಬೆಗಳು ದೊರೆತಿವೆ. ಅವುಗಳಲ್ಲಿ ಎತ್ತು, ಕುರಿ, ಪಕ್ಷಿ, ಮನುಷ್ಯ ಆಕೃತಿಗಳು ಪ್ರಮುಖವಾಗಿ ದೊರಕಿವೆ. ದಾವಣಗೆರೆ ಜಿಲ್ಲೆಗೆ ಹೊಂದಿ ಕೊಂಡಂತಿರುವ ಕೂಡ್ಲಿಗಿ ತಾಲ್ಲೂಕಿನ ಕುಮತಿ, ಹುಲಿಕುಂಟೆ ನೆಲೆಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಏಕಶಿಲಾ ಮಾನವಾಕೃತಿಗಳು ದೊರೆತಿವೆ. ಇದೇ ರೀತಿಯ ಗೊಂಬೆಗಳು ಹಿರೇಬೆಣಕಲ್, ಐಹೊಳೆಯಲ್ಲೂ ಕಂಡುಬಂದಿದೆ. ಇವು ಅಂದಿನ ಧಾರ್ಮಿಕ ನಂಬಿಕೆ, ಭಾವನೆ ಮತ್ತು ಪರಂಪರೆಯನ್ನು ಸೂಚಿಸುವ ಆಕರಗಳಾಗಿರುವುದಷ್ಟೇ ಅಲ್ಲದೇ, ಕರ್ನಾಟಕ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ.[೨೧]

ಭಾರತದ ಚಾರಿತ್ರಿಕ ಯುಗದಲ್ಲಿ ಪ್ರಪ್ರಥಮವಾಗಿ ದೊರೆತಿರುವ ಶಿಲ್ಪವು ಮೌರ್ಯರ (ಕ್ರಿ.ಪೂ. ೩೨೪) ಕಾಲದ್ದಾಗಿದ್ದು, ಅವರ ಕಾಲದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು, ಅಶೋಕನು ಶಿಲಾಮಾಧ್ಯಮಕ್ಕೆ ಆದ್ಯತೆ ನೀಡಿದ. ಶಿಲಾಮೂರ್ತಿಗಳಲ್ಲಿ ಮೌರ್ಯರ ಸ್ತಂಭಗಳ ಮೇಲ್ಭಾಗದ ವೃಷಭ, ಆನೆ, ಸಿಂಹ, ಕುದುರೆಯ ಆಕೃತಿಗಳು ಮುಖ್ಯವಾಗಿವೆ. ಧೌಲಿಯ

ಬಂಡೆಯ ಮೇಲಿರುವ ಆನೆಯ ಉಬ್ಬುಶಿಲ್ಪ. ಪಾಟ್ನಾದ ವಸ್ತುಸಂಗ್ರಹಾಲಯದಲ್ಲಿರುವ ಶಿಲ್ಪಗಳು, ಬೆಸನಗರದ ಯಕ್ಷಿ, ಸಾರನಾಥದಲ್ಲಿ ದೊರೆತ ಶಿಲ್ಪಗಳು ಪ್ರಮುಖವಾದವುಗಳಾಗಿವೆ. ಬೌದ್ಧ, ಜೈನ ಧರ್ಮಗಳ ಪ್ರಾರಂಭಿಕ ರೂಪಕ್ಕೂ, ಮಧ್ಯಕಾಲೀನ ಯುಗದಲ್ಲಿನ ಅವುಗಳ ಆಚರಣೆಯ ರೂಪಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಅವು ಸ್ಪಷ್ಟವಾಗಿ ಅನಾತ್ಮ, ಅನಿತ್ಯ ವಾದಗಳಿಂದ ಪಾರಮಾರ್ಥಿಕಕ್ಕೆ ಹೊರಳಿಕೊಳ್ಳುತ್ತವೆ. ಜೊತೆಗೆ ತಮ್ಮದೇ ದೇವತಾ ಪ್ರಪಂಚವನ್ನು ನಿರ್ಮಾಣ ಮಾಡಿ, ಸಾಮಾನ್ಯ ಉಪಾಸಕರ, ಸಾಮಾನ್ಯ ಜ್ಞಾನದಲ್ಲಿ ಮೂರ್ತಿಪೂಜಾ ಪರಂಪರೆಗಳಾಗಿ ಪರಿವರ್ತನೆ ಹೊಂದುತ್ತವೆ. ಕ್ರಿ.ಪೂ. ಎರಡು ಹಾಗೂ ಒಂದನೆಯ ಶತಮಾನಕ್ಕೆ ಸೇರಿದ ಸಾಂಚಿಸ್ತೂಪ ಹಾಗೂ ಭಾರಹೂತ್ ಸ್ತೂಪಗಳಲ್ಲಿ ಭಾರತೀಯ ಪೂಜಾ ಪರಂಪರೆಯ ಆಧಾರಗಳು ದೊರೆಯುತ್ತವೆ.

ಬುದ್ಧನನ್ನು ಮೂರ್ತಿರೂಪದಲ್ಲಿ ತೋರಿಸದಿದ್ದರೂ, ಬುದ್ಧನ ಪ್ರತೀಕವಾದ ಬೋಧಿವೃಕ್ಷ, ಸಿಂಹಾಸನ, ಸ್ತೂಪ, ಚಕ್ರ ರೂಪದಲ್ಲಿ ಪೂಜಿಸುವ ದೃಶ್ಯಗಳಿರುತ್ತವೆ. ಈ ಪೂಜೆಯಲ್ಲಿ ನಮಸ್ಕಾರ, ಪ್ರದಕ್ಷಿಣೆ, ಧೂಪ, ದೀಪ, ಪುಷ್ಪ, ನೈವೇದ್ಯ ಮುಂತಾದ ಪೂಜೆಯ ಅಂಗಗಳು ಚಿತ್ರಿತವಾಗಿರುತ್ತವೆ. ಈ ಪೂಜೆಯನ್ನು ಮೂರ್ತಿಪೂಜೆಯ ಇತಿಹಾಸದಲ್ಲಿ ಒಂದು ಪ್ರಾರಂಭಿಕ ಅವಸ್ಥೆ ಎಂದು ಹೇಳಬಹುದಾಗಿದೆ. ಬುದ್ಧನ ಮೂರ್ತಿಯ ಕಲ್ಪನೆ ಕ್ರಿ.ಶ.ದ ಆರಂಭದಿಂದ ಕ್ರಮೇಣ ಗಟ್ಟಿಗೊಳ್ಳುತ್ತಾ ಹೋಗಿ, ಸುಮಾರು ಕ್ರಿಸ್ತಶಕ ಎರಡನೆಯ ಶತಮಾನದಲ್ಲಿ ಈ ಮೂರ್ತಿಯು ಅಂತಿಮ ರೂಪ ಪಡೆಯಿತು. ಬುದ್ಧನ ಮೂರ್ತಿಯ ಉಗಮದ ಬಗೆಗೆ ಈ ಶತಮಾನದ ಆದಿಯಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಗಾಂಧಾರ ಶಿಲ್ಪಗಳಲ್ಲಿ ಅವು ಗ್ರೀಕ್ ದೇವತೆಗಳ ಶೈಲಿಯಲ್ಲಿ ಕಾಣಿಸಿಕೊಳ್ಳುವುದರಿಂದ ಬುದ್ಧ ಮೂರ್ತಿಗಳು ಗ್ರೀಕ್ ಸಂಸ್ಕೃತಿಯ ಪ್ರಭಾವದಿಂದ ಉಗಮಿಸಿದವು ಎಂಬ ವಾದ ಇತ್ತು. ಪ್ರಾಚೀನ ಭಾರತೀಯ ಗ್ರಾಮ ಸಂಸ್ಕೃತಿಯ ಯಕ್ಷ-ಯಕ್ಷಿಯರ ಮೂರ್ತಿ ಶೈಲಿಯೇ ಬುದ್ಧನ ಮೂರ್ತಿಯನ್ನು ರೂಪಿಸಿತು ಎಂದು ಆನಂದ ಕುಮಾರಸ್ವಾಮಿಯವರು ಹೇಳಿದ್ದಾರೆ.[೨೨]

ಜಿನಮೂರ್ತಿಯ ಉಲ್ಲೇಖ ಸ್ಪಷ್ಟವಾಗಿ ಖಾರವೇಲನ ಹಾಂಥಿಗುಂಪಾ ಶಾಸನದಲ್ಲಿ ದೊರಕುತ್ತದೆ. ಇದು ಕ್ರಿ.ಪೂ. ಮೊದಲನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದಾಗಿದೆ. ಜೈನ ಧರ್ಮದಲ್ಲಿ ತೀರ್ಥಂಕರರನ್ನು ಮೂರ್ತಿರೂಪದಲ್ಲಿ ಪೂಜಿಸುವ ಸಂಪ್ರದಾಯ ಕ್ರಿ.ಶ. ಆರಂಭದಲ್ಲೇ ಇದ್ದುದಕ್ಕೆ ಪ್ರಾಕ್ತನ ಶಾಸ್ತ್ರೀಯ ಆಧಾರಗಳು ದೊರೆಯುತ್ತವೆ. ಮಥುರಾದಲ್ಲಿ ಬೌದ್ಧಮೂರ್ತಿಗಳಂತೆ ಪ್ರಾಚೀನ ಜಿನಮೂರ್ತಿಗಳು ದೊರೆಯುತ್ತವೆ. ಮಧ್ಯಕಾಲದಲ್ಲಿ ಪ್ರತಿ ತೀರ್ಥಂಕರರನ್ನು ಪ್ರತ್ಯೇಕಿಸುವ ನಾಗ, ವೃಕ್ಷ, ಲಾಂಛನ, ಯಕ್ಷ-ಯಕ್ಷಿ ಮುಂತಾದ ಗುರುತುಗಳು ಬೆಳೆಯುತ್ತವೆ. ಜೈನ ಮೂರ್ತಿಶಾಸ್ತ್ರದಲ್ಲಿ ಪ್ರತಿ ತೀರ್ಥಂಕರನ ಮೂರ್ತಿಗೂ ಒಬ್ಬ ಯಕ್ಷ ಹಾಗೂ ಒಬ್ಬ ಯಕ್ಷಿಣಿಯರು ದ್ವಾರಪಾಲಕರಂತೆ, ಸೇವಕರಂತೆ, ಇಲ್ಲವೇ ಉಪಾಸಕರಂತೆ ಕಲ್ಪಿಸಲಾಗಿದೆ. ಜೈನಮೂರ್ತಿಗಳಲ್ಲಿ ದಿಕ್ಪಾಲಕರು, ನವಗ್ರಹಗಳು ಹಾಗೂ ಇನ್ನೂ ಅನೇಕ ಶಕ್ತಿಗಳು ಮತ್ತು ದೇವತೆಗಳು ಬ್ರಾಹ್ಮಣ ಮೂರ್ತಿಗಳ ಜತೆ ಸಾಮ್ಯತೆಯನ್ನು ಹೊಂದಿವೆ.

ಶಾಸನ ಮತ್ತು ಸಾಹಿತ್ಯ ಆಧಾರದಿಂದ ಮರದ ಶಿಲ್ಪ ನಿರ್ಮಾಣವು ಕ್ರಿ.ಪೂ.೩ನೇ ಶತಮಾನದಷ್ಟು ಹಿಂದೆ ಹೋಗುತ್ತದೆ. ಮರದ ಮೂರ್ತಿಗಳ ತಯಾರಿಕೆಯ ಬಗ್ಗೆ ಪ್ರಾಚೀನ ಮತ್ತು ಮಧ್ಯಕಾಲೀನ ಗ್ರಂಥಗಳಲ್ಲಿ ಸಾಕಷ್ಟು ಮಾಹಿತಿ ಇದೆ. ಭಾರತದಲ್ಲಿ ಲೋಹದ ಚಿಕ್ಕ ಮೂರ್ತಿಗಳು ಬಹಳ ದೊರೆತಿವೆ. ಕೆಲವು ಪ್ರಾಚೀನ ಗ್ರಂಥಗಳಲ್ಲಿ 'ಮಧುರಚೇಷ್ಟ' ವಿಧಾನದ ಬಗ್ಗೆ ಮಾಹಿತಿ ಇದೆ.

ದಕ್ಷಿಣ ಭಾರತದಲ್ಲಿ ಶಾತವಾಹನರ ಕಲೆ ಅನೇಕ ಕಡೆ ವಿಜೃಂಭಿಸಿತು. ಗುಡಿಮಲ್ಲಂ ಶಿವಲಿಂಗ ಶಾತವಾಹನರ ಶೈಲಿಯ ಅತ್ಯುತ್ತಮ ಕೊಡುಗೆಯಾಗಿದೆ. ನಾಗಾರ್ಜುನಕೊಂಡ ಶಿಲ್ಪಗಳು ಅಮರಾವತಿಯ ಶೈಲಿಯಲ್ಲಿವೆ. ಬಾದಾಮಿ ಚಾಲುಕ್ಯರ ಶಿಲ್ಪಗಳು ಕರ್ನಾಟಕದ ಐಹೊಳೆ, ಬಾದಾಮಿ, ಮಹಾಕೂಟ, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ. ಐಹೊಳೆಯ ಮೇಗುತಿ ದೇವಾಲಯ, ಹುಚ್ಚಮಲ್ಲಿಗುಡಿ ಮತ್ತು ಲಾಡಖಾನ ಗುಡಿಗಳಲ್ಲಿರುವ ಶಿಲ್ಪಗಳು ಆರಂಭಿಕ ಹಂತದ ಅತ್ಯುತ್ತಮ ಶಿಲ್ಪಗಳಾಗಿವೆ. ನೆರೆಯ ರಾಜ್ಯವಾದ ಮಹಾರಾಷ್ಟ್ರದ ಎಲಿಫೆಂಟಾ, ಎಲ್ಲೋರಾ ಹಾಗೂ ಕರ್ನಾಟಕದ ಗದಗ, ರೋಣ, ನಿಡಗುಂದಿ ಮುಂತಾದ ಕಡೆಗಳಲ್ಲಿ ದೊರೆತಿವೆ. ಶ್ರವಣಬೆಳಗೊಳದ ಗೊಮ್ಮಟೇಶ್ವರ ಮೂರ್ತಿ ಮಹತ್ವದ್ದಾಗಿದೆ. ಹೊಯ್ಸಳರ ಮೂರ್ತಿಗಳು ಹೆಚ್ಚಾಗಿ ಅಲಂಕೃತಗೊಂಡಿದ್ದು ನೋಡಲು ಸುಂದರವಾಗಿವೆ. ವಿಜಯನಗರ ಕಾಲದ ಮೂರ್ತಿಶಿಲ್ಪ ಗಣನೀಯವಾದದ್ದು, ಭಾರತ ಮತ್ತು ಕರ್ನಾಟಕದ ಸಂದರ್ಭದಲ್ಲಿ ಮೂರ್ತಿಶಿಲ್ಪ ಕಲೆ ಬೆಳೆದು ಬಂದ ಬಗೆಯನ್ನು ಸಂಕ್ಷಿಪ್ತವಾಗಿ ಈವರೆಗೆ ಅವಲೋಕಿಸಲಾಗಿದೆ.

ರಾಜ ಮಹಾರಾಜರು, ರಾಣಿಯರು, ಸಾಮಂತರು, ವರ್ತಕರು, ಮೂರ್ತಿಶಿಲ್ಪಕ್ಕೆ ನೀಡಿದ ಅಪಾರ ಪ್ರೋತ್ಸಾಹದಿಂದಾಗಿ ಕರ್ನಾಟಕದಲ್ಲಿ ಮೂರ್ತಿಶಿಲ್ಪ ಕಲೆಯು ಅಪರಿಮಿತವಾಗಿ ಬೆಳೆದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಈ ಪ್ರೋತ್ಸಾಹವು ಅವರ ಸೌಂದರ್ಯ ಪ್ರಜ್ಞೆಯ ದ್ಯೋತಕವಾಗಿದೆ. ವಿವಿಧ ರಾಜವಂಶದವರು ತಮ್ಮದೇ ಆದ ವಿಶೇಷ ಶೈಲಿ ಮತ್ತು ಅಲಂಕಾರಿಕ ಲಕ್ಷಣಗಳಲ್ಲಿ ವಿಭಿನ್ನ ಮೂರ್ತಿಗಳನ್ನು ನಿರ್ಮಿಸಿ ತಮ್ಮ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿರುವುದು ಭಾರತೀಯ ಮೂರ್ತಿ ಶಾಸ್ತ್ರದಲ್ಲಿ ಗಮನಾರ್ಹವಾಗಿದೆ.[೨೩]

ಹಡಗಲಿ ತಾಲೂಕು ಪ್ರಾಚೀನ ಮತ್ತು ಮಧ್ಯಯುಗೀನ ಕಾಲದಲ್ಲಿ ಎಲ್ಲ ಧರ್ಮಗಳ ತವರೂರಾಗಿತ್ತು, ಈ ಭಾಗದಲ್ಲಿ ಅಂದು ಆಳ್ವಿಕೆಗೈದ ಅರಸರು ಸಕಲ ಧರ್ಮಗಳನ್ನು ಒಂದೇ ದೃಷ್ಟಿಯಿಂದ ನೋಡಿದ್ದರಿಂದಾಗಿ ವಿಭಿನ್ನ ಧರ್ಮೀಯರ ದೇವಾಲಯಗಳ ನಿರ್ಮಾಣ ಸಾಧ್ಯವಾಗಿದೆ. ಈ ದೇವಾಲಯಗಳ ತತ್ಸಂಬಂಧಿ ಧರ್ಮೀಯ ಮೂರ್ತಿಗಳ ಪ್ರತಿಷ್ಠಾಪನೆಗೊಂಡಿದ್ದನ್ನು ನಾವು ಗಮನಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಹಡಗಲಿ ತಾಲೂಕು ಕ್ಷೇತ್ರಕಾರ್ಯ ಕೈಗೊಂಡಾಗ ಕಂಡುಬಂದ ವಿಭಿನ್ನ ಧರ್ಮದ ಪ್ರತಿಮಾ ವಿಧಾನವನ್ನು ಮುಂದಿನ ಅಧ್ಯಾಯದಲ್ಲಿ ಹೀಗೆ ವಿಭಾಗಿಸಿಕೊಳ್ಳಲಾಗಿದೆ.

೧. ಶಿಲಾಮೂರ್ತಿಗಳು

೨. ಲೋಹಮೂರ್ತಿಗಳು

೩. ಮರದ ಮೂರ್ತಿಗಳು

ಪ್ರಸ್ತುತ ಹಡಗಲಿ ತಾಲೂಕಿನಲ್ಲಿ ಶಿಲಾಮೂರ್ತಿಗಳೇ ಪ್ರಧಾನವಾಗಿ ಕಂಡುಬರುತ್ತವೆ.

**೧. ಶಿಲಾಮೂರ್ತಿಗಳು**

**ಶಿವಲಿಂಗಗಳು:** ಅಧ್ಯಯನ ಕ್ಷೇತ್ರವಾದ ಹೂವಿನಹಡಗಲಿ ತಾಲೂಕಿನ ವ್ಯಾಪ್ತಿಯಲ್ಲಿ ಸುಮಾರು ನೂರಕ್ಕೂ ಹೆಚ್ಚು ವಿವಿಧ ಶಿವಲಿಂಗಗಳು ಲಭ್ಯವಾಗಿವೆ. ಪ್ರತಿಯೊಂದು ಗ್ರಾಮದಲ್ಲಿಯೂ ವಿಜಯನಗರ ಮತ್ತು ಕಲ್ಯಾಣ ಚಾಲುಕ್ಯರ ಕಾಲದ ಶಿವಲಿಂಗಗಳೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಶಿವಲಿಂಗಗಳಲ್ಲಿ ಅಳತೆ ಮತ್ತು ಪ್ರಮಾಣಗಳಲ್ಲಿ ವ್ಯತ್ಯಾಸ ಕಂಡುಬಂದಿವೆ. ಶಿವಲಿಂಗಗಳು ಸಾಮಾನ್ಯವಾಗಿ ಬ್ರಹ್ಮಪೀಠ, ವಿಷ್ಣುಪೀಠ, ಪಾಣಿಪೀಠ, ಜಲಹರಿವು, ಲಿಂಗಗಳನ್ನೊಳಗೊಂಡಿವೆ. ಸುಮಾರು ಒಂದು ಅಡಿಗಿಂತ ಕಡಿಮೆ ಅಳತೆಯಿಂದ ಹಿಡಿದು ಸುಮಾರು ಐದು ಅಡಿ ಎತ್ತರವುಳ್ಳ ಶಿವಲಿಂಗಗಳು ಕ್ಷೇತ್ರಾಧ್ಯಯನ ಸಮಯದಲ್ಲಿ ಸಿಕ್ಕಿವೆ. ಶಿವಲಿಂಗದ ಜಲಹರಿವು ವೃತ್ತಾಕಾರ, ಚೌಕಾಕಾರ ಮತ್ತು ಆಯತಾಕಾರವಾಗಿ ಇದ್ದುದು ತಿಳಿದುಬಂದಿದೆ. ಸೋಗಿ ಗ್ರಾಮದ ಭಿಷ್ಟಪ್ಪಯ್ಯ ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗದ ಬ್ರಹ್ಮಪೀಠ, ಜಲಹರಿವುಗಳಲ್ಲಿ ಹೂಬಳ್ಳಿ, ಲತಾಬಳ್ಳಿಯ ಅಲಂಕಾರವಿದೆ.

ಕೆಲವೊಂದು ಗ್ರಾಮಗಳಲ್ಲಿ ಶಿವಲಿಂಗವನ್ನು ಪೀಠವನ್ನಾಗಿಸಿ ಅದರ ಮೇಲೆ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಿರುವ ಉದಾಹರಣೆಗಳು ನಮಗೆ ಸಿಗುತ್ತವೆ. ಉದಾ: ಹೂವಿನಹಡಗಲಿಯ ಶ್ರೀಕೃಷ್ಣ ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗದ ಮೇಲೆ ಬಾಲಕೃಷ್ಣನನ್ನು ಪ್ರತಿಷ್ಠಾಪಿಸಿದೆ. ಇನ್ನೂ ಕೆಲವೊಂದು ಕಡೆಗಳಲ್ಲಿ ವೀರಭದ್ರ ಇನ್ನಿತರ ಮೂರ್ತಿಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ.

ಬನ್ನಿಮಟ್ಟಿ ನಂದಿಗಾವಿಯ ಮಧ್ಯದಲ್ಲಿ, ಹರವಿ ಗ್ರಾಮದಲ್ಲಿ ಕೇವಲ ಜಲಹರಿವನ್ನು ಹೊಂದಿರುವ ಲಿಂಗದಲ್ಲಿ ಪಂಚಲಿಂಗಗಳಿದ್ದುದು ವಿಶೇಷವಾಗಿದೆ.

**ಸಪ್ತಮಾತೃಕೆಯರು:** ಶೈವ ಇಲ್ಲವೇ ವೈಷ್ಣವ ದೇವಾಲಯಗಳಲ್ಲಿ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬರುತ್ತವೆ. ಸಪ್ತಮಾತೃಕೆಯರು ಊರ ಹೆಸರನ್ನು ಪಡೆದು ದೇವತೆಗಳಾಗಿ ಎಲ್ಲಾ ವರ್ಗದ ಜನರಿಂದ ಪೂಜೆಗೊಳ್ಳುವವರಾಗಿರುತ್ತಾರೆ. ಅನೇಕ ವೇಳೆ ದೇವಾಲಯಗಳ ಪರಿವಾರ ದೇವತೆಗಳಾಗಿ ಕೆಲವೊಮ್ಮೆ ಸ್ವತಂತ್ರವಾಗಿಯೂ ಪೂಜೆಗೊಳ್ಳುತ್ತಾರೆ. ಇವರನ್ನು ಕನ್ಯೆಯರೆಂದು, ಅಮ್ಮನವರೆಂದು ಕರೆಯುವುದು ವಾಡಿಕೆ. ಈ ಮೂರ್ತಿಗಳ ಗಾತ್ರ ಮತ್ತು ಅಂಗಾಂಗಗಳ ವಿನ್ಯಾಸವು ಕಲ್ಲಿನ ಅಳತೆ, ಆಕಾರವನ್ನು ಅವಲಂಬಿಸಿರುತ್ತದೆ.

ಕಾಳಿಕಾ ಪುರಾಣದಲ್ಲಿ ಕಾಳಿಕಾದೇವಿಯ ಶರೀರದ ವಿವಿಧ ಭಾಗಗಳಿಂದ ಸಪ್ತಮಾತೃಕೆಯರು ಜನಿಸಿದರೆಂಬ ಉಲ್ಲೇಖವಿದೆ. ಬೃಹತ್ಸಂಹಿತೆ ವ್ಯಾಖ್ಯಾನಕಾರ ಉತ್ಪಲನು ಬ್ರಾಹ್ಮಿ, ವೈಷ್ಣವಿ, ರೌದ್ರಿ, ಕೌಮಾರಿ, ಐಂದ್ರಿಯ, ಯಮಿ, ವಾರುಣ, ಕೌಬೇರಿ ಎಂಬ ಎಂಟು ಜನ ಮಾತೃಕೆಯರನ್ನು ಹೆಸರಿಸಿದ್ದಾನೆ. ಹೀಗೆ ಮಾತೃಕೆಯರ ಸಂಖ್ಯೆ ೭, ೮, ೯ ಕೆಲವೊಮ್ಮೆ ೧೬ ಎಂದೂ ಹೇಳಲಾಗುತ್ತದೆ. ಕೌಶಿಕ ದುರ್ಗಿ ರಕ್ತಬೀಜಾಸುರನೊಡನೆ ಹೋರಾಡುತ್ತಿರುವಾಗ ಅಸುರನ ರಕ್ತ ನೆಲಕ್ಕೆ ಬಿದ್ದ ತಕ್ಷಣ ಮತ್ತೊಬ್ಬ ರಕ್ತಬೀಜಾಸುರ ಜನಿಸಿ ದೇವಿಯೊಡನೆ ಹೋರಾಟಕ್ಕಿಳಿಯುತ್ತಿದ್ದ. ಈ ಸಮಯದಲ್ಲಿ ದೇವಿಯು ತನ್ನ ಸಹಾಯಕ್ಕಾಗಿ ಏಳು ಜನ ದೇವತೆಯನ್ನು ಸೃಷ್ಟಿಸಿದಳು. ಈ ದೇವತೆಗಳೇ ಸಪ್ತಮಾತೃಕೆಯೆಂದು 'ದುರ್ಗ ಸಪ್ತಸತಿ' ಗ್ರಂಥವು ಇದೇ ವಿವರಣೆ ನೀಡುತ್ತದೆ.

ಈ ಅಧ್ಯಯನ ಕ್ಷೇತ್ರವಾದ ಹೂವಿನಹಡಗಲಿ ತಾಲೂಕಿನ ಹಲವು ಗ್ರಾಮಗಳಲ್ಲಿ ಸಪ್ತಮಾತೃಕೆಯರ ಪಟ್ಟಿಕೆಗಳು ಕಂಡುಬಂದಿವೆ. ಈ ಸಪ್ತಮಾತೃಕೆಯರ ಪಟ್ಟಿಕೆಗಳು ಮುಖ್ಯವಾಗಿ ಹಿರೇಹಡಗಲಿ, ಮಾಗಳ, ಕೊಂಬಳಿ, ಅಂಗೂರು, ಬ್ಯಾಲಹುಣಸಿ, ಮಾನ್ಯರಮಸಲವಾಡ, ಕೋಟೆಹಾಳು, ಹೊನ್ನೂರು, ಹೊಳಲು, ಬೂದನೂರು, ನಡುವಿನಹಳ್ಳಿ, ಸೋಗಿ ಇನ್ನೂ ಮುಂತಾದ ಗ್ರಾಮಗಳಲ್ಲಿ ಸಪ್ತಮಾತೃಕೆಯರ ಪಟ್ಟಿಕೆಗಳು ಲಭ್ಯವಾಗಿದ್ದು, ಇವುಗಳಲ್ಲಿ ಹೆಚ್ಚಿನವು ಕ್ರಿ.ಶ. ೧೧, ೧೨ ಮತ್ತು ೧೩ನೇ ಶತಮಾನದ ಕಲ್ಯಾಣ ಚಾಲುಕ್ಯರ ಶೈಲಿಯ ಸಪ್ತಮಾತೃಕೆಯರ ಪಟ್ಟಿಕೆಗಳಾಗಿವೆ. ಕೊಂಬಳಿ ಗ್ರಾಮದಲ್ಲಿ ಸಿಕ್ಕಿರುವ ಸಪ್ತಮಾತೃಕೆಯರ ಪಟ್ಟಿಕೆ ಮಾತ್ರ ವಿಜಯನಗರ ಕಾಲದ್ದಾಗಿದ್ದು ತ್ರುಟಿತಗೊಂಡಿದೆ. ಈ ಎಲ್ಲ ಸಪ್ತಮಾತೃಕೆಯರ ಪಟ್ಟಿಕೆಗಳು ಹೆಚ್ಚು ಕಡಿಮೆ ಒಂದೇ ರೀತಿಯ ಅಲಂಕಾರ ಮತ್ತು ಕೆತ್ತನೆಯನ್ನು ಹೊಂದಿವೆ. ಆದ್ದರಿಂದ ಇವೆಲ್ಲವುಗಳನ್ನು ಒಟ್ಟಾಗಿ ಸೇರಿಸಿ ವಿವರಣೆಯನ್ನು ನೀಡಲಾಗಿದೆ.

ಪೀಠದ ಮೇಲೆ ಲಲಿತಾಸನದಲ್ಲಿ ಕ್ರಮವಾಗಿ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ ಮೂರ್ತಿಗಳು ಕಿರೀಟಧಾರಿಗಳಾಗಿವೆ. ಇವರ ಕೈಯಲ್ಲಿ ಕುಂಡಲಿಗಳಿವೆ. ಮೂರ್ತಿಶಿಲ್ಪಗಳ ಕೊನೆಯ ಭಾಗದಲ್ಲಿ ವೀರಭದ್ರ ಮತ್ತು ಗಣೇಶ ಶಿಲ್ಪಗಳಿವೆ. ಚತುರ್ಭುಜಧಾರಿಯಾದ ವೀರಭದ್ರನ ಮೇಲಿನ ಕೈಗಳಲ್ಲಿ ತ್ರಿಶೂಲ, ಡಮರು ಹಿಡಿದಿದ್ದು, ಕೆಳಗಿನ ಬಲಗೈ ವರದ ಮುದ್ರೆಯಲ್ಲಿದೆ. ಎಡಗೈಯಲ್ಲಿ ಫಲವಿದೆ. ಈ ಮೂರ್ತಿಗಳಿಗೆ ಕಟಿಬಂಧವಿದ್ದು ಇಳಿವಸ್ತ್ರ ಎರಡು ಕಾಲಿನ ಮಧ್ಯದಿಂದ ಇಳಿಬಿದ್ದಿದೆ. ಪಾದಗಳಲ್ಲಿ ಕಡಗಗಳಿವೆ.

ಬ್ರಾಹ್ಮಿ ತ್ರಿಮುಖಗಳನ್ನು ಹೊಂದಿದ್ದು, ಕಿರೀಟಧಾರಿಣಿಯಾಗಿದ್ದಾಳೆ. ಬ್ರಾಹ್ಮಿ ಆರು ಕೈಗಳನ್ನು ಹೊಂದಿದ್ದಾಳೆ. ಈ ಕೈಗಳಲ್ಲಿ ಕ್ರಮವಾಗಿ ಪಾಶ, ಸ್ತುವ, ಪುಸ್ತಕ ಕಮಂಡಲಗಳಿವೆ. ಒಂದು ಕೈ ಅಭಯಮುದ್ರೆ, ಇನ್ನೊಂದು ಕೈ ವರದಮುದ್ರೆಯಲ್ಲಿದೆ. ಬ್ರಾಹ್ಮಿಯ ಕೆಳಭಾಗದಲ್ಲಿ ವಾಹನವಾದ ಹಂಸವಿದೆ.

ಮಹೇಶ್ವರಿಯ ಮೇಲಿನ ಕೈಗಳಲ್ಲಿ ತ್ರಿಶೂಲ ಮತ್ತು ಡಮರುಗಳಿದ್ದು, ಕೆಳಗಿನ ಬಲಗೈ ವರದ ಮುದ್ರೆಯಲ್ಲಿಯು ಹಾಗೂ ಎಡಗೈಯಲ್ಲಿ ಫಲವಿದೆ. ತಲೆಯ ಮೇಲೆ ಮೂರು ಹಂತದ ಕಿರೀಟವಿದೆ. ಮಧ್ಯದಲ್ಲಿ ಇಳಿಬಿಟ್ಟ ವಸ್ತ್ರವಿದ್ದು ಕೆಳಗಡೆ ಇವಳ ವಾಹನವಾದ ವೃಷಭವಿದೆ.

ವೈಷ್ಣವಿಗೆ ಗರುಡವು ವಾಹನವಾಗಿದೆ. ಮೂರು ಮುಖಗಳನ್ನು ಹೊಂದಿರುವ ಈ ಮೂರ್ತಿಗೆ ಆರು ಕೈಗಳಿವೆ. ಎರಡು ಕೈಗಳಲ್ಲಿ ವರದ ಮತ್ತು ಅಭಯ ಮುದ್ರೆಯಲ್ಲಿವೆ. ಉಳಿದ ಕೈಗಳಲ್ಲಿ ಕ್ರಮವಾಗಿ ಗದೆ, ಪದ್ಮ, ಚಕ್ರ, ಆಸೀನಳಾಗಿದ್ದಾಳೆ.

ಕೌಮಾರಿಗೆ ಆರು ಮುಖ ಹನ್ನೆರಡು ಕೈಗಳಿರುತ್ತವೆ. ಎರಡು ಕೈಗಳು ವರದ ಮತ್ತು ಅಭಯ ಮುದ್ರೆಯಲ್ಲಿದ್ದು ಉಳಿದ ಕೈಗಳಲ್ಲಿ ಶಕ್ತಿ ಪತಾಕೆ, ದಂತ, ಪಾತ್ರೆ, ಬಾಣ, ಪರಶು, ಕುಕ್ಕುಟ, ಪದ್ಮಗಂಟೆ, ಬಿಲ್ಲುಗಳು ಇರುತ್ತವೆ.

ವರಾಹಿಯು ವರಾಹ ಮುಖವನ್ನು ಹೊಂದಿದ್ದಾಳೆ. ಅವಳು ತನ್ನ ವಾಹನವಾದ ಮಹಿಷಿಯ ಮೇಲೆ ಆಸೀನಳಾಗಿದ್ದಾಳೆ. ವರಾಹಿಯು ಆರು ಕೈಗಳನ್ನು ಹೊಂದಿದ್ದು, ಎರಡು ಕೈಗಳು ವರದ ಮತ್ತು ಅಭಯಮುದ್ರೆ ಉಳಿದ ಕೈಗಳಲ್ಲಿ ಖಡ್ಗ, ದಂತ, ಪಾನಪಾತ್ರೆಗಳಿವೆ. ಇಂದ್ರಾಣಿ ಚತುರ್ಭಜೆಯಾಗಿದ್ದು ಬಲಬದಿಯ ಕೆಳಗಿನ ಕೈ ವರದ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ವಜ್ರವಿದೆ. ಎಡಬದಿಯ ಕೆಳಗಿನ ಕೈ ಅಭಯ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ಪದ್ಮಪೀಠದಲ್ಲಿ ಆನೆಯಿದೆ. ಚಾಮುಂಡಿ ಚತುರ್ಭುಜೆಯಾಗಿದ್ದು, ಅವುಗಳಲ್ಲಿ ಕ್ರಮವಾಗಿ ಖಡ್ಗ, ಚಕ್ರ, ಖೇಟಕ, ತ್ರಿಶೂಲ, ಡಮರು ಮತ್ತು ಕಪಾಲಗಳಿವೆ. ಪೀಠದಲ್ಲಿ ಅವಳ ವಾಹನ ಸಿಂಹವಿದೆ. ಇವಳು ಕರಂಡಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕಟಿವಸ್ತ್ರ, ತೋಳುಬಂದಿ, ಕೈಬಳೆ, ಕಾಲ್ಗಡಗ, ಬೆರಳುಂಗುರ ಧರಿಸಿದ್ದಾಳೆ. ಚಾಮುಂಡಿಯ ಎಡಬದಿಯಲ್ಲಿ ಗಣೇಶನಿದ್ದು ಪೀಠದಲ್ಲಿ ಮೂಷಕವಿದೆ. ಈ ಎಲ್ಲ ಪಟ್ಟಿಕೆಗೆ ಪ್ರಭಾವಳಿ ತೋರಿಸಲಾಗಿದೆ.

ನವಲಿಯ ಕಲ್ಲೇಶ್ವರ ದೇವಾಲಯದ ಸಪ್ತಮಾತೃಕಾ ಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು, ಬಳಪದ ಕಲ್ಲಿನಲ್ಲಿದೆ. ಈ ಪಟ್ಟಿಕೆಯಲ್ಲಿ ನಾಲ್ಕು ಶಿಲ್ಪಗಳಿದ್ದು, ಉಳಿದವು ಭಗ್ನವಾಗಿವೆ. ಇಲ್ಲಿರುವ ಶಿಲ್ಪಗಳಲ್ಲಿ ಮಾಹೇಶ್ವರ, ಇಂದ್ರಾಣಿ, ವಾರಾಹಿ ಮತ್ತು ವೈಷ್ಣವಿ ಅವತಾರಗಳು. ಇವುಗಳಿಗೆ ಸಂಬಂಧಿಸಿದ ವಾಹನಗಳಾದ ಕ್ರಮವಾಗಿ ನಂದಿ, ಆನೆ, ವರಾಹದ ಉಬ್ಬುಗೆತ್ತನೆಗಳನ್ನು ದೇವತೆಗಳ ಅಡಿ ಪೀಠದಲ್ಲಿ ಕೆತ್ತಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹೊಳಗುಂದಿಯ ವೀರಣ್ಣ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಸಪ್ತಮಾತೃಕೆಯರ ಪಟ್ಟಿಯಲ್ಲಿ ಬ್ರಹ್ಮಾಣಿ, ಮಾಹೇಶ್ವರಿ, ಕೌಮಾರಿ ಮತ್ತು ವೈಷ್ಣವಿ ಶಿಲ್ಪಗಳು ಮಾತ್ರವಿದ್ದು, ಉಳಿದ ಶಿಲ್ಪಗಳಿರುವುದಿಲ್ಲ. ಈ ಮೇಲಿನ ನಾಲ್ಕು ದೇವತೆಗಳು ಸುಖಾಸೀನವಾಗಿದ್ದು, ಆಯಾಯ ದೇವತೆಗಳ ಕೆಳಗೆ ವಾಹನಗಳನ್ನು ಕಡೆಯಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

**ಗಣೇಶ ಮೂರ್ತಿಗಳು:** ಗಣೇಶ ಶಿವ-ಪಾರ್ವತಿಯರ ಮಗ. ಪುರಾಣ, ತಂತ್ರ, ಆಗಮ, ಬ್ರಾಹ್ಮಣ ಸೂತ್ರ, ಧರ್ಮಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖಗಳಿವೆ. ವೈದಿಕ ಸಂಪ್ರದಾಯದ ಹಲವು

ದೇವತೆಗಳಂತೆ, ಹಿಂದೂಗಳ ಆದಿದೇವಗಣದಲ್ಲಿ ಗಣೇಶನೂ ಒಬ್ಬನಾಗಿದ್ದಾನೆ. ರುದ್ರನ ಪುತ್ರ ವಿನಾಯಕವಾಗಿ ಮೆರೆದು, ಬುದ್ಧಿಶೀಲ ಬೃಹಸ್ಪತಿಯಾಗಿದ್ದನು. ವೈದಿಕ ದೇವತೆಗಳೇ ಪುರಾಣ ಕಾಲದ ಗಜಮುಖ, ವಿನಾಯಕ ಎಂಬುದು ವಿದ್ವಾಂಸರ ಅಭಿಮತವಾಗಿದೆ. ಪ್ರಾಚೀನ ಕಾಲದಲ್ಲಿ ಗಣೇಶನನ್ನು ಶೂದ್ರರು ಆರಾಧಿಸುತ್ತಿದ್ದರು. ಕಾಲಾನಂತರದಲ್ಲಿ ಬ್ರಾಹ್ಮಣರು ಆರಾಧಿಸತೊಡಗಿದರು. ನಂತರ ಗಾಣಪತ್ಯರೆಂಬ ಉಗ್ರಪಂಥದವರು ಶಂಕರಾಚಾರ್ಯರ ಕಾಲದಲ್ಲಿ ಮಾತ್ರ ಇವನ ಆರಾಧನೆಯಲ್ಲಿ ತೊಡಗಿದರು. ಪ್ರಸ್ತುತ ಕಾಲಘಟ್ಟದಲ್ಲಿ ಎಲ್ಲ ಮತದವರೂ ಆರಾಧಿಸುತ್ತಾರೆ. ಅತೀ ಪ್ರಾಚೀನ ಕಾಲದ ಗಣೇಶ ಶಿಲ್ಪಗಳು ಯಾವುದೇ ಬಗೆಯ ಅಲಂಕಾರಗಳಿಲ್ಲದೇ ನಿರಾಧಾರವಾಗಿವೆ. ನಂತರ ಕರಂಡಮುಕುಟ, ಜಟಾಮುಕುಟ, ರತ್ನಹಾರಗಳು, ಕಂಕಣ ವಲಯಗಳು, ಉಪವೀತ ಕಂಠಹಾರ, ನಾಗ ಯಜ್ಞೋಪವೀತ, ವಸ್ತ್ರಾಭರಣಗಳಿಂದ ಅಲಂಕರಿಸಲ್ಪಟ್ಟಿವೆ.

ಹೆಚ್ಚಾಗಿ ಗಣೇಶನ ಶಿಲ್ಪಗಳು ಸ್ಥಾನಿಕ ಮತ್ತು ಆಸೀನ ಭಂಗಿಯಲ್ಲಿರುತ್ತವೆ. ಸ್ಥಾನಿಕ ಶಿಲ್ಪಗಳು ಸಮಭಂಗಿ, ದ್ವಿಭಂಗಿ, ತ್ರಿಭಂಗಿಗಳಲ್ಲಿ ಇರುತ್ತವೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಹೂವಿನ ಹಡಗಲಿಯಲ್ಲಿ ಹೆಚ್ಚಾಗಿ ಆಸೀನ ಭಂಗಿಯಲ್ಲಿರುವ ಗಣೇಶನ ಶಿಲ್ಪಗಳು ಕಂಡುಬಂದಿವೆ. ಅಧ್ಯಯನ ವ್ಯಾಪ್ತಿಯಲ್ಲಿ ಕಂಡುಬಂದಿರುವ ಗಣೇಶನ ಶಿಲ್ಪಗಳಲ್ಲಿ ಹೆಚ್ಚಿನವುಗಳು ಕಲ್ಯಾಣ ಚಾಲುಕ್ಯರ ಕಾಲದವುಗಳಾಗಿವೆ. ಇವುಗಳ ಕಾಲವನ್ನು ಕ್ರಿ.ಶ. ೧೧, ೧೨ ಮತ್ತು ೧೩ನೇ ಶತಮಾನವೆಂದು ನಿರ್ಧರಿಸಬಹುದಾಗಿದೆ. ಹೂವಿನಹಡಗಲಿ ತಾಲೂಕಿನ ಪ್ರತಿಯೊಂದು ಹಳ್ಳಿಯಲ್ಲಿಯೂ ಗಣೇಶನ ಶಿಲ್ಪಗಳು ಕಂಡುಬಂದಿವೆ. ಇವುಗಳ ಅಳತೆ ಮತ್ತು ಪ್ರಮಾಣಗಳ ವ್ಯತ್ಯಾಸವನ್ನು ಗುರುತಿಸಬಹುದಾದರೂ ಅಧ್ಯಯನ ಅನುಕೂಲ ದೃಷ್ಟಿಯಿಂದ ಉತ್ತಮ ವಾಸ್ತುಶೈಲಿ ಮತ್ತು ಸೂಕ್ಷ್ಮ ಕೆತ್ತನೆಯನ್ನು ಹೊಂದಿರುವ ಗಣೇಶ ಶಿಲ್ಪಗಳನ್ನು ವಿವರಿಸಲಾಗಿದೆ. ಹಿರೇಹಡಗಲಿ, ಕೋಟೆಹಾಳು, ಅಂಗೂರು, ಬ್ಯಾಲಹುಣಸಿ, ಸೋಗಿ, ಹೂವಿನಹಡಗಲಿ, ಕತ್ತೆಬೆನ್ನೂರು(ಕಲ್ಲೇಶ್ವರ ದೇವಾಲಯ), ಮೈಲಾರ (ಮೈಲಾರಲಿಂಗ), ಮಾಗಳ(ಸೂರ್ಯನಾರಾಯಣ, ನರಸಿಂಹ ದೇವಾಲಯ), ಕುರುವತ್ತಿ (ಮಲ್ಲಿಕಾರ್ಜುನ), ಹೊಳಗುಂದಿ ಮತ್ತು ಹೂವಿನಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಗಣೇಶ ಮೂರ್ತಿಶಿಲ್ಪಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಬ್ಯಾಲಹುಣಸಿ ಗ್ರಾಮದ ಕಲ್ಲೇಶ್ವರ ದೇವಾಲಯದ ಒಂದು ಕೂಟದ ಗರ್ಭಗೃಹದಲ್ಲಿರುವ ಗಣೇಶ ಶಿಲ್ಪವು ಆಕರ್ಷಕವಾಗಿದೆ. ಈ ಗಣೇಶ ಶಿಲ್ಪವನ್ನು ಮೂಷಿಕ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವು ಪೀಠದಿಂದ ಸುಮಾರು ಮೂರು ಅಡಿ ಎತ್ತರದಲ್ಲಿದೆ. ಇದು ಪದ್ಮಾಸನದಲ್ಲಿದ್ದು, ದ್ವಿಭುಜ ಸ್ಥಿತಿಯಲ್ಲಿದೆ. ಗಣೇಶನು ತಲೆಯ ಮೇಲೆ ಸಣ್ಣದಾದ ಕಿರೀಟ ಕಿವಿಯೋಲೆ, ಕೊರಳಹಾರ, ಕಂಠಿಹಾರ, ಪದಕಹಾರ, ಯಜ್ಞೋಪವೀತ ಧರಿಸಿದ್ದಾನೆ. ಕೈಗಳಲ್ಲಿ ಅಂಕುಶ, ಪಾಶ ಹಿಡಿದಿದ್ದು, ಇನ್ನೆರಡು ಕೈಗಳು ಅಭಯಮುದ್ರೆ, ಮೋದಕಪಾತ್ರೆಯನ್ನು ಹಿಡಿದಿದ್ದಾನೆ. ಕಾಲ್ಗಡಗ, ಕೈಗಡಗ, ತೋಳುಬಂಧಿ ಧರಿಸಿದ್ದು, ಎರಡು ಕಾಲುಗಳ ಮಧ್ಯದಲ್ಲಿ ಇಳಿವಸ್ತ್ರವು ಇಳಿಬಿದ್ದಿದೆ. ಈ ಶಿಲ್ಪದ ಸುತ್ತ ಪ್ರಭಾವಳಿ ರಚನೆಯಿದ್ದು ನೋಡಲು ಆಕರ್ಷಣೀಯವಾಗಿದೆ.

ಸಾಮಾನ್ಯವಾಗಿ ಇದೇ ರೀತಿಯಾದಂತಹ ಗಣೇಶನ ಶಿಲ್ಪಗಳು ಈ ಮೇಲೆ ಹೆಸರಿಸಲಾದ ಗ್ರಾಮಗಳಲ್ಲದೆ ಇನ್ನಿತರ ಗ್ರಾಮಗಳಲ್ಲಿ ಕಂಡುಬರುತ್ತವೆ. ಇನ್ನೂ ಹಿರೇಹಡಗಲಿಯ ಗಣೇಶ ದೇವಾಲಯದ ಗರ್ಭಗೃಹದಲ್ಲಿರುವ ಸ್ಥಾನಿಕ ಗಣೇಶನ ಶಿಲ್ಪವು ಸರಳವಾದ ಅಲಂಕಾರವನ್ನು ಹೊಂದಿದೆ.

ವಿಜಯನಗರ ಕಾಲದ ವಾಸ್ತುಶೈಲಿಯನ್ನು ಹೊಂದಿರುವ ಕ್ರಿ.ಶ.೧೪-೧೫ನೇ ಶತಮಾನದ ಗಣೇಶ ಶಿಲ್ಪವೊಂದು ಹೂವಿನಹಡಗಲಿಯ ವಸ್ತುಸಂಗ್ರಹಾಲಯದಲ್ಲಿದೆ. ಇದು ಗ್ರಾನೈಟ್ ಶಿಲೆಯದ್ದಾಗಿದೆ. ಪದ್ಮಾಸನದಲ್ಲಿರುವ ಈ ಗಣೇಶನ ತಲೆಯ ಮೇಲೆ ಏಳು ಹಂತದ ಕಿರೀಟವಿದೆ. ಕಿವಿಗಳು ಅಗಲವಾಗಿದ್ದು ಚತುರ್ಭುಜಾಕೃತಿಯಲ್ಲಿದೆ. ಗಣೇಶನ ಒಂದು ಕೈಯಲ್ಲಿ ಅಭಯಮುದ್ರೆ, ಇನ್ನೊಂದು ಕೈಯಲ್ಲಿ ಮೋದಕಪಾತ್ರೆ. ಇನ್ನೆರಡು ಕೈಗಳಲ್ಲಿ ಪಾಶ, ಅಂಕುಶಗಳಿವೆ. ಕೊರಳಲ್ಲಿ ಕಂಠಹಾರ, ಯಜ್ಞೋಪವೀತ, ಕಟಿಸೂತ್ರ ಧರಿಸಿದ್ದಾನೆ. ಕಾಲ್ಕಡಗ, ಕೈಕಡಗ ತೋಳುಬಂದಿಯನ್ನು ಧರಿಸಿದ್ದು, ಮಧ್ಯದಲ್ಲಿ ಇಳಿಬಿದ್ದ ವಸ್ತ್ರವಿದೆ. ಈ ಮೂರ್ತಿಶಿಲ್ಪದ ಸುತ್ತ ಯಾವುದೇ ಅಲಂಕರಣೆಗಳಿಲ್ಲ.

ಮಾಗಳದ ಆಂಜನೇಯ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಜಟಾಮುಕುಟಧಾರಿ ಸುಖಾಸೀನ ಚತುರ್ಭುಜ ಗಣೇಶನು ನಾಲ್ಕು ಕೈಗಳನ್ನು ಹೊಂದಿದ್ದು, ಬಲಬದಿಯ ಎರಡು ಕೈಗಳಲ್ಲಿ ಅಂಕುಶ ಮತ್ತು ದಂತವನ್ನು, ಎಡಬದಿಯ ಕೈಗಳಲ್ಲಿ ಪಾಶ ಮತ್ತು ಮೋದಕಗಳನ್ನು ಹಿಡಿದಿರುವನು. ನಾಗಬಂಧ, ಯಜ್ಞೋಪವೀತ, ಕಂಠಹಾರ, ಕರ್ಣಕುಂಡಲ, ಕಾಲಕಡಗ ಮತ್ತಿತರ ಆಭರಣಗಳನ್ನು ಹಾಗೂ ಸೊಂಟಕ್ಕೆ ಧೋತಿಯನ್ನು ಧರಿಸಿದ್ದಾನೆ. ಪ್ರಸ್ತುತ ಈ ಶಿಲ್ಪ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಹೊಳಗುಂದಿಯ ವೀರಣ್ಣ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಸುಖಾಸೀನನಾಗಿರುವ ಗಣೇಶನು ತನ್ನ ನಾಲ್ಕು ಕೈಗಳಲ್ಲಿ ಮೇಲ್ಭಾಗದ ಕೈಗಳಲ್ಲಿ ಅಂಕುಶ ಮತ್ತು ಪಾಶಗಳಿವೆ. ಕೆಳಗಿನ ಎರಡು ಕೈಗಳು ತುಂಡಾಗಿವೆ. ನಾಗಬಂಧ, ಯಜ್ಞೋಪವೀತ, ತೋಳ್ಬಂದಿ, ಕೈಬಳೆ, ಕಾಲ್ಕಡಗ, ಕಂಠಹಾರಗಳನ್ನು ಧರಿಸಿರುವನು. ಕರಂಡ ಮುಕುಟಧಾರಿಯಾಗಿರುವನು. ಗಣೇಶನ ಕೆಳಭಾಗದ ಪೀಠದಲ್ಲಿ ವಾಹನವಾದ ಇಲಿಯ ಶಿಲ್ಪವಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಸೋಗಿಯ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಗಣೇಶನು ಕರಂಡ ಮುಕುಟಧಾರಿಯಾಗಿ ಸುಖಾಸೀನನಾಗಿ ಕುಳಿತಿರುವನು. ತನ್ನ ನಾಲ್ಕು ಕೈಗಳಲ್ಲಿ ಅಂಕುಶ, ದಂತ, ಪಾಶ ಮತ್ತು ಮೋದಕಗಳನ್ನು ಹಿಡಿದಿದ್ದಾನೆ. ಸೊಂಡಿಲು ಮೋದಕವನ್ನು ಮುಟ್ಟುವ ರೀತಿಯಲ್ಲಿದೆ. ನಾಗಬಂಧ, ಯಜ್ಞೋಪವೀತ, ಕಾಲ್ಕಡಗ, ಕಂಠಹಾರಗಳನ್ನು ಧರಿಸಿರುವನು.

ಸೋಗಿಯ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಕಪ್ಪುಶಿಲೆಯ ಸುಖಾಸೀನ ಗಣೇಶನು ಜಟಾಮುಕುಟಧಾರಿಯಾಗಿರುವನು. ತನ್ನ ನಾಲ್ಕು ಕೈಗಳಲ್ಲಿ ದಂತ, ಅಂಕುಶ, ಪಾಶ ಮತ್ತು ಮೋದಕಗಳನ್ನು ಹಿಡಿದಿರುವನು. ನಾಗಬಂಧ, ಕಂಠಹಾರ, ಕಾಲ್ಕಡಗಳನ್ನು ಧರಿಸಿರುವನು.

**ನಾಗಶಿಲ್ಪ:** ಸಿಂಧೂ ನಾಗರಿಕತೆಯ ಕಾಲದಿಂದಲೇ ನಾಗಾರಾಧನೆ ಪ್ರಚಲಿತವಿತ್ತೆಂದು ಹೇಳಲು ಅಲ್ಲಿ ದೊರೆತ ಎರಡು ಮುದ್ರೆಗಳ ಮೇಲಿನ ಜೋಡಿ ಹೆಡೆಗಳೇ ಸಾಕ್ಷಿ. ಬನವಾಸಿಯ ನಾಗಶಿಲ್ಪ ಪ್ರಾಚೀನವಾಗಿದೆ. ವೇದ, ಉಪನಿಷತ್, ಪುರಾಣಗಳಲ್ಲಿ ನಾಗಾರಾಧನೆಯ ಅನೇಕ ಉಲ್ಲೇಖಗಳಿವೆ. ಜನಪದ ಧರ್ಮವಾಗಿ ಬೆಳೆದುಬಂದಿರುವ ನಾಗಾರಾಧನೆಯನ್ನು ಜೈನ, ವೈಷ್ಣವ, ಶೈವ, ಬೌದ್ಧ ಎಲ್ಲ ಧರ್ಮಗಳು ತಮ್ಮಲ್ಲಿ ಅಳವಡಿಸಿಕೊಂಡಿವೆ. ಈ ಆರಾಧನೆ ಸಂತಾನ ಮತ್ತು ಸಮೃದ್ಧಿಯ ಮಳೆ, ಕ್ಷಾಮ ನಿವಾರಣೆಗಾಗಿ ಆಚರಿಸಲಾಗುತ್ತದೆ. ನಾಗಗಳು ಕ್ಷೇತ್ರಪಾಲಕ ನಿಧಿ ರಕ್ಷಣೆ ಮಾಡುವುದು ಎಂಬ ಪ್ರತೀತಿಯಿದೆ. ಸಾಮಾನ್ಯವಾಗಿ ೧, ೨, ೫ ಮತ್ತು ೭ ಹೆಡೆಗಳುಳ್ಳ ನಾಗಶಿಲ್ಪಗಳನ್ನು ದೇವಾಲಯಗಳ ಆವರಣದಲ್ಲಿ, ಮರದಡಿಯಲ್ಲಿ, ಬಾವಿ, ಕೆರೆಗಳ ದಂಡೆ, ಮನೆಗಳಲ್ಲಿ ಪ್ರತಿಷ್ಠಾಪಿಸಿರುವುದನ್ನು ಕಾಣಬಹುದು.

ನಾಗಶಿಲ್ಪಗಳ ಮೇಲೆ ಶಾಸನ ಬರೆದಿರುವುದು ಕಂಡುಬಂದಿದೆ. ಕುರುವತ್ತಿಯ ಹುಡೇವಿನಲ್ಲಿ, ಹೂವಿನಹಡಗಲಿಯ ಗೋಣಿ ಬಸವೇಶ್ವರ ದೇವಾಲಯದಲ್ಲಿರುವ ನಾಗಶಿಲ್ಪಗಳ ಮೇಲೆ ಶಾಸನವಿದೆ. ಹೆಚ್ಚಾಗಿ ನಾಗಶಿಲ್ಪಗಳು ದೇವಾಲಯದ ಸಭಾಮಂಟಪ, ಮುಖಮಂಟಪ, ಆವರಣದಲ್ಲಿರುತ್ತವೆ.

ರಂಗಾಪುರದ ನರಸಿಂಹ ದೇವಾಲಯದ ಸಭಾಮಂಟಪ, ಮುಖಮಂಟಪದಲ್ಲಿ ಒಂದು, ಐದು ಮತ್ತು ಏಳುಹೆಡೆಗಳ ನಾಗಶಿಲ್ಪಗಳನ್ನು ಕಾಣುತ್ತೇವೆ. ಇವು ಕಲ್ಯಾಣ ಚಾಲುಕ್ಯರ ಕಾಲದವುಗಳಾಗಿವೆ. ಅಂಗೂರು ಕಲ್ಲೇಶ್ವರ, ಕತ್ತೆಬೆನ್ನೂರು ಶಂಕರಲಿಂಗ, ಹುಗಲೂರು ರಾಮಲಿಂಗೇಶ್ವರ, ಹೂವಿನಹಡಗಲಿ ಕಲ್ಲೇಶ್ವರ, ಹೊಳಗುಂದಿ ಮರಳಸಿದ್ಧೇಶ್ವರ, ಹಿರೇಹಡಗಲಿ ಕಲ್ಲೇಶ್ವರ, ಹೂವಿನಹಡಗಲಿ ವಸ್ತುಸಂಗ್ರಹಾಲಯ, ಹರವಿ ಕಲ್ಲೇಶ್ವರ, ನಂದಿಗಾವಿ, ಬನ್ನಿಮಟ್ಟಿ, ಮೈಲಾರದ ಮೈಲಾರಲಿಂಗೇಶ್ವರ, ಮುಂತಾದ ಕಡೆ ನಾಗಶಿಲ್ಪಗಳನ್ನು ಕಾಣುತ್ತೇವೆ.

ಮಾಗಳದ ಮಹಾಲಿಂಗೇಶ್ವರ ದೇವಾಲಯದ ಮುಂಭಾಗ ಗಿಡದ ಕೆಳಗೆ ಏಳು ಹೆಡೆ ನಾಗಶಿಲ್ಪದ ಮೇಲೆ ಹೂವು ಮತ್ತು ಶಿವಲಿಂಗವನ್ನು ಚಿತ್ರಿಸಲಾಗಿದೆ.

**ಹನುಮಂತ ಮೂರ್ತಿಗಳು:** ಆಗಮಗಳಲ್ಲಿ ಹನುಮಂತನನ್ನು ಆಂಜನೇಯನ ಮಗನೆಂದು, ರುದ್ರಾಂಶ ಸಂಭೂತವೆಂದು, ಭಾವಿರುದ್ರನೆಂದು, ಸೂರ್ಯಪುತ್ರನೆಂದು, ವಾಯುಪುತ್ರನೆಂದು, ಮರುದ್ಗಣಗಳಿಗೆ ಸಂಬಂಧಿಸಿದವನೆಂದು, ರಾಮಭಕ್ತನೆಂದು, ಮುಖ್ಯಪ್ರಾಣನೆಂದು ವಿವಿಧ ಹೆಸರು ಗಳಿಂದ ಕರೆಯಲಾಗುತ್ತದೆ. ಮಾಧ್ವ ಸಂಪ್ರದಾಯದ ಪ್ರಭಾವದಿಂದಾಗಿ ಹನುಮಂತನ ಶಿಲ್ಪಗಳು ಕನ್ನಡನಾಡಿನಲ್ಲಿ ಹರಡಿದವು. ವ್ಯಾಸತೀರ್ಥರು ಹೋದಲ್ಲೆಲ್ಲಾ ಹನುಮಂತನ ಶಿಲ್ಪಗಳನ್ನು ಪ್ರತಿಷ್ಠಾಪನೆ ಮಾಡಿದರು. ಹನುಮಂತನನ್ನು ದುಷ್ಟಶಕ್ತಿಗಳನ್ನು, ಶತ್ರುಗಳನ್ನು ನಾಶ ಮಾಡುವವನು, ರೋಗ ಪೀಡೆಗಳನ್ನು ಪರಿಹರಿಸುವವನು, ಭಯ ಭೀತಿಯನ್ನು ಹೋಗಲಾಡಿಸುವವನು, ಬಯಕೆಗಳನ್ನು ತೀರಿಸುವವನು ಎಂದು ಇವೆಲ್ಲಾ ಈತನ ನೆರವಿನಿಂದಲೇ ನಡೆಯಬೇಕೆಂದು ಪ್ರತಿಯೊಂದು ಗ್ರಾಮದಲ್ಲಿ ಈತನನ್ನು ಆರಾಧಿಸುವ ಪದ್ಧತಿ ಇದೆ.[೨೪]

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಕಲ್ಯಾಣ ಚಾಲುಕ್ಯ, ವಿಜಯನಗರ ಕಾಲದ ಅನೇಕ ಹನುಮಂತನ ಮೂರ್ತಿಶಿಲ್ಪಗಳು ಕಂಡುಬಂದಿದ್ದು, ವೀರಾಂಜನೆಯ ಶಿಲ್ಪಗಳೇ ಹೆಚ್ಚಾಗಿ ಕಾಣಿಸುತ್ತವೆ. ಇವೆರಡು ಕಾಲಘಟ್ಟದ ಆಂಜನೇಯ ಶಿಲ್ಪಗಳು ಒಂದೇ ರೀತಿಯ ವಸ್ತುವನ್ನು ಹೊಂದಿದ್ದರೂ ಶಿಲೆ ಮಾತ್ರ ಬೇರೆಯದಾಗಿದೆ. ಹೂವಿನಹಡಗಲಿ ತಾಲೂಕಿನ ಇಟಗಿ, ಮದಲಘಟ್ಟ, ಉತ್ತಂಗಿ, ಮಾಗಳ, ಮೈಲಾರ ಮತ್ತು ಹೂವಿನಹಡಗಲಿಯ ವಸ್ತುಸಂಗ್ರಹಾಲಯದಲ್ಲಿರುವ ಹನುಮಂತನ ಮೂರ್ತಿಶಿಲ್ಪಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಇಟಗಿ, ಮದಲಘಟ್ಟ, ಉತ್ತಂಗಿಗಳಲ್ಲಿರುವ ಹನುಮಂತನ ಮೂರ್ತಿಶಿಲ್ಪಗಳು ವಿಜಯನಗರ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ.

ಇಟಗಿ ಗ್ರಾಮದ ಹನುಮಂತ ದೇವಾಲಯದ ಗರ್ಭಗೃಹದಲ್ಲಿರುವ ಹನುಮಂತನ ಮೂರ್ತಿಶಿಲ್ಪವು ಸುಮಾರು ನಾಲ್ಕು ಅಡಿ ಎತ್ತರದಲ್ಲಿದೆ. ಇದು ವಿಜಯನಗರ ಕಾಲದ್ದಾಗಿದ್ದು, ಸ್ಥಾನಿಕ ಭಂಗಿಯಲ್ಲಿರುವ ಈ ಹನುಮಂತನ ಮೂರ್ತಿಯು ಆಕರ್ಷಣೀಯವಾಗಿದೆ. ಹನುಮಂತನು ಕಿವಿಯಲ್ಲಿ ಕರ್ಣಕುಂಡಲ, ಕೊರಳಲ್ಲಿ ಕಂಠಹಾರ, ಯಜ್ಞೋಪವೀತ ಜಪಮಾಲೆ, ಉದರಬಂಧ, ಕಟಿಸೂತ್ರ, ತೋಳುಬಂದಿ, ಕೈಕಡಗ, ಕಾಲ್ಗಡಗ ಧರಿಸಿದ್ದಾನೆ. ಬಲಗೈ ಅಭಯ ಮುದ್ರೆಯಲ್ಲಿದೆ. ಎಡಗೈಯಿಂದ ಕೊರಳ ಭಾಗದಿಂದ ಸುತ್ತುವರಿದು ಬಂದಿರುವ ಮಾಲೆಯನ್ನು ಹಿಡಿದಿದ್ದಾನೆ. ಬಾಲವು ತಲೆಯ ಮೇಲಿಂದ ಸುತ್ತುವರಿದು ಭುಜದ ಹತ್ತಿರ ಬಂದಿದೆ. ಮುಖವನ್ನು ಎಡಭಾಗಕ್ಕೆ ತಿರುಗಿಸಿದೆ, ಸುತ್ತಲೂ ಪ್ರಭಾವಳಿ ಇದೆ.

ಮದಲಘಟ್ಟ ಗ್ರಾಮದಲ್ಲಿ ಸುಮಾರು ಮೂರು ಅಡಿ ಎತ್ತರವುಳ್ಳ ಕಲ್ಲುಬಂಡೆಯಲ್ಲಿ ನಿರ್ಮಿತವಾಗಿರುವ ಹನುಮಂತನ ಮೂರ್ತಿಯು ಸ್ಥಾನಿಕ ಭಂಗಿಯಲ್ಲಿದೆ. ಇದು ಸಹ ಈ ಮುಂದಿನ ಅಲಂಕರಣೆಯನ್ನು ಹೊಂದಿದೆ.

ಹನುಮಂತನ ಮೂರ್ತಿಶಿಲ್ಪವು ಸ್ಥಾನಿಕ ಭಂಗಿಯಲ್ಲಿದ್ದು ಸುಮಾರು ಮೂರು ಅಡಿ ಎತ್ತರದಲ್ಲಿದೆ. ಬಲಗೈ ಅಭಯ ಮುದ್ರೆಯಲ್ಲಿದ್ದರೆ, ಎಡಗೈಯಲ್ಲಿ ಗೊಂಡೆಯನ್ನು ಹಿಡಿದಿದ್ದು ನಡುವಿನಲ್ಲಿ ಇಟ್ಟುಕೊಂಡಿದ್ದಾನೆ. ಕರ್ಣಕುಂಡಲ, ಕೈಕಡಗ, ಕಾಲ್ಕಡಗ, ತೋಳುಬಂದಿ, ಕಟಿಸೂತ್ರ, ಜಪಮಾಲೆ, ಉದರಬಂಧ ಧರಿಸಿದ್ದಾನೆ. ಕಾಲ ಕೆಳಗಡೆ ಅಕ್ಷಯಕುಮಾರನನ್ನು ತುಳಿಯುತ್ತಿರುವ ಚಿತ್ರಣವಿದೆ. ಕೊರಳಲ್ಲಿ ಧರಿಸಿದ ಜಪಮಾಲೆ ಮೊಣಕಾಲಿನವರೆಗೂ ಇಳಿಬಿದ್ದಿದೆ. ಬಾಲವು ಮೇಲಿಂದ ಸುತ್ತುವರೆದು ನಡುವಿನ ತನಕ ಬಂದಿದೆ. ಎರಡು ಕಾಲುಗಳ ಮಧ್ಯ ಇಳಿವಸ್ತ್ರವು ಇಳಿಬಿದ್ದಿದೆ.

ಮಾಗಳ ಗ್ರಾಮದ ನರಸಿಂಹ ದೇವಾಲಯದ ಮುಂಭಾಗದ ಕಟ್ಟೆಯ ಮೇಲಿರುವ ಸ್ಥಾನಿಕ ಭಂಗಿಯ ಹನುಮಂತನ ಮೂರ್ತಿಶಿಲ್ಪವು ವಿಶೇಷವಾಗಿದ್ದು, ಸರಳ, ಸುಂದರವಾಗಿದೆ. ಇದು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ಆಂಜನೇಯನು ತಲೆಯ ಮೇಲೆ ಮೂರು ಹಂತದ ಕಿರೀಟವನ್ನು ಧರಿಸಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲಗಳು ಇಳಿಬಿದ್ದಿವೆ. ಕೊರಳಲ್ಲಿ ಕಂಠಹಾರ, ಜಪಮಾಲೆ, ಕಟಿಸೂತ್ರ, ಉದರಬಂಧ, ಕೈಕಡಗ, ಕಾಲ್ಕಡಗ, ತೋಳುಬಂದಿ, ಗೆಜ್ಜೆಯನ್ನು

ಧರಿಸಿದ್ದಾನೆ. ಬಲಗೈಯು ಅಭಯ ಮುದ್ರೆಯಲ್ಲಿದ್ದು ಬಾಲಕ್ಕಿಂತ ಮುಂಚಾಚಿದೆ. ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ.

ಕತ್ತೆಬೆನ್ನೂರು ಗ್ರಾಮದಲ್ಲಿ ಸ್ಥಾನಿಕ ಭಂಗಿಯಲ್ಲಿರುವ ಎರಡು ಅಡಿ ಎತ್ತರವುಳ್ಳ ವಿಜಯನಗರ ಕಾಲದ ಹನುಮಂತನ ಮೂರ್ತಿಶಿಲ್ಪವು ವಿಭಿನ್ನವಾಗಿದೆ. ಹನುಮಂತನು ತಲೆಯ ಮೇಲೆ ಏಕಹಂತದ ಕಿರೀಟವನ್ನು ಧರಿಸಿದ್ದಾನೆ. ಕರ್ಣಕುಂಡಲ, ಕೊರಳಲ್ಲಿ ಕಂಠಹಾರ, ಯಜ್ಞೋಪವೀತ, ಜಪಮಾಲೆ, ಉದರಬಂಧ, ಕಟಿಸೂತ್ರ, ಮೊಳಕಾಲಿನವರೆಗೂ ಜಪಮಾಲೆ ವಿಸ್ತರಿಸಿದೆ. ಬಲಗೈ ಅಭಯಮುದ್ರೆಯಲ್ಲಿದೆ. ಎಡಗೈಯಲ್ಲಿ ಗದೆಯನ್ನು ಹಿಡಿದಿದ್ದು ಆ ಕೈಯನ್ನು ನಡುವಿನ ಮೇಲಿಟ್ಟುಕೊಂಡಿದ್ದಾನೆ. ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದು, ಮುಖವು ಎಡಭಾಗಕ್ಕೆ ತಿರುಗಿದೆ. ಬಾಲವು ಮೇಲ್ಭಾಗದಿಂದ ಸುತ್ತುವರಿದು ಎದೆಯ ಭಾಗಕ್ಕೆ ಬಂದಿದೆ. ಕಾಲಬಳಿ ಅಕ್ಷಯಕುಮಾರ ಸಿಕ್ಕಿಕೊಂಡಿದ್ದಾನೆ.

ಹೂವಿನಹಡಗಲಿಯ ವಸ್ತುಸಂಗ್ರಹಾಲಯದಲ್ಲಿರುವ ಕ್ರಿ.ಶ.೧೧ನೆಯ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯುಳ್ಳ ಹನುಮಂತನ ಮೂರ್ತಿಶಿಲ್ಪವನ್ನು ಕಪ್ಪುಕಲ್ಲಿನಲ್ಲಿ ಕಂಡರಿಸಲಾಗಿದೆ. ಇದು ಸರಳವಾಗಿದೆ. ಈ ಹನುಮಂತನು ನೇರವಾಗಿ ನೋಡುತ್ತಿದ್ದು ತನ್ನ ಎಡಗಾಲನ್ನು ಎತ್ತರದಲ್ಲಿಟ್ಟು ಕೊಂಡಿದ್ದಾನೆ. ತಲೆಯ ಮೇಲೆ ವೃತ್ತಾಕಾರವುಳ್ಳ ಕಿರೀಟ, ಕರ್ಣಕುಂಡಲ, ಮಣಿಸರ, ಕಟಿಸೂತ್ರ, ಜಪಮಾಲೆ, ಕಂಠಹಾರವನ್ನು ತೊಟ್ಟಿದ್ದಾನೆ. ಎರಡು ಕಾಲುಗಳ ಮಧ್ಯದಲ್ಲಿ ವಸ್ತ್ರ ಇಳಿಬಿಟ್ಟಿದೆ. ಕೈಕಡಗ, ಕಾಲ್ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಗದೆ ಹಿಡಿದಿದ್ದು, ಎಡಗೈಯು ಅಭಯಮುದ್ರೆಯಲ್ಲಿದೆ. ಬಾಲವು ತಲೆಯವರೆಗೆ ವಿಸ್ತರಿಸಿಕೊಂಡಿದೆ.

ನಂದಿಗಾವಿಯ ವಿಜಯನಗರೋತ್ತರ ಕಾಲದ ಕಣಶಿಲೆಯ ಆಂಜನೇಯನು ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಸಂಜೀವಿನಿ ಗಿಡವನ್ನು ಹಿಡಿದು ಸೊಂಟದ ಮೇಲೆ ಕೈ ಇಟ್ಟುಕೊಂಡಿದ್ದಾನೆ. ತಲೆಯಲ್ಲಿ ಜುಟ್ಟು ಇದೆ. ಬಾಲಕ್ಕೆ ಗಂಟೆಯಿದೆ. ಕರ್ಣಕುಂಡಲ, ಕಂಠಹಾರ, ಹಾರ, ವೈಜಯಂತಿಮಾಲ, ಕಾಲ್ಕಡಗ, ಕೈಕಡಗಗಳನ್ನು ಧರಿಸಿರುವನು. ಕಾಲಿನ ಬಳಿ ಕೋತಿಯೊಂದು ಮತ್ತು ಕಾಲಡಿಯಲ್ಲಿ ಅಕ್ಷಯಕುಮಾರನ ದೇಹವಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

**ಲಕ್ಷ್ಮೀನಾರಾಯಣ ಶಿಲ್ಪ:** ಹೂವಿನಹಡಗಲಿಯ ತಾಲೂಕಿನಲ್ಲಿ ಕಂಡುಬಂದಿರುವ ಹಿರೇ ಹಡಗಲಿಯ ಲಕ್ಷ್ಮೀನಾರಾಯಣ ದೇವಾಲಯದ ಗರ್ಭಗೃಹದಲ್ಲಿರುವ ಲಕ್ಷ್ಮೀನಾರಾಯಣ ಮೂರ್ತಿ ಯನ್ನು ಕಪ್ಪುಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಇದರ ಕಾಲವು ಕ್ರಿ.ಶ. ಸುಮಾರು ೧೨ನೇ ಶತಮಾನವಾಗಿದೆ. ಈ ನಾರಾಯಣ ಮೂರ್ತಿಶಿಲ್ಪವನ್ನು ಒಂದು ಅಡಿ ಎತ್ತರವುಳ್ಳ ಗರುಡಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ನಾರಾಯಣ ಚತುರ್ಭುಜನಾಗಿದ್ದು, ಹಿಂದಿನ ಕೈಗಳಲ್ಲಿ ಶಂಖಚಕ್ರಗಳಿವೆ. ಒಂದು ಕೈಯು ಅಭಯ ಹಸ್ತದಲ್ಲಿದ್ದರೆ,

ಇನ್ನೊಂದು ಕೈಯಿಂದ ತನ್ನ ಎಡತೊಡೆಯ ಮೇಲೆ ಕುಳಿತಿರುವ ಲಕ್ಷ್ಮಿಯನ್ನು ಹಿಡಿದಿದ್ದಾನೆ. ಕಿರೀಟಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿಸೂತ್ರ, ತೋಳುಬಂದಿ, ಕೈಕಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಹಣೆಯಲ್ಲಿ ತ್ರಿನಾಮ ತಿಲಕ, ಕಿವಿಯಲ್ಲಿ ವರ್ತುಲಾಕಾರದ ಓಲೆಗಳಿವೆ. ತಲೆಯ ಮೇಲೆ ಮೂರು ಹಂತದ ಕಿರೀಟವಿದೆ. ನಡುವಿನಲ್ಲಿ ಇಳಿಬಿಟ್ಟ ವಸ್ತ್ರಾಭರಣಗಳಿವೆ. ಲಕ್ಷ್ಮಿಯೂ ಸಹ ಅನೇಕ ಅಲಂಕಾರ, ವಸ್ತ್ರಾಭರಣಗಳಿಂದ ಸರ್ವಾಲಂಕೃತಗೊಂಡಿದ್ದಾಳೆ. ತಲೆಯ ಮೇಲೆ ಕಿರೀಟ, ಕೊರಳಲ್ಲಿ ಹಾರ, ತೋಳುಬಂದಿ, ಕೈಬಳೆ, ಕಾಲ್ಗಡಗಗಳನ್ನು ಧರಿಸಿದ್ದಾಳೆ. ಈ ಮೂರ್ತಿಶಿಲ್ಪದ ಸುತ್ತ ಪ್ರಭಾವಳಿ ರಚನೆಯಿದೆ.

**ನರಸಿಂಹ ಶಿಲ್ಪ:** ನರಸಿಂಹನ ಶಿಲ್ಪಗಳಲ್ಲಿ ಮೂರು ರೀತಿಯ ವೈವಿಧ್ಯತೆಯನ್ನು ಕಾಣಬಹುದು. ಅವು ಪ್ರಸನ್ನ ನರಸಿಂಹ, ಲಕ್ಷ್ಮೀನರಸಿಂಹ ಮತ್ತು ಉಗ್ರನರಸಿಂಹಗಳಾಗಿವೆ.

ಸುಂದರವಾದ ಲಕ್ಷ್ಮೀನರಸಿಂಹ ಮೂರ್ತಿಶಿಲ್ಪಗಳು ಹೊಸಳ್ಳಿ, ಹಿರೇಹಡಗಲಿ ಮತ್ತು ಕೊಟ್ನೆಕಲ್ಲು ಗ್ರಾಮಗಳಲ್ಲಿ ಕಂಡುಬಂದಿವೆ. ಇವೆರಡು ಗ್ರಾಮಗಳಲ್ಲಿರುವ ಮೂರ್ತಿಶಿಲ್ಪಗಳು ಒಂದೇ ರೀತಿಯಾಗಿವೆ. ಇವೆರಡು ಶಿಲ್ಪಗಳನ್ನು ಕಪ್ಪುಕಲ್ಲಿನಿಂದ ಕಂಡರಿಸಲ್ಪಟ್ಟಿದೆ. ಲಕ್ಷ್ಮೀನರಸಿಂಹನು ಪದ್ಮಾಸನದಲ್ಲಿ ಕುಳಿತಿದ್ದು, ಚತುರ್ಭುಜವನ್ನು ಹೊಂದಿದ್ದಾನೆ. ನರಸಿಂಹನ ತಲೆಯು ಸಿಂಹಮುಖವನ್ನು ಹೊಂದಿದೆ. ಕೊರಳು ಸಹ ಸಿಂಹದಂತೆ ಇದೆ. ಈತನ ನಾಲ್ಕು ಕೈಗಳಲ್ಲಿ ಕ್ರಮವಾಗಿ ಚಕ್ರ, ಶಂಖ, ಒಂದು ಕೈಯಿಂದ ತನ್ನ ಎಡತೊಡೆಯ ಮೇಲೆ ಕುಳಿತಿರುವ ಲಕ್ಷ್ಮಿಯನ್ನು ಹಿಡಿದಿದ್ದಾನೆ. ಇನ್ನೊಂದು ಕೈಯು ಅಭಯಮುದ್ರೆಯಲ್ಲಿದೆ. ಕರಂಡಮಕುಟ, ಕೊರಳಹಾರ, ಯಜ್ಞೋಪವೀತ, ಉದರಬಂಧ, ಕಟಿಸೂತ್ರ, ಜಪಮಾಲೆ, ಕೈಕಡಗ, ಕಾಲ್ಕಡಗ, ತೋಳುಬಂದಿ, ಭುಜಬಂದಿಯನ್ನು ಧರಿಸಿದ್ದಾನೆ. ನಾರಾಯಣನ ಎಡತೊಡೆಯ ಮೇಲೆ ಆಸೀನಳಾಗಿರುವ ಲಕ್ಷ್ಮಿಯು ಅನೇಕ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಇವಳು ತಲೆಯ ಹಿಂಭಾಗದಲ್ಲಿ ಚಕ್ರ, ಕಿವಿಯೋಲೆ, ಕೊರಳಹಾರ, ಮಣಿಸರ, ಮಾಲೆ, ನಡುಪಟ್ಟಿ, ಇಳಿವಸ್ತ್ರವನ್ನು ಧರಿಸಿದ್ದಾಳೆ. ಅಲ್ಲದೆ ಕೈಕಡಗ, ಕಾಲ್ಕಡಗ ತೋಳುಬಂದಿಯನ್ನು ಧರಿಸಿದ್ದು, ಎಡಗೈಯಲ್ಲಿ ಕುಂಡಲವನ್ನು ಹಿಡಿದಿದ್ದಾಳೆ. ಈ ಮೂರ್ತಿಯ ಸುತ್ತಲೂ ಮಕರತೋರಣವಿದೆ. ಎತ್ತರದ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿರುವ ಲಕ್ಷ್ಮಿನರಸಿಂಹ ಮೂರ್ತಿಯು ಆಕರ್ಷಕವಾಗಿದೆ.

**ಉಗ್ರನರಸಿಂಹ:** ರಂಗಾಪುರ ಗ್ರಾಮದ ಉಗ್ರನರಸಿಂಹ ದೇವಾಲಯದ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಪ್ರತಿಷ್ಠಾಪಿಸಲಾಗಿರುವ ಉಗ್ರನರಸಿಂಹನ ಮೂರ್ತಿಶಿಲ್ಪವು ತಾಲೂಕಿನಲ್ಲಿಯೇ ಸಿಕ್ಕಂತಹ ಆಕರ್ಷಕ ಶಿಲ್ಪಗಳಲ್ಲೊಂದಾಗಿದೆ. ಈ ಉಗ್ರನರಸಿಂಹ ಮೂರ್ತಿಶಿಲ್ಪವನ್ನು ಕಪ್ಪುಕಲ್ಲಿನಲ್ಲಿ ಕಂಡರಿಸಿದೆ. ಇದು ಸುಮಾರು ಕ್ರಿ.ಶ.೧೧-೧೨ನೇ ಶತಮಾನ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಉಗ್ರನರಸಿಂಹನು ಚತುರ್ಭುಜನಾಗಿದ್ದಾನೆ. ಮುಖವು ಸಿಂಹಮುಖವಾಗಿದ್ದು, ಮುಂದಿನ ಎರಡು ಕೈಗಳಿಂದ ತನ್ನ ತೊಡೆಯ ಮೇಲೆ ಹಾಕಿಕೊಂಡಿರುವ ಹಿರಣ್ಯಕಶ್ಯಪುವಿನ ಹೊಟ್ಟೆ ಬಗೆಯುತ್ತಿರುವ

ಚಿತ್ರಣ ಭಯಾನಕವಾಗಿದೆ. ಹಿರಣ್ಯಕಶ್ಯಪುವಿನ ಹೊಟ್ಟೆ ಭಾಗದಿಂದ ಕರುಳುಗಳು ಹೊರಬಂದಂತೆ ಇವೆ. ನರಸಿಂಹನು ಸಿಂಹಮುಖವನ್ನು ಹೊಂದಿದ್ದರಿಂದ ಘರ್ಜಿಸುವಂತೆ ಕಾಣಿಸುತ್ತಿದೆ. ಇವನು ಕಂಠಹಾರ, ಯಜ್ಞೋಪವೀತ, ಜಪಮಾಲೆ, ಉದರಬಂಧ, ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಇವನು ತನ್ನ ನಾಲ್ಕು ಕೈಗಳಲ್ಲಿ ಪದ್ಮ, ಪಾಶ, ಶಂಖ, ಚಕ್ರವನ್ನು ಹಿಡಿದಿದ್ದಾನೆ. ಉಗ್ರನರಸಿಂಹನ ತೊಡೆಯ ಮೇಲಿರುವ ಹಿರಣ್ಯಕಶ್ಯಪು ಸಹ ಕಿರೀಟಧಾರಿಯಾಗಿದ್ದು, ಕೈಗಳಲ್ಲಿ ಗದೆ, ಕೊರಳಲ್ಲಿ ಮಣಿಸರ, ನಡುವಸ್ತ್ರ, ನಡುಪಟ್ಟಿ, ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಉಗ್ರನರಸಿಂಹನ ಇಕ್ಕೆಲಗಳಲ್ಲಿ ಸ್ತ್ರೀಯರ ಉಬ್ಬುಶಿಲ್ಪಗಳಿವೆ. ಇಡೀ ಮೂರ್ತಿಶಿಲ್ಪದ ಸುತ್ತಲೂ ಹೂಬಳ್ಳಿಯ ತೋರಣವಿದ್ದು ನೋಡುಗರನ್ನು ಆಕರ್ಷಿಸುತ್ತದೆ.

**ವೀರಭದ್ರ ಶಿಲ್ಪಗಳು:** ಸೋಗಿಯ ವೀರಭದ್ರೇಶ್ವರ ದೇವಾಲಯದ ಗರ್ಭಗೃಹದಲ್ಲಿ ಸ್ಥಾನಿಕ ಭಂಗಿಯಲ್ಲಿರುವ ವೀರಭದ್ರನ ಮೂರ್ತಿಶಿಲ್ಪವಿದೆ. ಇದು ಕ್ರಿ.ಶ.೧೨-೧೩ನೆಯ ಶತಮಾನದ್ದಾಗಿದೆ. ವೀರಭದ್ರನು ದ್ವಿಬಾಹು ಭುಜವನ್ನು ಹೊಂದಿದ್ದು, ಕೈಗಳಲ್ಲಿ ಖಡ್ಗ, ಗುರಾಣಿ, ಬಿಲ್ಲು, ಬಾಣಗಳನ್ನು ಹಿಡಿದಿದ್ದಾನೆ. ತಲೆಯ ಮೇಲೆ ಕಪಾಲಭೂಷಿತ ಕಿರೀಟವಿದೆ. ಕೊರಳಲ್ಲಿ ಮಣಿಸರ, ಹಾರ, ಕರಂಡಮಕುಟ, ಕಂಠಹಾರ, ಜಪಮಾಲೆ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಹಾಗೂ ರುಂಡಮಾಲೆಯನ್ನು ಧರಿಸಿದ್ದಾನೆ. ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಕೆಳಭಾಗದಲ್ಲಿ ದಕ್ಷಬ್ರಹ್ಮನಿದ್ದಾನೆ. ಈ ಮೂರ್ತಿಯ ಸುತ್ತಲೂ ಪ್ರಭಾವಳಿಯ ರಚನೆಯಿದೆ.

ಹೂವಿನಹಡಗಲಿ ತಾಲೂಕಿನ ಮೈಲಾರ, ಮಾನ್ಯರಮಸಲವಾಡ, ಹೊಳಗುಂದಿ, ಹಿರೇಹಡಗಲಿ, ಹೊಳಲು, ಬೂದನೂರು, ಮಾಗಳ ಮತ್ತು ಸೋಗಿಗಳಲ್ಲಿ ಕಂಡುಬಂದಿರುವ ವೀರಭದ್ರನ ಮೂರ್ತಿಶಿಲ್ಪಗಳು ಉತ್ತಮವಾದ ಕೆತ್ತನೆಗಳಿಂದ ಕೂಡಿವೆ. ಇವುಗಳು ಕಲ್ಯಾಣ ಚಾಲುಕ್ಯ ಮತ್ತು ವಿಜಯನಗರ ಕಾಲದವುಗಳಾಗಿವೆ.

ಹೊಳಗುಂದಿ ವೀರಭದ್ರೇಶ್ವರ ದೇವಾಲಯದಲ್ಲಿರುವ ವೀರಭದ್ರನು ಸ್ಥಾನಿಕಭಂಗಿಯಲ್ಲಿದ್ದಾನೆ. ಇದನ್ನು ಕಪ್ಪುಕಲ್ಲಿನಲ್ಲಿ ಕಂಡರಿಸಲ್ಪಟ್ಟಿದ್ದು, ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೊಂದಿದೆ. ಇದರ ಕಾಲವನ್ನು ಕ್ರಿ.ಶ. ೧೧-೧೨ನೇ ಶತಮಾನವೆಂದು ನಿರ್ಧರಿಸಬಹುದು. ಸ್ಥಾನಿಕ ಭಂಗಿಯಲ್ಲಿರುವ ವೀರಭದ್ರನು ದ್ವಿಬಾಹು ಭುಜವುಳ್ಳವನಾಗಿದ್ದಾನೆ. ತಲೆಯ ಮೇಲೆ ಕಪಾಲಭೂಷಿತ ಕಿರೀಟ, ಕಿವಿಯೋಲೆ, ಕೊರಳಹಾರ, ಕಂಠಹಾರ, ಜಪಮಾಲೆ, ಕಟಿಸೂತ್ರ ಮತ್ತು ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೊರಳಿನಿಂದ ಪಾದದವರೆಗೆ ಚಾಚಿಕೊಂಡಿರುವ ರುಂಡಮಾಲೆಯಿದೆ. ಕಾಲ್ಕಡಗ, ಕೈಗಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಕೈಗಳಲ್ಲಿ ಖಡ್ಗ, ಖೇಟಕ, ಬಾಣ, ಬಿಲ್ಲುಗಳನ್ನು ಹಿಡಿದಿದ್ದಾನೆ. ಮೂರ್ತಿಯ ಸುತ್ತಲೂ ಪ್ರಭಾವಳಿ ರಚನೆಯಿದ್ದು, ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ.

ಹಿರೇಹಡಗಲಿ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿರುವ ವೀರಭದ್ರನ ಮೂರ್ತಿಶಿಲ್ಪವು ಸ್ಥಾನಿಕ ಭಂಗಿಯಲ್ಲಿದ್ದು, ಕಪ್ಪುಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯನ್ನು

ಹೊಂದಿದ್ದು, ಇದರ ಕಾಲವನ್ನು ಕ್ರಿ.ಶ.೧೨-೧೩ನೇ ಶತಮಾನವೆಂದು ನಿರ್ಧರಿಸಲಾಗಿದೆ. ವೀರಭದ್ರನು ಸಮಭಂಗಿಯಲ್ಲಿ ನಿಂತಿದ್ದು, ತಲೆಯ ಮೇಲೆ ಏಕಹಂತದ ಕಿರೀಟ, ಕಿವಿಯೋಲೆ, ಕೊರಳಹಾರ, ಮಣಿಸರ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ತೊಟ್ಟಿರುವ ವಸ್ತ್ರವು ಎರಡು ಕಾಲುಗಳ ಮಧ್ಯೆ ಇಳಿಬಿದ್ದಿದೆ. ಎರಡು ಕೈಗಳಲ್ಲಿ ಕ್ರಮವಾಗಿ ಬಿಲ್ಲು, ಬಾಣ, ಒಂದು ಕೈಯಲ್ಲಿ ಖಡ್ಗ, ಇನ್ನೊಂದು ಕೈಯನ್ನು ಕೆಳಗೆ ಇಳಿಬಿಟ್ಟಿದ್ದು ಆ ಕೈಯು ಖೇಟದ ಮೇಲಿದೆ. ಕಾಲ್ಕಡಗ, ಕೈಗಡಗ, ತೋಳುಬಂದಿಯನ್ನು ತೊಟ್ಟಿರುವ ವೀರಭದ್ರನು ಭಾವಪೂರ್ಣವಾಗಿ ಕಾಣಿಸುತ್ತಾನೆ. ಮೂರ್ತಿಯ ಪಕ್ಕದಲ್ಲಿ ದಕ್ಷಬ್ರಹ್ಮನಿದ್ದಾನೆ. ಇದರ ಸುತ್ತಲೂ ಪ್ರಭಾವಳಿ ರಚನೆಯಿದೆ.

**ದಕ್ಷ:** ದಕ್ಷನ ಸಂಹಾರಕ್ಕಾಗಿ ಶಿವನು ವೀರಭದ್ರ ಅವತಾರವನ್ನು ತಾಳಿದ. ಸಾಧಾರಣವಾಗಿ ದಕ್ಷನಿಗೆ ಆಡಿನ ಮುಖವಿರುತ್ತದೆ. ಕಲ್ಯಾಣ ಚಾಲುಕ್ಯರ ಅಪರೂಪದ ದಕ್ಷನ ಶಿಲ್ಪವು ಅಂಗೂರು ಕಲ್ಲೇಶ್ವರ ದೇವಾಲಯದಲ್ಲಿದೆ. ಇಲ್ಲಿ ದಕ್ಷನು ತನ್ನ ಪತ್ನಿಯೊಂದಿಗೆ ತ್ರಿಭಂಗಿಯಲ್ಲಿ ನಿಂತಿದ್ದಾನೆ. ಇಬ್ಬರೂ ಕ್ರಮವಾಗಿ ತಮ್ಮ ಎಡ, ಬಲ ತೋಳುಗಳಿಂದ ಒಬ್ಬರನ್ನೊಬ್ಬರು ಬಳಸಿ ನಿಂತಿದ್ದಾರೆ. ಆಕೆಯ ಒಂದು ಕೈಯಲ್ಲಿ ಪುಷ್ಪವಿದೆ. ದಕ್ಷನ ಮುಖವು ಆಡಿನ ಮುಖವಾಗಿದೆ. ಅದರ ಮೇಲೆ ಚಿಕ್ಕ ಕಿರೀಟವಿದೆ. ಇಬ್ಬರೂ ಚತುರ್ಭುಜರಾಗಿದ್ದಾರೆ. ಮುಂದಿನ ಕೈಗಳು ತ್ರುಟಿತವಾಗಿವೆ. ಸರಳ ಪ್ರಭಾವಳಿ ಇರುವ ಇದು ಒಂದು ಅಪರೂಪದ ಮೂರ್ತಿಶಿಲ್ಪವಾಗಿದೆ.

**ಮಹಿಷಮರ್ದಿನಿ:** ಶಕ್ತಿದೇವತೆಯಾದ ಈಕೆಗೆ ಶಿಲ್ಪಶಾಸ್ತ್ರದ ಪ್ರಕಾರ ಹತ್ತು ಕೈಗಳು, ಮೂರು ಕಣ್ಣುಗಳಿರುತ್ತವೆ. ಸುಮಾರು ೧೦೮ ಶಕ್ತಿದೇವತೆಗಳಲ್ಲೆಲ್ಲ ವಿಶೇಷ ವ್ಯಕ್ತಿತ್ವವುಳ್ಳವಳೆಂದರೆ ಮಹಿಷಾಸುರ ಮರ್ದಿನಿಯೇ ಆಗಿರುವಳು.[೨೫]

ಐತಿಹ್ಯದ ಪ್ರಕಾರ ಮಹಿಷನು ಸ್ತ್ರೀಯರನ್ನು ಹೊರತುಪಡಿಸಿ ದೇವ ಗಂಧರ್ವರಾದಿಯಾಗಿ ಯಾರಿಂದಲೂ ಸಾವು ಬರಬಾರದೆಂಬ ವರವನ್ನು ಪಡೆದಿದ್ದನು. ಇವನು ಮೂರು ಲೋಕಗಳನ್ನು ವಶಪಡಿಸಿಕೊಂಡು ದೇವತೆಗಳನ್ನು ಆತಂಕಕ್ಕೀಡು ಮಾಡಿದನು. ಇದರಿಂದ ಅವಮಾನಿತರಾದ ದೇವತೆಗಳು ತಮ್ಮ ಶಕ್ತಿಹೀನ ವೀರ್ಯವನ್ನು ಹೊರಹಾಕಿದರು. ಅದು ಒಂದುಗೂಡಿ ಸುಂದರ ಹೆಣ್ಣಿನ ರೂಪ ತಳೆಯಿತು. ಅವಳು ಶಿವನಿಂದ ತ್ರಿಶೂಲ, ವಿಷ್ಣುವಿನಿಂದ ಚಕ್ರ, ಯಮನಿಂದ ಕೆದರಿದ ಜಟರಾಶಿ ಮತ್ತು ಇತರರಿಂದ ಸೂಕ್ತ ಆಯುಧಗಳನ್ನು ಪಡೆದು ದುಷ್ಟ ಮಹಿಷಾಸುರನನ್ನು ತನ್ನ ಮಾಯಜಾಲದಲ್ಲಿ ಬಂಧಿಸಿ ಸಂಹರಿಸಿದಳು.

ಹಿರೇಹಡಗಲಿ ಗ್ರಾಮದಲ್ಲಿ ಕ್ರಿ.ಶ.೧೧-೧೨ನೇ ಶತಮಾನದ ಮಹಿಷಮರ್ದಿನಿಯ ಶಿಲ್ಪವಿದೆ. ಇದು ಕಪ್ಪುಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ತ್ರಿಭಂಗಿಯಲ್ಲಿ ನಿಂತಿರುವ ಈ ಮಹಿಷಮರ್ದಿನಿ ಅಷ್ಟವಿಭುಜೆಯಾಗಿದ್ದು ಕೈಗಳಲ್ಲಿ ಆಯುಧಗಳಾದ ಪಾಶ, ಖಡ್ಗ, ಕತ್ತಿ, ಬಿಲ್ಲು(ಧನಸ್ಸು), ಗುರಾಣಿ, ಶಂಖ, ಚಕ್ರ ಮತ್ತು ಖೇಟಕವನ್ನು ಹಿಡಿದಿದ್ದಾಳೆ. ಮಹಿಷಮರ್ದಿನಿಯು ತ್ರಿಭಂಗಿಯಲ್ಲಿದ್ದು, ಮಹಿಷಾಸುರನನ್ನು ಕೊಲ್ಲುತ್ತಿರುವಳು. ಮರ್ದಿನಿಯು ತನ್ನ ಬಲಗೈಯಲ್ಲಿರುವ

ಖಡ್ಗ ಮತ್ತು ಕತ್ತಿಯಿಂದ ತಿವಿಯುತ್ತಿದ್ದಾಳೆ. ಮರ್ದಿನಿಯು ತನ್ನ ಬಲಗಾಲನ್ನು ಮಹಿಷಾಸುರನ ಮೇಲಿಟ್ಟುಕೊಂಡು ನಿಂತಿದ್ದಾಳೆ. ಮರ್ದಿನಿಯು (ದುರ್ಗಿ) ತಲೆಯ ಮೇಲೆ ಕಪಾಲಭೂಷಿತ ಕಿರೀಟ, ಕಿವಿಯೋಲೆ, ರತ್ನಹಾರ, ಕೊರಳ ಹಾರ, ಸ್ತನಪಟ್ಟಿ, ಕಟಿವಸ್ತ್ರ, ಮಣಿಸರ, ನಡುಪಟ್ಟಿ ಹಾಗೂ ಇನ್ನೂ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ಕೈಗಳಲ್ಲಿ ಬಳೆ, ಕಾಲುಗಳಲ್ಲಿ ಕಡಗ, ತೋಳುಬಂದಿಯನ್ನು ಧರಿಸಿದ್ದಾಳೆ. ಈ ಮೂರ್ತಿಶಿಲ್ಪವನ್ನು ಒಂದು ಅಡಿ ಎತ್ತರವುಳ್ಳ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ.

ಬೆಟ್ಟದ ಮಲ್ಲೇಶ್ವರ ದೇವಾಲಯದ ಅವರಣದಲ್ಲಿರುವ ಮಹಿಷಮರ್ದಿನಿಯ ಶಿಲ್ಪವು ಚತುರ್ಭುಜೆಯಾಗಿದ್ದು, ಕೈಗಳಲ್ಲಿ ಆಯುಧಗಳಾದ ಪಾಶ, ಖಡ್ಗ, ಪರಶುಗಳನ್ನು ಹಿಡಿದಿದ್ದು, ಬಲಗೈ ಮಹಿಷನನ್ನು ಖಡ್ಗದಿಂದ ತಿವಿಯುತ್ತಾ ಎಡಗೈಯಲ್ಲಿ ಮಹಿಷನ ಬಾಯಿಯನ್ನು ಒತ್ತಿ ಹಿಡಿದಿರುವಳು. ಎಡಗಾಲನ್ನು ಮಹಿಷನ ಬೆನ್ನ ಮೇಲಿಟ್ಟುಕೊಂಡು ನಿಂತಿದ್ದಾಳೆ. ತಲೆಯ ಮೇಲೆ ಕಿರೀಟ, ಕಿವಿಯೋಲೆ, ಕೈಕಡಗ, ಕಂಠಹಾರಗಳನ್ನು ಧರಿಸಿರುವಳು.

**ಕಾಳಿಯ ಶಿಲ್ಪಗಳು:** ಕಾಳಿಯು ದುರ್ಗೆಯ ವಿವಿಧ ಅವತಾರಗಳಲ್ಲಿ ಒಬ್ಬಳಾಗಿದ್ದು ದಕ್ಷಿಣ ಭಾರತದಲ್ಲಿ ಇವಳನ್ನು ಚಾಮುಂಡಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಇವು ಸಾಮಾನ್ಯವಾಗಿ ಭಯಾನಕವಾಗಿರುತ್ತವೆ. ಕೋರೆದಾಡಿಗಳಿರುವ ಬಾಯಿ, ಹೊರಚಾಚಿದ ನಾಲಿಗೆ, ಕೆದರಿದ ಜಟಾರಾಶಿ, ಬುಸುಗುಟ್ಟುವ ಸರ್ಪಗಳು, ಹಣೆಯ ಮೇಲೆ ಕೆಂಡಗಣ್ಣು. ೪, ೮, ೧೦, ೧೨, ೧೬ ಕೈಗಳಿದ್ದು, ಅವುಗಳಲ್ಲಿ ಶಂಖ, ಚಕ್ರ, ಬಿಲ್ಲು, ಬಾಣ, ಖಡ್ಗ, ಖೇಟಕ ಮೊದಲಾದ ಆಯುಧಗಳಿರುವುದು ಇವುಗಳ ವೈಶಿಷ್ಟ್ಯ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಕಾಳಿಯ ಶಿಲ್ಪವು ಕ್ರಿ.ಶ.೧೨ನೇ ಶತಮಾನದ್ದಾಗಿದೆ. ಕಪ್ಪುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪವು ಪದ್ಮಾಸನದಲ್ಲಿದ್ದು, ದ್ವಿಬಾಹುವುಳ್ಳವಳಾಗಿದ್ದಾಳೆ. ಒಂದು ಕೈಯಲ್ಲಿ ಖಡ್ಗ ಮತ್ತೊಂದು ಕೈ ತೊಡೆಯ ಮೇಲೆ ಇಟ್ಟಿದ್ದಾಳೆ. ಕರಂಡಮಕುಟ, ವರ್ತುಲಾಕಾರದ ಓಲೆ, ಕೊರಳಲ್ಲಿ ಪದಕ ಸರ, ಮಣಿಸರ, ಕೈಬಳೆ, ಸೊಂಟಪಟ್ಟಿ, ಕಾಲ್ಕಡಗ, ಗೆಜ್ಜೆ ಧರಿಸಿದ್ದಾಳೆ.

**ಭೈರವ/ಭೈರವಿಯ ಶಿಲ್ಪಗಳು:** ಶಿವಪುರಾಣದ ಪ್ರಕಾರ ಭೈರವ ಸಂಹಾರ ಲೀಲಾಮೂರ್ತಿಗಳಲ್ಲಿ ಒಬ್ಬರು. ಭೂತ ಪ್ರೇತ ಪಿಶಾಚಿಗಳನ್ನು ಓಡಿಸಲು ಭೈರವನ ಪೂಜೆ ಪ್ರಸಿದ್ಧವಾಗಿದೆ. ಕ್ಷೇತ್ರಪಾಲಕನೆಂದು ಕರೆಯಲಾಗುವ ಭೈರವನು ಕೈಯಲ್ಲಿ ಕಪಾಲ ಹಿಡಿದು ದಂಡಪಾಣಿಯಾಗಿ ಸರ್ಪವನ್ನು ಯಜ್ಞೋಪವೀತ ವಾಗಿ ಧರಿಸಿ ಯಾಗವನ್ನು ನಾಶಪಡಿಸುವವನು.

ಶಿವ/ಪಾರ್ವತಿಯರ ಉಗ್ರಸ್ವರೂಪದ ಒಂದು ಪ್ರತಿಮಾ ಲಕ್ಷಣವೇ ಭೈರವ/ಭೈರವಿಯ ಶಿಲ್ಪ. ಈ ಶಿಲ್ಪದಲ್ಲಿ ಭೈರವ/ಭೈರವಿಯ ಹಿಂದಿನ ಕೈಗಳಲ್ಲಿ ತ್ರಿಶೂಲ, ಡಮರು ಹಾಗೂ ಮುಂದಿನ

ಕೈಗಳಲ್ಲಿ ಖಡ್ಗ ಮತ್ತು ಕಪಾಲಗಳು ಇರುತ್ತವೆ. ಸಾಧಾರಣವಾಗಿ ಭೈರವ/ಭೈರವಿಯ ಶಿಲ್ಪ ಸಮಭಂಗಿಯಲ್ಲಿರುತ್ತದೆ. ಆದರೆ ಕೆಲವೊಮ್ಮೆ ಕುಳಿತಿರುವ ಶಿಲ್ಪವೂ ದೊರೆಯುತ್ತದೆ. ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ಭೈರವನ ಸುಂದರ ಶಿಲ್ಪವನ್ನು ಕಾಣುತ್ತೇವೆ.

ಹೊಳಗುಂದಿಯ ವೀರಣ್ಣ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಭೈರವಿಯು ಕರಂಡಮುಕುಟಧಾರಿಣಿಯಾಗಿದ್ದಾಳೆ. ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಢಮರು, ಖಡ್ಗ ಮತ್ತು ಭಿಕ್ಷಾಪಾತ್ರೆಯನ್ನು ಹಿಡಿದಿರುವಳು. ವಿವಿಧ ಆಭರಣಾಲಂಕೃತಳಾದ ಭೈರವಿಯು ಕರ್ಣಕುಂಡಲ, ಹಾರ, ಕಂಠಹಾರ, ಕೈಬಳೆ, ಸೊಂಟಪಟ್ಟಿಗಳನ್ನು ಧರಿಸಿರುವಳು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಅದೇ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಭೈರವಿಯು ಕರಂಡ ಮುಕುಟಧಾರಿಣಿಯಾಗಿದ್ದಾಳೆ. ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಭಿಕ್ಷಾಪಾತ್ರೆಯನ್ನು ಹಿಡಿದಿರುವಳು. ವಿವಿಧ ರೀತಿಯ ಆಭರಣಗಳಿಂದ ಅಲಂಕೃತಳಾದ ಭೈರವಿಯು ಕರ್ಣಕುಂಡಲ, ಹಾರ, ಕಂಠಹಾರ, ಕೈಬಳೆ, ಸೊಂಟಪಟ್ಟಿಗಳನ್ನು ಧರಿಸಿರುವಳು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಇಟಗಿಯ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಭೈರವಿಯು ಪದ್ಮಾಸೀನಳಾಗಿರುವಳು. ಈ ದೇವತೆಯು ತನ್ನ ನಾಲ್ಕು ಕೈಗಳಲ್ಲಿ ಖಡ್ಗ, ಡಮರು, ತ್ರಿಶೂಲ ಮತ್ತು ಭಿಕ್ಷಾಪಾತ್ರೆಯನ್ನು ಹಿಡಿದಿದ್ದಾಳೆ. ಕರಂಡಮುಕುಟಧಾರಿಯಾಗಿದ್ದು, ವಿವಿಧ ಆಭರಣಗಳಿಂದ ಅಲಂಕೃತಳಾಗಿದ್ದಾಳೆ. ಕಿವಿಯಲ್ಲಿ ಕರ್ಣಕುಂಡಲ, ಕೊರಳಲ್ಲಿ ಕಂಠಹಾರ, ಹಾರ, ಕೈಕಡಗ, ಕಾಲ್ಕಡಗ, ನೂಪುರ, ಸೊಂಟಪಟ್ಟಿಯನ್ನು ಧರಿಸಿರುವಳು. ಅವಳ ಹಿಂಬದಿಯಲ್ಲಿ ಶಿರಸ್ಚಕ್ರ ಹಾಗೂ ಪ್ರಭಾವಳಿಗಳಿಂದ ಅಲಂಕೃತಳಾಗಿರುವಳು.

ಹಾಳೂರು ಶಿವಲಿಂಗನಹಳ್ಳಿಯ ಕಲ್ಯಾಣ ಚಾಲುಕ್ಯ ಕಾಲದ ಬಳಪದ ಕಲ್ಲಿನ ಭೈರವಿಯು ಉತ್ತರ ಪೀಠದಲ್ಲಿ ಸುಖಾಸೀನಳಾಗಿರುವಳು. ಮುಕುಟಧಾರಿಣಿಯಾಗಿದ್ದಾಳೆ. ಬಲಗೈಗಳಲ್ಲಿ ತ್ರಿಶೂಲ ಮತ್ತು ಖಡ್ಗಗಳಿವೆ. ಶಿಲ್ಪದ(ಎಡಬದಿಯ ಒಂದು ಕೈ, ಮತ್ತಿತರ ಪ್ರಭಾವಳಿಯ ಭಾಗವು ಸೀಳಿದೆ.) ಎಡಗೈಯೊಂದರಲ್ಲಿ ಭಿಕ್ಷಾಪಾತ್ರೆಯಿದೆ. ಬಲಗಡೆಯ ಪ್ರಭಾವಳಿಯಲ್ಲಿ ವ್ಯಾಳದ ಮೇಲೆ ಛಾಮರ ಧಾರಿಣಿಯಿದ್ದಾಳೆ. ಹಾಗೆಯೇ ಅದರ ಕೆಳಗೆ ಕೈಮುಗಿದು ನಿಂತಿರುವ ಓರ್ವ ವ್ಯಕ್ತಿಯ ಚಿತ್ರಣವಿದೆ. ಎಡಭಾಗದಲ್ಲೂ ವ್ಯಕ್ತಿಯ ಚಿತ್ರಣವಿದೆ. ಪೀಠದಲ್ಲಿ ನಾಯಿ, ಪದ್ಮಗಳನ್ನು ಕೆತ್ತಲಾಗಿದೆ. ವಿಶೇಷ ಆಭರಣಗಳಾದ ಕಂಠಹಾರ, ಹಾರ, ತೋಳ್ಬಂದಿ, ಕೈಬಳೆ, ನೂಪುರ, ಕಾಲ್ಕಡಗ, ಸೀರೆಯನ್ನು ಧರಿಸಿರುತ್ತಾಳೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹೊಸಹಳ್ಳಿಯ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಭೈರವಿ ಶಿಲ್ಪದ ಎದೆಯ ಮೇಲ್ಭಾಗ ಮಾತ್ರ ಉಳಿದಿದೆ. ಕರಂಡ ಮುಕುಟಧಾರಿಣಿಯಾದ ಭೈರವಿಯು ಕರ್ಣಕುಂಡಲಗಳನ್ನು,

ಹಾರ, ತೋಳ್ಬಂದಿ, ಕೈಕಡಗಗಳನ್ನು ಧರಿಸಿದ್ದಾಳೆ. ಬಲಭಾಗದ ಕೈಗಳಲ್ಲಿ ತ್ರಿಶೂಲ, ಖಡ್ಗಗಳಿದ್ದು ಎಡ ಕೈಗಳು ತುಂಡಾಗಿವೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ನಂದಿಗಾವಿಯ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಭೈರವಿಯ ಶಿಲ್ಪದ ಹೊಟ್ಟೆಯ ಕೆಳಭಾಗ ಮಾತ್ರ ಉಳಿದಿದೆ. ಇನ್ನುಳಿದ ಭಾಗವು ಇರುವುದಿಲ್ಲ. ಸುಖಾಸೀನಳಾಗಿರುವ ಭೈರವಿಯು ತನ್ನ ಕಾಲ್ಗಗಳಲ್ಲಿ ನೂಪುರ, ಕಾಲ್ಕಡಗಗಳನ್ನು ಹಾಗೂ ಅಲಂಕೃತ ಸೀರೆಯನ್ನು ಧರಿಸಿರುವಳು. ಅವಳು ಕಾಲ ಕೆಳಗೆ ನರನನ್ನು ತುಳಿದಿರುವುದು, ನರಿಯೊಂದು ಅದನ್ನು ಕಿತ್ತು ತಿನ್ನುತ್ತಿರುವ ದೃಶ್ಯ ಹಾಗೂ ಎರಡು ನಾಗಸರ್ಪಗಳನ್ನು ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹಾಳೂರು ಶಿವಲಿಂಗನಹಳ್ಳಿಯ ಕಲ್ಯಾಣ ಚಾಲುಕ್ಯ ಕಾಲದ ಬಳಪದ ಕಲ್ಲಿನ ಭೈರವನ ಶಿಲ್ಪವು ಸತ್ತ ವ್ಯಕ್ತಿಯನ್ನೇ ಆಸನವನ್ನಾಗಿ ಮಾಡಿಕೊಂಡು ಅದರ ಮೇಲೆ ಸುಖಾಸೀನನಾಗಿ ಕುಳಿತಿರುವ ಚಿತ್ರಣವಿದೆ. ಸತ್ತ ವ್ಯಕ್ತಿಯ ಮರ್ಮಾಂಗವನ್ನು ನಾಯಿಯೊಂದು ಕಿತ್ತು ತಿನ್ನುತ್ತಿದೆ. ಭೈರವನ ಎಡಭಾಗದ ತೊಡೆಯ ಕೆಳಗೆ ಟಗರಿನ ತಲೆಯಿದೆ. ಜಟಾಧಾರಿಯಾದ ಭೈರವನ ತಲೆಯ ಕೂದಲನ್ನು ಸರ್ಪವು ಸುತ್ತಿ ಮುಡಿ ಕಟ್ಟಿದಂತಿದೆ. ಭೈರವನ ನಾಲ್ಕು ಕೈಗಳಲ್ಲಿ ಬಲಗೈಯೊಂದು ತುಂಡಾಗಿದ್ದು, ಉಳಿದವುಗಳಲ್ಲಿ ಖಡ್ಗ, ಡಮರು ಹಾಗೂ ಭಿಕ್ಷಾಪಾತ್ರೆಗಳಿವೆ. ಕೊರಳಲ್ಲಿ ನಾಗಸರ್ಪದ ಹಾರವಿದೆ. ರುಂಡಗಳನ್ನು ಯಜ್ಞೋಪವೀತದ ದಾರದಲ್ಲಿ ಪೋಣಿಸಿದಂತೆ ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

**ಉಮಾಮಹೇಶ್ವರ ಶಿಲ್ಪ:** ತಾಲೂಕಿನ ರಾಜವಾಳ, ಹಿರೇಹಡಗಲಿ, ಹೂವಿನಹಡಗಲಿ, ಮಾಗಳ, ಮೈಲಾರಗಳಲ್ಲಿ ಉಮಾಮಹೇಶ್ವರ ಮೂರ್ತಿಶಿಲ್ಪಗಳು ಕಂಡುಬಂದಿವೆ. ಈ ಮೂರ್ತಿ ಶಿಲ್ಪಗಳೆಲ್ಲವೂ ಕಲ್ಯಾಣ ಚಾಲುಕ್ಯರ ಕಾಲದವುಗಳಾಗಿದ್ದು, ಕಾಲಾವಧಿಯು ಬೇರೆ ಬೇರೆಯಾಗಿದೆ. ರಾಜವಾಳ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿರುವ ಉಮಾಮಹೇಶ್ವರ ಮೂರ್ತಿಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು, ಕ್ರಿ.ಶ.೧೨-೧೩ನೇ ಶತಮಾನದ್ದಾಗಿದೆ. ನೀಲಿಮಿಶ್ರಿತ ಕಪ್ಪುಕಲ್ಲಿನಿಂದ ಕೂಡಿರುವ ಈ ಮೂರ್ತಿಶಿಲ್ಪದಲ್ಲಿ ಉಮಾ ಮತ್ತು ಮಹೇಶ್ವರಿಯನ್ನು ಅಲಂಕಾರಯುತವಾಗಿ ಕೆತ್ತಲಾಗಿದೆ. ಬಲಭಾಗದಲ್ಲಿರುವ ಮಹೇಶ್ವರನು ದ್ವಿಭುಜಯುಳ್ಳವನಾಗಿದ್ದು ಕೈಗಳಲ್ಲಿ ಪಾಶ, ತ್ರಿಶೂಲ ಹಿಡಿದಿದ್ದು ಇನ್ನೆರಡು ಕೈಗಳು ಭಗ್ನಗೊಂಡಿವೆ. ತಲೆಯ ಕಪಾಲಭೂಷಿತ ಕಿರೀಟ, ಕಿವಿಯೋಲೆ, ಕೊರಳಲ್ಲಿ ಅನೇಕ ಹಾರಗಳಿವೆ. ಅವುಗಳಲ್ಲಿ ಮಣಿಸರ, ಜಪಮಾಲೆ, ಕಟಿಸೂತ್ರ, ಕಂಠಹಾರ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳಿವೆ. ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾನೆ.

ಉಮಾ ದ್ವಿಭುಜವುಳ್ಳವಳಾಗಿದ್ದು, ಕೈಗಳಲ್ಲಿ ಪಾಶ, ತ್ರಿಶೂಲಗಳಿದ್ದು, ಇನ್ನೆರಡು ಕೈಗಳು ಭಗ್ನಗೊಂಡಿವೆ. ತಲೆಯ ಮೇಲೆ ಐದು ಹಂತದ ಕಿರೀಟ, ಕಿವಿಯಲ್ಲಿ ಓಲೆ, ಕೊರಳಲ್ಲಿ ಪದಕ

ಸರ, ಮಣಿಸರ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದು ಇಳಿವಸ್ತ್ರವು ಇಳಿಬಿದ್ದಿದೆ. ಈ ಮೂರ್ತಿಶಿಲ್ಪದ ಹಿಂಭಾಗದಲ್ಲಿ ನಾಗಶಿಲ್ಪ, ಎರಡು ಭಾಗಗಳಲ್ಲಿ ಸ್ತ್ರೀಯರ ಶಿಲ್ಪ ಮತ್ತು ಮೇಲ್ಭಾಗದಲ್ಲಿ ತೋರಣವಿದೆ.

ಹಿರೇಹಡಗಲಿ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿರುವ ಉಮಾಮಹೇಶ್ವರನ ಶಿಲ್ಪವು ಕಪ್ಪುಕಲ್ಲಿನಿಂದ ಕಂಡರಿಸಲ್ಪಟ್ಟಿದೆ. ಈ ಮೂರ್ತಿಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲಮಾನದ್ದಾಗಿದ್ದು, ಕ್ರಿ.ಶ.೧೧-೧೨ನೇ ಶತಮಾನಕ್ಕೆ ಸೇರಿದೆ. ಉಮಾ ಮತ್ತು ಮಹೇಶ್ವರನನ್ನು ಒಬ್ಬರಿಗೊಬ್ಬರು ತಾಗಿಕೊಂಡಿರುವಂತೆ ಕೆತ್ತಲಾಗಿದೆ. ಈ ಮೂರ್ತಿಶಿಲ್ಪವು ಸಮಭಂಗಿಯಲ್ಲಿದೆ. ಮಹೇಶ್ವರನು ದ್ವಿಬಾಹುಭುಜವುಳ್ಳನಾಗಿದ್ದು, ಕೈಗಳಲ್ಲಿ ಶಂಖ, ಪಾಶ ಹಿಡಿದಿದ್ದು ಒಂದು ಕೈಯನ್ನು ಕೆಳಗೆ ಇಳಿಬಿಟ್ಟಿದ್ದು, ಇನ್ನೊಂದು ಕೈಯು ಕಾಣದಾಗಿದೆ. ಮಹೇಶ್ವರನು ಕಪಾಲಭೂಷಿತ ಕಿರೀಟಧಾರನಾಗಿದ್ದಾನೆ. ಕಿವಿಯೋಲೆ, ಕೊರಳ ಹಾರ, ಮಣಿಸರ, ಯಜ್ಞೋಪವೀತ, ಜಪಮಾಲೆ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೈಕಡಗ, ಕಾಲ್ಕಡಗ ಧರಿಸಿದ್ದಾನೆ. ಪಕ್ಕದಲ್ಲಿರುವ ಉಮಾ(ಪಾರ್ವತಿ) ಅಲಂಕಾರಗೊಂಡಿದ್ದಾಳೆ. ಕಿವಿಯೋಲೆ, ಕೊರಳ ಹಾರ, ಮಣಿಸರ, ಪದಕಸರ, ಜಪಮಾಲೆ, ನಡುಪಟ್ಟಿ ಹಾಗೂ ಇನ್ನೂ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾಳೆ. ಮೂರ್ತಿಶಿಲ್ಪದ ಸುತ್ತಲೂ ಪ್ರಭಾವಳಿಯಿದ್ದು ಕೆಳಭಾಗದಲ್ಲಿ ಗಣೇಶನ ಉಬ್ಬುಶಿಲ್ಪವಿದೆ.

ಶಿವ–ಪಾರ್ವತಿಯರ ಮೂರ್ತಿಶಿಲ್ಪವು ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿದೆ. ಸುಮಾರು ಆರು ಅಡಿ ಎತ್ತರವಾಗಿದೆ.

**ಶಿವನ ಶಿಲ್ಪಗಳು:** ಹೂವಿನಹಡಗಲಿ ತಾಲೂಕು ಕೇಂದ್ರದ ವಸ್ತುಸಂಗ್ರಹಾಲಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ನಾಲ್ಕು ಶಿವನ ಮೂರ್ತಿಶಿಲ್ಪಗಳಿವೆ. ಇವುಗಳು ಕ್ರಿ.ಶ. ೧೨ನೇ ಶತಮಾನದ ಕಾಲಘಟ್ಟದವುಗಳಾಗಿವೆ. ಇದರಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಮೂರ್ತಿಶಿಲ್ಪದ ವಿವರಣೆಯನ್ನು ನೋಡಲಾಗಿದೆ. ಶಿವನು ದ್ವಿಬಾಹುಭುಜವುಳ್ಳವನಾಗಿದ್ದು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಇನ್ನೊಂದು ಕೈಯಲ್ಲಿ ಪಾನಪಾತ್ರೆ ಹಿಡಿದಿದ್ದಾನೆ. ತಲೆಯ ಮೇಲೆ ಕಿರೀಟವಿದ್ದು, ಕಿವಿಯೋಲೆ, ಪದಕ ಸರ, ಕಂಠಹಾರ, ಜಪಮಾಲೆ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೈಕಡಗ, ಕಾಲ್ಕಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಈ ಮೂರ್ತಿಶಿಲ್ಪದ ಸುತ್ತ ಪ್ರಭಾವಳಿ ರಚನೆಯಿದೆ.

**ಆಲಿಂಗನ ಚಂದ್ರಶೇಖರಮೂರ್ತಿ:** ಶಿವ–ಪಾರ್ವತಿಯು ತ್ರಿಭಂಗ ಸ್ಥಾನದಲ್ಲಿ ನಿಂತಿದ್ದು ಒಬ್ಬರನ್ನೊಬ್ಬರು ತಮ್ಮ ಎರಡೂ ಕೈಗಳಿಂದ ಬಳಸಿ ಹಿಡಿದು ನಿಂತಿದ್ದಾರೆ. ಶಿವನು ಚಂದ್ರಶೇಖರನಾಗಿ ತ್ರಿಶೂಲ, ಡಮರು, ಅಕ್ಷಮಾಲೆಯೊಡನೆ ಅಭಯ ಮುದ್ರೆಯಲ್ಲಿದ್ದಾನೆ. ಉಮಾಳನ್ನು ತನ್ನ ಎಡಗೈ ಯಿಂದ ಬಳಸಿ ಹಿಡಿದಿರುವನು. ಉಮಾ ತನ್ನ ಬಲಗೈಯಿಂದ ಆತನನ್ನು ಬಳಸಿ ಹಿಡಿದಿರುವಳು.

ಆಕೆಯ ಎಡಗೈಯಲ್ಲಿ ಕಮಲದ ಹೂವಿದೆ. ಇವರಿಬ್ಬರ ಮಕ್ಕಳಾದ ಕಾರ್ತಿಕೇಯ ಹಾಗೂ ಗಣೇಶ ಕೆಳಗೆ ಕುಳಿತಿರುವರು. ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದಲ್ಲಿ ಹಾಗೂ ಅಂಗೂರು ಕಲ್ಲೇಶ್ವರ ದೇವಾಲಯಗಳಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ.

**ನೃತ್ಯಮೂರ್ತಿ:** ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೃತ್ಯಮೂರ್ತಿ ಶಿಲ್ಪಗಳು ದೇವಾಲಯದ ದ್ವಾರಪಟ್ಟಿಕೆಯ ಲಲಾಟದಿಂದ ದೇವಾಲಯದ ವಿಮಾನದವರೆಗೂ ಎಲ್ಲ ಭಾಗಗಳಲ್ಲಿ ದೊರೆಯುತ್ತವೆ. ಪ್ರಮಾಣದಲ್ಲಿ ಬಹಳ ಸಣ್ಣದಾಗಿ ದ್ವಿಮಾನ, ತ್ರಿಮಾನಗಳಲ್ಲಿ ದೊರೆಯುತ್ತವೆ. ಕೆಲವೊಮ್ಮೆ ಎತ್ತರವಾದ ಅಧಿಷ್ಠಾನ ಭಾಗದಲ್ಲಿ ಕಂಡರೂ ತ್ರುಟಿತವಾಗಿರುತ್ತವೆ. ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದಲ್ಲಿನ ನೃತ್ಯಮೂರ್ತಿ ಇಲ್ಲಿ ಶಿವನ ಸುಂದರ ನೃತ್ಯಭಂಗಿ ಇದ್ದರೂ ಶಿಲ್ಪವು ಸಂಪೂರ್ಣವಾಗಿ ಹಾಳಾಗಿದೆ. ಎಡಭಾಗದ ಮುಂಡಭಾಗವು ಮಾತ್ರ ಉಳಿದಿದೆ. ಮಾಗಳ, ಹಿರೇಹಡಗಲಿಗಳಲ್ಲಿ ಶಿವನ ನೃತ್ಯಶಿಲ್ಪಗಳಿವೆ.

**ನಂದಿ:** ಶಿವನ ಮುಂದೆ ಅಂತರಾಳ/ಸಭಾಮಂಟಪದಲ್ಲಿ ಮಂಡಿಯೂರಿ ಸೌಮ್ಯವಾಗಿ ಕುಳಿತಿರುವ ನಂದಿಯ ಶಿಲ್ಪಗಳು ಎಲ್ಲೆಡೆ ಕಂಡುಬರುತ್ತವೆ. ಶಿವನ ವಾಹನ ನಂದಿಯಾಗಿರುವುದರಿಂದ ಶಿವನ ಎದುರಲ್ಲಿದೆ. ಹಿರೇಹಡಗಲಿ, ಕುರುವತ್ತಿಯ ಶಿವಾಲಯಗಳಲ್ಲಿ ನಂದಿಗಾಗಿಯೇ ಆವರಣದಲ್ಲಿ ಪ್ರತ್ಯೇಕ ಗುಡಿ/ಮಂಟಪವನ್ನು ನಿರ್ಮಿಸಲಾಗಿದೆ.

ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ಆವರಣದಲ್ಲಿ ಎದುರಿಗೆ ನಂದಿ ಮಂಟಪವಿದೆ. ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರ ಐದು ಅಡಿ ಉದ್ದದ ಬೃಹತ್ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿ ಮಂಟಪದ ಬಾಗಿಲವಾಡವು ಅನೇಕ ಶಾಖೆಗಳಿಂದ ಕೂಡಿದ್ದು, ತೆರೆದ ಮಂಟಪವಿದೆ. ಮಂಟಪದಲ್ಲಿನ ಸ್ವತಂತ್ರಗಂಬಗಳು ಅನೇಕ ಪಟ್ಟಿಕೆಗಳನ್ನು ಹೊಂದಿವೆ.

ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದ ಆವರಣದ ಸೂರ್ಯನಾರಾಯಣ ದೇವಾಲಯದ ಮುಂದಿನ ತೆರೆದ ಮಂಟಪದಲ್ಲಿ ಸುಮಾರು ಒಂದು ಅಡಿ ಎತ್ತರದ ಪೀಠದ ಮೇಲೆ ಮೂರು ಅಡಿ ಎತ್ತರದ ನಂದಿಶಿಲ್ಪವಿದೆ. ಮಂಟಪದ ಭುವನೇಶ್ವರ ಪದ್ಮಾಲಂಕೃತವಾಗಿದ್ದು, ನಾಲ್ಕು ಸ್ವತಂತ್ರ ಕಂಬಗಳನ್ನೊಂದಿದೆ.

ಹಡಗಲಿಯ ಪರಿಸರದಲ್ಲಿ ಹೇರಳವಾಗಿ ನಂದಿಶಿಲ್ಪಗಳು ದೊರೆಯುತ್ತವೆ. ಕಲ್ಯಾಣ ಚಾಲುಕ್ಯರ ಕಾಲದ ನಂದಿಶಿಲ್ಪಗಳು ತುಂಬಾ ಸುಂದರವಾಗಿ ಅಲಂಕಾರಿಕವಾಗಿವೆ. ನಂದಿಶಿಲ್ಪಗಳು ಸಾಮಾನ್ಯವಾಗಿ ಕೊರಳಲ್ಲಿ ಗೆಜ್ಜೆಸರ, ಸರಪಳಿಯಾಕಾರದ ಸರ, ಕಾಲಲ್ಲಿ ಕಾಲ್ಗಡಗ, ಹಣೆಪಟ್ಟಿ, ಬೆನ್ನಿನ ಮೇಲೆ ಭುಜಪಟ್ಟಿಯನ್ನು, ಹಿಂದೆ ಎರಡೆಳೆಯ ಗೆಜ್ಜೆಸರವನ್ನು ಧರಿಸಿರುತ್ತವೆ. ಹರವಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಮೂರು ನಂದಿಶಿಲ್ಪಗಳು ತುಂಬಾ ಸುಂದರವಾಗಿ ಅಲಂಕಾರಿಕವಾಗಿವೆ.

**ಏಕಾದಶ ರುದ್ರರು:** ಹನ್ನೊಂದು ರೀತಿಯ ರುದ್ರರನ್ನು ಗುರುತಿಸಿದ್ದು, ಅವರನ್ನು ಏಕಾದಶ ರುದ್ರರು ಎಂದು ಕರೆಯಲಾಗಿದೆ. ರುದ್ರನಿಗೆ ಮೂರು ಕಣ್ಣು, ಚತುರ್ಭುಜ, ಜಟಾಮುಕುಟ ಹಾಗೂ

ಸಮಭಂಗಿಯಲ್ಲಿರುವುದು ಸಾಮಾನ್ಯ ಲಕ್ಷಣವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ಈ ಶಿಲ್ಪ ಲಕ್ಷಣಗಳಿಂದ ಸ್ವಲ್ಪ ವಿಭಿನ್ನ ರೀತಿಯ ಶಿಲ್ಪಗಳು ಕಾಣುತ್ತವೆ. ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದಲ್ಲಿ ಏಕಾದಶ ರುದ್ರರು ಪ್ರತಿಪೀಠದ ಮುಂದೆ 'ನಂದಿ' ಇದೆ. ಅಂಗೂರಿನ ಕಲ್ಲೇಶ್ವರ ದೇವಾಲಯದಲ್ಲಿ ಪೀಠದಲ್ಲಿ ಕುಳಿತ ಶಿಲ್ಪಗಳಿವೆ.

**ಕೇಶವ ಶಿಲ್ಪ:** ಹೂವಿನಹಡಗಲಿ ಕೇಶವ ದೇವಾಲಯದ ಚೌಕಾಕಾರದ ಗರ್ಭಗೃಹದಲ್ಲಿ ಕಡುಕಪ್ಪುಕಲ್ಲಿನಿಂದ ಕಂಡರಿಸಲ್ಪಟ್ಟಿರುವ ಕೇಶವನ ಮೂರ್ತಿಶಿಲ್ಪವಿದೆ. ಇದು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು, ಕ್ರಿ.ಶ.೧೧೮೦ರಲ್ಲಿ ನಿರ್ಮಿಸಲಾಗಿದೆ. ಕೇಶವನನ್ನು ಗರುಡಪೀಠದ ಮೇಲೆ ಪ್ರತಿಷ್ಠಾಪಿಸ ಲಾಗಿದ್ದು, ಸಮಭಂಗಿಯಲ್ಲಿದೆ. ಈ ಮೂರ್ತಿಶಿಲ್ಪವು ಸುಮಾರು ಮೂರು ಅಡಿ ಎತ್ತರದಲ್ಲಿದೆ. ತಲೆಯ ಮೇಲೆ ನಾಗರಶೈಲಿಯ ಶಿಖರ ರೀತಿಯ ಕಿರೀಟವಿದೆ. ಕರಂಡಮಕುಟ, ಕೊರಳಲ್ಲಿ ಮಣಿಸರ, ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ, ಜಪಮಾಲೆ, ಕಟಿಸೂತ್ರ, ತೋಳುಬಂದಿ, ಕೈಕಡಗ, ಕಾಲ್ಕಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೇಶವನು ದ್ವಿಭುಜನಾಗಿದ್ದು ಕೈಗಳಲ್ಲಿ ಶಂಖ, ಚಕ್ರ, ಪದ್ಮಗಳಿದ್ದು, ಇನ್ನೊಂದು ಕೈ ಇಳಿಬಿಟ್ಟಿದ್ದು ಆ ಕೈಯಲ್ಲಿ ಗದೆಯಿದೆ. ಇಕ್ಕೆಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಸ್ಥಾನಿಕ ಉಬ್ಬುಶಿಲ್ಪಗಳಿವೆ. ಈ ಮೂರ್ತಿಶಿಲ್ಪದ ಸುತ್ತ ಮಕರತೋರಣವಿದೆ.

**ಜನಾರ್ಧನ:** ಅಂಗೂರು ಕಲ್ಲೇಶ್ವರ ದೇವಾಲಯವು ತ್ರಿಕೂಟಚಲವಾಗಿದ್ದು, ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಚತುರ್ಭುಜಧಾರಿ ಜನಾರ್ಧನನ ಶಿಲ್ಪವಿದೆ. ಮುಂದಿನ ಕೈಗಳು ಹಾಳಾಗಿದ್ದು, ಹಿಂದಿನ ಕೈಗಳಲ್ಲಿ ಶಂಖ, ಚಕ್ರ ಹಿಡಿದಿರುವನು. ಇಕ್ಕೆಲಗಳಲ್ಲಿ ಶ್ರೀದೇವಿ-ಭೂದೇವಿಯರು ತಮ್ಮ ಕೈಗಳಲ್ಲಿ ಪದ್ಮ ಹಿಡಿದು ಸಮಭಂಗಿಯಲ್ಲಿ ನಿಂತಿರುವರು. ಜನಾರ್ಧನನ ಹಿಂಭಾಗದಲ್ಲಿ ಪ್ರಭಾವಳಿಯಿದ್ದು, ಅದರ ಮೇಲ್ಭಾಗ ಕೀರ್ತಿಮುಖ ಹೊಂದಿದೆ. ಜನಾರ್ಧನನು ಕರಂಡಮಕುಟ, ವರ್ತುಲಾಕಾರದ ಓಲೆ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಉದರಬಂಧ, ಕಟೀಸೂತ್ರ, ತೋಳುಬಂದಿ, ವಾಜೀಬಂಧ, ಕೈಕಡಗ ಮತ್ತು ಕಾಲ್ಗಡಗಗಳನ್ನು ಧರಿಸಿರುವನು.

**ಶ್ರೀದೇವಿ-ಭೂದೇವಿ:** ಸ್ವತಂತ್ರವಾಗಿರದೆ ವಿಷ್ಣುವಿನ ಸ್ಥಾನಿಕ ಭಂಗಿಯ ಇಕ್ಕೆಲಗಳಲ್ಲಿ ಸ್ಥಾನಿಕ ಭಂಗಿಯಲ್ಲಿರುವರು. ಹೂವಿನಹಡಗಲಿಯ ಕೇಶವ ದೇವಾಲಯದಲ್ಲಿ, ಅಂಗೂರು ಕಲ್ಲೇಶ್ವರ ದೇವಾಲಯದ ಉತ್ತರ ದಿಕ್ಕಿನ ಗರ್ಭಗೃಹದಲ್ಲಿ ಜನಾರ್ಧನನ ಇಕ್ಕೆಲಗಳಲ್ಲಿ ಕಂಡುಬರುತ್ತವೆ.

**ಯೋಗನಾರಾಯಣ:** ಹೂವಿನಹಡಗಲಿಯ ಮಧ್ಯದಲ್ಲಿರುವ ಯೋಗನಾರಾಯಣನ ದೇವಾಲಯದ ಗರ್ಭಗೃಹದಲ್ಲಿ ಯೋಗಭಂಗಿಯಲ್ಲಿರುವ ಯೋಗನಾರಾಯಣನ ಮೂರ್ತಿಶಿಲ್ಪವಿದೆ. ಯೋಗನಾರಾಯಣ ಮೂರ್ತಿ ಒಂದು ಅಡಿ ಎತ್ತರವುಳ್ಳ ಗರುಡಪೀಠದ ಮೇಲಿದೆ. ಪೀಠದ ಮೇಲಿಂದ ಇದು ಸುಮಾರು ಮೂರು ಅಡಿ ಎತ್ತರದಲ್ಲಿದೆ. ಪೀಠದ ಮೇಲೆ ಯೋಗಭಂಗಿಯಲ್ಲಿ

ಕುಳಿತಿರುವ ನಾರಾಯಣನು ತಲೆಯ ಮೇಲೆ ಕಪಾಲಭೂಷಿತವಾದ ಕಿರೀಟವನ್ನು ತೊಟ್ಟಿದ್ದಾನೆ. ಕರ್ಣಕುಂಡಲ, ಕೊರಳಲ್ಲಿ ಮಣಿಸರ, ಪದಕ ಸರ, ಯಜ್ಞೋಪವೀತ, ಜಪಮಾಲೆ, ಕಟಿಸೂತ್ರ, ಕಂಠಹಾರ, ನಡುವಿನಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಅಲ್ಲದೆ ಕೈಕಡಗ, ಕಾಲ್ಕಡಗ, ತೋಳುಬಂದಿ ಧರಿಸಿದ್ದಾನೆ. ಯೋಗನಾರಾಯಣನು ದ್ವಿಭುಜವುಳ್ಳವನಾಗಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ ಚಕ್ರಗಳಿವೆ. ಇನ್ನೆರಡು ಕೈಗಳನ್ನು ಮುಂದಿಟ್ಟುಕೊಂಡು ಧ್ಯಾನ ಮಗ್ನನಾಗಿದ್ದಾನೆ. ನಾರಾಯಣನ ತಲೆಯ ಹಿಂಭಾಗದಲ್ಲಿ ಚಕ್ರವಿದೆ. ಇಡೀ ಮೂರ್ತಿಶಿಲ್ಪದ ಸುತ್ತ ಮಕರತೋರಣ, ಲತಾಬಳ್ಳಿಯ ಅಲಂಕಾರವಿದೆ.

**ವರಾಹ:** ವಿಷ್ಣುವಿನ ದಶವತಾರಗಳಲ್ಲಿ ಮತ್ಸ್ಯ, ಕೂರ್ಮ, ನರಸಿಂಹನ ಅವತಾರಗಳಂತೆ ವರಾಹ ಅವತಾರವೂ ಒಂದು. ಅರ್ಧ ಪ್ರಾಣಿ ದೇಹ, ಉಳಿದರ್ಧ ಮನುಷ್ಯ ದೇಹವನ್ನು ಹೊಂದಿದ ಅವತಾರ ಇದಾಗಿದೆ. ಮುಖ ವರಾಹ(ಹಂದಿ)ದ್ದಾಗಿದ್ದು, ಉಳಿದ ದೇಹ ಭಾಗ ಮನುಷ್ಯನದಾಗಿರುತ್ತದೆ.

ವರಾಹ ಶಿಲ್ಪವು ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದಲ್ಲಿದೆ.

**ಅನಂತಪದ್ಮನಾಭ:** ಹೊಳಲು ಗ್ರಾಮದ ಅನಂತಶಯನ ಗರ್ಭಗೃಹದಲ್ಲಿ ಕ್ರಿ.ಶ.೧೪-೧೫ನೇ ಶತಮಾನಕ್ಕೆ ಸೇರಿದ ಅನಂತಪದ್ಮನಾಭನ ಶಿಲ್ಪವಿದೆ. ಇದನ್ನು ಕಪ್ಪುಕಲ್ಲಿನಿಂದ ಕಂಡರಿಸಲ್ಪಟ್ಟಿದೆ. ಏಳು ಹೆಡೆಯ ಸರ್ಪದ ಮೇಲೆ ಅನಂತಪದ್ಮನಾಭನು ಮಲಗಿದ್ದಾನೆ(ಶಯನ ಸ್ಥಿತಿಯಲ್ಲಿದ್ದಾನೆ). ಇದು ಸುಮಾರು ಎಂಟರಿಂದ ಒಂಬತ್ತು ಅಡಿ ಉದ್ದವಾಗಿದೆ. ಈ ಶಿಲ್ಪವು ದ್ವಿಭುಜವುಳ್ಳದ್ದಾಗಿದೆ. ಅನಂತಪದ್ಮನಾಭನು ತಲೆಯ ಮೇಲೆ ಕಪಾಲಭೂಷಿತ ಕಿರೀಟವನ್ನು ತೊಟ್ಟಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲ ಮತ್ತು ಪತ್ರಕುಂಡಲಗಳಿವೆ. ಕೊರಳಲ್ಲಿ ಕಂಠಹಾರ, ಮಣಿಸರ, ಯಜ್ಞೋಪವೀತ, ಜಪಮಾಲೆ, ಸೊಂಟದಲ್ಲಿ ಕಟಿಸೂತ್ರ ಹಾಗೂ ಇನ್ನಿತರ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಅನಂತಶಯನನು ತನ್ನೆರಡು ಕೈಗಳನ್ನು ತಲೆಯ ಕೆಳಗಡೆ ಇಟ್ಟುಕೊಂಡಿದ್ದಾನೆ. ಒಂದು ಕೈ ಅಭಯಮುದ್ರೆಯಲ್ಲಿದ್ದರೆ, ಇನ್ನೊಂದು ಕೈ ಇಳಿಬಿಟ್ಟಿದೆ. ಕೈಗಳಲ್ಲಿ ಕೈಕಡಗ, ಕಾಲ್ಕಡಗ, ತೋಳುಬಂದಿ ಧರಿಸಿದ್ದು ನೋಡಲು ಆಕರ್ಷಣೀಯವಾಗಿದೆ.

**ವಿಷ್ಣು:** ಉತ್ತಂಗಿಯ ಶಂಕರಲಿಂಗ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ವಿಷ್ಣು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ವಜ್ರಾಯುಧವಿದೆ. ಉಳಿದ ಕೈಗಳು ಮುರಿದು ಹೋಗಿವೆ. ಕಿರೀಟ ಮುಕುಟದಾರಿಯಾಗಿದ್ದು ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ ಹಾಗೂ ಅಲಂಕಾರಿಕಾ ಧೋತಿಯನ್ನು ಧರಿಸಿರುವನು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಕ್ರಿಯಾಶಕ್ತಿ ಕಟ್ಟಡದಲ್ಲಿದೆ.

**ಸೂರ್ಯ ಶಿಲ್ಪಗಳು:** ಸೂರ್ಯ ದೇವರು ಸೌರ ಮತದವರಿಂದ ಆಚರಣೆಗೊಳಪಡುವ ದೇವರಾಗಿದ್ದಾನೆ. ಈತನ ಆರಾಧನೆ ಋಗ್ವೇದ ಕಾಲದಲ್ಲಿ ಹೆಚ್ಚಾಗಿತ್ತು. ಕೂರ್ಮ ಪುರಾಣವು

ಸೂರ್ಯನ ಉಗಮ ಮತ್ತು ಹಿನ್ನೆಲೆಯನ್ನು ತಿಳಿಸುತ್ತದೆ. ವಿಶ್ವಕರ್ಮ ಶಿಲ್ಪ, ಭವಿಷ್ಯ ಪುರಾಣ, ಅಂಶುಮದ್‌ಭೇದ, ಸುಪ್ರಭೇದಾಗಮಗಳು ಸೂರ್ಯ ಮೂರ್ತಿಯ ಲಕ್ಷಣಗಳನ್ನು ಕುರಿತು ಹೇಳುತ್ತವೆ.[೨೬] ಸೂರ್ಯನು ವೈದ್ಯ ಮತ್ತು ಕಾಲಗತಿಯ ಜೀವನಾಡಿ, ಸುಖ ಸಂತಾನಗಳಿಗೆ ಅಧಿದೇವತೆಯಾಗಿರುವನು.

ಹಿರೇಹಡಗಲಿ, ಮಾಗಳ, ಸೋಗಿ ಬೆಟ್ಟದ ಮಲ್ಲೇಶ್ವರ ದೇವಾಲಯದ ಅವರಣ ಮುಂತಾದ ಭಾಗಗಳಲ್ಲಿ ಸೂರ್ಯನಾರಾಯಣ ಮೂರ್ತಿಶಿಲ್ಪಗಳು ಕಂಡುಬಂದಿವೆ. ಇವೆಲ್ಲವುಗಳು ಬಹುತೇಕವಾಗಿ ಒಂದೇ ರೀತಿಯಲ್ಲಿಯೇ ಇವೆ.

ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಸೂರ್ಯನು ಅಶ್ವಪೀಠದ ಅರುಣನ ಸಾರಥ್ಯದ ಮೇಲೆ ಸಮಭಂಗಿಯಲ್ಲಿ ನಿಂತಿರುವನು. ಈ ಸೂರ್ಯನ ಮೂರ್ತಿಶಿಲ್ಪವು ಸುಮಾರು ಮೂರು ಅಡಿ ಎತ್ತರವನ್ನು ಹೊಂದಿದೆ. ಸೂರ್ಯನು ತಲೆಯ ಮೇಲೆ ಕಪಾಲಭೂಷಿತ ಮೂರು ಹಂತದ ಕಿರೀಟವನ್ನು ಧರಿಸಿದ್ದಾನೆ. ಹಿಂಭಾಗದಲ್ಲಿ ಚಕ್ರವಿದೆ. ಕಿವಿಯಲ್ಲಿ ಕರ್ಣಕುಂಡಲವನ್ನು, ಕೊರಳಲ್ಲಿ ಮಣಿಸರ, ಕಂಠಹಾರ, ಯಜ್ಞೋಪವೀತ, ಜಪಮಾಲೆ, ಕಟಿಸೂತ್ರ, ಕೊರಳಹಾರವನ್ನು ಸೊಂಟದಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕಾಲ್ಕಡಗ, ಕೈಕಡಗ, ತೋಳುಬಂದಿಯನ್ನು ಧರಿಸಿದ್ದಾನೆ. ಸೂರ್ಯನು ತನ್ನೆರಡು ಕೈಗಳಲ್ಲಿ ಪದ್ಮ, ಶಂಖ, ಪಾಶವನ್ನು ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಸ್ಥಾನಿಕ ಸ್ಥಿತಿಯಲ್ಲಿರುವ ಉಷಾ ಮತ್ತು ಪ್ರತ್ಯುಷೆಯರ ಉಬ್ಬುಶಿಲ್ಪಗಳಿವೆ. ಇಡೀ ಮೂರ್ತಿಶಿಲ್ಪದ ಸುತ್ತಲೂ ಸುಂದರವಾದ ಮಕರತೋರಣವಿದೆ.

ಈ ಸೂರ್ಯನಾರಾಯಣನ ಮೂರ್ತಿಶಿಲ್ಪಗಳೆಲ್ಲವೂ ಕಪ್ಪುಕಲ್ಲಿನಿಂದ ರೂಪುಗೊಂಡಿದ್ದು, ಕಲ್ಯಾಣ ಚಾಲುಕ್ಯರ ಕೆತ್ತನೆಯನ್ನು ಒಳಗೊಂಡಿವೆ. ಇವುಗಳೆಲ್ಲವೂ ಕ್ರಿ.ಶ.೧೨-೧೩ನೇ ಶತಮಾನಕ್ಕೆ ಸೇರಿದವುಗಳಾಗಿವೆ.

ಬೂದನೂರಿನ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಸೂರ್ಯ ಶಿಲ್ಪವು ಸಮಭಂಗಿಯಲ್ಲಿದ್ದು, ಕರಂಡ ಮುಕುಟಧಾರಿಯಾಗಿದೆ. ಹಾರ, ಕಂಠಹಾರ, ಯಜ್ಞೋಪವೀತ ಚನ್ನವೀರ, ಸೊಂಟಪಟ್ಟಿ ಹಾಗೂ ಅಲಂಕೃತ ವಸ್ತ್ರ ಧರಿಸಿದ್ದಾನೆ. ಅಕ್ಕಪಕ್ಕದಲ್ಲಿ ಉಷಾ–ಪ್ರತ್ಯುಷೆಯರನ್ನು ಚಿತ್ರಿಸಲಾಗಿದೆ. ಹಿಂಭಾಗದಲ್ಲಿ ಪ್ರಭಾವಳಿಯಿದ್ದು, ಕೀರ್ತಿಮುಖ ಹಾಗೂ ವ್ಯಾಳಗಳನ್ನು ಒಳಗೊಂಡಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಮಾಗಳದ ಸೂರ್ಯನಾರಾಯಣ ದೇವಾಲಯದ ಪೂರ್ವದ ಗರ್ಭಗೃಹದಲ್ಲಿರುವ ಸೂರ್ಯನ ಶಿಲ್ಪವು ಸಮಭಂಗಿಯಲ್ಲಿದೆ. ಏಳು ಕುದುರೆಗಳನ್ನೊಳಗೊಂಡ ರಥದ ಮೇಲಿದೆ. ಸೂರ್ಯನು ತನ್ನ ಎರಡೂ ಕೈಗಳಲ್ಲಿ ಕಮಲದ ಹೂವುಗಳನ್ನು ಹಿಡಿದಿರುವನು. ಕಿರೀಟ, ಕಂಠಹಾರ, ನಡುಪಟ್ಟಿ, ಜನಿವಾರ, ಕುಂಡಲಗಳನ್ನು ಧರಿಸಿರುವನು. ಇದರ ಸುತ್ತಲೂ ಪ್ರಭಾವಳಿಯಿದೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಸೂರ್ಯನ ಇಕ್ಕೆಲಗಳಲ್ಲಿ ಉಷಾ–ಪ್ರತ್ಯುಷಾದೇವಿಯರ ಶಿಲ್ಪಗಳಿವೆ.

ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ಅಂತರಾಳದಲ್ಲಿರುವ ಸೂರ್ಯಶಿಲ್ಪವು ಪೀಠದ ಮೇಲೆ ಉಷಾ–ಪ್ರತ್ಯುಷಾದೇವಿಯರ ಜೊತೆಯಲ್ಲಿದೆ. ಸುತ್ತಲೂ ಪ್ರಭಾವಳಿಯಿದೆ. ಪ್ರಭಾವಳಿಯಲ್ಲಿ ಏಳುಹೆಡೆಯ ನಾಗಶಿಲ್ಪ ಇದೆ. ಸೂರ್ಯನು ತನ್ನ ಕೈಗಳಲ್ಲಿ ಹಿಡಿದಿರುವ ಕಮಲದ ದಂಟು ಬಹಳ ಉದ್ದವಾಗಿದ್ದು, ದಂಟಿನ ಮೇಲಿನ ಮೊಗ್ಗು ದುಂಡಾಗಿದೆ. ಭ್ರೂರೇಖೆ ನೀಳವಾಗಿ ಸಣ್ಣಗೆರೆಯಂತೆ ಆಕರ್ಷಕವಾಗಿರುವುದು. ಸೂರ್ಯನು ಆಭರಣಗಳಿಂದ ಅಲಂಕೃತನಾಗಿರುವನು.

**ಉಷಾ–ಪ್ರತ್ಯುಷಾದೇವಿಯರು:** ಹಿರೇಹಡಗಲಿ ಕಲ್ಲೇಶ್ವರ ದೇವಾಲಯದ ಆವರಣದಲ್ಲಿರುವ ಸೂರ್ಯನ ಇಕ್ಕೆಲಗಳಲ್ಲಿ, ಮಾಗಳ ಸೂರ್ಯನಾರಾಯಣ ದೇವಾಲಯದ ಪೂರ್ವದ ಗರ್ಭಗೃಹದಲ್ಲಿ, ಮೈಲಾರದ ಮೈಲಾರಲಿಂಗೇಶ್ವರ ದೇವಾಲಯದ ಆವರಣದ ಸೂರ್ಯನ ಇಕ್ಕೆಲಗಳಲ್ಲಿ, ರಂಗಾಪುರ ನರಸಿಂಹ ದೇವಾಲಯದ ಅಂತರಾಳದ ಸೂರ್ಯನ ಇಕ್ಕೆಲಗಳಲ್ಲಿ ಉಷಾ–ಪ್ರತ್ಯುಷಾದೇವಿಯರು ಸ್ಥಾನಿಕ ಭಂಗಿಯಲ್ಲಿದ್ದು, ಕೈಗಳಲ್ಲಿ ಪದ್ಮ, ನಿಲೋತ್ಪಲಗಳನ್ನು ಹಿಡಿದಿರುತ್ತಾರೆ.

**ಕಾರ್ತಿಕೇಯ:** ಶಿವನ ಮಗನಾದ ಕಾರ್ತಿಕೇಯನು ಶಿವನ ಮುಖದಿಂದ ಹೊರಹೊಮ್ಮಿದ ಆರು ಕಳೆಗಳ ತೇಜಸ್ಸನ್ನು ಅಗ್ನಿ ಮತ್ತು ವಾಯು ತೆಗೆದುಕೊಂಡು ಹೋಗಿ 'ಶರವಣ' ಸರೋವರದಲ್ಲಿ ಇರಿಸಿದ್ದರಿಂದ ಅದು 'ಶರವಣಭವ'ವಾಯಿತು. ಅಲ್ಲಿ ಆರು ಜನ ಕೃತಿಕೆಯರು ಅದನ್ನು ಬೆಳೆಸಿದ್ದರಿಂದ ಕಾರ್ತಿಕೇಯನಾದನು.

ಮಾನ್ಯರ ಮಸಲವಾಡದ ಮುಕ್ತೇಶ್ವರ ದೇವಾಲಯದ ಕಾರ್ತಿಕೇಯ ಶಿಲ್ಪವು ತ್ರಿಮುಖವುಳ್ಳದ್ದಾಗಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ತಲೆಯ ಮೇಲೆ ಮೂರು ಕಿರೀಟಗಳು ನೇರವಾಗಿವೆ. ಕಿವಿಯಲ್ಲಿ ಕರ್ಣಕುಂಡಲ, ಕೊರಳಲ್ಲಿ ಮಣಿಸರ, ಕೊರಳ ಹಾರ, ಕಂಠಹಾರ, ಯಜ್ಞೋಪವೀತ, ಜಪಮಾಲೆ ಇನ್ನಿತರ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ತನ್ನ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಪದ್ಮಗಳನ್ನು ಹಿಡಿದಿದ್ದು, ಇನ್ನೊಂದು ಕೈ ಅಭಯಮುದ್ರೆಯಲ್ಲಿದೆ. ಸೊಂಟದಲ್ಲಿ ಅನೇಕ ವಸ್ತ್ರಾಭರಣಗಳನ್ನು ಧರಿಸಿದ್ದು, ಮಧ್ಯದಲ್ಲಿ ಇಳಿಬಿಟ್ಟ ವಸ್ತ್ರವಿದೆ. ಇಷ್ಟೆಲ್ಲ ವಸ್ತ್ರಾಭರಣಗಳನ್ನು ಧರಿಸಿರುವ ಕಾರ್ತಿಕೇಯ ತನ್ನ ಸಂಕೇತಪಕ್ಷಿಯಾದ ಹಂಸದ ಮೇಲೆ ಕುಳಿತಿದ್ದಾನೆ.

ಸೋವೇನಹಳ್ಳಿಯ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಇಬ್ಭಾಗವಾಗಿರುವ ಕಾರ್ತಿಕೇಯನು ನವಿಲಿನ ಮೇಲೆ ಸುಖಾಸೀನನಾಗಿದ್ದಾನೆ. ಮೂರು ತಲೆಗಳನ್ನು ಚಿತ್ರಿಸಲಾಗಿದ್ದು, ತನ್ನ ನಾಲ್ಕು ಕೈಗಳಲ್ಲಿ ಬಿಲ್ಲು, ಬಾಣ, ವಜ್ರ ಮತ್ತು ಬಿಲ್ವಪತ್ರೆಕಾಯಿಗಳನ್ನು ಹಿಡಿದಿರುವನು. ಕರಂಡ ಮುಕುಟಧಾರಿಯಾಗಿದ್ದು ಕಂಠಹಾರ, ಕರ್ಣಕುಂಡಲ, ಯಜ್ಞೋಪವೀತ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಕತ್ತೆಬೆನ್ನೂರಿನ ಕಲ್ಯಾಣ ಚಾಲುಕ್ಯರ ಕಾಲದ ನುಣುಪಾದ ಕೆಂಪು ಶಿಲೆಯ ಕಾರ್ತಿಕೇಯನು ತನ್ನ ವಾಹನವಾದ ನವಿಲಿನ ಮೇಲೆ ಸುಖಾಸೀನನಾಗಿ ಕುಳಿತಿರುವನು. ಕಾರ್ತಿಕೇಯನ ತಲೆ, ಕೈ ಹಾಗೂ ನವಿಲಿನ ಕೆಲವು ಭಾಗಗಳು ಭಗ್ನವಾಗಿ ಹೋಗಿವೆ. ಕೊರಳಲ್ಲಿ ಕಂಠಹಾರ,

ಹಾರಗಳು, ಯಜ್ಞೋಪವೀತ ಚನ್ನವೀರ, ವನಮಾಲ, ಕಾಲ್ಕಡಗಗಳನ್ನು ಬಹುಸೂಕ್ಷ್ಮವಾಗಿ ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

**ವೀಣಾವಾದಕ/ವೇಣುಗೋಪಾಲ:** ಮಾಗಳ ಗ್ರಾಮದ ಸೂರ್ಯನಾರಾಯಣ ದೇವಾಲಯದ ಸಭಾಮಂಟಪದಲ್ಲಿ ಎರಡು ಅಡಿ ಎತ್ತರವುಳ್ಳ ಸೂಕ್ಷ್ಮ ಕೆತ್ತನೆಯಿಂದ ಕೂಡಿರುವ ವೀಣಾವಾದಕನ ಮೂರ್ತಿಶಿಲ್ಪವಿದೆ. ಈ ಮೂರ್ತಿಶಿಲ್ಪವನ್ನು ಪೀಠದ ಮೇಲೆ ನಿಲ್ಲಿಸಲಾಗಿದೆ. ಇದು ಕಪ್ಪುಶಿಲೆಯನ್ನು ಹೊಂದಿದ್ದು ಕಲ್ಯಾಣ ಚಾಲುಕ್ಯರ ವಾಸ್ತುವನ್ನು ಹೊಂದಿದೆ. ಇದರ ಕಾಲವನ್ನು ಕ್ರಿ.ಶ.೧೧-೧೨ನೇ ಶತಮಾನವೆಂದು ಹೇಳಬಹುದು. ಪೀಠದ ಮೇಲೆ ಸ್ಥಾನಿಕಭಂಗಿಯಲ್ಲಿರುವ ವೀಣಾವಾದಕನು ತ್ರಿಭಂಗಿಯಲ್ಲಿದ್ದಾನೆ. ವೀಣಾವಾದಕನು ತಲೆಯ ಮೇಲೆ ಕಪಾಲಭೂಷಿತ ಕಿರೀಟವನ್ನು ತೊಟ್ಟಿದ್ದಾನೆ. ಕಿವಿಗಳಲ್ಲಿ ಕರ್ಣಕುಂಡಲ, ಕರಂಡಮಕುಟ, ಯಜ್ಞೋಪವೀತ, ಉದರಬಂದ, ಕಟಿಸೂತ್ರ, ಕೈಗಳಲ್ಲಿ ಕಡಗ, ತೋಳುಬಂದಿ, ಕಾಲ್ಕಡಗ ಧರಿಸಿದ್ದಾನೆ. ದ್ವಿಬಾಹುನಾಗಿರುವ ವೇಣುಗೋಪಾಲನು ತನ್ನೆರಡು ಕೈಗಳಲ್ಲಿ ವೀಣೆಯನ್ನು ಹಿಡಿದಿದ್ದಾನೆ. ಇನ್ನೆರಡು ಕೈಗಳಲ್ಲಿ ಶಂಖ ಚಕ್ರಗಳಿವೆ. ಕಾಲುಗಳನ್ನು ಕತ್ತರಿ ಅಲಗುಗಳ ರೀತಿಯಲ್ಲಿ ಇಟ್ಟುಕೊಂಡು ನಿಂತಿದ್ದಾನೆ. ಶಿಲ್ಪದ ಕೆಳಗೆ ಪದ್ಮವಿದೆ. ಮೂರ್ತಿಶಿಲ್ಪದ ಸುತ್ತಲೂ ಲತಾಬಳ್ಳಿಯಿಂದ ಕೂಡಿರುವ ಪ್ರಭಾವಳಿಯಿದೆ.

**ರತಿ–ಮನ್ಮಥ:** ಪ್ರೀತಿಯ ದೇವರೆಂದು ಪ್ರಸಿದ್ಧಿಯಾದ ಮನ್ಮಥ ಅಥವಾ ಕಾಮನ ಮೂರ್ತಿಶಿಲ್ಪದ ವಿವರಣೆಯನ್ನು ಶಿಲ್ಪರತ್ನ, ವಿಷ್ಣು ಧರ್ಮೋತ್ತರ ಪುರಾಣ ಗ್ರಂಥಗಳು ಉಲ್ಲೇಖಿಸುತ್ತವೆ.[೨೭]

ಮನ್ಮಥನಿಗೆ ಇಬ್ಬರು ಪತ್ನಿಯರು, ರತಿ ಮತ್ತು ಪ್ರೀತಿ ಇವರೊಡನೆ ದ್ವಿಭಂಗದಲ್ಲಿ ಸ್ಥಾನಿಕನಾಗಿರುತ್ತಾನೆ. ಪ್ರತ್ಯೇಕ ಮೂರ್ತಿಗಳು ತುಂಬ ವಿರಳ. ಅಂಗೂರು ಕಲ್ಲೇಶ್ವರ ದೇವಾಲಯದ ಸಭಾಮಂಟಪದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ರತಿ–ಮನ್ಮಥರ ಶಿಲ್ಪವಿದೆ. ಈ ಮೂರ್ತಿಯ ಕಿವಿಯಲ್ಲಿ ಕುಂಡಲ ಹಾಗೂ ಕೊರಳಲ್ಲಿ ವಿವಿಧ ಹಾರಗಳಿವೆ. ಕರಂಡ ಮಕುಟ, ಯಜ್ಞೋಪವೀತ, ಕೈಕಡಗ, ಕೇಯೂರಗಳಿಂದ ಅಲಂಕೃತವಾದ ಮನ್ಮಥನು ದ್ವಿಭುಜಾಧಾರಿಯಾಗಿರುವನು. ಎಡಗೈಯಲ್ಲಿ ಕಬ್ಬು ಹಿಡಿದಿರುವನು. ಉದರಬಂಧ, ವೈಜಯಂತಿ ಹಾರ, ನಡುವಸ್ತ್ರಗಳನ್ನು ಧರಿಸಿದ್ದಾನೆ. ಕಾಲಲ್ಲಿ ಕಾಲ್ಗಡಗ, ಪಾದಸರಗಳಿವೆ. ಮನ್ಮಥನ ಎಡಭಾಗಕ್ಕೆ ಪತ್ನಿ ರತಿಯಿದ್ದು, ಇವಳು ಕರ್ಣಕುಂಡಲ, ಕಂಠಾಭರಣ, ಕೊರಳಹಾರ, ಕುಚಬಂಧ, ಕೈಬಳೆ, ಎಡಗೈಯಲ್ಲಿ ಪದ್ಮ, ಬಲಗೈ ಕಟ್ಯಾವಲಂಬಿತ ಳಾಗಿರುವಳು. ಕಟಿಬಂಧವಿದ್ದು, ನಡುವಸ್ತ್ರ ಎರಡೂ ಕಾಲಿನ ಮಧ್ಯದಲ್ಲಿದೆ. ಕಾಲ್ಕಡಗ ಮತ್ತು ಪಾದಸರಗಳಿವೆ. ಮನ್ಮಥನ ಬಲಗಾಲ ಬಳಿ ಅವನ ಮತ್ತೊಬ್ಬ ಪತ್ನಿ ಪ್ರೀತಿಯಿದ್ದು ಎಡಗೈಯಲ್ಲಿ ಕಬ್ಬು, ಬಲಗೈಯಲ್ಲಿ ಫಲ ಹಿಡಿದು ಅಲಂಕೃತಳಾಗಿದ್ದಾಳೆ. ಈ ಶಿಲ್ಪವನ್ನು ಸಣ್ಣದಾಗಿ ಕೆತ್ತಿರುವುದು ವಿಶೇಷತೆ.

**ಗಜಲಕ್ಷ್ಮೀ:** ಶಿಲಾಫಲಕದ ಮಧ್ಯದಲ್ಲಿ ಲಕ್ಷ್ಮೀ ಕಮಲದ ಹೂವಿನ ಮೇಲೆ ಕುಳಿತಿರುವಳು. ಇಕ್ಕೆಲಗಳಲ್ಲಿ ಆನೆಗಳಿವೆ. ಇವುಗಳನ್ನು ಗ್ರಾಮಗಳಲ್ಲಿ ಬಾಣಂತಿ ಕಲ್ಲುಗಳೆಂದು ಕರೆಯುವರು.

ಅಲ್ಲದೆ ಹೆರಿಗೆಯು ಸುರಕ್ಷಿತವಾಗಲು ಇವುಗಳನ್ನು ಬೋರಲಾಗಿ ಮಲಗಿಸುವರು. ಸುರಕ್ಷಿತ ಹೆರಿಗೆಯ ನಂತರ ಗಜಲಕ್ಷ್ಮಿಯನ್ನು ಸೀದಾ ಮುಖಮಾಡಿ ನಿಲ್ಲಿಸಿ ಪೂಜೆ ಸಲ್ಲಿಸುವರು. ಸೋಗಿ, ಕತ್ತೆಬೆನ್ನೂರು, ಕೊಂಬಳಿ, ಬೂದನೂರು, ಕುರುವತ್ತಿ, ನಂದಿಗಾವಿ, ಹುಗಲೂರು, ಹೊನ್ನೂರು, ಹಗರನೂರು ಮೊದಲಾದೆಡೆ ಕಂಡುಬಂದಿವೆ.

ಕತ್ತೆಬೆನ್ನೂರಿನ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಗಜಲಕ್ಷ್ಮೀಯ ಪಟ್ಟಿಕೆಯ ಬಲಬದಿಯ ಅರ್ಧಭಾಗ ಮಾತ್ರ ಉಳಿದಿದ್ದು, ಇನ್ನರ್ಧ ಭಾಗ ಇರುವುದಿಲ್ಲ. ವ್ಯಾಳದ ಅಲಂಕರಣೆಯಲ್ಲಿ ಅಷ್ಟದಿಕ್ಪಾಲಕರ ಕೆಲವು ಚಿತ್ರಣಗಳಿವೆ. ಬಲಭಾಗದ ಆನೆಯೊಂದು ಮಾತ್ರ ಉಳಿದಿದ್ದು, ಆಭರಣಗಳಿಂದ ಅಲಂಕೃತವಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಸೋಗಿಯ ಗಜಲಕ್ಷ್ಮೀ ಶಿಲ್ಪವು ಬಳಪದ ಕಲ್ಲಿನದ್ದಾಗಿದೆ. ಗಜಲಕ್ಷ್ಮಿ ಕೈಗಳಲ್ಲಿ ಪದ್ಮ ಹಿಡಿದಿರುವಳು. ಇಕ್ಕೆಲಗಳಲ್ಲಿ ಆನೆಗಳು ಸೊಂಡಿಲಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುವ ಭಂಗಿಯಲ್ಲಿವೆ. ಪೀಠದ ಕೆಳಗೆ 'ಶ್ರೀ ಗಜಯ್ಯನ ಫಲಕಂ' ಎಂಬ ಶಾಸನವಿದೆ.

ಕಲ್ಯಾಣ ಚಾಲುಕ್ಯರ ಕಾಲದ ಸೋಗಿಯ ಕಲ್ಲೇಶ್ವರ ದೇವಾಲಯದ ಗಜಲಕ್ಷ್ಮಿ ಶಿಲ್ಪವು ಬಳಪದ ಕಲ್ಲಿನದ್ದಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮಿಯ ಎರಡು ಬದಿಗಳಲ್ಲಿ ಆನೆಗಳು ತಮ್ಮ ಸೊಂಡಿಲುಗಳಿಂದ ಲಕ್ಷ್ಮೀಯ ತಲೆಯ ಮೇಲೆ ನೀರಿನ ಕುಂಭ ಹಿಡಿದಿವೆ. ಸೊಂಡಿಲು ಮುರಿದಿವೆ. ಮಕರತೋರಣವಿದೆ. ಹಿಂಬದಿಯಲ್ಲಿ ಅಷ್ಟದಿಕ್ಪಾಲಕರನ್ನು ಕೆತ್ತಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಕ್ರಿಯಾಶಕ್ತಿ ಕಟ್ಟಡದಲ್ಲಿದೆ.

ಹುಗಲೂರಿನ ಕಲ್ಯಾಣ ಚಾಲುಕ್ಯ ಕಾಲದ ಬಳಪದ ಕಲ್ಲಿನ ಪದ್ಮಾಸೀನಳೂ, ಕರಂಡ ಮುಕುಟಧಾರಿಣಿಯೂ ಆಗಿರುವ ಲಕ್ಷ್ಮೀಯು ತನ್ನ ಎರಡು ಕೈಗಳಲ್ಲಿ ಕಮಲಗಳನ್ನು ಹಿಡಿದಿದ್ದಾಳೆ. ಲಕ್ಷ್ಮೀಯ ಅಕ್ಕಪಕ್ಕಗಳಲ್ಲಿ ಎರಡು ಆನೆಗಳು ತಮ್ಮ ಸೊಂಡಿಲುಗಳಲ್ಲಿ ನೀರಿನ ಮಡಕೆಗಳನ್ನು ಹಿಡಿದಿವೆ. ಮಕರತೋರಣವನ್ನು ಹೊಂದಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

**ಸರಸ್ವತಿ:** ಸತ್ವಸ್ವರೂಪಿಣಿಯಾದ, ಸೃಷ್ಟಿಕರ್ತ ಬ್ರಹ್ಮನ ಸತಿಯಾದ, ಸಕಲ ವಿದ್ಯೆಗೆ ಅಧಿದೇವತೆಯಾದ ಸರಸ್ವತಿ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಪೂಜ್ಯಳಾಗಿದ್ದಾಳೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸರಸ್ವತಿಯರ ಮೂರ್ತರೂಪದ ಆರಾಧನೆ ಪ್ರಾರಂಭವಾಗಿದೆ.

ಹಿರೇಹಡಗಲಿ ಕಲ್ಲೇಶ್ವರ ದೇವಾಲಯದಲ್ಲಿ ಸರಸ್ವತಿ ಶಿಲ್ಪವಿದೆ. ದೇವಿಯು ಎತ್ತರದ ಪೀಠದ ಮೇಲೆ ಪದ್ಮಾಸೀನಳಾಗಿರುವಳು. ಬಳ್ಳಿಗಳಿಂದ ಅಲಂಕೃತಗೊಂಡ ಪ್ರಭಾವಳಿಯಿದೆ. ದೇವಿಯ ಕರಂಡಮಕುಟ ಅಲಕಚೂಡಕವಿದೆ. ಭುಜದ ಮೇಲೆ ಕೂದಲು ಸುರುಳಿಯಾಕಾರದಲ್ಲಿ ಇಳಿಬಿದ್ದಿದೆ.

ಕರ್ಣಕುಂಡಲ, ಕರ್ಣಪುಷ್ಪಗಳಿವೆ. ಕಂಠದಲ್ಲಿ ಕಂಠೀಹಾರ, ಪದಕಹಾರ, ಸ್ಕಂದಮಾಲ, ಕೇಯೂರ, ಕಂಕಣ, ಅಂಗೂಲೀಯ ತುಂಬಾ ಸೂಕ್ಷ್ಮ ನಯಗಾರಿಕೆಯನ್ನು ಹೊಂದಿದೆ. ಕಟಿಯ ಮೇಖಲ, ಕಟಿಬಂಧ, ಪಾದವಲಯ, ಪಾದಜಾಲಿಕ, ಕಾಲುಂಗುರಗಳನ್ನು ಧರಿಸಿರುವವಳು. ಚತುರ್ಭುಜಳಾಗಿದ್ದು, ಹಿಂದಿನ ಬಲಗೈಯಲ್ಲಿ ಅಲಂಕಾರಿಕ ಅಂಕುಶ, ಎಡಗೈಯಲ್ಲಿ ಪಾಶ, ಮುಂದಿನ ಬಲಗೈ ಚಿನ್ಮುದ್ರೆ, ಅಕ್ಷಮಾಲೆ, ಎಡಗೈಯಲ್ಲಿ ಪುಸ್ತಕವಿದೆ.

**ಯಕ್ಷ/ಯಕ್ಷಿ:** ಕತ್ತೆಬೆನ್ನೂರಿನ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಕಿರೀಟಧಾರಿಯಾದ ಯಕ್ಷನು ಸುಖಾಸೀನನಾಗಿರುವನು. ಎಡಕಾಲು ಮತ್ತು ಎಡ ಕೈಗಳು ಭಗ್ನವಾಗಿವೆ. ತನ್ನ ಕೈಗಳಲ್ಲಿ ತ್ರಿಶೂಲ, ಅಂಕುಶ, ಪಾಶ ಮತ್ತು ಭಿಕ್ಷಾಪಾತ್ರೆಗಳನ್ನು ಹಿಡಿದಿರುವನು. ಕೊರಳಲ್ಲಿ ಆಭರಣವಿದೆ. ಯಜ್ಞೋಪವೀತ, ಚೆನ್ನವೀರ, ಕೈಕಡಗ, ಕಾಲ್ಕಡಗಳು ಮತ್ತು ಸೊಂಟಪಟ್ಟಿಗಳನ್ನು ಧರಿಸಿದ್ದಾನೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಕತ್ತೆಬೆನ್ನೂರಿನ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಸುಖಾಸೀನ ಯಕ್ಷಿಯ ಶಿಲ್ಪವು ಕಿರೀಟಧಾರಿಣಿಯಾಗಿದ್ದು, ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಅಂಕುಶ, ಪಾಶ ಮತ್ತು ಭಿಕ್ಷಾಪಾತ್ರೆಗಳನ್ನು ಹಿಡಿದಿರುವವಳು. ಕೊರಳಲ್ಲಿ ವಸ್ತ್ರಾಭರಣ, ಕೈಕಡಗ, ಕಾಳ್ಕಡಗ ಹಾಗೂ ಸೀರೆಯನ್ನು ಧರಿಸಿರುವವಳು. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

**೨. ಲೋಹ ಮೂರ್ತಿಗಳು**

ವಿಜಯನಗರ ಕಾಲದಿಂದಲೂ ಅನೇಕ ಲೋಹದ ಮೂರ್ತಿಗಳನ್ನು ಕಾಣಬಹುದು. ಉತ್ಸವದ ಸಂದರ್ಭಗಳಲ್ಲಿ ಇವುಗಳನ್ನು ಬಳಸುವರು.

**ಮೈಲಾರಲಿಂಗ:** ಅಶ್ವರೋಹಿಯಾದ ಮೈಲಾರಲಿಂಗಪ್ಪ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಇನ್ನೊಂದು ಕೈಯಲ್ಲಿ ಕುದುರೆಯ ಲಗಾಮನ್ನು ಹಿಡಿದಿದ್ದಾನೆ. ಪಕ್ಕದಲ್ಲಿರುವ ಗಂಗಿಮಾಳಮ್ಮನ ಶಿಲ್ಪವು ಪೀಠದ ಮೇಲೆ ತ್ರಿಭಂಗಿಯಲ್ಲಿದೆ. ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿರುವವಳು. ಕಿರೀಟಮಕುಟ, ಕಿವಿಯೋಲೆ, ಕೊರಳಹಾರ, ನಡುಪಟ್ಟಿ ಮುಂತಾದ ಆಭರಣಗಳಿಂದ ಅಲಂಕೃತಳಾಗಿರುವವಳು.

**ಹೆಗ್ಗಪ್ಪ:** ಸಮಭಂಗಿಯಲ್ಲಿ ಪೀಠದ ಮೇಲೆ ನಿಂತಿರುವ ಇವನು ಕೈಗಳಲ್ಲಿ ಪದ್ಮ, ಲೇಖನಿ ಮತ್ತು ಪುಸ್ತಕಗಳನ್ನು ಹಿಡಿದಿರುವನು.

**ಮೈಲಾರಲಿಂಗಪ್ಪ:** ರುಂಡಗಳಿರುವ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವನು. ಕಿರೀಟಮಕುಟ ಧರಿಸಿ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿರುವನು.

**ಹೆಗ್ಗಪ್ಪ:** ಮೈಲಾರಲಿಂಗಪ್ಪನ ಪಕ್ಕದಲ್ಲಿ ಸ್ವಲ್ಪ ಕಡಿಮೆ ಎತ್ತರದಲ್ಲಿರುವ ಶಿಲ್ಪವು ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿದ್ದು, ಕರಂಡಮಕುಟ, ಧೋತಿ ಮತ್ತು ಆಭರಣಗಳನ್ನು ಧರಿಸಿ,

ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿರುವನು. ಪೀಠದ ನಾಲ್ಕು ಮೂಲೆಗಳಲ್ಲಿ ರುಂಡಗಳು ಹಾಗೂ ಅವುಗಳ ಮಧ್ಯ ನಾಗ, ಕೆಳಭಾಗದಲ್ಲಿ ಕೀರ್ತಿಮುಖಗಳಿವೆ.

**ಗಂಗಿಮಾಳಮ್ಮ:** ಪದ್ಮ ಪೀಠದ ಮೇಲೆ ಸುಖಾಸನದಲ್ಲಿ ಕುಳಿತುಕೊಂಡಿರುವ ಗಂಗಿಮಾಳಮ್ಮ ಕಿರೀಟ ಮಕುಟ ಧರಿಸಿ, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿರುವಳು. ಕಿರೀಟದ ಮೇಲ್ಭಾಗ ಹೆಡೆಬಿಚ್ಚಿದ ನಾಗವಿದೆ.

**ಮೈಲಾರಲಿಂಗಪ್ಪ-ಗಂಗಿಮಾಳಮ್ಮ:** ಮೈಲಾರಲಿಂಗಪ್ಪನ ತೊಡೆಯ ಮೇಲೆ ಗಂಗಿಮಾಳಮ್ಮ ಕುಳಿತುಕೊಂಡಿದ್ದಾಳೆ. ಕಿರೀಟಮಕುಟ ಧರಿಸಿ, ಕೈಗಳಲ್ಲಿ ಡಮರು, ತ್ರಿಶೂಲ, ಖಡ್ಗ ಮತ್ತು ಪಾನಪಾತ್ರೆಗಳಿವೆ. ಹಿಂಭಾಗದಲ್ಲಿ ಒಂಬತ್ತು ಮಣ ತೂಕದ ಬೆಳ್ಳಿಯ ಫಲಕವಿದೆ. ಅದರಲ್ಲಿ ಚಾಮರಧಾರೆಯರು, ಕೀರ್ತಿಮುಖ, ಮಕರತೋರಣ ಮುಂತಾದ ಅಲಂಕಾರವಿದೆ. ಪೀಠದಲ್ಲಿ ಕ್ರಿ.ಶ. ೧೫೧೮ರ ಶಾಸನವು ಹಿರೇಮೈಲಾರ ದೇವರೆಂದು ತಿಳಿಸುತ್ತದೆ. ಇದನ್ನು ಅಗಿಹುಣ್ಣಿಮೆಯಂದು ಲಗ್ನದ ಸಂದರ್ಭದಲ್ಲಿ ಉತ್ಸವಮೂರ್ತಿಯನ್ನಾಗಿ ಬಳಸಲಾಗುತ್ತದೆ.

ಈ ಮೇಲಿನ ಎಲ್ಲ ಲೋಹದ ಮೂರ್ತಿಗಳನ್ನು ಕುದುರೆ ಹಬ್ಬದಲ್ಲಿ, ಕಾರ್ಣಿಕೋತ್ಸವದ ಸಂದರ್ಭದಲ್ಲಿ ಬಳಸುವರು.[೨೮]

ಇಟಗಿ ಆಂಜನೇಯ, ಮೊದಲಘಟ್ಟ ಆಂಜನೇಯ, ರಂಗಾಪುರ ನರಸಿಂಹ, ಸೋಗಿ ವೀರಭದ್ರೇಶ್ವರ, ಹೂವಿನಹಡಗಲಿ ಕೇಶವ, ಹೊಳಗುಂದಿ ವೀರಭದ್ರೇಶ್ವರ ಮುಂತಾದ ಕಡೆಗಳಲ್ಲಿ ಲೋಹದ ಮೂರ್ತಿಶಿಲ್ಪಗಳನ್ನು ಕಾಣುತ್ತೇವೆ.

**ಟಿಪ್ಪಣಿಗಳು**


೧. ತಿಪ್ಪೇರುದ್ರಸ್ವಾಮಿ ಎಚ್., ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಪು.೫೨೩.

೨. ಇತಿಹಾಸ ದರ್ಶನ ಸಂಪುಟ-೬, ೧೯೯೧, ಪು.೫೬.

೩. ಅದೇ. ಪು.೫೭.

೪. ಕರ್ನಾಟಕ ಪರಂಪರೆ-ಸಂಪುಟ-೧ ಪು.೨೩೪.

೫. ಮಂಜುನಾಥ ಎಂ.ಜಿ., ಕರ್ನಾಟಕ ಸಾಂಸ್ಕೃತಿಕ ಇತಿಹಾಸ, ಪು.೧೧೧.

೬. ಫಣೀಂದ್ರನಾಥ್ ಬೋಸ್, ಪ್ರಿನ್ಸಿಪಾಲ್ ಆಫ್ ಇಂಡಿಯನ್ ಶಿಲ್ಪಶಾಸ್ತ್ರ, ೧೯೭೮, ಪು.೮.

೭. ಪ್ರಭಾಕರ ಎಂ.ಎನ್., ದೇವಾಲಯ ವಾಸ್ತು, ೨೦೧೧, ಪು.೪.

೮. ತಿಪ್ಪೇಸ್ವಾಮಿ ಹೆಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪು.೬೮.

೯. ಶಿವರಾಮ ಕಾರಂತ, ಚಾಲುಕ್ಯ ವಾಸ್ತುಶಿಲ್ಪ, ೧೯೯೧, ಪು.೧೨-೧೯.

೧೦. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.೬೫.

೧೧. ಅಲೆಕ್ಸಾಂಡರ್ ರೇ, ಚಾಲುಕ್ಯನ್ ಆರ್ಕಿಟೆಕ್ಚರ್ (ಎನ್‌ಕ್ಲ್ಯೂಡಿಂಗ್ ಎಕ್ಸಾಂಪಲ್ ಫ್ರಂ ದಿ ಬಳ್ಳಾರಿ ಡಿಸ್ಟ್ರಿಕ್ಟ್), ೧೮೯೬, ಪು.೬,೩೫.

೧೨. ಅಪರ್ಣ ಕೂ.ಸ., ದೇವಾಲಯದ 'ಪ್ರಸ್ತರ' ರಚನೆಯಲ್ಲಿ ಶಾಸ್ತ್ರಗ್ರಂಥಗಳ ಪಾತ್ರ, ಇ.ದ.ರ್, ಪು.೫೯.

೧೩. ಅಪರ್ಣ ಕೂ.ಸ., ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾದ ದೇವಾಲಯ ಮೇಲ್ಕಟ್ಟಡದ ರಚನೆ, ಇ.ದ.ಪು. ೧೬೮.

೧೪. ಅಪರ್ಣ ಕೂ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಪು.೧೦೪.

೧೫. ರಾಮಚಂದ್ರರಾವ್ ಎಸ್.ಕೆ. ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪು.೧೧.

೧೬. ಜ್ಞಾನಾನಂದ ಜಿ. ಶಿಲ್ಪಾದರ್ಶ, ಸಂ-೧, ೨೦೦೧, ಪು.೭೦.

೧೭. ರಾಜರಾಂ ಹೆಗಡೆ, ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗು ಸಾಂಸ್ಕೃತಿಕ ರಾಜಕೀಯದ ಐತಿಹಾಸಿಕ ವಿಶ್ಲೇಷಣೆ, ಅರಿವು ಬರಹ, ೧೯೯೨, ಸಂ.೩, ಭಾಗ-೧, ಪು.೨೮.

೧೮. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.೧೭೫.

೧೯. ರಾಜರಾಂ ಹೆಗಡೆ, ಪೂರ್ವೋಕ್ತ, ಪು.೩೫-೩೬.

೨೦. ಅದೇ.,

೨೧. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪು.೧೭೬.

೨೨. ಅದೇ, ೧೭೮.

೨೩. ಅದೇ, ೧೭೯.

೨೪. ರಾಮಚಂದ್ರರಾವ್ ಎಸ್.ಕೆ. ಪೂರ್ವೋಕ್ತ, ಪು.೩೨೩-೩೨೪.

೨೫. ಅದೇ, ಪು.೧೭೪-೧೭೫.

೨೬. ಅದೇ, ಪು.೨೭೮.

೨೭. ಗೋಪಿನಾಥರಾವ್ ಟಿ.ಎ., ಎಲಿಮೆಂಟ್ಸ್ ಆಫ್ ಹಿಂದೂ ಐಕ್ನೊಗ್ರಫಿ, ಸಂ.೧, ಭಾಗ.೧, ಪು.೨೭೬.

೨೮. ಮಹದೇವ ಸಿ.,(ಸಂ,) ಮೈಲಾರ, ೨೦೧೨, ಪು.೮೩-೮೪.

□□


ಕಲ್ಲೇಶ್ವರ ದೇವಾಲಯ, ಇಟಗಿ


ಮಲ್ಲಿಕಾರ್ಜುನ ದೇವಾಲಯ, ಕುರುವತ್ತಿ


ಮಲ್ಲಿಕಾರ್ಜುನ ದೇವಾಲಯದ ಪೂರ್ವದ್ವಾರ, ಕುರುವತ್ತಿ


ಮಲ್ಲಿಕಾರ್ಜುನ ದೇವಾಲಯದ ಮಕರತೋರಣ, ಕುರುವತ್ತಿ


ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪ, ಉತ್ತಂಗಿ


ರಾಮಲಿಂಗೇಶ್ವರ ದೇವಾಲಯ, ಉತ್ತಂಗಿ


ವೀರಭದ್ರೇಶ್ವರ ದೇವಾಲಯದ ಸಭಾಮಂಟಪ, ಸೋಗಿ


ವೀರಭದ್ರೇಶ್ವರ ದೇವಾಲಯ, ಸೋಗಿ



ಮುಕ್ತೇಶ್ವರ ದೇವಾಲಯ, ಮಾನ್ಯರ ಮಲಸವಾಡ



ಮುಕ್ತೇಶ್ವರ ದೇವಾಲಯ, ಮಾನ್ಯರ ಮಲಸವಾಡ



ಮೈಲಾರಲಿಂಗೇಶ್ವರ ದೇವಾಲಯ, ಮೈಲಾರ



ಮೈಲಾರಲಿಂಗೇಶ್ವರ ದೇವಾಲಯದ ಪ್ರವೇಶದ್ವಾರ, ಮೈಲಾರ



ಸೋಮೇಶ್ವರ ದೇವಾಲಯ, ಹೊಳಗುಂದಿ



ಶಂಕರಲಿಂಗೇಶ್ವರ ದೇವಾಲಯ, ಉತ್ತಂಗಿ



ಕಲ್ಲೇಶ್ವರ ದೇವಾಲಯ, ಮೈಲಾರ



ಕಲ್ಲೇಶ್ವರ ದೇವಾಲಯ, ಅಂಗೂರು



ಭಳ್ಳೇಶ್ವರ-ವೀರಭದ್ರೇಶ್ವರ ದೇವಾಲಯ, ಹೊಳಗುಂದಿ



ಭಳ್ಳೇಶ್ವರ-ವೀರಭದ್ರೇಶ್ವರ ದೇವಾಲಯ, ಹೊಳಗುಂದಿ



ಕಲ್ಲೇಶ್ವರ ದೇವಾಲಯದ ಸಭಾಮಂಟಪ, ಬ್ಯಾಲಹುಣಸಿ



ಕಲ್ಲೇಶ್ವರ ದೇವಾಲಯದ ಮುಖಮಂಟಪ, ಬ್ಯಾಲಹುಣಸಿ


ಬೆಟ್ಟದ ಮಲ್ಲಪ್ಪ, ದಾಸನಹಳ್ಳಿ


ಭಲ್ಲೇಶ್ವರ ದೇವಾಲಯದ ಗರ್ಭಗುಡಿ, ಹೊಳಗುಂದಿ


ಕಲ್ಲೇಶ್ವರ ದೇವಾಲಯ, ಹೂವಿನಹಡಗಲಿ


ಕಲ್ಲೇಶ್ವರ ದೇವಾಲಯ, ಹೂವಿನಹಡಗಲಿ



ಸಂಗಮೇಶ್ವರ ದೇವಾಲಯ, ಹಿರೇಹಡಗಲಿ



ಪಂಚಲಿಂಗೇಶ್ವರ ದೇವಾಲಯ, ಬನ್ನಿಮಟ್ಟ



ಬೆಟ್ಟದ ಮಲ್ಲೇಶ್ವರ ದೇವಾಲಯ, ಸೋಗಿ



ಭೀಮೇಶ್ವರ –ದೇಮೇಶ್ವರ (ಕಲ್ಲೇಶ್ವರ) ದೇವಾಲಯ, ಹಿರೇಹಡಗಲಿ



ಕಲ್ಲೇಶ್ವರ ದೇವಾಲಯದ ದಕ್ಷಿಣ ಪ್ರವೇಶದ್ವಾರ, ಹಿರೇಹಡಗಲಿ



ಕಲ್ಲೇಶ್ವರ ದೇವಾಲಯದ ಪಾರ್ಶ್ವನೋಟ ಹಿರೇಹಡಗಲಿ



ಸೂರ್ಯನಾರಾಯಣ ದೇವಾಲಯ, ಹಿರೇಹಡಗಲಿ



ಕಲ್ಲೇಶ್ವರ ದೇವಾಲಯದ ಸಭಾಮಂಟಪ, ಹಿರೇಹಡಗಲಿ


ಉಗ್ರನರಸಿಂಹ, ರಂಗಾಪುರ


ವಿತಾನ, ಸೂರ್ಯನಾರಾಯಣ ದೇವಾಲಯ, ಮಾಗಳ


ಕೇಶವ(ದಬ್ಬಗುಡಿ) ದೇವಾಲಯ, ಸೋಗಿ


ಲಕ್ಷ್ಮೀನಾರಾಯಣ ದೇವಾಲಯ, ಕೊಟ್ನೆಕಲ್



ಗಣೇಶ, ಹಡಗಲಿ ವಸ್ತುಸಂಗ್ರಹಾಲಯ



ಗಣೇಶ, ನವಲಿ



ನಾಗಶಿಲ್ಪ, ಬನ್ನಿಮಟ್ಟಿ



ನಾಗಶಿಲ್ಪ, ರಂಗಾಪುರ



ನಾಗಶಿಲ್ಪ, ಮಾಗಳ



ಮೈಲಾರ, ಹಡಗಲಿ ವಸ್ತುಸಂಗ್ರಹಾಲಯ



ಮೈಲಾರಲಿಂಗೇಶ್ವರ, ಮೈಲಾರ



ಭೈರವ, ಬಾವಿಹಳ್ಳಿ



ಶಿವಲಿಂಗ. ಸೋಗಿ



ಶಿವಲಿಂಗ. ಹೊನ್ನೂರು



ಉಮಾಮಹೇಶ್ವರ. ರಾಜುವಾಳ



ಆಲಿಂಗನ ಚಂದ್ರಶೇಖರ. ಅಂಗೂರು


ಶಿವಲಿಂಗಗಳು, ಹರವಿ


ಪಂಚಲಿಂಗಗಳು, ಬನ್ನಿಮಟ್ಟಿ


ಶಿವಲಿಂಗ, ಸಂಗಮೇಶ್ವರ ದೇವಾಲಯ, ಹಿರೇಹಡಗಲಿ


ನಂದಿ, ಹರವಿ



ನಂದಿ, ಹರವಿ



ಬಸವೇಶ್ವರ, ಕುರುವತ್ತಿ



ಆಂಜನೇಯ, ಮೊದಲಘಟ್ಟ



ಆಂಜನೇಯ, ರಂಗಾಪುರ



ಯೋಗನಾರಾಯಣ, ಕತ್ತೆಬೆನ್ನೂರು



ಯೋಗನಾರಾಯಣ, ಹೂವಿನಹಡಗಲಿ



ಸೂರ್ಯನಾರಾಯಣ, ಹಿರೇಹಡಗಲಿ



ಮಹಿಷಮರ್ದಿನಿ, ಅಂಗೂರು



ಕೇಶವ, ಹೂವಿನಹಡಗಲಿ



ಲಕ್ಷ್ಮೀನರಸಿಂಹ, ಹಿರೇಹಡಗಲಿ



ಲಕ್ಷ್ಮೀನರಸಿಂಹ, ಹೊಸಳ್ಳಿ



ಉಗ್ರನರಸಿಂಹ, ರಂಗಾಪುರ




ಯಕ್ಷ, ಕ.ವಿ.ವಿ. ವಸ್ತುಸಂಗ್ರಹಾಲಯ



ರತಿ–ಮನ್ಮಥ, ಹಿರೇಹಡಗಲಿ



ಪಾರ್ವತಿ, ಹಡಗಲಿ ವಸ್ತುಸಂಗ್ರಹಾಲಯ



ಸರಸ್ವತಿ, ಹಿರೇಹಡಗಲಿ



ವೀರಭದ್ರೇಶ್ವರ, ಬೆಟ್ಟದ ಮಲ್ಲೇಶ್ವರ



ವೀರಭದ್ರೇಶ್ವರ, ಮಹಾಜನದಹಳ್ಳಿ



ಶಿಬಾರಕಟ್ಟೆ ಶಾಸನ, ತಿಮ್ಲಾಪುರ



ಕಲ್ಲೇಶ್ವರ ದೇವಾಲಯದ ಮುಖಮಂಟಪ, ಇಟಗಿ

## ಅಧ್ಯಾಯ : ಆರು

# ದೇವಾಲಯ ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ

ಅಧ್ಯಾಯ : ಆರು

# ದೇವಾಲಯ ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ

**ಪೀಠಿಕೆ**

ಪ್ರಾಣಿಗಳಲ್ಲೆಲ್ಲ ಅತ್ಯಂತ ಬುದ್ಧಿವಂತನೆಂದು ಮನುಷ್ಯನನ್ನು ಪರಿಗಣಿಸಲಾಗುತ್ತದೆ. ಏಕೆಂದರೆ ಬೇರೆ ಪ್ರಾಣಿಗಳಿಗಿಂತ ಮನುಷ್ಯ ಭಿನ್ನವಾಗಿ ಗುರುತಿಸಿಕೊಂಡಿದ್ದಾನೆ. ಮನುಷ್ಯ ಪ್ರಾಣಿಗಿಂತಲೂ ಭಿನ್ನ ಎಂದು ತೋರಿಸುವ ಅಂಶ ಯಾವುದೆಂದರೆ ಅದೇ ಸಂಸ್ಕೃತಿ. ಮನುಷ್ಯನಿಗೆ ಸಂಸ್ಕೃತಿಯುಂಟು; ಆದರೆ ಪ್ರಾಣಿಗಳಿಗೆ ಸಂಸ್ಕೃತಿ ಇಲ್ಲ ಎಂದು ಹೇಳುವುದರ ಮೂಲಕ ಅದನ್ನು ಸ್ಪಷ್ಟಪಡಿಸಬಹುದು. ಸಂಸ್ಕೃತಿ ಎಂಬ ಪದ ಇತ್ತೀಚಿನ ಅಂದರೆ ನೂರು ವರ್ಷದಿಂದೀಚೆಗೆ ಹೆಚ್ಚಾಗಿ ಪ್ರಯೋಗವಾಗುತ್ತಿದೆ. "ಸಂಸ್ಕೃತಿ ಎಂಬ ಪದವು ಸಂಸ್ಕೃತ, ಸಂಸ್ಕಾರ ಮುಂತಾದ ಪದಗಳು ಹುಟ್ಟಿದ ಮೂಲದಿಂದಲೇ ಹುಟ್ಟಿದೆ. ಸಂಸ್ಕೃತ ಅಥವಾ ಸಂಸ್ಕಾರ ಎಂದರೆ ಸುಧಾರಿಸಿದ, ನಯಗೊಳಿಸಿದ, ಪವಿತ್ರಗೊಳಿಸಿದ, ಪರಿಶುದ್ಧಗೊಳಿಸಿದ, ಶ್ರೇಷ್ಠವಾದ ಮುಂತಾದ ಅರ್ಥಗಳಿವೆ."[೧] ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಪ್ರಕಾರ ಸಂಸ್ಕೃತಿ ಎಂದರೆ "ಮಾನಸಿಕ ಪಕ್ವತೆ". ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ ಎಂದಾಗಿದೆ. 'ಸಂಸ್ಕೃತಿ' ಎಂಬುದು ಇಂಗ್ಲಿಷಿನ 'ಕಲ್ಚರ್' ಎಂಬ ಪದಕ್ಕೆ ಸಮಾನಾರ್ಥಕವಾಗಿ ಹುಟ್ಟಿಕೊಂಡಿದೆ. ಹಾಗೆಯೇ 'ಕಲ್ಚರ್' ಎಂಬುದು ಲ್ಯಾಟಿನ್ ಭಾಷೆಯ 'ಕಲ್ಟ್' ಅಥವಾ 'ಕಲ್ಟಸ್' ಎಂಬ ಪದದಿಂದ ಬಂದಿದೆ. ಈ ಪದಕ್ಕೆ ಮೂಲದಲ್ಲಿ ಭೂಮಿದೈವದ ಆರಾಧನೆ, ಪೈರು ಬೆಳೆಯುವುದು ಎಂಬ ಅರ್ಥಗಳಿವೆ. ಈಗಲೂ ಕೂಡ ಕಲ್ಟ್ ಎಂಬ ಪದವನ್ನು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಬಳಸಲಾಗುತ್ತದೆ. ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಯುರೋಪಿನ ಚಿಂತಕರು ಹೆಚ್ಚಾಗಿ ಅಧ್ಯಯನ ಮಾಡಿದ್ದಾರೆ. ಇವರು ಕೇವಲ ಒಂದು ದೇಶಕ್ಕೆ ಅಥವಾ ಕಾಲಘಟ್ಟಕ್ಕೆ ಸಂಬಂಧಿಸಿದವರಲ್ಲ. ಬೇರೆ ಬೇರೆ ದೇಶ, ಭಾಷೆಗಳಿಗೂ, ಕಾಲಘಟ್ಟಗಳಿಗೂ ಸಂಬಂಧಪಟ್ಟವರು, ರಾಜಕೀಯ ಚಿಂತಕರು, ತತ್ವಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಮುಂತಾದವರು ಸಂಸ್ಕೃತಿಯ ಬಗ್ಗೆ ಸಂಶೋಧನೆಯನ್ನು ನಡೆಸಿದ್ದಾರೆ. ಅವರ ಚಿಂತನೆಗಳು ತಾತ್ವಿಕ ಸ್ವರೂಪವನ್ನಾಧರಿಸಿ ಹಲವಾರು ವಿಧವಾಗಿ ವಿಂಗಡಿಸಬಹುದಾಗಿದೆ. ಮುಖ್ಯವಾಗಿ ನೈತಿಕ ಆದರ್ಶವಾದಿಗಳು, ಮಾನವ ಶಾಸ್ತ್ರದವರು, ಮಾರ್ಕ್ಸ್‌ವಾದಿಗಳು, ಸಮಾಜಶಾಸ್ತ್ರಜ್ಞರು, ಪೌರ್ವಾತ್ಯವಾದಿಗಳು, ಸ್ತ್ರೀವಾದಿಗಳು, ವಸಾಹತೋತ್ತರ ಚಿಂತಕರು, ಆಧುನಿಕೋತ್ತರ ಚಿಂತಕರು ಎಂಬುದಾಗಿ ವಿಂಗಡಿಸಲಾಗಿದೆ.[೨]

ಅತ್ಯುತ್ತಮ ಆಲೋಚನೆಗಳನ್ನಾಗಿ ಉಕ್ತಿಗಳನ್ನು ತಿಳಿಯುವುದು ಸಂಸ್ಕೃತಿಯೇ. ಆದರೆ ಅಷ್ಟು ಸಾಲದು. ನಾವು ಎಷ್ಟೋ ಬಾರಿ ಯಾಂತ್ರಿಕವಾಗಿ ಕೆಲವು ಭಾವನೆಗಳನ್ನು, ಪದ್ಧತಿಗಳನ್ನು ಅನುಸರಿಸುತ್ತಿರುತ್ತೇವೆ. ನಾವು ಅರಿತ ಆಲೋಚನೆಗಳು, ಉಕ್ತಿಗಳು ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನು ನಾವು ತಿದ್ದಿಕೊಳ್ಳಲು ಸಹಾಯ ಮಾಡಬೇಕು. ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ[೩] ಎಂದು ಇಂಗ್ಲೆಂಡಿನ ಮ್ಯಾಥ್ಯೂ ಆರ್ನಾಲ್ಡ್ ತನ್ನ "ಕಲ್ಚರ್ ಅಂಡ್ ಆ್ಯನಾರ್ಕಿ" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಇಲ್ಲಿ ಸಂಸ್ಕೃತಿಯು ವ್ಯಕ್ತಿಗತವಾಗಿದೆ. ವ್ಯಕ್ತಿಯ ವಿಕಾಸಕ್ಕೆ ಸಂಬಂಧಿಸಿದೆ. ಮಾನವಶಾಸ್ತ್ರಜ್ಞರು 'ಸಂಸ್ಕೃತಿ' ಎಂಬುದನ್ನು 'ನಾಗರಿಕತೆ' ಎಂಬ ಅರ್ಥದಲ್ಲಿಯೇ ಬಳಸುತ್ತಾರೆ.

By culture Anthropology means the total way of a people, the social legacy the individual acquires from this group. Our culture can be regarded as that part of the environment that is the creation of man[೪] ಎಂದು ಹೇಳಲಾಗುತ್ತಿದೆ. ಇದೇ ಅರ್ಥದಲ್ಲಿ ಸಂಸ್ಕೃತಿ ಮತ್ತು ನಾಗರಿಕತೆ ಒಂದೇ ಎಂದು ಹೇಳಬೇಕಾಗುತ್ತದೆ. ಇದಕ್ಕೆ ಇಂಬುಕೊಡುವಂತೆ ರವೀಂದ್ರನಾಥ ಠಾಗೂರರು ನಾಗರಿಕತೆ ಎಂಬ ಪದವನ್ನು ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಸಂಸ್ಕೃತಿ ಎಂಬುದು ಒಂದು ಆಕಾರವನ್ನು ತಳಿದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ. ನಮ್ಮ ಪೂರ್ಣತೆಗಾಗಿ ರೂಪಿಸಿಕೊಂಡ ಯಾವುದೋ ದಿವ್ಯದರ್ಶನ ಅಭಿವ್ಯಕ್ತಿ. ಇದಕ್ಕೆ ಸಮನಾದ ಭಾರತೀಯ ಪದ 'ಧರ್ಮ'. ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ. ಮನುಷ್ಯನ ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಗೊಂಡ ಜೀವನವೇ ಸಂಸ್ಕೃತಿ. ಜೀವನಾದರ್ಶಗಳನ್ನು, ಮೌಲ್ಯಗಳನ್ನು ನಮ್ಮ ಮುಂದಿಡುವುದು ಸಂಸ್ಕೃತಿಯ ಘನೋದ್ದೇಶಗಳಲ್ಲಿ ಒಂದು. ಎಲ್ಲಿ ಸರಳವಾದ ರೂಪದಲ್ಲಿ ಆಧ್ಯಾತ್ಮವು ಅಭಿವ್ಯಕ್ತವಾಗುವುದೋ ಅಲ್ಲಿ ಸಂಸ್ಕೃತಿಯು ಅತ್ಯುತ್ತಮ ರೂಪದಲ್ಲಿ ಸೃಷ್ಟಿಯಾಯಿತೆಂದು ಭಾವಿಸಬೇಕು ಎಂದು ತಮ್ಮ "ಸಿವಿಲೈಜೇಷನ್ ಆ್ಯಂಡ್ ಪ್ರೋಗ್ರೆಸ್" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ.[೫]

ಎಲಿಯಟ್ ಟಿ.ಎಸ್. ತನ್ನ 'ನೋಟ್ಸ್ ಟುವರ್ಡ್ಸ್ ದಿ ಡೆಫಿನಿಶನ್ ಆಫ್ ಕಲ್ಚರ್' ಎಂಬ ಕೃತಿಯಲ್ಲಿ "ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಸಮಗ್ರ ಜೀವನ ವಿಧಾನವೇ ಸಂಸ್ಕೃತಿ" ಎಂದಿದ್ದಾನೆ.[೬]

ಭಾರತೀಯ ಸಂಸ್ಕೃತಿಯ ಸಮರ್ಥಕ ಚಿಂತಕರೆಂದೇ ಹೆಸರಾಗಿರುವ ಆನಂದ ಕುಮಾರಸ್ವಾಮಿ ಯವರ ಚಿಂತನೆಗಳು ಅವರ 'ಡಾನ್ಸ್ ಆಫ್ ದಿ ಶಿವ' ಕೃತಿಯಲ್ಲಿ ಪ್ರಕಟವಾಗಿವೆ. ಭಾರತವನ್ನು ಒಳಗೊಂಡಂತೆ ಪೌರ್ವಾತ್ಯ ರಾಷ್ಟ್ರಗಳು ಕಲೆ, ತತ್ವಜ್ಞಾನ, ಸಾಹಿತ್ಯಗಳಲ್ಲಿ ಅಗಾಧ ಸಾಧನೆ ಮಾಡಿವೆ. ಈ ಸಾಧನೆಯು ವಸಾಹತುಶಾಹಿಯಾಗುವ ಮುಂಚಿನ ಯುರೋಪ್ ಮಾಡಿದ ಸಾಧನೆಗೆ ಸಮನಾದುದು. ರಾಜಕೀಯವಾಗಿ ಏಷ್ಯಾವನ್ನು ಗೆದ್ದು ಆಳಲಾರಂಭಿಸಿದ ಬಳಿಕ ಯುರೋಪಿಗೆ

ಸಾಂಸ್ಕೃತಿಕ ಅಹಂಕಾರ ತುಂಬಿಕೊಂಡಿತು. ಇದರಿಂದ ಅದಕ್ಕೆ ಪೂರ್ವ ದೇಶಗಳಿಂದ ಏನನ್ನು ಕಲಿಯಲಾಗಲಿಲ್ಲ. ಇದಕ್ಕೆ ಪೂರಕವಾಗಿ ಪಾಶ್ಚಾತ್ಯ ಸಂಸ್ಕೃತಿಯನ್ನು ಕುರುಡು ವ್ಯಾಮೋಹದಿಂದ ಕಲಿತ ಏಶಿಯನ್ನರು, ತಮ್ಮ ದೇಶದ ಶ್ರೀಮಂತ ಸಂಸ್ಕೃತಿ ಪರಂಪರೆಯ ಬಗ್ಗೆ ಏನೂ ಅರಿಯದ ಕುರುಡರಾಗಿದ್ದಾರೆ ಎಂದು ಹೇಳುತ್ತಾರೆ. ಇವರ ವಾದವನ್ನು ಶಂಕರಮೋಕಾಶಿ ಪುಣೇಕರ ಕೂಡ ಪ್ರತಿಪಾದಿಸುತ್ತಾರೆ.[೭] ಅಂದರೆ ಪಶ್ಚಿಮದ ಚಿಂತನೆಗಳನ್ನು ಉಗ್ರವಾಗಿ ವಿರೋಧಿಸುವುದು ಮತ್ತು ಭಾರತದ ಗತಕಾಲದ ಭವ್ಯಪರಂಪರೆಯನ್ನು, ಭವ್ಯಸಂಸ್ಕೃತಿಯನ್ನು ಉಬ್ಬಿನಿಂದ ವಾದ ಮಂಡಿಸುವುದು ಇವರ ಧ್ಯೇಯವಾಗಿದೆ.

ಹೀಗೆ ಸಂಸ್ಕೃತಿ ಪದದ ಅರ್ಥ ಬಹುವ್ಯಾಪಕವಾಗಿ ಬೆಳೆಯುತ್ತಾ ಹೋಯಿತು. ಹೊಸ ಹೊಸ ಅರ್ಥಗಳನ್ನು ಪಡೆಯುತ್ತ ಸಾಗಿತು. ಸಮಷ್ಟಿ ಜೀವನದ ಅಂತರಂಗದ ಸಾಧನೆಗೆ ಸಹಕಾರಿಯಾದ ಸಾಮಾಗ್ರಿಗಳು ಎಂಬ ಅರ್ಥದಿಂದ ಹಿಡಿದು, ವ್ಯಷ್ಟಿಜೀವನ ವಿಕಾಸಕ್ಕೆ ಕಾರಣವಾದ ಸಾಮರಸ್ಯದ ಸಂಸ್ಕಾರ ಎಂಬುದರವರೆಗೆ ಈ ಪದದ ಅರ್ಥ ಬೆಳೆದಿದೆ. ಹಾಗೆಯೇ ಸಂಸ್ಕೃತಿ ಎಂಬುದು ಸೂತ್ರರೂಪದಲ್ಲಿ ಹಿಡಿದಿಡಲಾಗದ ವಿರಾಟ್‌ಶಕ್ತಿಯೂ ಆಗಿದೆ. ಹುಟ್ಟಿನಿಂದ ಬಾರದೆ, ಮನುಷ್ಯ ತನ್ನ ಪರಿಸರದಿಂದ ಕಲಿತುಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ, ಕೈಗಾರಿಕೆ, ಕಲೆ, ವಿಜ್ಞಾನ, ಕಾನೂನು, ಆಡಳಿತ, ನೀತಿ ಮತ್ತು ಧರ್ಮ ಇತ್ಯಾದಿಗಳೆಲ್ಲವನ್ನು ಸಂಸ್ಕೃತಿಯು ಒಳಗೊಳ್ಳುತ್ತದೆ. ಆದ್ದರಿಂದ ಸಂಸ್ಕೃತಿ ಎಂದರೆ ಒಂದು ಸಮಾಜದ ಜೀವನ ವಿಧಾನ, ಅದರ ಆಚಾರ ವ್ಯವಹಾರಗಳು, ಅದರ ಸಂಸ್ಥೆಗಳು, ಆಲೋಚನಾ ವಿಧಾನಗಳು ಆಗಿವೆ. ಭಾರತದಲ್ಲಿ ಉತ್ತರ ಭಾರತ ಮತ್ತು ದಕ್ಷಿಣ ಭಾರತದ ಆಚಾರ ವಿಚಾರಗಳು, ಜನರ ಜೀವನ ಪದ್ಧತಿಗಳು, ದೇವಾಲಯಗಳು ಮುಂತಾದವುಗಳು ವಿಭಿನ್ನವಾಗಿವೆ.

ದಕ್ಷಿಣ ಭಾರತದ ರಾಜ್ಯವಾದ ಕರ್ನಾಟಕವು ಪ್ರಾಚೀನ ಕಾಲದಿಂದಲೂ ತನ್ನದೇ ವಿಶಿಷ್ಟ ಸಂಸ್ಕೃತಿಯಿಂದ ಗುರುತಿಸಿಕೊಂಡು ಬಂದಿದೆ. ಕರ್ನಾಟಕದ ಚರಿತ್ರೆಯನ್ನು ಗುರುತಿಸುವಲ್ಲಿ ಶಾಸನಗಳು ಪ್ರಮುಖ ಪಾತ್ರ ವಹಿಸುತ್ತವೆ. ಹಾಗೆಯೇ ಇಲ್ಲಿ ಶಾಸನಗಳ ಜೊತೆಗೆ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಕೈಫಿಯತ್ತುಗಳು, ಹಸ್ತಪ್ರತಿಗಳು ಕೂಡ ದೊರೆಯುತ್ತವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಅರಿವಿನ ಕಾಲದ ಸಮಾಜದ ಸಾಂಸ್ಕೃತಿಕ ಪರಿಸರ ಹೇಗಿತ್ತು ಎಂಬುದನ್ನು ತಿಳಿಯಬೇಕಾಗಿದೆ. ಕರ್ನಾಟಕದ ಒಂದು ಜಿಲ್ಲೆಯಾದ ಬಳ್ಳಾರಿಯು ಸಾಂಸ್ಕೃತಿಕವಾಗಿ ತನ್ನದೇ ಆದ ಕೊಡುಗೆಯನ್ನು ನಾಡಿಗೆ ನೀಡಿದೆ. ಇಲ್ಲಿನ ದೇವಾಲಯಗಳು, ವಾಸ್ತುಶಿಲ್ಪ, ಕೆರೆ–ಕಟ್ಟೆಗಳು, ಬಸದಿಗಳು ಮುಂತಾದವು ಜಿಲ್ಲೆಯ ಸಾಂಸ್ಕೃತಿಕ ಪರಿಸರವನ್ನು ಕಟ್ಟುವಲ್ಲಿ ಸಹಕಾರಿಯಾಗಿವೆ. ಹಾಗೆಯೇ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು ಕೂಡ ಸಾಂಸ್ಕೃತಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುವುದನ್ನು ಕಾಣುತ್ತೇವೆ. ಅಂದಿನ ಸಂದರ್ಭದಲ್ಲಿ ಜನರ ಆಚರಣೆಗಳು, ದೇವಾಲಯಗಳು ನಿರ್ವಹಿಸುತ್ತಿದ್ದ ಕಾರ್ಯಗಳ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ.

## ೬.೧. ಧಾರ್ಮಿಕ ಆಚರಣೆಗಳು

ಭಾರತದ ಸಂಸ್ಕೃತಿಯು ಆಧ್ಯಾತ್ಮ ಸ್ವರೂಪವುಳ್ಳದ್ದು. ಉತ್ತರ ಭಾರತದಲ್ಲಿ ಆರ್ಯರ ಸಂಸ್ಕೃತಿ ಇದ್ದರೆ ದಕ್ಷಿಣ ಭಾರತದಲ್ಲಿ ದ್ರಾವಿಡ ಸಂಸ್ಕೃತಿ ಚಾಲ್ತಿಯಲ್ಲಿದೆ. ಹಲವಾರು ತಾತ್ವಿಕ ಆಲೋಚನೆಗಳಿಂದ ಕೂಡಿದ ಕರ್ನಾಟಕವು ಇವೆರಡನ್ನು ಸಮನ್ವಯಗೊಳಿಸಿದೆ. ಕರ್ನಾಟಕವು ವಿವಿಧ ಮತಗಳ ಸಂಗಮವಾಗಿದೆ. ಹಲವಾರು ದೇಶೀಯ ಎಂದು ಕರೆಯಿಸಿಕೊಳ್ಳುತ್ತಿರುವ ಅತಿ ಪುರಾತನ ಪೂಜಾಪದ್ಧತಿಗಳು ಮತ್ತು ಮತಾಚರಣೆಗಳು ಇವೆ. ಇಲ್ಲಿ ನಾಗರಪೂಜೆ ಮತ್ತು ಪವಿತ್ರ ವೃಕ್ಷಪೂಜೆಗಳು ನಡೆಯುತ್ತಿದ್ದವು. ಇಲ್ಲಿ ಅಸಂಖ್ಯಾತ ದೇವಾಲಯಗಳು, ದೇವಾನುದೇವತೆಗಳ ಆರಾಧನೆ ಮತ್ತು ಭೂತಗಳ ಆರಾಧನೆಗಳು ನಡೆಯುತ್ತಿದ್ದವು. ಜೊತೆಗೆ ಪ್ರಾಣಿಬಲಿಯೂ ಆಚರಣೆಯಲ್ಲಿತ್ತು. ಇದು ಇಂದಿಗೂ ಉಳಿದುಕೊಂಡು ಬಂದಿದೆ. ಇದೆಲ್ಲದಕ್ಕಿಂತ ಮುಖ್ಯವಾಗಿ ಪವಿತ್ರವೆಂದು ಕರೆಯಲ್ಪಡುವ ಮಾತೃದೇವತಾರಾಧನೆ ಅಥವಾ ಸಪ್ತಮಾತೃಕೆಗಳ ಆರಾಧನೆ ಇರುವುದನ್ನು ಇಲ್ಲಿ ಕಾಣಲಾಗುತ್ತದೆ.

ಕರ್ನಾಟಕವು ಮುಖ್ಯವಾಗಿ ಹಲವಾರು ಮತ–ಧರ್ಮಗಳ ತಾಣವಾಗಿದೆ. ಹಾಗಾಗಿ ಇದರ ಧಾರ್ಮಿಕ ಇತಿಹಾಸವು ಅತ್ಯಂತ ವಿಸ್ತಾರವಾದುದು. ಆರ್ಯರು ಉತ್ತರದಿಂದ ದಕ್ಷಿಣಕ್ಕೆ ಸಾಗಿ ಬಂದು ಇಲ್ಲಿ ನೆಲೆ ನಿಂತಾಗ ಅವರು ಪಾರಂಪರಿಕವಾಗಿ ಬಂದ ಯಜ್ಞ, ಯಾಗ, ಪ್ರಾಣಿಬಲಿಗಳ ವೈದಿಕ ಧರ್ಮವನ್ನೇ ಅನುಸರಿಸುವುದರ ಜೊತೆಗೆ ಇಲ್ಲಿನ ಪ್ರಮುಖ ದೇವರುಗಳಾದ ಶಿವ ಅಥವಾ ವಿಷ್ಣುವಿನ ಭಕ್ತಿ ಪಂಥವನ್ನು ಕಡೆಗಾಣಿಸಲಿಲ್ಲ. ಅದರ ಜೊತೆಯಲ್ಲಿಯೇ ಇಲ್ಲಿನ ದ್ರಾವಿಡರ ನಾಗಪೂಜೆ, ದೈವಪೂಜೆ, ವೃಕ್ಷಪೂಜೆ ಹಾಗೂ ವಿವಿಧ ಸ್ತ್ರೀ ದೇವತೆಗಳ ಪೂಜೆಯೊಂದಿಗೆ ಪ್ರಾಣಿಬಲಿಗಳ ಶಕ್ತಿಯಾರಾಧನೆಯನ್ನು ಅನುಸರಿಸುವುದು ಅನಿವಾರ್ಯವಾಯಿತು. ಈ ಸಂದರ್ಭದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಕೂಡ ತಮ್ಮ ಅಹಿಂಸಾ ತತ್ವದೊಡನೆ ಕರ್ನಾಟಕಕ್ಕೆ ಕಾಲಿರಿಸಿದವು. ಇದರಿಂದಾಗಿ ಕರ್ನಾಟಕದಲ್ಲಿ ಹಿಂದೂ, ಜೈನ, ಬೌದ್ಧ ಹೀಗೆ ಹಲವಾರು ಧರ್ಮಗಳಿಗೆ ಅನುಗುಣವಾಗಿ ಹಲವಾರು ಧಾರ್ಮಿಕ ಆಚರಣೆಗಳು, ಮತಾಚರಣೆಗಳು ರೂಢಿಗೆ ಬಂದವು. ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಈ ಆಚರಣೆಗಳನ್ನು ಪ್ರದೇಶ, ಜನಾಂಗ, ಜಾತಿ, ಧರ್ಮಕ್ಕೆ ಅನುಗುಣವಾಗಿ ರೂಢಿಸಿಕೊಂಡು ಬರಲಾಯಿತು. ಬಳ್ಳಾರಿ ಜಿಲ್ಲೆಯೂ ಕೂಡ ಕರ್ನಾಟಕದ ಒಂದು ಭಾಗವಾಗಿರುವುದರಿಂದ ಈ ಪ್ರದೇಶದಲ್ಲಿ ಹಲವಾರು ರಾಜಮನೆತನಗಳು ಆಳಿ ಅಳಿದು ಹೋಗಿರುವುದರಿಂದ ಅವರು ಆಚರಿಸುತ್ತಿದ್ದ ಆಚರಣೆಗಳು ಉಳಿದುಬಂದಿವೆ. ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆಯು ವಿಶ್ವಪ್ರಸಿದ್ಧ ಪ್ರವಾಸಿತಾಣವಾಗಿದ್ದು, ಇದು ಹಲವಾರು ಆಚರಣೆಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಹಾಗೆಯೇ ಸಂಡೂರಿನ ಕುಮಾರಸ್ವಾಮಿ ದೇವಾಲಯ, ಹಡಗಲಿಯ ಮೈಲಾರ, ಕುರುವತ್ತಿ ಮುಂತಾದ ಪ್ರದೇಶಗಳಲ್ಲಿ ಇಂದಿಗೂ ಧಾರ್ಮಿಕ ಆಚರಣೆಗಳು ನಡೆಯುತ್ತಲೇ ಇವೆ. ಇಲ್ಲಿ ಕಾಲಮಾನಕ್ಕೆ ತಕ್ಕಂತೆ ಆಚರಣೆಗಳು ನಡೆಯುತ್ತವೆ. ಮುಖ್ಯವಾಗಿ ಹಡಗಲಿ ಅಧ್ಯಯನ ಕ್ಷೇತ್ರವಾಗಿರುವುದರಿಂದ ಇಲ್ಲಿ ಹಲವಾರು ಧಾರ್ಮಿಕ

ಆಚರಣೆಗಳು ಇಂದಿಗೂ ನಡೆಯುತ್ತಿರುವುದರಿಂದಾಗಿ ಅವುಗಳನ್ನು ವಿಶ್ಲೇಷಿಸುವುದು ಅತ್ಯಗತ್ಯ. ಹಡಗಲಿ ತಾಲೂಕಿನಲ್ಲಿ ಮೈಲಾರ ಅತ್ಯಂತ ಹಳೆಯದಾದ ಮತ್ತು ಪ್ರಮುಖ ದೈವಿಕ ಶ್ರದ್ಧಾಕೇಂದ್ರವಾಗಿದೆ.

ಕರ್ನಾಟಕದಲ್ಲಿಯೇ ಅತಿ ಪ್ರಾಚೀನವೂ ಹಾಗೂ ಪ್ರಮುಖವಾಗಿರುವ ಮೈಲಾರ ದೇವಾಲಯಗಳಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಹಿರೇಮೈಲಾರ ಕ್ಷೇತ್ರವೂ ಒಂದಾಗಿದೆ. ಇದು ತುಂಗಭದ್ರಾ ನದಿ ದಕ್ಷಿಣ ದಂಡೆಯ ಮೇಲೆ ಸ್ಥಾಪಿತವಾಗಿದೆ. ಮೈಲಾರದಿಂದ ೫ ಕಿ.ಮೀ. ದೂರದಲ್ಲಿರುವ ಕಪ್ಪತಗುಡ್ಡದ ಹಲವಾರು ಚಿಕ್ಕಶಾಖೆಗಳು ಇರುವುದರಿಂದ ತುಂಗಭದ್ರಾ ನದಿಯು ಪಶ್ಚಿಮವಾಹಿನಿಯಾಗಿ ತಿರುಗಿ, ಮುಂದುವರೆದು ಪೂರ್ವಾಭಿಮುಖವಾಗಿ ಹರಿಯುತ್ತಿರುವುದರಿಂದ ಮೈಲಾರ ಗ್ರಾಮದ ಮೂರು ದಿಕ್ಕುಗಳಲ್ಲಿ ನದಿ ಪ್ರವಹಿಸುತ್ತದೆ. ಇದರಿಂದಾಗಿ ಮೈಲಾರ ಕ್ಷೇತ್ರವನ್ನು ಉಂಗುರಾಲ ಕ್ಷೇತ್ರ ಅಥವಾ ಉಂಗ್ಲಾರ ಕ್ಷೇತ್ರವೆಂದು ಕರೆಯಲಾಗುತ್ತದೆ. ಶಾಸನಗಳಲ್ಲಿ 'ಗುಂಗುಜಿಚಂದ'[೮] ಎಂದು ಕರೆಯಲಾಗಿದೆ. ಈ ಮೈಲಾರ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅನೇಕ ದೇವಾಲಯಗಳ ಗ್ರಾಮದಲ್ಲಿ ಸ್ಥಾಪನೆಗೊಂಡಿವೆ. ವರ್ಷಪೂರ್ತಿಯಾಗಿ ಈ ಕ್ಷೇತ್ರದಲ್ಲಿ ಅನೇಕ ಆಚರಣೆಗಳು ನಡೆಯುತ್ತಲೇ ಬಂದಿವೆ.

ಮೈಲಾರ ಕ್ಷೇತ್ರದ ಪ್ರಾಚೀನತೆಯನ್ನು ನೋಡುವುದಾದರೆ ಚಿದಾನಂದಮೂರ್ತಿ ಎಂ. ಅವರು "ಕನ್ನಡ ಕಾವ್ಯ ಶಾಸನಗಳಲ್ಲಿ ಮೈಲಾರ–ಮಾಳಚಿ" ಎಂಬ ಲೇಖನದಲ್ಲಿ ಮೈಲಾರವನ್ನು ಕುರಿತ ಕ್ರಿ.ಶ.೧೧೧೨ರಲ್ಲಿ ನಯಸೇನನ 'ಧರ್ಮಾಮೃತ'ದಲ್ಲಿ ಬರುವ ಉಲ್ಲೇಖವೇ ಪ್ರಾಚೀನವಾದುದು ಮತ್ತು ಮೈಲ ಎಂಬ ಹೆಸರು ಕ್ರಿ.ಶ.೧೦೩೨ರಲ್ಲಿ ಉಲ್ಲೇಖವಾಗಿದೆ ಎಂದಿದ್ದಾರೆ. ಹಾಗೆಯೇ ನೇಗಿನಹಾಳ ಎಂ.ಬಿ. ಅವರು "ಮೈಲಾರಲಿಂಗ ಖಂಡೋಬಾ" ಕೃತಿಯಲ್ಲಿ ಕರ್ನಾಟಕದಲ್ಲಿ ಸುಮಾರು ಮೈಲಾರನ ಹದಿನಾಲ್ಕು ದೇವಾಲಯಗಳನ್ನು ಗುರುತಿಸಿ ಅವುಗಳ ಬಗ್ಗೆ ವಿಸ್ತೃತ ಚರ್ಚೆಯನ್ನು ನಡೆಸುತ್ತಾರೆ. ಮೈಲಾರ ದೇವಾಲಯದ ರಂಗಮಂಟಪದ ಮುಂದಿರುವ ದಕ್ಷಿಣ ಕಂಬದಲ್ಲಿ ಉತ್ತರ ಮುಖವಾಗಿರುವ ಒಂದು ಶಾಸನದಲ್ಲಿ ಮೈಲಾರನನ್ನು 'ಮಾಲಚೀಪತಿ'ಯೆಂದು ಕರೆಯಲಾಗಿದೆ.[೯] ಇದೇ ರಂಗಮಂಟಪದ ಪೂರ್ವಮುಖದಲ್ಲಿರುವ ಶಾಸನದಲ್ಲಿ ಮೈಲಾರನನ್ನು ಮಲ್ಲಾರಿಶಂಕರನೆಂದು ಕರೆಯಲಾಗಿದೆ.

**ಆಚರಣೆ:** ಮೈಲಾರನ ಜಾತ್ರೆಯು ಒಂದು ಧಾರ್ಮಿಕ ವಿಧಿವಿಧಾನಗಳ ಅಡಿಯಲ್ಲಿ ನಡೆಯುತ್ತದೆ. ಮುಖ್ಯವಾಗಿ ಮೈಲಾರಲಿಂಗನ ಮೂಲಕ್ಷೇತ್ರಗಳಾದ ಮೈಲಾರ ಹಾಗೂ ದೇವರ ಗುಡ್ಡದಲ್ಲಿ ಕ್ರಮವಾಗಿ ಮೂಢಶುದ್ಧ ಪೂರ್ಣಿಮೆ(ಭಾರತ ಹುಣ್ಣಿಮೆ) ಹಾಗೂ ಆಶ್ವೀಜ ಶುದ್ಧ ಬಹುಳ ನವಮಿ (ಮಹಾನವಮಿ)ಯಂದು ಜರುಗುವ ಜಾತ್ರೆಗಳಲ್ಲಿ ನಾಡಿನ ಮೂಲೆ ಮೂಲೆಗಳಿಂದ ಜನರು ಯಾವುದೇ ಜಾತಿಭೇದವಿಲ್ಲದೇ ಬಹುಸಂಖ್ಯೆಯಲ್ಲಿ ಆಗಮಿಸುತ್ತಾರೆ. ಈ ಕಾರ್ಣಿಕೋತ್ಸವದಲ್ಲಿ ಕುರುಬ ಜನಾಂಗಕ್ಕೆ ಸೇರಿದ ಒಬ್ಬ ಗೊರವಪ್ಪ ಮೈಲಾರಲಿಂಗನ ಪೂಜಾರಿಯಿಂದ ಗೊರವ ದೀಕ್ಷೆ ಪಡೆದು, ಪ್ರಾಪಂಚಿಕ ಜೀವನ ತೊರೆದು, ಒಂಬತ್ತು ಇಲ್ಲವೇ ಹನ್ನೊಂದು ದಿನಗಳ ಕಾಲ

ಉಪವಾಸವಿದ್ದು ಅಂದರೆ ಕೇವಲ ಬಾಳೆಹಣ್ಣು–ಹಾಲು ಸೇವಿಸಿ ಕಾರಣಿಕದ ದಿನ ಶುಚಿರ್ಭೂತನಾಗಿ, ಕಾರಣಿಕದ ಸ್ಥಳಕ್ಕೆ ಆಗಮಿಸಿ ಮೈಲಾರಲಿಂಗನ ಪೂಜಾರಿಯ ಆಶೀರ್ವಾದ ಪಡೆಯುತ್ತಲೇ ಆವೇಶಭರಿತನಾಗಿ ಹದಿನೈದು ಅಡಿ ಉದ್ದ, ಮೂರು ಅಂಗುಲ ವ್ಯಾಸ ಹೊಂದಿದ ಗೊರವರು ಹಿಡಿದು ನಿಲ್ಲಿಸಿದ ಶಿವಧನುಸ್ಸನ್ನು ಕ್ಷಣಾರ್ಧದಲ್ಲಿಯೇ ಅರ್ಧಕ್ಕೆ ಏರಿ 'ಸದ್ದು' ಇಲ್ಲವೇ 'ಸದ್ದಲೇ' ಎನ್ನುತ್ತಿದ್ದಂತೆ ಇಡೀ ವಾತಾವರಣ ನಿಶ್ಶಬ್ದವಾಗುತ್ತದೆ. ಒಂದೆರಡು ಶಬ್ದಗಳಲ್ಲಿ ಒಗಟಿನ ರೂಪದಲ್ಲಿ ಹೇಳುವ ಕಾರಣಿಕ ನುಡಿ(ಉದಾ. ಸಂತೃಪ್ತಿ ಆಯಿತಲೇ ಪರಾಕ್, ಮಳೆ, ಬೆಳೆ ಸಂಪಲೇ ಪರಾಕ್ ಇತ್ಯಾದಿ) ಹೇಳುತ್ತಿದ್ದಂತೆ ಮೂರ್ಛೆ ಹೋಗಿ ಕೆಳಗೆ ಬೀಳುತ್ತಾನೆ. ಈತನನ್ನು ಕೆಳಗಿರುವ ಇತರ ಗೊರವರು ಸುರಕ್ಷಿತವಾಗಿ ಎತ್ತಿಕೊಳ್ಳುತ್ತಾರೆ. ಈತನು ಹೇಳಿದ ಚಿಕ್ಕ ವಾಕ್ಯಗಳು ೬೦ ಸಂವತ್ಸರಗಳಿಗೆ ೬೦ರಂತೆ ವರ್ಷಕ್ಕೊಂದು ಆಗಿರುತ್ತವೆ. ಈ ವಾಕ್ಯವನ್ನು ಕೇಳಿದ ಭಕ್ತ ರೈತರು ಆ ವರ್ಷದ ಮಳೆ ಬೆಳೆಗಳನ್ನು ನಿರ್ಧರಿಸುವರು. ಅಂದರೆ ಭವಿಷ್ಯತ್ತಿನಲ್ಲಿ ಆಗುವ ಬದಲಾವಣೆಗಳ ಬಗ್ಗೆ ತಿಳಿಯುವರು. ಈ ಆಚರಣೆ ಅಥವಾ ಉತ್ಸವ ಎಂದು ಆರಂಭವಾಯಿತು ಎಂದು ಖಚಿತವಾಗಿ ಹೇಳಲಾಗುವುದಿಲ್ಲ. ಬದಲಾಗಿ ಈ ಆಚರಣೆ ನಡೆಯುತ್ತಿತ್ತು ಎಂಬುದಕ್ಕೆ ದಾಖಲೆಗಳಿವೆ. ಕಾರ್ಣಿಕದ ವಾಕ್ಯಗಳನ್ನು ಆಂಗ್ಲರ ಆಳ್ವಿಕೆಯಲ್ಲಿ ಅವರ ಸಲಹೆಯ ಪ್ರಕಾರ ೧೯ನೆಯ ಶತಮಾನದಿಂದ ದಾಖಲಿಸುತ್ತಾ ಬರಲಾಗಿದೆ. ಮೈಲಾರನ ಜಾತ್ರೆ ಹಡಗಲಿಯಲ್ಲಿ ನಡೆಯುವ ಒಂದು ಪ್ರಮುಖ ಧಾರ್ಮಿಕ ಆಚರಣೆಯಾಗಿದೆ. ಹಾಗೆಯೇ ಈ ಜಾತ್ರೆಯಲ್ಲಿ ಇನ್ನೊಂದು ವಿಶೇಷವೆಂದರೆ ಕಾಂಚವೀರರು ವಿಸ್ಮಯಕಾರಿ ಪವಾಡಗಳನ್ನು ಮಾಡುವುದು. ಇವರು ಮಾಡುವ ಪವಾಡಗಳೆಂದರೆ ಕೈಯಿಂದ ಸರಪಳಿ ಕತ್ತರಿಸುವ ಸರಪಳಿ ಪವಾಡ, ಗಂಗಿಮಾಳಮ್ಮನಿಗೆ ಬೆಳಗುವ ಕೈ ಪವಾಡ, ಎಡಗಾಲಿನ ಮೀನಗಂಡದಲ್ಲಿ ಬಗನಿಗೂಟ ಬಡಿದುಕೊಂಡು ಅದರಿಂದುಂಟಾದ ತೂತಿನಿಂದ ಮುಳ್ಳಿನ ಗೊನೆ ಹಾಗೂ ಜಿಂಕೆ ಚರ್ಮದ ಮಿಣಿ(ಹಗ್ಗ) ತೂರಿಸಿ ಎಳೆದಾಡುವ ಕಾಲಿನ ಪವಾಡ, ಎಡಮುಂಗೈಯಲ್ಲಿ ತಾಮ್ರದ ತಂತಿ ಚುಚ್ಚಿಕೊಳ್ಳುವ ಶಸ್ತ್ರಪವಾಡ ಇತ್ಯಾದಿಗಳನ್ನು ಮಾಡಿ ತೋರಿಸುತ್ತಾರೆ. ಈ ಪವಾಡಗಳನ್ನು ಮಾಡುವವರು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದವರಾಗಿರುತ್ತಾರೆ. ಇವರನ್ನು ಈರಗಾರರು, ಈರ್ಗಯ್ಯಗಳು, ಕಾಸೋವೀರರೆಂಬ ಹೆಸರಿನಿಂದ ಕರೆಯಲಾಗುತ್ತದೆ. ಇದು ಕೂಡ ಒಂದು ಆಚರಣೆಯಾಗಿ ಕಂಡುಬರುತ್ತದೆ.

**ದೋಣಿಸೇವೆ:** ಇದು ಮೈಲಾರಲಿಂಗನ ಜಾತ್ರೆಯ ಮತ್ತೊಂದು ವಿಶೇಷ ಆಚರಣೆಯಾಗಿದೆ. ಗೊರವರ ದೋಣಿಯನ್ನು ತುಂಬಿದರೆ ಅದು ಮೈಲಾರಲಿಂಗನಿಗೆ ಮುಟ್ಟುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಇದನ್ನು ಕಟ್ಟಿಗೆ, ಹಿತ್ತಾಳೆ, ಕಂಚಿನಿಂದ ಮಾಡಲಾಗಿರುತ್ತದೆ. ಇದು ಚಚ್ಚೌಕಾರದ ದೋಣಿಯಾಗಿರುವುದರಿಂದ ಮಲ್ಲಾಸುರನ ತಲೆಬುರುಡೆ ಎಂತಲೂ ಕರೆಯಲಾಗುತ್ತದೆ. ಹಾಗೆಯೇ ಪರಣಿ ಬಟ್ಟಲು ಎಂತಲೂ ಕರೆಯುತ್ತಾರೆ. ಪರಣಿ ಎಂದರೆ ಪರಿಶುದ್ಧವಾದುದು ಎಂದರ್ಥ. ಈ ಪರಿಣಿಯಲ್ಲಿ ವಿಷವಿಕ್ಕಿದರೂ ಕೂಡ ಅಮೃತವಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ.

**ಆಚರಣೆ:** ಹಾಸಿದ ಕಂಬಳಿಯ ಮೇಲೆ ದೋಣಿಗಳನ್ನು ಸಾಲಾಗಿ ಇಡಲಾಗುತ್ತದೆ. ಭಸ್ಮ, ಕುಂಕುಮ, ಭಂಡಾರ, ಹೊನ್ನವರೆ ಹೂಗಳನ್ನಿಟ್ಟು ಪೂಜಿಸುತ್ತಾರೆ. ಅನಂತರ ಮೈಲಾರನಿಗೆ ಇಷ್ಟವಾದ ಹಣ್ತುಪ್ಪ(ಬಾಳೆಹಣ್ಣು ಹಾಗೂ ತುಪ್ಪಗಳ ಮಿಶ್ರಣ) ದೋಣಿಯಲ್ಲಿ ಹಾಕಿದ ಮೇಲೆ ಹೂರಣದಿಂದ ಮಾಡಿದ ಭಕ್ಷ್ಯಗಳನ್ನು ಹಾಕಿ ದೋಣಿಗಳನ್ನು ತುಂಬಿಸಲಾಗುತ್ತದೆ. ಇಲ್ಲಿ ದೋಣಿಗಳು ಇಷ್ಟೇ ಇರಬೇಕೆಂಬುದಿಲ್ಲ. ಅಂದರೆ ಕನಿಷ್ಠ ಎರಡು ದೋಣಿಗಳು ಹಾಗೂ ಗರಿಷ್ಠಕ್ಕೆ ಮಿತಿ ಇಲ್ಲ. ಆದರೂ ಸಾಮಾನ್ಯವಾಗಿ ೫ ದೋಣಿಗಳನ್ನು ತುಂಬಿಸುವ ಪರಿಪಾಟವಿದೆ. ಈ ದೋಣಿಗಳ ಬದಿಗೆ ಎಲೆ, ಅಡಿಕೆ ಇಟ್ಟು ಭಕ್ತ ಜನರು ನಮಿಸುತ್ತಾರೆ. ಅನಂತರ ಗೊರವರು ಹುರ್-ಹುರ್ ಎನ್ನುತ್ತ ನಾಯಿಗಳಂತೆ ಗುರ್‌ಗುಡುತ್ತಾ ಎದುರುಬದುರಾಗಿ ಮೊಳಕಾಲೂರಿ ಕುಳಿತು ದೋಣಿಗೆ ಬಾಯಿ ಹಾಕಿ ಅದರಲ್ಲಿರುವ ಭಕ್ಷ್ಯವನ್ನು ಖಾಲಿ ಮಾಡಿ ಭಕ್ತರನ್ನು ಹರಸುತ್ತಾರೆ. ಇದಕ್ಕೆ ಗೊರವಟಿಕೆ ಯಾಡುವುದೆಂದು ಕರೆಯುತ್ತಾರೆ. ಇದೂ ಒಂದು ಆಚರಣೆಯಾಗಿದೆ.

ಹೀಗೆ ಹಡಗಲಿಯ ಮೈಲಾರಲಿಂಗನ ಆಚರಣಾ ವಿಧಾನವನ್ನು ಕರ್ನಾಟಕದಲ್ಲಿಯೇ ವಿಶಿಷ್ಟವಾಗಿ ಕಾಣಲಾಗುತ್ತದೆ. ಮೈಲಾರ ದೇವರ ಉತ್ಸವದ ಕುರಿತು ಶಾಸನದಲ್ಲಿಯೂ ಉಲ್ಲೇಖ ವಾಗಿರುವುದನ್ನು ಕಾಣಬಹುದು. ಮೈಲಾರ ಗ್ರಾಮದ ಮೈಲಾರಲಿಂಗ ದೇವಾಲಯದ ಪ್ರಾಕಾರದಲ್ಲಿಯ ಕಲ್ಯಾಣ ಮಂಟಪದಲ್ಲಿನ ಮೈಲಾರ-ಮಾಳಚಿ ವಿಗ್ರಹದ ಅಡಿಯಲ್ಲಿನ ಶಾಸನದಲ್ಲಿ ಹಿರಿಯ ಮೈಲಾರ ಉತ್ಸವದ ಕುರಿತು ತಿಳಿಸುತ್ತದೆ.[೧೦] ಮೈಲಾರಲಿಂಗನ ದೇವಾಲಯದ ಆವರಣದಲ್ಲಿ ಚಾಲುಕ್ಯರಿಂದ ವಿಜಯನಗರದವರೆಗಿನ ಅಪರೂಪದ ಕೆಲವು ಶಿಲ್ಪಗಳಿವೆ. ಅವುಗಳಲ್ಲಿ ನಾಲ್ಕು ಶಿಲ್ಪಗಳು, ಮೈಲಾರ ದೇವರಿಗೆ ನರಬಲಿ ನಡೆಯುತ್ತಿದ್ದುದನ್ನು ಸೂಚಿಸುತ್ತದೆ. ಮೈಲಾರದಲ್ಲಿ ಮಾತ್ರವಲ್ಲದೆ ಹಡಗಲಿಯ ಹಲವಾರು ಪ್ರಸಿದ್ಧ ಕ್ಷೇತ್ರಗಳಲ್ಲಿ ನಾನಾ ವಿಧದಲ್ಲಿ ಧಾರ್ಮಿಕ ಆಚರಣೆಗಳು ನಡೆಯುತ್ತಿದ್ದವು. ಗಂಡರಾದಿತ್ಯ-ಪೊಳಲ ಗ್ರಾಮದ ಮಹಾಜನರು ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದರು[೧೧] ಎಂದು ಹೊಳಲುನಲ್ಲಿ ದೊರೆತ ಶಾಸನ ತಿಳಿಸುತ್ತದೆ.

**ಮಾತೃಪೂಜೆ:** ಹಡಗಲಿಯನ್ನು ಆಳಿದ ಅನೇಕ ರಾಜವಂಶಗಳ ಕಾಲದಲ್ಲಿ ಮಾತೃಪೂಜೆ ಇತ್ತು ಎಂಬುದಾಗಿ ತಿಳಿದುಬಂದಿದೆ. ಭಾರತೀಯ ಸಮಾಜದಲ್ಲಿ ಸ್ತ್ರೀಗೆ ವಿಶೇಷ ಸ್ಥಾನವಿದೆ. ಆ ಮಹತ್ವದ ಸ್ಥಾನ ಬಲದಿಂದಲೇ ಅವಳನ್ನು ಶಕ್ತಿಯ ಮೂರ್ತಸ್ವರೂಪವಾಗಿ ಹಲವು ರೀತಿಗಳಲ್ಲಿ ಪೂಜಿಸಲಾಗುತ್ತದೆ. ಇಲ್ಲಿ ಸಪ್ತಮಾತೃಕೆಯರಿಗೆ ವಿಶೇಷವಾದ ಸ್ಥಾನವಿದೆ. ಹಡಗಲಿಯಲ್ಲಿ ಸಪ್ತಮಾತೃಕೆಯರ ವಿಗ್ರಹಗಳು ದೊರೆಯುತ್ತವೆ. ಆದರೆ ಇವುಗಳ ಉಲ್ಲೇಖ ಶಾಸನಗಳಲ್ಲಿ ಕಂಡುಬಂದಿಲ್ಲ. ಈ ವಿಗ್ರಹಗಳು ಹಲವು ದೇವಾಲಯಗಳಲ್ಲಿ ಕಂಡುಬಂದಿವೆ. ಮುಖ್ಯವಾಗಿ ಸಪ್ತಮಾತೃಕೆಯರು ಯಾರೆಂದರೆ ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ ಇವರ ಜೊತೆಗೆ ವೀರಭದ್ರ ಮತ್ತು ಗಣಪತಿಯ ಮೂರ್ತಿಗಳು ಇರುತ್ತವೆ. ಸಪ್ತಮಾತೃಕೆಯರು ಶಾಕ್ತದೇವತೆಯರು ಇವರು ಇರುವ ಕ್ಷೇತ್ರ ಶಕ್ತಿಕ್ಷೇತ್ರವಾಗಿರುತ್ತದೆ. ಆದರೆ "ಸಪ್ತಮಾತೃಕೆಯರಿಗೆ

ಪ್ರಾಣಿಬಲಿ ಇಲ್ಲ. ಸಪ್ತಮಾತೃಕೆಯರ ಕ್ಷೇತ್ರಪಾಲಕನಾದ ಭೈರವನಿಗೆ ಮಾತ್ರ ಪ್ರಾಣಿ ಬಲಿ ಇರುತ್ತದೆ ಎಂದು ದೇವರಕೊಂಡಾರೆಡ್ಡಿಯವರು ಹಲವು ಆಚರಣೆಗಳ ಹಿನ್ನೆಲೆಯಲ್ಲಿ ವಿವೇಚಿಸಿದ್ದಾರೆ.[೧೨] ಹಡಗಲಿಯನ್ನು ಆಳಿದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸ್ತ್ರೀ ದೇವತೆಯರ ಆರಾಧನೆ ಕಡಿಮೆ ಇತ್ತು ಎಂದು ತಿಳಿದುಬಂದಿದೆ. ಈ ಮಾತೃಪೂಜೆಯೂ ಕೂಡ ಒಂದು ಧಾರ್ಮಿಕ ಆಚರಣೆಯಾಗಿ ಜಾರಿಯಲ್ಲಿತ್ತು ಎಂಬುದು ತಿಳಿದುಬರುತ್ತದೆ. ಕೊಂಬಳಿ, ಹೊನ್ನೂರು, ಮಾಗಳ, ಹಿರೇಹಡಗಲಿ, ಅಂಗೂರು, ಮಾನ್ಯರಮಸಲವಾಡ, ಹೊಳಲು, ಬೂದನೂರು, ನಡುವಿನಹಳ್ಳಿ, ಕೋಟೆಹಾಳು, ಬ್ಯಾಲಹುಣಸಿ, ಸೋಗಿಗಳಲ್ಲಿ ಹದಿನಾಲ್ಕು ಸಪ್ತಮಾತೃಕೆಯರ ಶಿಲ್ಪಗಳು ಕಂಡುಬಂದಿವೆ.

**ನಿತ್ಯಪೂಜೆ:** ದೇವರಿಗೆ ಸಂಬಂಧಿಸಿದ ವಿವಿಧ ಸೇವೆಗಳಲ್ಲಿ ಪೂಜೆಯೂ ಕೂಡ ಒಂದು. ದೇವರಿಗೆ ಪ್ರತಿನಿತ್ಯ ನಡೆಯುವ ಪೂಜೆಗಳನ್ನು ನಿತ್ಯಪೂಜೆಗಳು ಎನ್ನುವರು. ಪಕ್ಷದ ಅಥವಾ ಮಾಸದ ನಿರ್ದಿಷ್ಟ ತಿಥಿಗಳಂದು ನಡೆಯುವ ಪೂಜೆಗಳು ನೈಮಿತ್ತಿಕಗಳು; ಇವುಗಳನ್ನೇ ಪಕ್ಷಪೂಜೆ ಅಥವಾ ಮಾಸಪೂಜೆ ಎಂದು ಕರೆಯಲಾಗುತ್ತದೆ. ವರ್ಷದ ವಿಶೇಷ ಹಬ್ಬ, ಸಂಕ್ರಮಣ ಇತ್ಯಾದಿ ದಿನಗಳಲ್ಲಿ ನಡೆಯುವ ಪೂಜೆಯನ್ನು ವಿಶೇಷ ಪೂಜೆ ಎನ್ನುತ್ತೇವೆ. ಇವುಗಳಲ್ಲಿ ಪರ್ವ, ಉತ್ಸವ ಇತ್ಯಾದಿಗಳು ಸೇರುತ್ತವೆ. ದೇವಾಲಯಗಳಲ್ಲಿ ವೇದೋಕ್ತ ಹೋಮ, ಯಾಗ, ಯಜ್ಞಗಳು ನಡೆಯುವುದಿಲ್ಲ. ಆದರೆ ದೇವರ ಪೂಜಾ ಕಾಲದಲ್ಲಿ ವೇದಪಠಣ ಮತ್ತು ಪುರಾಣಪಠಣಗಳು ನಡೆಯುತ್ತವೆ. ದೇವರ ಪೂಜಾವಿಧಿಯ ಮಂತ್ರಭಾಗಗಳನ್ನು ವೇದಗಳಿಂದಲೇ ಸ್ವೀಕರಿಸಲಾಗಿರುತ್ತದೆ. ದೇವರ ಪೂಜಾವಿಧಿಗಾಗಿ ಹಲವಾರು ರಾಜರು ದೇವಸ್ಥಾನಗಳಿಗೆ ದಾನ-ದತ್ತಿಗಳನ್ನು ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ವಿಜಯಪಾಂಡ್ಯನ ಸಾಮಂತನಾದ ಮಧುವರಸನ ಮಗನಾದ ಶಂಕರಪಾಂಡ್ಯನು ಹೊಳಲಿನ ಗೌರವೇಶ್ವರ ದೇವಸ್ಥಾನದಲ್ಲಿ ಪ್ರತಿನಿತ್ಯ ನಡೆಯುವ ಪೂಜೆಗೆ ಅಡಿಕೆಯ ಮೇಲಿನ ಹೆಜ್ಜುಂಕವನ್ನು ದಾನ ನೀಡಿದ್ದಾನೆ.[೧೩] ಹೊಳಲಿನ ೧೨೦ ನಾಗರಿಕರು ಗವರೇಶ್ವರ ದೇವಸ್ಥಾನದಲ್ಲಿ ನಡೆಯುತ್ತಿದ್ದ ದಿನನಿತ್ಯದ ಪೂಜೆಗೆ ೨೨೦ ಕಮ್ಮ ತೋಟದ ಭೂಮಿಯನ್ನು ದಾನವಾಗಿ ನೀಡಿದ್ದಾರೆ.[೧೪] ಕುರುವತ್ತಿ ಗ್ರಾಮದ ಮಹಾಜನರು ಮತ್ತು ಗ್ರಾಮದ ಮುಖ್ಯಸ್ಥ ಕಾಳಿದಾಸನು ಅಭಿನವ ಸೋಮೇಶ್ವರ ದೇವಸ್ಥಾನದಲ್ಲಿ ನಡೆಯುವ ಪೂಜೆಗೆ ತೆರಿಗೆಯಿಂದ ಬಂದ ಹಣವನ್ನು ದಾನವಾಗಿ ನೀಡಿದ್ದಾರೆ.[೧೫] ಹೀಗೆ ಹಡಗಲಿಯಲ್ಲಿ ದೊರೆತ ಹಲವಾರು ದಾನಶಾಸನಗಳು ದೇವಸ್ಥಾನಗಳಿಗೆ ನೀಡಿರುವುದೇ ಆಗಿವೆ. ದಾನ ನೀಡಿರುವ ಉಲ್ಲೇಖಗಳೂ ಕೂಡ ನಮಗೆ ಶಾಸನಗಳಲ್ಲಿ ದೊರೆಯುತ್ತವೆ.

**ಅಂಗಭೋಗ ಮತ್ತು ರಂಗಭೋಗ:** ಅಂಗಭೋಗವು ದೇವಸ್ಥಾನಗಳಲ್ಲಿ ಬೆಳಗಿನ ಪೂಜೆಗೆ ಮಾತ್ರ ಸೀಮಿತವಾಗಿತ್ತು. ಇದು ಮಹಾಮಂಗಳಾರತಿಯೊಂದಿಗೆ ಮುಗಿಯುತ್ತದೆ. ಉಳಿದ ಸಮಯದ ಪೂಜೆಗಳಲ್ಲಿ ಸ್ನಾನ ಇತ್ಯಾದಿ ಭೋಗಗಳನ್ನು ಹೊರತುಪಡಿಸಿ, ಧೂಪ, ದೀಪ, ನೈವೇದ್ಯ ಸಮರ್ಪಣೆ ಮಾತ್ರ ಇರುತ್ತದೆ. ಹಲವು ಶಾಸನಗಳು ದೇವರ ಶ್ರೀಕಾರ್ಯಕ್ಕೆ ದೊರೆತ ದಾನಗಳನ್ನು

ಉಲ್ಲೇಖಿಸಿವೆ. ದೇವಾಲಯಗಳ ಪೂಜಾವಿಧಿಯಲ್ಲಿ ಬಹಳವಾಗಿ ಗಮನ ಸೆಳೆಯುವುದು 'ರಂಗಭೋಗ'. ರಂಗಭೋಗವು ರಂಗದ ಮೇಲೆ ಪ್ರದರ್ಶಿಸಲ್ಪಡುತ್ತಿತ್ತು. ಇದು ಒಂದು ಸೇವೆಯ ರೂಪದಲ್ಲಿ ಆಚರಣೆಯಲ್ಲಿತ್ತು. ಇದು ಪ್ರದರ್ಶನದ ಪೂಜೆಯಾಗಿದ್ದರಿಂದ ಅದರಲ್ಲಿ ನೃತ್ಯ, ಗೀತ, ವಾದ್ಯಗಳು ಅವಶ್ಯಕವಾಗಿ ಬೇಕಾಗುತ್ತವೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಜಾರಿಯಲ್ಲಿದ್ದ ಒಂದು ಆಚರಣಾವಿಧಾನವಾಗಿದೆ. ಹಿಂದೆ ಅರಸರ ಕಾಲದಲ್ಲಿ ರಾಜ ತನ್ನ ರಾಜ್ಯದ ಸರ್ವಸಂಪತ್ತುಗಳ ಪ್ರಭು ಮತ್ತು ದೇವ ಎಂದು ಪರಿಗಣಿಸಲ್ಪಟ್ಟಿದ್ದನು. ಅಂದರೆ ದೇವರು ಆಸೆ ಪಟ್ಟ ವಸ್ತುಗಳೆಲ್ಲವೂ ಅರ್ಪಿತವಾಗಬೇಕು. ಅವುಗಳಲ್ಲಿ ಹೆಣ್ಣು ಒಂದು. ಅವಳನ್ನು 'ಸೂಳೆ' ಎಂದು ಸಂಬೋಧಿಸಲಾಗಿದೆ.[೧೬] ಇವರಿಗೆ ಪೊದ್ದಿ>ಪೋಚಿ>ಬೊಡ್ಡಿ ಎಂಬ ವಿಶೇಷಣಗಳು ಉಂಟು. ಪ್ರಾಯಶಃ ಚಾಲುಕ್ಯರ ಮನೆತನಕ್ಕೆ ಸಂಬಂಧಪಟ್ಟ ರಾಜನರ್ತಕಿಯರೇ ಸೂಳೆಯರೆಂದು ಪರಿಗಣಿಸಲ್ಪಟ್ಟರು. ಬಾಗಳಿಯಲ್ಲಿ ದೊರೆತ ಶಾಸನಗಳಲ್ಲಿ ದೇವಾಲಯಗಳಲ್ಲಿ ಅಂಗಭೋಗ ಮತ್ತು ರಂಗಭೋಗಕ್ಕೆ ಹೆಚ್ಚು ಪ್ರಾಧಾನ್ಯತೆ ಇತ್ತು ಎಂಬ ಉಲ್ಲೇಖಗಳಿವೆ. ದೇವಾಲಯಗಳಿಗೆ ಹೆಣ್ಣನ್ನು ಬಿಡುವ ಸಂಪ್ರದಾಯ ಯಾವಾಗ ಆರಂಭವಾಯಿತು ಎಂಬುದಕ್ಕೆ ಸ್ಪಷ್ಟವಾದ ಆಧಾರಗಳಿಲ್ಲ. ಆದರೂ ಕ್ರಿ.ಶ.೭೭೮-೭೯ ಪಟ್ಟದಕಲ್ಲು ಶಾಸನದಲ್ಲಿ ಉಲ್ಲೇಖವಾದಂತಹ 'ದೇವಾಲಯದ ಸೂಳೆ'ಯೇ ಕರ್ನಾಟಕದ ಪ್ರಥಮ ದೇವದಾಸಿ ಯಾಗಿದ್ದಾಳೆ.[೧೭] ದೇವಾಲಯಗಳಲ್ಲಿ ನಡೆಯುವ ಅಂಗಭೋಗ ಮತ್ತು ರಂಗಭೋಗಕ್ಕೆ ರಾಜರು, ಸಾಮಂತ ಅರಸರು ಮುಂತಾಗಿ ಹಲವರು ದಾನ-ದತ್ತಿಗಳನ್ನು ನೀಡುತ್ತಿದ್ದರು ಎಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಆದರೆ ಹಡಗಲಿಯಲ್ಲಿ ದೊರೆತ ಶಾಸನದಲ್ಲಿ 'ದೇವಭೋಗಕ್ಕೆ'[೧೮] ಬಿಟ್ಟ ಭೂಮಿ ಎಂದಿದೆ. ಇದು ಅಂಗಕ್ಕೋ ಅಥವಾ ರಂಗಕ್ಕೋ ಎಂದು ತಿಳಿಯುವುದು ಕಷ್ಟವಾಗಿದೆ. ಕೆಲವೊಂದು ಶಾಸನದಲ್ಲಿ 'ಭೋಗದ ಸೂಳೆ' ಎಂಬ ಉಲ್ಲೇಖ ಬರುತ್ತದೆ.[೧೯] ಇದು ಯಾವುದು ಎಂದು ಗುರುತಿಸುವುದು ಕಷ್ಟಸಾಧ್ಯ.

ಬಾಗಳಿಯ ಕಲ್ಲೇಶ್ವರ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ ರಂಗಭೋಗಕ್ಕೆ ಸಂಬಂಧಿಸಿದ ಪ್ರಮುಖ ದೇವಾಲಯವಾಗಿದೆ. ಇದು ಅತ್ಯಂತ ವಿಶಾಲವಾದ ಉದ್ದನೆಯ ನವರಂಗವನ್ನು ಹೊಂದಿದೆ. ಈ ದೇವಾಲಯದ ಕೆಲವು ಕಂಬಗಳಲ್ಲಿ ನೃತ್ಯಭಂಗಿಯಲ್ಲಿ ಇರುವ ಸ್ತ್ರೀ ಶಿಲ್ಪಗಳಿವೆ. ಗರ್ಭಗೃಹದ ದ್ವಾರಬಂಧದ ಪಟ್ಟಿಕೆ ನೃತ್ಯಮೂರ್ತಿ ಶಿವ ಹಾಗೂ ಅಕ್ಕಪಕ್ಕಗಳಲ್ಲಿ ಉಮಾ ಮತ್ತು ಗಂಗೆ ನೃತ್ಯಭಂಗಿಗಳಲ್ಲಿ ಚಿತ್ರಿತವಾಗಿದ್ದಾರೆ. ಈ ಕಂಬಗಳ ಅಲಂಕಾರ ಪ್ರಭಾವಳಿಗಳಲ್ಲಿ ನೃತ್ಯಭಂಗಿಗಳಿರುವ ಮದನಿಕೆಯರು ಕಂಡುಬರುತ್ತಾರೆ. ಇಲ್ಲಿ ಕಂಡುಬರುವ ಸ್ತ್ರೀ ಅರ್ಧಮಾತ್ರ ಕರಣದಲ್ಲಿ ಇರುವಂತೆ ಕೆತ್ತಲಾಗಿದೆ. ಅಕ್ಕಪಕ್ಕದ ಪುರುಷರಲ್ಲಿ ಎಡಭಾಗದವನು ಮೃದಂಗವನ್ನು, ಬಲಭಾಗದವನು(ಅನವದ್ಧ) ಕೋಲಿನಂತಹ ವಾದ್ಯವನ್ನು ಕೋನದ ಸಹಾಯದಿಂದ ನುಡಿಸುತ್ತಿರು ವುದನ್ನು ಕಾಣಬಹುದಾಗಿದೆ. ಈ ಎರಡೂ ವಾದ್ಯಗಳು ನರ್ತನಕ್ಕೆ ಹೆಚ್ಚಾಗಿ ಉಪಯೋಗವಾಗುತ್ತಿದ್ದವು.[೨೦] ಹೂವಿನಹಡಗಲಿಯಲ್ಲಿನ ಕಲ್ಲೇಶ್ವರ ದೇವಾಲಯದಲ್ಲಿ[೨೧] ಹಾಡುಗಾರರು ಇದ್ದಾರೆಂದು ಶಾಸನ ತಿಳಿಸುತ್ತದೆ. ಹಾಗೆಯೇ ಮೈಲಾರದಲ್ಲಿ ದೊರೆತ ಎರಡು ಶಾಸನಗಳಲ್ಲಿ ಮಾಳಲದೇವಿಗೆ ಲೀಲಾ-

ಶುಕನಾಸಿ, ನಾಚಗ್ರುಹ(ನಾಟ್ಯಗೃಹ)–ರಂಗಮಂಟಪವನ್ನು ಗಂಗರಸನು ಕಟ್ಟಿಸಿದನೆಂದು ಹೇಳಲಾಗಿದೆ.[೨೨] ಹಾಗೆಯೇ ಇನ್ನೊಂದು ಶಾಸನದಲ್ಲಿ ಗಂಗಣ್ಣನು ಚಿತ್ರತೋರಣ, ನಾಲ್ಕು ಕಂಬ ಮತ್ತು ವಾತಾಯನವುಳ್ಳ ರಂಗಮಂಟಪವನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೨೩] ಆದರೆ ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ಇದರ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಆದರೆ ಚಾಲುಕ್ಯರ ಕಾಲದಲ್ಲಿ ಈ ಆಚರಣೆಗಳು ಇದ್ದವು ಎಂಬುದನ್ನು ಗಮನಿಸಲಾಗಿ ಹಡಗಲಿಯಲ್ಲಿ ಆಳಿದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಇದ್ದಿರಬಹುದೆಂದು ಊಹಿಸಬಹುದಾಗಿದೆ. ಈಗಲೂ ಸೋಗಿಯಲ್ಲಿ ಹಾಡುಗಾರರ ಮನೆತನವಿರುವುದು ಕಂಡುಬಂದಿದೆ. ಅವರು ವೀರಭದ್ರ ದೇವರ ಸೇವಾಕಾರ್ಯಗಳಲ್ಲಿ ಭಾಗಿಗಳಾಗುವರು. ಇವರಿಗೆ ಬಳುವಳಿಯಾಗಿ ಜಮೀನು ನೀಡಲಾಗಿದೆ. ಊರಿನಲ್ಲಿ ಯಾವುದೇ ಶುಭಕಾರ್ಯಗಳಾದರೂ ಇವರನ್ನು ಮುಂದಿಟ್ಟುಕೊಂಡು ಮಾಡುವರು.

ಒಟ್ಟಾರೆಯಾಗಿ ಹಡಗಲಿಯ ಸಾಂಸ್ಕೃತಿಕ ಅಧ್ಯಯನದಿಂದ ಧಾರ್ಮಿಕ ಆಚರಣೆಗಳು ಪ್ರಮುಖ ಪಾತ್ರವನ್ನು ವಹಿಸಿದ್ದವೆಂದು ತಿಳಿದುಬರುತ್ತದೆ.

### ೬.೨. ಸಮುದಾಯ ಕೇಂದ್ರಗಳಾಗಿ ದೇವಾಲಯಗಳು

ದೇವಾಲಯಗಳು ಮೊದಲು ಧಾರ್ಮಿಕ ಕೇಂದ್ರಗಳಾಗಿದ್ದವು. ನಂತರ ಜನಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು. ಪ್ರತಿಯೊಂದು ದೇವಸ್ಥಾನವೂ ಕಲಾ ಚಟುವಟಿಕೆಗಳ ಮೂಲ ಕೇಂದ್ರವಾಗಿದೆ. ಸುಂದರವಾದ ಪ್ರತಿಮೆಗಳಿಂದ, ವರ್ಣಚಿತ್ರಗಳಿಂದ ಅಲಂಕೃತವಾದ ಪ್ರತಿ ದೇವಸ್ಥಾನದ ಕಟ್ಟಡವೂ ಸೌಂದರ್ಯದ ಖನಿಯಾಗಿದೆ. ದೇವಾಲಯಗಳು ಪ್ರವಾಸಿಗರಿಗೆ ಮತ್ತು ವಿದ್ಯಾರ್ಥಿಗಳಿಗೆ ನಿವಾಸಸ್ಥಾನವೂ ಆಗಿದ್ದವು. ಪ್ರತಿಯೊಂದು ದೇವಸ್ಥಾನಕ್ಕೂ ಒಂದು ಮಠ ಹೊಂದಿಕೊಂಡಿರುತ್ತಿತ್ತು. ಈ ಮಠಗಳು ಪುರಾಣಗಳನ್ನು ಪಠಿಸುವುದರ ಮೂಲಕ ವಯಸ್ಕರ ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡಿದ್ದವು. ಹಾಗೆಯೇ ವಿದ್ಯಾರ್ಥಿಗಳ ವಸತಿ, ಆಹಾರ ಮತ್ತು ವಿದ್ಯಾಭ್ಯಾಸಗಳನ್ನು ನೋಡಿಕೊಳ್ಳುತ್ತಿತ್ತು. ಹಾಗೆಯೇ ಪಶುಸಂಗೋಪನೆಯೂ ನಡೆಯುತ್ತಿತ್ತು. ಅಂದರೆ ಗೋಮಾಳಗಳು ಕೂಡ ದೇವಾಲಯಗಳಿಗೆ ನೆರವಾಗುತ್ತಿದ್ದವು. ಅದು ಗ್ರಾಮದ ಹೆಚ್ಚುವರಿ ಆಹಾರಧಾನ್ಯಕ್ಕೆ ಕಣಜವಾಗಿರುತ್ತಿತ್ತು. ಆಡಳಿತಗಾರರು, ಅರ್ಚಕರು, ನರ್ತಕಿಯರು, ಸಂಗೀತಗಾರರು, ಕಸಗುಡಿಸುವವರು, ಬಾಣಸಿಗಳು, ಹೂದೋಟಗಳನ್ನು ನೋಡಿಕೊಳ್ಳುವವರು, ಹೂದಂಡೆ ಕಟ್ಟುವವರು, ದಾಸ್ತಾನು ಮಳಿಗೆಯ ಅಧಿಕಾರಿಗಳು, ಕಟ್ಟಡ ಕೆಲಸಗಾರರು, ಶಿಲ್ಪಿಗಳು ಹೀಗೆ ದೇವಾಲಯಗಳು ಅನೇಕರಿಗೆ ಉದ್ಯೋಗವನ್ನು ಒದಗಿಸುವ ಪ್ರಮುಖ ಕೇಂದ್ರವೂ ಆಗಿತ್ತು.

ದೇವಸ್ಥಾನಗಳು ವ್ಯಾಪಾರಿಗಳಿಗೆ ಸಾಲವನ್ನು ಕೊಡುತ್ತಿದ್ದವು. ಈ ದೇವಸ್ಥಾನಗಳಿಗೆ ದೊರೆಗಳಿಂದ, ಸಾರ್ವಜನಿಕರಿಂದ ಅಪಾರವಾದ ದಾನ ಭೂಸಂಪತ್ತಿನ ರೂಪದಲ್ಲಿ ದೊರೆಯುತ್ತಿತ್ತು. ಹಾಗಾಗಿ ಊಟ, ವಿದ್ಯಾಭ್ಯಾಸ ಮೊದಲಾದ ವಿಷಯಗಳಲ್ಲಿ ಬಗೆಬಗೆಯ ಸೇವೆಯನ್ನು ನೀಡಲು ಸಾಧ್ಯವಾಗುತ್ತಿತ್ತು. ಈ ದೇವಾಲಯಗಳು ಪ್ರತಿ ವರ್ಷ ಜರುಗುವ ಜಾತ್ರೆ, ಹಬ್ಬ, ಹರಿದಿನಗಳಲ್ಲಿ ಹಲವಾರು

ಆಚರಣೆಗಳನ್ನು ಆಚರಿಸುವುದರ ಮೂಲಕ ಜನರಿಗೆ ಸಂತೋಷವನ್ನು ಒದಗಿಸುತ್ತಿದ್ದವು. ಅಲ್ಲದೆ ಅಂತಹ ಸಂದರ್ಭದಲ್ಲಿ ವ್ಯಾಪಾರಿ ಉದ್ಯಮವಾಗಿಯೂ ತನ್ನ ಪಾತ್ರವನ್ನು ನಿರ್ವಹಿಸುತ್ತಿತ್ತು. ದೇವಾಲಯಗಳು ಸಮಾಜದ ಅವಿಭಾಜ್ಯ ಅಂಗಗಳಂತೆ ಬೆಳೆದವು. ವ್ಯಕ್ತಿ, ವ್ಯಕ್ತಿ ಸಮೂಹ ಎಲ್ಲ ಘಟಕಗಳಲ್ಲಿಯೂ ತಮ್ಮ ಬದುಕಿನ ಸಾರ್ಥಕತೆಗೆ ದೇವಾಲಯಗಳನ್ನು ಆಶ್ರಯಿಸುತ್ತಿದ್ದರು. ಸಮಾಜ ಮತ್ತು ದೇವಾಲಯಗಳ ಪರಸ್ಪರ ಕೊಡುಕೊಳ್ಳುವಿಕೆ ವಿಶಿಷ್ಟವಾಗಿತ್ತು. ದೇವಾಲಯಗಳಲ್ಲಿ ದಾನಶಾಲೆಗಳು ಇದ್ದವು. ದೇವಾಲಯಗಳ ಕಾರ್ಯವ್ಯಾಪ್ತಿಗೆ ತಕ್ಕಂತೆ ದಾನ-ದತ್ತಿಗಳು ದೊರೆಯುತ್ತಿದ್ದವು. ಈ ದಾನ-ದತ್ತಿಗಳನ್ನು ದಾನಶಾಲೆಗಳ ಮೂಲಕ ಮತ್ತೆ ಸಮಾಜಕ್ಕೆ ನೀಡಿ ಸಾರ್ಥಕತೆಯನ್ನು ಪಡೆಯುತ್ತಿದ್ದವು. ದೇವಾಲಯಗಳಲ್ಲಿ ದಾನಶಾಲೆಗಳು ಇರುತ್ತಿದ್ದುದಕ್ಕೆ ಕ್ರಿ.ಶ. ೬೮ರಿಂದ ದಾಖಲೆಗಳು ದೊರೆಯುತ್ತವೆ. ಈ ದಾನಶಾಲೆಗಳಲ್ಲಿ ಬಹುತೇಕ ನಡೆಯುತ್ತಿದ್ದುದು ಆಹಾರದಾನ. ದೇವಾಲಯಗಳಿಗೆ ಹೊಂದಿಕೊಂಡಂತೆ ಮಠ, ಶಾಲೆಗಳು ಇರುತ್ತಿದ್ದವು. ಅಲ್ಲಿಯ ತಪೋಧನರು, ವಿದ್ಯಾರ್ಥಿಗಳು, ದೇವರ ಸೇವೆಗೆ ಬಂದ ಭಕ್ತರು, ಯಾತ್ರಾರ್ಥಿಗಳಾಗಿ ಬಂದ ದೇಸಿ ಪ್ರವಾಸಿಗರು ಇವರೆಲ್ಲರಿಗೂ ಊಟ ಮತ್ತು ವಸತಿ ವ್ಯವಸ್ಥೆ ಮಾಡಲಾಗುತ್ತಿತ್ತು.

ಭಾರತೀಯ ಪರಂಪರೆಯಲ್ಲಿ ದಾನಕ್ಕೆ ತನ್ನದೇ ಆದ ಮಹತ್ವದ ಸ್ಥಾನವಿದೆ. ದಾನದ ವಿಷಯಕ್ಕೆ ಬಂದಾಗ ಪ್ರತಿಯೊಬ್ಬ ಪ್ರಜೆಯೂ ಮುಕ್ತವಾಗಿ ದಾನ ನೀಡುವುದನ್ನು ಕಾಣುತ್ತೇವೆ. ಅನ್ನದಾನ, ವಿದ್ಯಾದಾನ, ಭೂಮಿದಾನ, ವಸ್ತ್ರದಾನ, ಉದಕದಾನ, ಗೋದಾನ ಇತ್ಯಾದಿ ಷೋಡಶ ದಾನಗಳು ಬಹಳ ಮುಖ್ಯವಾದುದೆಂದು ಪರಿಗಣಿತವಾಗಿವೆ. ಆಯಾ ಕಾಲ, ದೇಶಕ್ಕೆ ತಕ್ಕಂತೆ ದಾನದಲ್ಲಿ ವ್ಯತ್ಯಾಸವಾಗುತ್ತವೆ. ಹಾಗೆಯೇ ಅವು ಆ ಕಾಲಕ್ಕೆ ಮುಖ್ಯ ದಾನಗಳೂ ಆಗಿರುತ್ತವೆ. ಕರ್ನಾಟಕದಲ್ಲಿ ದಾನ-ದತ್ತಿಗಳಿಗೆ ಎಂದೂ ಕೊರತೆಯಿರಲಿಲ್ಲ ಎಂಬುದಕ್ಕೆ ಇಲ್ಲಿ ದೊರೆತ ಹೆಚ್ಚಿನ ದಾನಶಾಸನಗಳನ್ನು ನೋಡಿದರೆ/ಅವಲೋಕಿಸಿದರೆ ವೇದ್ಯವಾಗುತ್ತದೆ.

ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ದಾನಶಾಸನಗಳೇ ಅಧಿಕವಾಗಿವೆ. ದಾನವನ್ನು ಪಡೆದ ದೇವಾಲಯಗಳು ಎರಡು ವರ್ಗದ ಜನರಿಗೆ ಆಹಾರದ ವ್ಯವಸ್ಥೆಯನ್ನು ಮಾಡಬೇಕಿತ್ತು. ಮೊದಲನೆಯದಾಗಿ ದೇವಾಲಯಗಳಲ್ಲೇ ವಾಸವಾಗಿರುವ ಪೂಜಾರಿ ವರ್ಗದವರು, ಊಳಿಗದವರು, ತಪೋಧನರು ಮತ್ತು ವಿದ್ಯಾರ್ಥಿಗಳು. ಎರಡನೆಯದಾಗಿ ದೇವಾಲಯಕ್ಕೆ ಬಂದು ಹೋಗುವ ಪ್ರವಾಸಿಗಳು, ಭಕ್ತರು ಇವರಿಗೆ ಆಹಾರದ ವ್ಯವಸ್ಥೆಯನ್ನು ಮಾಡಬೇಕಿತ್ತು. ಹಸಿದು ಬಂದವರಿಗೆ ಅಂಬಲಿಯ ಸತ್ರವನ್ನು ನಡೆಸುವುದು ಕೂಡ ಪುಣ್ಯ ಸಂಪಾದನೆಯ ಕೃತಿಯಾಗಿತ್ತು. ಇಲ್ಲಿ ಸತ್ರವೂ ಕೂಡ ದಾನ ನಡೆಯುವ ಒಂದು ಸ್ಥಳವಾಗಿದೆ. ಹೀಗೆ ದಾನಶಾಲೆಗಳು ಇದ್ದುದನ್ನು ಗಮನಿಸಬಹುದಾಗಿದೆ. ಬ್ರಾಹ್ಮಣ, ಸನ್ಯಾಸಿ, ಯಾತ್ರಿಕ, ವಿದ್ಯಾರ್ಥಿಗಳಿಗೆ ಛತ್ರಗಳಲ್ಲಿ ಊಟದ ವ್ಯವಸ್ಥೆಯಿತ್ತು. ಈ ಛತ್ರಗಳು ದೇವಸ್ಥಾನ ಅಥವಾ ಮಠಗಳಿಗೆ ಸೇರಿದ್ದವು. ಹೂವಿನಹಡಗಲಿಯ ಶಾಸನವು ಇಂತಹ ಛತ್ರಗಳು ಲಾಕುಳೇಶ್ವರ ಪಂಡಿತರ ಮಠಕ್ಕೆ, ತಪೋಧನರ, ವಿದ್ಯಾರ್ಥಿಗಳ, ಸೇವಕರ, ಸಂಗೀತಗಾರರಿಗೆ ಊಟಕ್ಕಾಗಿ ಮತ್ತು ಬಟ್ಟೆಗಾಗಿ ದಾನ ನೀಡಿದ್ದನ್ನು ತಿಳಿಸುತ್ತದೆ.[೨೪]

ಹಾಗೆಯೇ ರೆಬ್ಬಣಬ್ಬೆ ಅಥವಾ ರೆಬ್ಬಲದೇವಿಯು ಬ್ರಾಹ್ಮಣರ ಸತ್ರಕ್ಕೆ ಭೂಮಿ, ಹೂವಿನತೋಟವನ್ನು ನೀಡಿರುವುದನ್ನು ಶಾಸನ ತಿಳಿಸುತ್ತದೆ.[೨೫] ಹಾಗೆಯೇ ಹಡಗಲಿಯ ಕೊಟ್ನಕಲ್[೨೬] ಮತ್ತು ಕುರುವತ್ತಿ[೨೭]ಗಳಲ್ಲಿ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು ಎಂದು ಶಾಸನಗಳಿಂದ ತಿಳಿಯುತ್ತದೆ.

**ಅಗ್ರಹಾರಗಳು:** ಪುರಾತನ ಕಾಲದ ಘಟಿಕೆಗಳು, ಅಗ್ರಹಾರಗಳು, ಬ್ರಹ್ಮಪುರಿಗಳು ಮತ್ತು ಮಠಗಳು ಪ್ರಸಿದ್ಧ ವಿದ್ಯಾಕೇಂದ್ರಗಳಾಗಿದ್ದವು. ಘಟಿಕೆಯು ಅಧ್ಯಾಪಕ ವೃಂದವೂ ಛಾತ್ರಕೋಟಿಯೂ ಏಕರೀತಿಯಾಗಿ ಜ್ಞಾನಾನ್ವೇಷಣ ಮಾಡುತ್ತಿದ್ದ ವಿದ್ಯಾಸಂಸ್ಥೆಯಾಗಿತ್ತು. ಘಟಿಕಾಸ್ಥಾನಗಳ ಬಗ್ಗೆ ಸವಿವರವಾದ ವಿವರಣೆ ಸಿಗುವುದು ತುಂಬಾ ವಿರಳ. ಅಗ್ರಹಾರಗಳು ಮುಖ್ಯವಾಗಿ ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ಇವು ಊರೂರುಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ ನಿರ್ಮಾಣಗೊಂಡಿದ್ದವು. ಅಗ್ರಹಾರ ಎಂಬ ಪದದಲ್ಲಿ ಎರಡು ಶಬ್ದಗಳೊಂದಿಗೆ ಎರಡು ಅರ್ಥಗಳು ಅಡಗಿವೆ. ಅಗ್ರಹಾರ=ಅಗ್ರ–ಶ್ರೇಷ್ಠ, ಉನ್ನತ ಎಂದಾದರೆ, ಆಹಾರ ಎಂದರೆ (ಸ್ಥಳ) ಪದಾರ್ಥ ಎಂದು ಗುರುತಿಸಲಾಗಿದೆ. ಅಂದರೆ ಅದು ಶ್ರೇಷ್ಠರಿಗೆ ನೀಡಿದ ಸ್ಥಳವಾಗಿತ್ತು. ಇಲ್ಲಿ ಊರನ್ನು ಅಥವಾ ಸ್ಥಳವನ್ನು ಪದಾರ್ಥ ಎಂದು ಪರಿಗಣಿಸಲಾಗಿದೆ. ಇಲ್ಲಿ ಶ್ರೇಷ್ಠರು ಯಾರು ಎಂದರೆ ಚತುರ್ವರ್ಣದಲ್ಲಿ ಅಗ್ರಹಾರ ಬ್ರಾಹ್ಮಣರು. ಆದ್ದರಿಂದ ಅವರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು. ಅಗ್ರಹಾರಗಳ ಎಲ್ಲ ಚಟುವಟಿಕೆಗಳು ಸಾಮಾನ್ಯವಾಗಿ ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿದ್ದವು. ಇವರು ಅಗ್ರಹಾರದ ಒಡೆಯರಾಗಿದ್ದರು. ಇವರು ಯಾವುದೇ ಕುಂದುಕೊರತೆಗಳು ಬಾರದಂತೆ ದಾನಧರ್ಮಗಳನ್ನು ನೀಡುವಲ್ಲಿ ಎಚ್ಚರಿಕೆ ವಹಿಸಿದ್ದರು. ಊರಿನ ಯಾವುದೇ ಒಬ್ಬ ವ್ಯಕ್ತಿಯಾಗಲೀ ಇತರ ದಾನಧರ್ಮಗಳನ್ನು ಬಿಡಬೇಕಾದರೆ ಈ ಮಹಾಜನರ ಅನುಮತಿಯನ್ನು ಪಡೆಯಬೇಕಾಗಿತ್ತು. ದಾನ ಸ್ವೀಕರಿಸುವಾಗ ಅದರ ಬಳಕೆಯೊಂದಿಗೆ ಅವುಗಳ ಪ್ರತಿಪಾಲನೆಯೂ ಮಹಾಜನರ ಮುಖ್ಯ ಕರ್ತವ್ಯವಾಗಿತ್ತು. ಆದ್ದರಿಂದ ಬಾಗಳಿಯ ಒಂದು ಶಾಸನದಲ್ಲಿ 'ಮಹಾಜನರ ಸನ್ನಿಧಿಯೋಳ್' ಎಂದು ಉಲ್ಲೇಖವಾಗಿರುವುದು ಕಂಡುಬರುತ್ತದೆ.[೨೮] ಹಾಗೆಯೇ ಕುರುವತ್ತಿಯಲ್ಲಿ ದೊರೆತ ಶಾಸನವು ಮಹಾಜನರನ್ನು ವಿದ್ವಾಂಸ, ಪಂಡಿತ ಎಂದು ಬಣ್ಣಿಸಿರುವುದು ತಿಳಿಯುತ್ತದೆ. ಅದನ್ನು ಕಾವ್ಯಮಯವಾಗಿ ವರ್ಣಿಸಲಾಗಿದೆ. ಅದು ಈ ಕೆಳಗಿನಂತಿದೆ.

೧. ಆ ನಾಡೋಳಗ್ರಹಾರಂ

ಭೂನಾರೀಹಾರ ಮಧಿಕ ವಿಭುದಾಧಾರಂ

ಶ್ರೀನಾರಿಗಿರಲಾಗಂ

ಭೂನಿದಿ ಕುರುವರ್ತಿನೋಡೆ ಸೋಗೆಯಿಸುತಿಕುಂ

೨. ಇಂತು ನೆಗಳ್ದೆಗ್ರಹಾರಾ

ಭ್ರಂತಿಕದೊಳು ತುಂಗಭದ್ರೆ ಪಶ್ಚಿಮಮುಖದಿಂ

ಸಂತ ವಾಯಿನೆಯೆ ನಲಿಂ

ತಿಂ ತೆಂದೀ ಗ್ರಾಮ ವಿಭುವಮಂ ಬಣ್ಣಿಪರಾರ್॥[೨೯]

ಮಹಾಜನಗಳು ಗ್ರಾಮದಲ್ಲಿ ಒಂದು ಕಡೆ ಮನೆಗಳನ್ನು ಕಟ್ಟಿಕೊಂಡಿದ್ದರು. ಇವರು ವಾಸವಾಗಿರುವ ಸ್ಥಳಗಳಿಗೆ 'ಬ್ರಹ್ಮಪುರಿ' ಎಂದು ಕರೆಯಲಾಗುತ್ತಿತ್ತು. ಕುರುವತ್ತಿಯು ಒಂದು ಬ್ರಹ್ಮಪುರಿ ಗ್ರಾಮವಾಗಿತ್ತು ಎಂಬುದು ಶಾಸನದಿಂದ ತಿಳಿದುಬರುತ್ತದೆ.[೩೦] ಮಹಾಜನರ ಸ್ಥಾನಮಾನಗಳ ಕುರಿತಾಗಿ ಹಲವಾರು ಶಾಸನಗಳಲ್ಲಿ ಉಲ್ಲೇಖಿತವಾಗಿರುವುದನ್ನು ಕಾಣಲಾಗುತ್ತದೆ. ಆದರೆ ಕುರುವತ್ತಿಯ ಒಂದು ಶಾಸನದಲ್ಲಿ ಮನ್ನೆಯ ಬೊಪ್ಪಯನು ಮಹಾಜನರನ್ನು ಬೈದು ಹೊಡೆದು ಅವರ ಮನ್ನೆಯನ್ನು ಕೊಳ್ಳೆಹೊಡೆದು ಹೋಗಿರುವುದರ ಪಾಪಕ್ಕೆ ಶಿಕ್ಷೆಯನ್ನು ಅನುಭವಿಸಿರುವ ಉಲ್ಲೇಖ ಬರುತ್ತದೆ. ಅಂದರೆ ಗಂಡರಾದಿತ್ಯ ಹೊಳಲ ಅಗ್ರಹಾರದ ಒಡೆಯನಾಗಿದ್ದಾಗ ಮನ್ನೆಯ ಬೊಪ್ಪಯನು ಹೊಳಲನ್ನು ಸೆರೆಹಿಡಿದು ಗ್ರಾಮವನ್ನು ಸುಲಿಗೆ ಮಾಡಿ ಬ್ರಾಹ್ಮಣರನ್ನು ಕೊಂದನೆಂದು ದೊರೆಯಾದ ತ್ರಿಭುವನಮಲ್ಲನಿಗೆ ಮಹಾಜನಗಳು ದೂರು ನೀಡಿದಾಗ ದೊರೆಯು ಅವನನ್ನು ಕರೆಯಿಸಿ ದಂಡಿಸಿ, ಅವನು ಮತ್ತು ಅವನ ಸಂತತಿಯವರು ಹೊಳಲಿನ ಮನ್ನೆಯನ್ನು ಪಡೆಯದಂತೆ ಆಜ್ಞಾಪಿಸಿದನು. ಅವನು ಅದಕ್ಕೆ ಒಪ್ಪಿ ಆ ಪ್ರಕಾರವೇ ಬೆಣ್ಣೆವೂರು-೧೨, ನೀರಗುಂದ, ಎರಡು ಹಡಂಗಿಲೆಗಳು, ಮಾಂಗೋಳ, ಬಿದರಹಳ್ಳಿ(ಹಗರನೂರು), ಹಹನೂರು, ಹೊನ್ನವಳ್ಳಿ, ಕುರುವತ್ತಿ ಮತ್ತು ಬಾಳ್ಗುಳಿಯ ನ್ನೊಳಗೊಂಡಂತೆ ೩೨ ಸಾವಿರ ಜನರ ಸಮ್ಮುಖದಲ್ಲಿ ತ್ರಿಪುರಾಂತಕ ದೇವರ ಬಳಿ ನೀರನ್ನು ಕುಡಿದು ನಂತರ ಒಂದು ಕಲ್ಲನ್ನು ನಿಲ್ಲಿಸಬೇಕೆಂದು ಹೇಳಿದಾಗ ಅವನು ಈ ಶಿಕ್ಷೆಯನ್ನು ಒಪ್ಪಿಕೊಂಡನು. ಆದ್ದರಿಂದ ಮಹಾಜನರಿಗೆ ಏನನ್ನು ಮಾಡಬಾರದು. ಇವರನ್ನು ದೇವರ ಸಮಾನ ರೆಂದು ಕಂಡುಕೊಳ್ಳಬೇಕೆಂದು ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ಹೊಳಲು ಒಂದು ಅಗ್ರಹಾರವಾಗಿತ್ತು. ಇಲ್ಲಿ ಬಹುಸಂಖ್ಯೆಯಲ್ಲಿ ಬ್ರಾಹ್ಮಣರಿದ್ದರು. ೧೨೦ ಮಹಾಜನರು ಇದ್ದು ಗ್ರಾಮದ ಅಭಿವೃದ್ಧಿ ಕಾರ್ಯದಲ್ಲಿ ಆಡಳಿತಾಧಿಕಾರಿಗಳಿಗೆ ನೆರವಾಗಿದ್ದರು.

ಮಾಗಳ ಗ್ರಾಮವು ಒಂದು ಅಗ್ರಹಾರವಾಗಿತ್ತು. ರಾಣಿ ಪದ್ಮಲಾದೇವಿಯು ಮಾಂಗೋಳದ ಅಗ್ರಹಾರವನ್ನು ಆಳುತ್ತಿದ್ದಳು ಎಂದು ಮತ್ತು ಇಲ್ಲಿ ೨೦೦ ಮಹಾಜನರು ಇದ್ದರು ಎಂದು ಶಾಸನದಲ್ಲಿ ಉಲ್ಲೇಖವಿದೆ.[೩೧] ಕ್ರಿ.ಶ.೧೧೦೪ರ ಕುರುವತ್ತಿ ಶಾಸನದ ಪ್ರಕಾರ ಮಾಗಳ ಗ್ರಾಮಕ್ಕೆ ಮಾಂಗೋಳ ಎಂದು ಕರೆದಿದೆ.[೩೨] ತಿಮಲಾಪುರವೂ ಕೂಡ ಒಂದು ಅಗ್ರಹಾರವಾಗಿತ್ತು ಎಂಬುದು ನಂದಿಹಳ್ಳಿಯಲ್ಲಿ ದೊರೆತ ಶಾಸನದಿಂದ ತಿಳಿದುಬರುತ್ತದೆ.[೩೩] ಹಾಗೆಯೇ ಮಗಿಮಾವಿನಹಳ್ಳಿಯಲ್ಲಿ ದೊರೆತ ಎರಡು ಶಾಸನಗಳಿಂದ ತಿಳಿಯುತ್ತದೆ.[೩೪] ಅಗ್ರಹಾರದ ಮಹಾಜನರನ್ನು ಪ್ರಶಂಸಿಸುವ ಅನೇಕ ಶಾಸನಗಳಲ್ಲಿ ಅವರ ವಿದ್ಯಾವಂತಿಕೆಯ ಪ್ರಶಂಸೆಗೆ ಸಿಂಹಪಾಲು ದೊರೆತಿರುತ್ತದೆ. ಅದರಿಂದ ಅಗ್ರಹಾರದ ಮಹಾಜನಗಳ ವಿದ್ಯೆಯು ಅಧಿಕವಾಗಿ ವೇದ ಮತ್ತು ಶಾಸ್ತ್ರ ವಿಷಯಗಳಿಗೆ ಸೀಮಿತವಾಗಿದ್ದರೂ ಅವರಿಗೆ ಇತರ ವಿದ್ಯೆಗಳಲ್ಲಿ ಆಸಕ್ತಿ ಇತ್ತು ಎನ್ನುವುದು ತಿಳಿಯುತ್ತದೆ.

ಬಂದಳಿಕೆಯ ಒಂದು ಶಾಸನವು, ಬಂದಳಿಕೆಯ ಅಗ್ರಹಾರದ ಜನರನ್ನು "ನಿಖಿಳವೇದ ಪುರಾಣ ನೀತಿಶಾಸ್ತ್ರ ತರ್ಕಾಗಮ ಕಂಬ್ಯನಾಟಕ ಕಥಾಸ್ಮೃತಿ ಯಜ್ಞ ವಿಧಾನಮಂ ಮನೋರಾಗದಿ ನೋದಿಸುವಶೇಷ ಮಹಾಜನರು" ಎಂದು ಪ್ರಶಂಸಿಸಿದೆ.[೩೫] ಹೀಗೆ ಅಗ್ರಹಾರಗಳು ಜನರಿಗೆ ವಿದ್ಯಾಭ್ಯಾಸವನ್ನು ನೀಡುವುದರಲ್ಲಿ ಪ್ರಮುಖ ಸ್ಥಾನವನ್ನು ಪಡೆದಿವೆ.

**ಮಠಗಳು:** ದೇವಾಲಯಗಳ ಜೊತೆ ಜೊತೆಯಲ್ಲಿಯೇ ಇರುತ್ತಿದ್ದ ಮಠಗಳು ವಿದ್ಯಾ ಕೇಂದ್ರ ಗಳಾಗಿಯೂ ಕಾರ್ಯನಿರ್ವಹಿಸಿವೆ. ದೇವಾಲಯ ಮತ್ತು ಮಠ ಇವು ಒಂದಕ್ಕೊಂದು ಅಂತರ್ ಸಂಬಂಧವನ್ನು ಹೊಂದಿವೆ. ದೇವಾಲಯಕ್ಕೆ ದೊರೆತಷ್ಟೇ ಪ್ರಾಮುಖ್ಯತೆ ಮಠಗಳಿಗೂ ದೊರೆಯುತ್ತಿತ್ತು. ದೇವರು, ಧರ್ಮ, ವಿದ್ಯೆ ಇವು ಮೂರು ಪರಸ್ಪರ ಹೆಣೆದುಕೊಂಡಿದ್ದವು. ರಾಜ್ಯದ ಎಲ್ಲಾ ವರ್ಗದ ಜನರು ದೇವರಿಗೆ ಪೂಜ್ಯ ಸ್ಥಾನವನ್ನು ನೀಡಿದ್ದರು. ಭಕ್ತರಾದವರಲ್ಲಿ ಕೆಲವರು ಧಾರ್ಮಿಕ ವಿಚಾರಗಳಲ್ಲಿ ಹೆಚ್ಚಿನ ಆಸಕ್ತಿ ಬೆಳೆಸಿಕೊಳ್ಳುತ್ತಿದ್ದರು. ಅದಕ್ಕಾಗಿ ಧರ್ಮವು ವಿಶೇಷ ಸ್ಥಾನವನ್ನು ಪಡೆದಿತ್ತು. ಧರ್ಮವನ್ನು ಉಳಿಸಲು, ಬೆಳೆಸಲು, ವೇದ, ವೇದಾಂಗ, ಪುರಾಣ ಇತ್ಯಾದಿ ಶಾಸ್ತ್ರಗಳನ್ನು ಉಳಿಸಲು ವಿದ್ಯಾಭ್ಯಾಸವು ಅವಶ್ಯಕವಾಗಿತ್ತು. ಅಂತಹ ವಿದ್ಯೆಯನ್ನು ಮಠಗಳು ನೀಡುತ್ತಿದ್ದವು. ವಿದ್ಯಾಕೇಂದ್ರದಲ್ಲಿ ವಿದ್ಯಾದಾನ ಮಾಡುವುದೇ ಗುರುವಿನ ಮುಖ್ಯ ಕರ್ತವ್ಯವಾಗುತ್ತಿತ್ತು. ಆದರೆ ವಿದ್ಯೆಯನ್ನು ಬೋಧಿಸುವ ಜೊತೆಗೆ ಅದರ ಉಸ್ತುವಾರಿ ಜವಾಬ್ದಾರಿಯೂ ಸೇರಿದಂತೆ ಅದರಿಂದ ಗುರುವಿಗೆ ಯಾವುದೇ ಅನುಕೂಲವಾಗುತ್ತಿರಲಿಲ್ಲ. ಹಾಗಾಗಿ ವಿದ್ಯಾಕೇಂದ್ರದ ಪ್ರಧಾನ ಭಾಗವಾಗಿದ್ದ ದೇವಾಲಯ, ಮಠ ಇವುಗಳ ನಿರ್ವಹಣೆಯ ಜವಾಬ್ದಾರಿಯಿಂದ ಮುಕ್ತರಾಗಲು ಗುರುಗಳು ಯೋಚಿಸುತ್ತಿದ್ದರು. ಇದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ ಬಳ್ಳಿಗಾವೆಯ ಒಂದು ಶಾಸನ. ಕೇದಾರೇಶ್ವರ ಮಠದ ಗುರುಗಳಲ್ಲಿ ಒಬ್ಬರಾದ ವಿದ್ಯಾಭರಣ ಪಂಡಿತದೇವರು "ವಿದ್ಯಾಭರಣ ವ್ಯಾಸಂಗಮನೊಲ್ಲದೆ" ಮಠ ವ್ಯಾಸಂಗವನ್ನು ತನ್ನ ಶಿಷ್ಯರಲ್ಲಿ ಮುಖ್ಯನಾದ ವಾಮ ಶಕ್ತಿಮುನಿಗೆ ನಿಯೋಜಿಸುತ್ತಾರೆ.[೩೬] ಇಲ್ಲಿ ವಿದ್ಯಾಭರಣ ಪಂಡಿತನು ಮಠ ವ್ಯಾಸಂಗಕ್ಕೆ ವಾಮಶಕ್ತಿ ಮುನಿಯನ್ನು ನಿಯೋಜಿಸುವುದರಿಂದಾಗಿ ಬೋಧನಾವೃತ್ತಿ ಮತ್ತು ಆಡಳಿತಾಧಿಕಾರ ಎರಡನ್ನು ದೊಡ್ಡ ದೊಡ್ಡ ವಿದ್ಯಾಕೇಂದ್ರಗಳಲ್ಲಿ ಒಟ್ಟಿಗೆ ನಿರ್ವಹಿಸಲು ಸಾಧ್ಯವಿಲ್ಲ ಎಂದು ತಿಳಿಸುತ್ತದೆ ಮತ್ತು ಇಲ್ಲಿ ಮುಖ್ಯವಾಗಿ ಮಠ ವ್ಯಾಸಂಗ ಎಂದು ಪ್ರತ್ಯೇಕವಾಗಿ ಕರೆಯುತ್ತಿರುವುದರಿಂದ ಮನೆಗಳಲ್ಲಿ, ಮಠಗಳಲ್ಲಿ, ಅಗ್ರಹಾರಗಳಲ್ಲಿ, ಬ್ರಹ್ಮಪುರಿಗಳಲ್ಲಿ, ಘಟಿಕಾಸ್ಥಾನಗಳಲ್ಲಿ ವಿದ್ಯಾಭ್ಯಾಸದ ಕ್ರಮ ಮತ್ತು ವಿಷಯಗಳು ಪ್ರತ್ಯೇಕವಾಗಿದ್ದವು ಎಂಬುದನ್ನು ತಿಳಿಯಬಹುದಾಗಿದೆ.

ಹಡಗಲಿಯಲ್ಲಿನ ಶಿವಪಾದ ಗ್ರಾಮದಲ್ಲಿನ ಒಂದು ಶಾಸನದಲ್ಲಿ ಸಿದ್ಧನಾಥ ದೇವರ ಪೂಜಾರಿ ಬೊಮರಾಸಿಯು ತನ್ನ ಸ್ಥಾನಕ್ಕೆ ಅಮಿತರಾಸಿಯನ್ನು ನೇಮಿಸಿ ಆತನಿಗೆ ಐದು ಮಠಗಳ ಸಮಕ್ಷಮದಲ್ಲಿ ಸಿದ್ಧೇಶ್ವರ ದೇವರ ಎರಡು ಗ್ರಾಮಗಳನ್ನು ಕೊಟ್ಟಿದ್ದನ್ನು ತಿಳಿಸುತ್ತದೆ.[೩೭] ಹಾಗೆಯೇ ಮಠಗಳನ್ನು ಕಟ್ಟಿಸಿದ ಉಲ್ಲೇಖಗಳು ನಮಗೆ ದೊರೆಯುತ್ತವೆ. ಮುದನೂರಿನ ಹನ್ನೆರಡು ಜನ ಅಧಿಕಾರಿಗಳು (ಬಾರಬಲೂತಿ) ಒಂದು ಮಠವನ್ನು ಕಟ್ಟಿಸಿದ ಉಲ್ಲೇಖ ಮುದೇನೂರು ಗ್ರಾಮದಲ್ಲಿ

ದೊರೆತ ಶಾಸನದಿಂದ ತಿಳಿಯುತ್ತದೆ.[೩೮] ಹೀಗೆ ಮಠಗಳು ಕೂಡ ದೇವಾಲಯಗಳ ಜೊತೆ ಜೊತೆಯಲ್ಲಿಯೇ ವಿದ್ಯಾದಾನವನ್ನು ಮಾಡುತ್ತಿದ್ದವು. ಅಂದರೆ ಧಾರ್ಮಿಕ ವಿದ್ಯೆಗೆ ಹೆಚ್ಚಿನ ಆದ್ಯತೆ ಇರುತ್ತಿತ್ತು. ವಿದ್ಯಾಕೇಂದ್ರಗಳು ಮಠಕ್ಕೆ ಹೊಂದಿಕೊಂಡೇ ಇರುತ್ತಿದ್ದವು. ಇಲ್ಲಿ ಓದುವ ಮತ್ತು ಕೇಳುವ ತಪೋಧನರು ಇರುತ್ತಿದ್ದರು. ಇಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದವರಿಗೆ ಮಠಗಳೇ ವಸತಿ ವ್ಯವಸ್ಥೆಯನ್ನು ಮಾಡುತ್ತಿದ್ದವು. ವಿದ್ಯಾಭ್ಯಾಸದಲ್ಲಿ ಪುರಾಣ ಮತ್ತು ವೇದಗಳಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡಲಾಗಿತ್ತು. ಬೋಧನೆಗೆ ಮಾತ್ರವಲ್ಲದೆ ದೇವಸ್ಥಾನದಲ್ಲಿ ಪೂಜಾ ಸಮಯದಲ್ಲೂ ವೇದ ಪಠಣವನ್ನು ಮಾಡಬೇಕಾಗುತ್ತಿತ್ತು.

**ಘಟಿಕಾಸ್ಥಾನಗಳು:** ಇವು ಉಚ್ಚಶಿಕ್ಷಣದ ಕೇಂದ್ರಗಳು ಎಂದು ತಿಳಿದುಬಂದಿದೆ. ಇದನ್ನು 'ಧಾರ್ಮಿಕ ಕೇಂದ್ರ', 'ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರ', 'ಬ್ರಹ್ಮಪುರಿ' ಅಲ್ಲದೆ ಉಪಾಧ್ಯಾಯರು, ವಿದ್ವಾಂಸರು, ವಿದ್ಯಾರ್ಥಿಗಳು ಒಟ್ಟಾಗಿ ಪರಸ್ಪರ ಚರ್ಚೆಯಿಂದ ಧರ್ಮದ ವಿಷಯದಲ್ಲಿ ಹೆಚ್ಚಿನ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಸಂಸ್ಥೆ ಎಂದು ಕರೆಯಲಾಗುತ್ತದೆ. ಬಳ್ಳಿಗಾವೆಯ ಒಂದು ಶಾಸನವು ೬೪ ಘಟಿಕಾಸ್ಥಾನಗಳು ಇದ್ದವು ಎಂದು ತಿಳಿಸಿದೆ. ಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ ಇವುಗಳ ಬಗ್ಗೆ ಉಲ್ಲೇಖಗಳು ಇಲ್ಲವಾದರೂ ಸಹ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇವುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿತ್ತು ಎಂಬುದನ್ನು ಆಧರಿಸಿ ಘಟಿಕಾಸ್ಥಾನಗಳ ಪಾತ್ರದ ಬಗ್ಗೆ ಉಲ್ಲೇಖಿಸಲಾಗಿದೆ.

**ದೇವಸ್ಥಾನ:** ಮಠಗಳ ಜೊತೆಗೆ ಉಚ್ಚಶಿಕ್ಷಣ ಸಂಸ್ಥೆಯೂ ಇದ್ದುದರಿಂದ ಅಲ್ಲಿನ ಪ್ರತಿಯೊಂದು ಕಾರ್ಯವು ಕಾಲಕ್ಕೆ ತಕ್ಕಂತೆ ಶಿಸ್ತಿನಿಂದ ನಡೆಯಲೇಬೇಕಾಗಿತ್ತು. ಆದ್ದರಿಂದ ಘಟಿಕಾಯಂತ್ರಗಳನ್ನು ಸ್ಥಾಪಿಸಲಾಗಿತ್ತು. ಇದನ್ನು ನೋಡಿಕೊಳ್ಳಲು ಘಳಿಗೆಯ ಮಾಣಿ ಅಥವಾ ಘಳಿಯಾರದ ಮಾಣಿಯರನ್ನು ನೇಮಿಸಲಾಗುತ್ತಿತ್ತು.[೩೯] ಮೊರಗೇರಿಯು ಪ್ರಮುಖ ವಿದ್ಯಾಕೇಂದ್ರವಾಗಿತ್ತು ಎಂಬುದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಪೂರ್ವಜರು ಎಲ್ಲ ದಾನಗಳಲ್ಲಿ ವಿದ್ಯಾದಾನವೇ ಶ್ರೇಷ್ಠವೆಂದು ನಂಬಿದ್ದರಿಂದ ಇಂತಹ ವಿದ್ಯೆಯನ್ನು ನೀಡುವ ಸಂಸ್ಥೆಗಳಿಗೆ ದಾನಿಗಳು ಉದಾರವಾಗಿ ದಾನ ನೀಡುತ್ತಿದ್ದರು. ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ ಮತ್ತು ಮಠಗಳು ಎಂದು ಕರೆಯಲ್ಪಡುತ್ತಿದ್ದ ಇಂತಹ ಶಿಕ್ಷಣ ಕೇಂದ್ರಗಳು ರಾಜ್ಯದ ಎಲ್ಲಾ ಭಾಗಗಳಲ್ಲೂ ಕಂಡುಬರುತ್ತಿದ್ದವು. ಇವು ವಿದ್ಯಾದಾನ ನೀಡುವುದರ ಜೊತೆಜೊತೆಯಲ್ಲಿಯೇ ವ್ಯಕ್ತಿಯ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಜೀವನದ ಮಗ್ಗಲುಗಳ ಸರ್ವತೋಮುಖ ಬೆಳವಣಿಗೆಗೆ ಕಾರಣವಾಗಿದೆ.

### ೬.೩. ಸಾಮಾಜಿಕ ಕೇಂದ್ರಗಳಾಗಿ ದೇವಾಲಯಗಳು

ದೇವಾಲಯಗಳು ಸಮಾಜದಲ್ಲಿ ಇರುವ ಭಿನ್ನ ವರ್ಗದ ಜನರನ್ನು ಒಂದುಗೂಡಿಸುವ ಕೇಂದ್ರಗಳಾಗಿದ್ದವು. ಪ್ರತಿದಿನದ ಪೂಜಾ ಸಂದರ್ಭದಲ್ಲಿ ಎಲ್ಲ ಜನರು ಒಂದುಗೂಡದಿದ್ದರೂ ಸಹ ಪೂಜೆ, ರಥೋತ್ಸವ ಮುಂತಾದ ಸಂದರ್ಭಗಳಲ್ಲಿ ಎಲ್ಲರನ್ನು ಒಂದುಗೂಡಿಸುತ್ತಿದ್ದವು. ಆ

ಪ್ರದೇಶದಲ್ಲಿನ ಮಹಾಜನರ ಮುಖಾಂತರವೇ ಎಲ್ಲ ಕೆಲಸ ಕಾರ್ಯಗಳು ನಡೆಯುತ್ತಿದ್ದವು. ಆದ್ದರಿಂದ ದೇವಸ್ಥಾನಗಳಿಗೆ ಮಹಾಜನರ ಸಮ್ಮುಖದಲ್ಲಿಯೇ ದಾನ-ದತ್ತಿಗಳನ್ನು ನೀಡಲಾಗುತ್ತಿತ್ತು. ಈ ಮಹಾಜನಗಳು ಬ್ರಾಹ್ಮಣರೇ ಆಗಿರುತ್ತಿದ್ದರು ಎಂದು ಚಿದಾನಂದಮೂರ್ತಿಯವರು ತಿಳಿಸುತ್ತಾರೆ.[೪೦] ಅಗ್ರಹಾರಗಳಲ್ಲಿ ಬ್ರಾಹ್ಮಣರೇ ಅಧಿಕವಾಗಿದ್ದುದರಿಂದ ದೇವಸ್ಥಾನದ ಆಡಳಿತದಲ್ಲೂ ಅವರು ಪಾಲ್ಗೊಳ್ಳುತ್ತಿದ್ದರು. ಅನೇಕ ಸಂದರ್ಭದಲ್ಲಿ ಮಹಾಜನಗಳೇ ಒಂದಾಗಿ ದೇವಸ್ಥಾನಗಳಿಗೆ ದಾನ ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಮಾಗೋಳದ ಮಹಾಜನರು ನರಸಿಂಹ ದೇವರ ಸೇವೆಗೆ ೨೩ ಮತ್ತರು ಭೂಮಿಯನ್ನು ದಾನ ಮಾಡಿದ್ದಾರೆ.[೪೧] ಹೊಸ ವಡಂಗಿಲೆಯ ಮಹಾಜನರು ದೇವಸ್ಥಾನಕ್ಕೆ ಭೂಮಿ ದಾನ ನೀಡಿದ್ದಾರೆ.[೪೨] ಗಂಡರಾದಿತ್ಯನ ಪೊಳಲ ಗ್ರಾಮದ ಕೊಯ್ಲುಳಿದೇವ ಮತ್ತು ೧೨೦ ಮಹಾಜನರು ಕೋಲೇಶ್ವರ ದೇವರ ದೇವಸ್ಥಾನಕ್ಕೆ ಗೌಡಗೆರೆಯಲ್ಲಿ ೧೦೦ ಕಂಬ ಭೂಮಿಯನ್ನು ದಾನವಾಗಿ ನೀಡಿದ್ದಾರೆ.[೪೩] ಹಾಗೆಯೇ ಮಹಾಜನರು ರಣರಂಗ ಭೈರವ ಬಸವೆಯ ನಾಯಕನ ಮಗ ಚೌಡೆಯ ನಾಯಕನಿಗೆ ಭೂಮಿಯನ್ನು ದಾನವಾಗಿ ನೀಡಿದ್ದರ ಉಲ್ಲೇಖ ಶಾಸನದಲ್ಲಿ ದೊರೆಯುತ್ತದೆ.[೪೪] ಹೀಗೆ ಮಹಾಜನರು ಕೂಡ ದಾನ ನೀಡುವುದರಲ್ಲಿ ಮುಂದಿದ್ದರು ಎಂಬುದು ತಿಳಿದುಬರುತ್ತದೆ. ಹಾಗೆಯೇ ಇವರಿಗೆ ದೇವಾಲಯವನ್ನು ಸುಸ್ಥಿರವಾಗಿ ನಡೆಸಿಕೊಂಡು ಹೋಗಲು ಅಧಿಕಾರವಿದ್ದಂತೆಯೇ ಮಾರಲೂ ಅಧಿಕಾರವಿತ್ತು ಎಂಬುದು ಅವರಿಗೆ ದೇವಸ್ಥಾನದ ಮೇಲಿದ್ದ ವಿಶೇಷ ಅಧಿಕಾರವನ್ನು ಸೂಚಿಸುತ್ತದೆ.

ದೇವಾಲಯಗಳು ನ್ಯಾಯಸ್ಥಾನಗಳಾಗಿ ಅಥವಾ ನ್ಯಾಯಾಲಯಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಸಾಮಾಜಿಕ ವ್ಯವಸ್ಥೆಯನ್ನು ಮೀರಿದ ಜನರಿಗೆ ದೇವರ ಸಮ್ಮುಖದಲ್ಲಿಯೇ ದಂಡ ವಿಧಿಸಲಾಗುತ್ತಿತ್ತು. ದೇವಾಲಯಗಳು ಆ ಕ್ಷೇತ್ರದ ಬಹುಮುಖ್ಯ ಹಾಗೂ ಏಕೈಕ ಸಾಮುದಾಯಿಕ ಕೇಂದ್ರಗಳಾಗಿದ್ದುದರಿಂದ ದೇವರ ಬಗೆಗೆ ಶ್ರದ್ಧೆ, ನಂಬಿಕೆ, ಭಕ್ತಿ, ಭಯಗಳ ಕಾರಣದಿಂದ ದೇವರ ಎದುರಿನಲ್ಲಿಯೇ ಶಿಕ್ಷೆ ವಿಧಿಸಲಾಗುತ್ತಿತ್ತು. ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ಗ್ರಾಮದಲ್ಲಿನ ಒಂದು ಶಾಸನವು ಕೆಲವು ದಂಡಗಳನ್ನು ಪ್ರಸ್ತಾಪಿಸಿದೆ.

"ಪಞ್ಚಮಠಸ್ಥಾನವಂ ಪೂರ್ವ್ವಮರ್ಯಾದೆಯೊಳ್ಪ್ರತಿಪಾಳಿಸುವುದು। ಮೂಜಿ ಬರವುವಿಲ್ಲ ಮೂರ್ಮ್ಮನೆವಾರ್ತೆಗರ ಮನೆ ಪೊಕ್ಕಡೆ ಪನ್ನೆರಡು ಗದ್ಯಾಣ ದಣ್ಡ। ಹರದರಕ್ಕ ನಂಗದೊಳ್ಪಾರದರಿಗೆಯ ಪಚ್ಚವಂ ಕೊಣ್ಡು ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು ಪೊಯ್ದಂಗೆಂಟು ಪಣಂ ಆಣೆಯಂ ಮಿಕ್ಕಂಗೆ ಪನ್ನೆರಡು ಪಣಂ, ಮೀರಿದಂಗೆ ಪನ್ನೆರಡು ಗದ್ಯಾಣಂ ದಣ್ಡಂ। ಪರದನಾರ್ಬ್ಬನ್ನಡ ವಂಗಡಿಯ ಪಾಜಿಕದಿಂದಿಳಿಯನನ್ಯಾಯದೊಳ್ಪರಧನಂ ಪೊಯ್ದಡೆ ಸಾವು ಸಾಲ್ವರ್। ನಕರಕ್ಕಂ। ಮಹಾಜನಂಕ್ಕಂ ಗಾವುಣ್ಡಗಳ್ಗಂ। ಪಞ್ಚಮಟಸ್ಥಾನಕ್ಕಂ ಬಿಟ್ಟಿಯಿಲ್ಲ।" ಎಂದಿದೆ. ಅಂದರೆ ತೆರಿಗೆಯನ್ನು ನೀಡದಿದ್ದಲ್ಲಿ ಅಥವಾ ಹಾದರ ಮುಂತಾದ ಕೃತ್ಯಗಳನ್ನು ಮಾಡಿದ್ದಲ್ಲಿ ಕೆಲವು ದಂಡದೋಷಗಳನ್ನು ವಿಧಿಸುತ್ತಾರೆ. ಹಾದರಕ್ಕೆ ಹಾದರಿಯ ಮೂಗನ್ನು ಕೊಯ್ಯುವುದು ಹಾಗೂ ಹಾದರನಿಗೆ ಮರಣದಂಡನೆ ಶಿಕ್ಷೆ, ಕಳ್ಳನಿಗೂ ಮರಣದಂಡನೆ ಶಿಕ್ಷೆ, ಹೊಡೆದವನಿಗೆ ಎಂಟು ಪಣ ದಂಡ, ಮಹಾಜನರು,

ಗಾವುಂಡರು ಮತ್ತು ಪಂಚಮಠಗಳಿಗೆ ಬಿಟ್ಟಿಯಿಂದ ವಿನಾಯಿತಿ ನೀಡಿದೆ ಎಂದು ಅಪರಾಧಗಳು ಮತ್ತು ಅವುಗಳಿಗೆ ವಿಧಿಸುತ್ತಿದ್ದ ದಂಡವನ್ನು ಈ ಶಾಸನವು ಸೂಚಿಸುತ್ತದೆ.[೪೫] ಅದೇ ರೀತಿಯಲ್ಲಿ ಹಡಗಲಿ ತಾಲೂಕಿನ ಮೈಲಾರದಲ್ಲಿನ ಶಾಸನದಲ್ಲಿಯೂ ಸಹ ಶಾಪಾಶಯದ ನಂತರ ವಿವಿಧ ಅಪರಾಧಗಳಿಗೆ ವಿಧಿಸಲಾಗುತ್ತಿದ್ದ ದಂಡಗಳನ್ನು ಉಲ್ಲೇಖಿಸಿದೆ. "ಬಯ್ದಂಗೆ ಪಣಮುವೊ(ಂದುಂ) ಪೊಯ್ದಂಗಾಱುಪಣಮಿಱಿಯ ಪನ್ನೆರಡು ಪಣಂ ಪಾಯಱಿದೆ ಸುರಿಗೆಗಿರ್ತ್ತಿರದೆ ಯ್ದಿದವಂಗೆಂಟು ಪಣಮೆ ದಣ್ಡಂ ನಿರುತಂ!... ಆಣೆಯನೆ ಮಿಕ್ಕು ಪೋದಡೆ ಮಾಣದೆ ಕೊಟ್ಟೆರಡು ಪಣ ಮಿವಂ ಕೆಱೆಗಿತ್ತಂ ಕ್ಷೋಣಿಪತಿ ಮಿಕ್ಕ ದಣ್ಡಂ ಜಾಣೆನರಸಿಂಗಿದೂರ್ಗ್ಗೆ ಮಾಡಿದ ಸಮೆಯಂ!" ಅಂದರೆ ಬಯ್ದವನಿಗೆ ಒಂದು ಪಣ ದಂಡ, ಹೊಡೆದವನಿಗೆ ಆರು ಪಣ ದಂಡ, ಇರಿದವನಿಗೆ ೧೨ ಪಣ, ಕತ್ತಿ ಹಿಡಿದು ಬೆದರಿಸಿದವನಿಗೆ ೮ ಪಣವನ್ನು ದಂಡವಾಗಿ ವಿಧಿಸಿದನು ಎಂದು ಹೇಳಲಾಗಿದೆ.[೪೬] ಮೇಲಿನ ಎರಡೂ ಶಾಸನಗಳಿಂದ ಅಪರಾಧಗಳು ಯಾವುವು ಮತ್ತು ಅವುಗಳಿಗೆ ಯಾವ ಶಿಕ್ಷೆ ವಿಧಿಸಲಾಗುತ್ತಿತ್ತು ಎಂಬುದನ್ನು ತಿಳಿಯುತ್ತದೆ. ಈ ಹಿಂದೆಯೇ ತಿಳಿಸಿದಂತೆ ಕುರುವತ್ತಿಯ ಶಾಸನದಲ್ಲಿ ಅಗ್ರಹಾರವನ್ನು ಧ್ವಂಸ ಮಾಡಿ ಅಲ್ಲಿನ ಬ್ರಾಹ್ಮಣರನ್ನು ಹಿಂಸಿಸಿದವರಿಗೆ ದಂಡವನ್ನು ವಿಧಿಸಲಾಗಿದ್ದನ್ನು ಮತ್ತು ಅಧಿಕಾರವನ್ನು ಕಸಿದುಕೊಂಡು ಆಣೆಪತ್ರವನ್ನು ಪಡೆಯಲಾಗಿದೆ. ಅಪರಾಧಿಯ ಮೇಲೆ ಇಡೀ ಹೊಳಲಿನ ಜನರು ಚಕ್ರವರ್ತಿಗೆ ದೂರು ನೀಡಿದ್ದರು. ಈತನ ಅಪರಾಧಗಳು ಸಾಮಾನ್ಯವಾದುದಾಗಿರಲಿಲ್ಲ. ಹಾಗಾಗಿ ಚಕ್ರವರ್ತಿಯು ತ್ರಿಪುರಾಂತಕ ದೇವರ ಬಳಿಯ ನೀರನ್ನು ಕುಡಿಸುತ್ತಾನೆ ಎಂದು ಉಲ್ಲೇಖಿಸಲಾಗಿದೆ. ಹೀಗೆ ಅಪರಾಧಿ ಯಾರೆಂದು ಅವನ ಅಪರಾಧ ಎಂತಹದು ಎಂಬುದು ಖಚಿತವಾದ ನಂತರ ಅವನ ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಜೊತೆಗೆ ದಂಡವನ್ನು ಹಾಕಲಾಗುತ್ತಿತ್ತು. ಅಪರಾಧಿಗಳಿಂದ ದಂಡರೂಪದಲ್ಲಿ ಸಂಗ್ರಹವಾಗುತ್ತಿದ್ದ ಹಣವನ್ನು ದೇವಸ್ಥಾನದ ಉಪಯೋಗಕ್ಕೆ ಬಳಸಿಕೊಳ್ಳಲಾಗುತ್ತಿತ್ತು.

ದೇವಾಲಯಗಳು ಆರ್ಥಿಕವಾಗಿಯೂ ಜನರಿಗೆ ಸಹಾಯವನ್ನು ಮಾಡಿವೆ. ದೇವಾಲಯಗಳಿಗೆ ನೀಡುತ್ತಿದ್ದ ದಾನಗಳು ಭೂಮಿಯ ರೂಪದಲ್ಲಿ ಇರುತ್ತಿದ್ದವು ಮತ್ತು ಹಣದ ರೂಪದಲ್ಲಿ, ವಸ್ತುಗಳ ರೂಪದಲ್ಲಿ ಇರುತ್ತಿದ್ದವು. ವಸ್ತುಗಳ ರೂಪದಲ್ಲಿ ಬಂದ ದಾನವು ದೇವಸ್ಥಾನದ ಉಪಯೋಗಕ್ಕೆ ಬರುತ್ತಿತ್ತು. ಜೊತೆಗೆ ಭೂಮಿ ರೂಪದಲ್ಲಿ ಬಂದ ದಾನವನ್ನು ಊರಿನ ಜನರಿಗೆ ನೀಡುತ್ತಿದ್ದರು. ಆ ಭೂಮಿಯಲ್ಲಿ ಬೆಳೆದು ಬಂದ ಲಾಭವನ್ನು ರೈತವರ್ಗ ಮತ್ತು ದೇವಾಲಯಗಳು ಒಟ್ಟಿಗೆ ಅನುಭವಿಸುತ್ತಿದ್ದರು. ಹಾಗೆಯೇ ಹಣದ ರೂಪದಲ್ಲಿ ಬಂದ ದಾನವನ್ನು ಸಂಗ್ರಹಿಸಿ ಜನರಿಗೆ ಸಾಲವಾಗಿ ನೀಡುತ್ತಿದ್ದರು. ಈ ಸಾಲಕ್ಕೆ ಬಡ್ಡಿಯನ್ನು ಸಹ ವಿಧಿಸುತ್ತಿದ್ದರು. ಈ ಬಡ್ಡಿಯನ್ನು ಸ್ಥಾನಪತಿಯು ನಿರ್ಧರಿಸುತ್ತಿದ್ದನು. ಈ ಹಣವನ್ನು ಮತ್ತೆ ದೇವಸ್ಥಾನದ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರು. ಇದು ಅಂದಿನ ವ್ಯವಹಾರವಾದರೂ ಇಂದಿಗೂ ಕೂಡ ಬ್ಯಾಂಕ್‌ಗಳ ಮೂಲಕ ಚಲಾವಣೆಯಲ್ಲಿದೆ. ಹಾಗೆಯೇ ಹಲವಾರು ದೇವಾಲಯಗಳು ಜನರಿಗೆ ಸಾಲವನ್ನು ನೀಡುವ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಇಂದಿಗೂ ಕಾಣಬಹುದು.

ದೇವಾಲಯಗಳು ಜನರ ಆರೋಗ್ಯದ ಕುರಿತಾಗಿಯೂ ಎಚ್ಚರಿಕೆಯನ್ನು ವಹಿಸುತ್ತಿದ್ದವು. ದೇವಾಲಯಗಳಲ್ಲೇ ವೈದ್ಯರು ಇರುತ್ತಿದ್ದರು ಮತ್ತು ಔಷಧಗಳನ್ನು ನೀಡುತ್ತಿದ್ದರು. ಹಲವು ದೇವಾಲಯಗಳನ್ನು ಭೈಷಜ್ಯಸ್ಥಾನಗಳೆಂದೂ ಶಾಸನಗಳು ಉಲ್ಲೇಖಿಸಿವೆ. ಗಜವೈದ್ಯ, ಅಶ್ವವೈದ್ಯ ಇತ್ಯಾದಿ ಶಾಸ್ತ್ರಗಳ ಮೂಲಕ ವೈದ್ಯರಿದ್ದರು ಎಂಬುದನ್ನು ಶಾಸನಗಳೇ ದೃಢಪಡಿಸುತ್ತವೆ.

ಒಟ್ಟಾರೆಯಾಗಿ ದೇವಾಲಯಗಳು ಎಲ್ಲರನ್ನು ಒಂದುಗೂಡಿಸುವಂತೆ, ಒಂದುಗೂಡಿದ ಜನರಿಂದ ಅಪಾರ ಸೇವೆಯನ್ನು ಪಡೆದಿವೆ. ವಿದ್ಯಾದಾನ ಕೇಂದ್ರಗಳಾಗಿ, ಅನ್ನದಾನ ಕೇಂದ್ರಗಳಾಗಿ, ಸತ್ರಗಳಾಗಿ, ಅರವಂಟಿಗೆಗಳಾಗಿ, ಭೈಷಜ್ಯಸ್ಥಾನಗಳಾಗಿ, ನ್ಯಾಯಸ್ಥಾನಗಳಾಗಿ, ಆರ್ಥಿಕ ಸಹಾಯ ಕೇಂದ್ರಗಳಾಗಿ ಅಪರಿಮಿತವಾದ ಸೇವೆಯನ್ನು ಸಲ್ಲಿಸುವುದರ ಜೊತೆಗೆ ಸಂಗೀತ, ನೃತ್ಯ, ಸೇವೆಗಳ ಮೂಲಕವೂ ಜನರನ್ನು ಒಂದೆಡೆ ಸೇರಿಸುವ ಸೇವೆಯನ್ನು ಮಾಡಿ ಕಲೆ ಮತ್ತು ಕಲಾವಿದರನ್ನು ದೇವಾಲಯಗಳು ಬೆಳೆಸಿವೆ ಎಂದರೆ ತಪ್ಪಾಗಲಾರದು. ಹಡಗಲಿಯಲ್ಲಿ ಆಳಿದ ಎಲ್ಲಾ ರಾಜವಂಶಜರು ಈ ರೀತಿಯಲ್ಲಿ ಸಾಮಾಜಿಕ, ಸಾಮುದಾಯಿಕ ಕಾರ್ಯಗಳನ್ನು ಮಾಡುತ್ತಲೇ ಕರ್ನಾಟಕದ ಸಂಸ್ಕೃತಿಯನ್ನು ಉನ್ನತಗೊಳಿಸಿದ್ದಾರೆ.

### ೬.೪. ಶಾಸನ ಉಲ್ಲೇಖಿತ ಸಾಂಸ್ಕೃತಿಕ ವಿವರಗಳು

ಶಾಸನಗಳು ಚರಿತ್ರೆಯ ನೈಜ ಆಕರಗಳಾಗಿದ್ದು, ಅವು ನೀಡುವ ಮಾಹಿತಿ ಅತ್ಯಮೂಲ್ಯವಾಗಿವೆ. ಇಲ್ಲಿ ಆಳ್ವಿಕೆ ಮಾಡಿದ ವಿವಿಧ ರಾಜರು, ಅವರ ಸಾಮಂತರು, ಅಧಿಕಾರಿಗಳು ಆಯಾ ಸಂದರ್ಭಕ್ಕನುಗುಣವಾಗಿ ಹಲವಾರು ಶಾಸನಗಳನ್ನು ಹೊರಡಿಸಿದ್ದಾರೆ. ಅವುಗಳಿಂದ ನಾನಾ ಬಗೆಯ ಮಾಹಿತಿಗಳು ನಮಗೆ ಲಭ್ಯವಾಗುತ್ತವೆ. ಈಗಾಗಲೇ ಹಡಗಲಿ ತಾಲೂಕಿನಲ್ಲಿ ಈವರೆಗೆ ಪ್ರಕಟವಾಗಿರುವ ವಿವಿಧ ಶಾಸನಗಳನ್ನು ಮತ್ತು ಅವು ಉಲ್ಲೇಖಿಸಿದ ಮಹತ್ವದ ಸಾಂಸ್ಕೃತಿಕ ವಿವರಗಳನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

### ೬.೪.೧. ದೇವಾಲಯ ನಿರ್ಮಾಣದ ಉಲ್ಲೇಖಗಳು

ದೇವಾಲಯಗಳ ನಿರ್ಮಾಣ ನಮ್ಮ ಹಿಂದಿನ ಹಿರಿಯರ ಪುಣ್ಯಕಾರ್ಯಗಳಲ್ಲಿ ಒಂದಾಗಿತ್ತು. ದೇವಾಲಯದ ನಿರ್ಮಾತೃವಿಗೆ ಇಲ್ಲವೇ ತಮ್ಮ ಕುಟುಂಬದವರಿಗೆ ಹಾಗೂ ತಮ್ಮ ಒಡೆಯರಿಗೆ ಪುಣ್ಯವಾಗಲೆಂದು ಹಲವರು ದೇವಾಲಯಗಳನ್ನು ನಿರ್ಮಿಸಿದ ಉದಾಹರಣೆಗಳು ನಮ್ಮ ನಾಡಿನಲ್ಲಿವೆ. ರಾಜ, ರಾಣಿ, ಸಾಮಂತ, ಅಮಾತ್ಯ, ಮಂತ್ರಿ ಮಹೋದಯರು ಹಾಗೂ ಊರಿನ ಪ್ರಮುಖರು ದೇವಾಲಯಗಳನ್ನು ವಿವಿಧ ಆಶಯಗಳನ್ನು ಇಟ್ಟುಕೊಂಡು ನಿರ್ಮಿಸಿದ ವಿವರಗಳನ್ನು ಹೂವಿನಹಡಗಲಿ ತಾಲೂಕಿನಲ್ಲಿ ದೊರೆತಿರುವ ಶಾಸನಗಳು ದಾಖಲಿಸಿವೆ. ಆ ಕುರಿತ ವಿವರ ಹಿರೇಹಡಗಲಿಯ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನದಲ್ಲಿದೆ.[೬] ಚಾಳುಕ್ಯ ದೊರೆ ತ್ರೈಲೋಕ್ಯಮಲ್ಲದೇವನ ಆಳ್ವಿಕೆಯ ಕಾಲಾವಧಿಯಲ್ಲಿ ಮಹಾಮಾತ್ಯನಾದ ದೇಮರಸನು ವಿಟ ಚಕ್ರವರ್ತಿಯೆಂದು ಹೆಸರಾಗಿದ್ದ; ಈತನು ಪೊಸವಡಂಗಿಲೆಯಲ್ಲಿ ದೇಮೇಶ್ವರ ದೇವಾಲಯವನ್ನು

ಕಟ್ಟಿಸಿದ ವಿವರವನ್ನು ದಾಖಲಿಸಿದೆ. ಇಲ್ಲಿಯೇ ದೊರೆತ ಕ್ರಿ.ಶ.೧೧೦೭ರ ಶಾಸನವು ದೇಮರಸನ ಆದೇಶದಂತೆ ಉದಯಾದಿತ್ಯನು ಅಲ್ಲಿ ದೇವಾಲಯವನ್ನು ಕಟ್ಟಿಸಿದ ಎನ್ನುವ ವಿವರವನ್ನು ದಾಖಲಿಸಿದೆ. ಮಾನ್ಯರ ಮಸಲವಾಡದಲ್ಲಿನ ಮಠದ ಪಾಳುನಿವೇಶನದಲ್ಲಿರುವ ಶಕ ೧೨೯ರ ಶಾಸನವು[೪೮] ಯಾದವ ದೊರೆ ರಾಮಚಂದ್ರದೇವನ ಆಳ್ವಿಕೆಗೆ ಸೇರಿದ್ದು. ಮೊಸಳೆವಾಡದ ಈ ಪಾರ್ಶ್ವನಾಥ ದೇವಾಲಯವನ್ನು ಕೇಶವಪಂಡಿತನ ತಾಯಿ ಕನ್ನಾಯಿ ಮಾಡಿಸಿದ ವಿವರವನ್ನು ಮತ್ತು ಸಾವಂತ ಪಂಡಿತನ ಮಗನಾದ ಕೇಶವ ಪಂಡಿತನು ಮೊಸಳೆವಾಡದ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದ ವಿವರವನ್ನು ದಾಖಲಿಸಿದೆ. ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನ[೪೯] ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ)ನು ವಿಜಯ ಸಮುದ್ರವೆಂಬ ಹಳ್ಳವೂರಿನಲ್ಲಿ ಶಿಬಿರದಲ್ಲಿದ್ದಾಗ ಮಾಂಗೊಳದ ಇನ್ನೂರು ಮಹಾಜನರಲ್ಲೊಬ್ಬನಾದ ಬ್ರಾಹ್ಮಣ ಕಾಳಿಮಯ್ಯನ ಮಗ ಮರ್ಮರಸನು, ಶಿವ, ವಿಷ್ಣು, ಸೂರ್ಯರಿಗಾಗಿ ತ್ರಿಕೂಟ ದೇವಾಲಯವನ್ನು ಕಟ್ಟಿಸಿದ ವಿವರವನ್ನು ಇದು ಉಲ್ಲೇಖಿಸಿದೆ.

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ[೫೦] ಕ್ರಿ.ಶ.೨೪-೧೧-೧೯೦ರಲ್ಲಿ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಶೂರಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟೂರಾದ ಪೂವಿನ ಪೊಸವಡಂಗಿಲೆಯಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ದೇವರನ್ನು ಸ್ಥಾಪಿಸಿ, ದೇವರ ಸೇವಾಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರ ಸತ್ರಕ್ಕಾಗಿ, ಹೂತೋಟಕ್ಕಾಗಿ ಭೂದಾನ ಮುಂತಾದವನ್ನು ಅಲ್ಲಿನ ಬ್ರಾಹ್ಮಣ ಮಹಾಜನಗಳ ಸಮ್ಮುಖದಲ್ಲಿ ದಾನ ಮಾಡಿದ ವಿವರವನ್ನು ಈ ಶಾಸನ ದಾಖಲಿಸಿದೆ. ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನ[೫೧] ಕ್ರಿ.ಶ.೧೯-೧೧-೧೦೭೨ರಲ್ಲಿ ಪೂವಿನ ಪಡಂಗಿಲಿಯ ೧೨೦ ಮಹಾಜನಗಳು ಪೂವಿನ ಪಡಂಗಿಲಿಯ ಕಲಿದೇವಸ್ವಾಮಿಯ ದೇವಾಲಯವನ್ನು ಕಟ್ಟಲು ಕೆಸರುಗಲ್ಲು ಹಾಕಿದ ಮಾರೋಜನಿಗೆ ಭೂದಾನ ಮಾಡಿದ ವಿವರವನ್ನು ವಿಶೇಷವಾಗಿ ದಾಖಲಿಸಿದೆ. ಸೋಗಿ ಗ್ರಾಮದ ದಬ್ಬಗುಡಿಯ ಮುಂದೆ ಇರುವ ಶಾಸನ[೫೨] ತ್ರಿಭುವನ ಮಲ್ಲದೇವನು ಕಲ್ಯಾಣದಿಂದ ಆಳುತ್ತಿದ್ದಾಗ ವತ್ಸಗೋತ್ರದ ಬ್ರಾಹ್ಮಣ ನಾಗವರ್ಮಯ್ಯ ಇಲ್ಲಿ ಸ್ಥಾಪಿಸಿದ ಕೇಶವ ದೇವರ ಸೇವಾ ಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ಭೂಮಿದಾನ ಮತ್ತು ಮಾನಯೆಣ್ಣೆಯನ್ನು ದಾನ ಮಾಡಿದ ವಿವರವಿದೆ.

### ೬.೪.೨. ಕಾಲ/ಮಾಸ/ವಾರ/ತಿಥಿ/ಸಂವತ್ಸರ/ಗ್ರಹಣದ ಉಲ್ಲೇಖಗಳು

ಯಾವುದೇ ಪುಣ್ಯ ಕಾರ್ಯ ಅಥವಾ ಒಳ್ಳೆಯ ಕೆಲಸದ ಆರಂಭವನ್ನು ವಿಧಿವತ್ತಾಗಿ ಮಾಡಲು ಉತ್ತಮ ಸಮಯವನ್ನು ನೋಡಿಕೊಂಡು ಮಾಡುವ ಪರಿಪಾಠ ನಮ್ಮಲ್ಲಿದೆ. ಕಾಲ/

ಮಾಸ/ವಾರ/ತಿಥಿ/ಸಂವತ್ಸರ/ಗ್ರಹಣದ ಉಲ್ಲೇಖಗಳನ್ನು ಈ ಭಾಗದ ಶಾಸನಗಳು ದಾಖಲಿಸಿದ್ದು, ಅವುಗಳ ಸಹಾಯದಿಂದ ಚರಿತ್ರೆಯ ಘಟನಾವಳಿಗಳನ್ನು ಅವಲೋಕಿಸಬಹುದು. ಈ ಭಾಗದ ಪ್ರಥಮ ಶಾಸನವೆಂದೇ ಭಾವಿಸಲಾಗಿರುವ ಹಿರೇಹಡಗಲಿಯ ಚನ್ನಪ್ಪ ಎಂಬ ವ್ಯಾಪಾರಿಯ ವಶದಲ್ಲಿದ್ದ ತಾಮ್ರ ಶಾಸನವು[೫೩] ಪ್ರಾಕೃತ ಭಾಷೆಯಲ್ಲಿದೆ. ದೊರೆ ಶಿವಸ್ಕಂದವರ್ಮನು ಭಾರದ್ವಾಜ ಗೋತ್ರಕ್ಕೆ ಸೇರಿದ್ದು, ಇದರಲ್ಲಿ ಕಾಲದ ಸ್ಪಷ್ಟತೆ ಇಲ್ಲ. ಆದರೆ ಇದು ಆತನ ೮ನೇ ಆಳ್ವಿಕೆಯ ವರ್ಷದ, ವರ್ಷಋತುವಿನ ಆರನೆಯ ಭಾಗದ ಐದನೆಯ ದಿನದ ಆಳ್ವಿಕೆಗೆ ಸೇರಿದೆ. ಈ ಶಾಸನ ಕ್ರಿ.ಶ. ಮೂರನೇ ಶತಮಾನಕ್ಕೆ ಸೇರಿದುದಾಗಿದೆ.

ಕುರುವತ್ತಿ ಹಿರೇಮಠದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ[೫೪] ಚಾಳುಕ್ಯ ವಿಕ್ರಮವರ್ಷ ೨೪ನೆಯ ಜೇಷ್ಠ, ಶುದ್ಧ, ಪೌರ್ಣಮಾಸಿ, ಆದಿತ್ಯವಾರ, ಸೋಮಗ್ರಹಣವೆಂದಿದ್ದು ಇದು ಕ್ರಿ.ಶ.೫-೬-೧೦೯೯ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಕುರುವತ್ತಿ ಆಂಜನೇಯಸ್ವಾಮಿ ದೇವಾಲಯದ ಬಳಿ ಬಿದ್ದಿರುವ ತ್ರುಟಿತ ಮೂರನೇ ಶಾಸನವು[೫೫] ಕಾಲವನ್ನು ರುದಿರೋದ್ಗಾರಿ, ಪುಷ್ಯ, ಶುದ್ಧ ಪೌರ್ಣಮಿ ಎಂದು ಹೆಸರಿಸಿದೆ. ಸೋಮವಾರ, ಸೋಮಗ್ರಹಣವೆಂದಿದ್ದು, ಇದು ಕ್ರಿ.ಶ.೨೦–೧೨–೧೨೦೩ರ ಶನಿವಾರವಾಗುತ್ತದೆ. ಆದರೆ ಆ ದಿನ ಸೋಮವಾರವೂ ಅಲ್ಲ ಸೋಮ ಗ್ರಹಣವೂ ಇರುವುದಿಲ್ಲ. ಅದೇ ಸ್ಥಳದ ಐದನೇ ನಂಬರಿನ ಶಾಸನವು ಹೊಯ್ಸಳ ವೀರಬಲ್ಲಾಳನ ೧೫ನೆಯ ವರ್ಷದ ಕ್ರೋಧನ, ಜೇಷ್ಠ, ಶುದ್ಧ ಪೌರ್ಣಮಿ, ಸೋಮವಾರ, ಸೋಮಗ್ರಹಣ, ವ್ಯತೀಪಾತವೆಂದಿದ್ದು, ಇದು ಕ್ರಿ.ಶ.೯-೬-೧೨೦೫ ಶುಕ್ರವಾರಕ್ಕೆ (ಸೋಮವಾರವಲ್ಲ) ಸಮನಾಗುತ್ತದೆ. ಅದೇ ರೀತಿ ಇದೇ ತಾಲೂಕಿನ ಹ್ಯಾರಡ ಗ್ರಾಮದ ಆಗ್ನೇಯದ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ತ್ರುಟಿತ ಶಾಸನವು[೫೬] ಕಾಲವನ್ನು ಶಕ ೧೧೮೪ನೆಯ ದುಂದುಭಿ, ಚೈತ್ರ, ಬ.ಅಮವಾಸ್ಯೆ, ಸೋಮವಾರ, ಸೂರ್ಯಗ್ರಹಣ ಎಂದು ಉಲ್ಲೇಖಿಸಿದೆ. ಈ ಕಾಲಕ್ಕೆ ರುಧಿರೋದ್ಗಾರಿ ಸಂವತ್ಸರ ಬರುತ್ತದೆ ಮತ್ತು ಸೂರ್ಯಗ್ರಹಣವಿರುವುದಿಲ್ಲ. ಅಂದರೆ ಇದು ಸರಿಸುಮಾರಾಗಿ ಕ್ರಿ.ಶ.೯-೪-೧೨೬೩, ಸೋಮವಾರಕ್ಕೆ ಸರಿಬರುತ್ತದೆ. ಕುರುವತ್ತಿ ಗ್ರಾಮದ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ೧೩ನೇ ನಂಬರಿನ ಶಾಸನವು[೫೭] ಚಾಳುಕ್ಯವಿಕ್ರಮ ವರ್ಷ ೨೯ನೆಯ ತಾರಣ ಸಂವತ್ಸರದ ವೈಶಾಖ ಮಾಸದ ಶು.೩, ಆದಿತ್ಯವಾರವೆಂದಿದ್ದು, ಇದು ಕ್ರಿ.ಶ. ೩೦-೩-೧೧೦೪ರ ಬುಧವಾರ(ಆದಿತ್ಯವಾರವಲ್ಲ)ಕ್ಕೆ ಸಮನಾಗುತ್ತದೆ. ಉತ್ತಂಗಿ ಶಂಕರೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನ[೫೮] ಶಕ ೧೦೭೨ನೆಯ ಪ್ರಮಾದಿ, ಅಕ್ಷಯ ತೃತೀಯ-ಅಮಾವಾಸ್ಯೆ, ಸೂರ್ಯಗ್ರಹಣ, ವ್ಯತಿಪಾತ, ವಿಸು ಸಂಕ್ರಮಣವೆಂದಿದ್ದು ಇದು ಕ್ರಿ.ಶ.೩೦-೩-೧೧೫೦ರ ಗುರುವಾರಕ್ಕೆ ಸರಿ ಹೊಂದುತ್ತದೆ ಆದರೂ ಆ ದಿನ ಸೂರ್ಯಗ್ರಹಣವಿಲ್ಲ. (ಇಮ್ಮಡಿ)ಜಗದೇಕಮಲ್ಲನು ಕಲ್ಯಾಣಪುರದಿಂದ ಆಳುತ್ತಿದ್ದಾಗ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ ಕೋಗಳಿನಾಡಿನ ಕುತ್ತಂಗಿಯಲ್ಲಿ ಸೌದರ ಬಸವಯ್ಯನು ಕಟ್ಟಿಸಿದ ಬಸವೇಶ್ವರ ದೇವರ ದೇವಾಲಯದ ಸೇವಾಕಾರ್ಯಗಳಿಗೆ ಭೂದಾನ ಮಾಡಿದನು. ಅದೇ ರೀತಿ ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ

ಬಳಿ ಇರುವ ಶಾಸನವು[೫೯] ಶಕ ೯೬೮ನೆಯ ವ್ಯಯ, ಫಾಲ್ಗುಣ, ಶು.೩, ಆದಿತ್ಯವಾರ, ಉತ್ತರ ಭಾದ್ರಪದ ಸಾಧ್ಯಯೋಗವನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೧-೨-೧೦೪೬ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ದಕ್ಷಿಣ ದ್ವಾರದ ಬಲಗೋಡೆಯ ಮೇಲಿರುವ ಶಾಸನವು[೬೦] ೧೧ನೆಯ ನಳ ಸಂವತ್ಸರದ ಆಷಾಢ, ಪೌರ್ಣಮಿ, ಸೋಮವಾರ, ಸೋಮಗ್ರಹಣ ವ್ಯತಿಪಾತ ಎಂದಿದೆ. ಆದರೆ ಈ ಕಾಲಕ್ಕೆ ನಳ ಸಂವತ್ಸರವು ಬರುವುದಿಲ್ಲ. ಪ್ರಭವ ಸಂವತ್ಸರ ಬರುವುದು. ಮೈಲಾರದ ಅರಳಿಕಟ್ಟೆಯ ಮೇಲಿರುವ ವೀರಗಲ್ಲಿನ ಮೇಲಿರುವ ಬರಹದಲ್ಲಿ ಕಾಲ ಶ್ರೀಮುಖ, ಭಾದ್ರಪದ, ಶುದ್ಧ ೧೧ ಎಂದು ಉಲ್ಲೇಖಿಸಿದೆ. ಹೊಳಲು ವೀರಭದ್ರ ದೇವಾಲಯದ ಪೂರ್ವ ಗೋಡೆಯ ಬಳಿ ನಿಲ್ಲಿಸಿರುವ ಶಾಸನ[೬೧] ಶಕ ೧೧೧೬ನೆಯ ರಾಕ್ಷಸ, ಶ್ರಾವಣ, ಶು.೧೩, ಆದಿವಾರ ಎಂದು ಉಲ್ಲೇಖಿಸಿದ್ದು, ಅದು ಕ್ರಿ.ಶ.೩-೭–೧೧೯೪ ಆದಿತ್ಯವಾರಕ್ಕೆ ಸಮನಾಗುತ್ತದೆ.

ಹೊಳಲಿನ ವೀರಭದ್ರ ದೇವಾಲಯದಲ್ಲಿರುವ ಹೆಚ್ಚು ಭಾಗ ಹಾಳಾಗಿರುವ ಇನ್ನೊಂದು ಶಾಸನ[೬೨] ಶಕ ೯೯೬ರ ಆನಂದ, ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ. ಇದು ಕ್ರಿ.ಶ. ೩೧-೫-೧೦೭೪ ಮಂಗಳವಾರಕ್ಕೆ ಸರಿಯಾಗಿದೆ. ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನ ಶಕ ೧೧೦೦ನೆಯ ವಿಳಂಬಿ ಸಂವತ್ಸರದ ಮಾರ್ಗಶಿರ, ಪಂಚಮಿ, ಬೃಹಸ್ಪತಿವಾರ ಉತ್ತರಾಯಣ ಸಂಕ್ರಮಣ, ಬ್ಯತಿಪಾತವೆಂದಿದ್ದು ಈ ತಿಥಿಯನ್ನು ಶುದ್ಧ ೫ ಎಂದು ಓದಿಕೊಂಡಾಗ ಅಲ್ಲಿ ಸಂಕ್ರಮಣವಿರುವುದಿಲ್ಲ. ಆದ್ದರಿಂದ ಸುಮಾರು ಕ್ರಿ.ಶ.೧೬-೧೧-೧೧೭೮ರ ಗುರುವಾರಕ್ಕೆ ಸಮನಾಗುತ್ತದೆ. ಹೊಳಲು ಅನಂತಶಯನ ದೇವಸ್ಥಾನದ ಎದುರಿಗೆ ಇರುವ ಶಾಸನ[೬೩] ಶ್ರೀಮುಖ ಸಂವತ್ಸರದ ಉತ್ತರಾಯಣ ಸಂಕ್ರಾನ್ತಿಯ ಉಲ್ಲೇಖವಿದೆ. ಹ್ಯಾರಡ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ಶಾಸನ[೬೪] ತ್ರುಟಿತ ಶಕ ೧೧೮೪ನೆಯ ದುಂದುಭಿ, ಚೈತ್ರ, ಬ.ಅಮವಾಸ್ಯೆ, ಸೋಮವಾರ, ಸೂರ್ಯಗ್ರಹಣ ಎಂಬ ಉಲ್ಲೇಖವಿದೆ. ಈ ಕಾಲಕ್ಕೆ ರುಧಿರೋದ್ಗಾರಿ ಸಂವತ್ಸರ ಬರುತ್ತದೆ ಮತ್ತು ಸೂರ್ಯಗ್ರಹಣವಿರುವುದಿಲ್ಲ. ಅಂದರೆ ಇದು ಸರಿಸುಮಾರಾಗಿ ಕ್ರಿ.ಶ. ೯-೪-೧೨೬೩, ಸೋಮವಾರಕ್ಕೆ ಸರಿಬರುತ್ತದೆ. ಹ್ಯಾರಡ ಅಲ್ಲಿಯೇ ನಾಲ್ಕನೆಯ ಶಾಸನವು ಪರ್ಥಿವ ಸಂವತ್ಸರದ ಚೈತ್ರ, ಸು.೧೩ನ್ನು ಉಲ್ಲೇಖಿಸುತ್ತದೆ. ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನ[೬೫] ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲದೇವನ ಕಾಲದ್ದಾಗಿದ್ದು, ಅದು ಶಕ ೯೭೮ನೆಯ ಹೇಮಳಂಬಿ ಸಂವತ್ಸರದ ವೈಶಾಖ, ಪೌರ್ಣಮಿ, ಆದಿತ್ಯವಾರ, ಸೋಮಗ್ರಹಣವನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೨೧-೦೪-೧೦೫೭, ಸೋಮವಾರಕ್ಕೆ ಸಮವಾಗುತ್ತದೆ. ಸೋಮಗ್ರಹಣ ಚೈತ್ರ ಅಂದರೆ ಮಾರ್ಚ್ ೨೩, ಆದಿತ್ಯವಾರ ಸಂಭವಿಸಿರುತ್ತದೆ. ಇಲ್ಲಿಯೇ ಇರುವ ಮತ್ತೊಂದು ಶಾಸನವು ಚಾಳುಕ್ಯ ವಿಕ್ರಮವರ್ಷ ೩೧ನೆಯ ಸರ್ವಜಿತ್, ಚೈತ್ರ, ಅಮವಾಸ್ಯೆ, ಸೂರ್ಯಗ್ರಹಣ, ವಿಷು ಸಂಕ್ರಮಣವನ್ನು ದಾಖಲಿಸಿದೆ. ಇದು ಕ್ರಿ.ಶ.೨೫-೩-೧೧೦೭ ಸೋಮವಾರದಂದು ಸಮನಾಗುತ್ತದೆ. ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದ ಮುಂದಿನ ಶಾಸನ[೬೬] ಹೊಯ್ಸಳ ಇಮ್ಮಡಿ ವೀರಬಲ್ಲಾಳನ

ಕಾಲದ್ದಾಗಿದ್ದು ಅದು ಶಕವರ್ಷ ೧೧೩೩ನೆಯ ಮಾಘ, ಶು.೩, ಆದಿತ್ಯವಾರ ಎನ್ನುವ ಉಲ್ಲೇಖವನ್ನು ಹೊಂದಿದೆ. ಇದು ಕ್ರಿ.ಶ.೮-೧-೧೨೧೨ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಹಿರೇಹಡಗಲಿ ವೀರಭದ್ರ ಗುಡಿಯ ಮುಂದೆ ಬಿದ್ದಿರುವ ಶಾಸನದಲ್ಲಿ[೧೭] ಕಾಲವನ್ನು ಶಕ ೭೭೧ನೆಯ ಪ್ರಜಾಪತಿ, ಪುಷ್ಯ ಅಮವಾಸ್ಯೆ, ಸೋಮವಾರ, ವ್ಯತೀಪಾತ, ಉತ್ತರಾಯಣ ಸಂಕ್ರಮಣ ಎಂದಿದೆ. ಇದು ಕ್ರಿ.ಶ.೮೪೯ ಶುಕ್ಲ ಸಂವತ್ಸರವಾಗಿದ್ದು ಪ್ರಜೋತ್ಪತ್ತಿ, ಪುಷ್ಯ ಅಮವಾಸ್ಯೆಯು ಕ್ರಿ.ಶ.೮೫೧ ಜನವರಿ ೫, ಸೋಮವಾರವಾಗುತ್ತದೆ. ಆದರೆ ಇದು ಉತ್ತರಾಯಣ ಸಂಕ್ರಮಣದ ದಿನವಲ್ಲ, ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಬಳಿ ಇರುವ ತ್ರುಟಿತ ಶಾಸನವು[೧೮] ಶಕ ೯೫೮ನೆಯ ಧಾತು, ಕಾರ್ತೀಕ, ಶು.೧, ಆದಿತ್ಯವಾರ, ಸೂರ್ಯಗ್ರಹಣ ಎಂದು ದಾಖಲಾಗಿದೆ. ಈ ವರ್ಷದಲ್ಲಿ ಸೂರ್ಯಗ್ರಹಣವು ಆಶ್ವೀಜ ಅಮವಾಸ್ಯೆಯಂದು ಬಂದಿದ್ದು ಆ ದಿನ ಶುಕ್ರವಾರವಾಗಿರುತ್ತದೆ. ಹೀಗಾಗಿ ಕಾರ್ತೀಕ ಶುದ್ಧ ೧ರಂದು ಗ್ರಹಣವಿಲ್ಲ. ಅಲ್ಲದೆ ಶನಿವಾರವಾಗುತ್ತದೆ. ಇದು ಕ್ರಿ.ಶ.೨೩-೧೦-೧೦೩೬ ಸರಿಹೊಂದುತ್ತದೆ. ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಒಳಗೆ ಇರುವ ಶಾಸನವು[೧೯] ಕಾಲವನ್ನು ಈ ಮುಂದಿನಂತೆ ದಾಖಲಿಸಿದೆ. ಚಾಳುಕ್ಯ ದೊರೆ ಜಗದೇಕಮಲ್ಲದೇವನು ಕಲ್ಯಾಣದಿಂದ (ಈ ಕಾಲಕ್ಕೆ ಬಹು ಹಿಂದೆಯೇ ಈತ ತೀರಿಕೊಂಡಿದ್ದ) ಆಳುತ್ತಿದ್ದಾಗ ಕಲಚೂರ್ಯ ದೊರೆ ರಾಯನಾರಾಯಣ ಆಹಮಲ್ಲದೇವನ ೪ನೇ ವರ್ಷ, ಶೋಭಕ್ರತ್, ಜೇಷ್ಠ, ಪೌರ್ಣಿಮೆ, ಸೋಮಗ್ರಹಣ ಎಂದು ಉಲ್ಲೇಖಿಸಿದ್ದು, ಇದು ಕ್ರಿ.ಶ.೭-೬-೧೧೮೩ಕ್ಕೆ ಸರಿ ಹೊಂದುತ್ತದೆ. ಇದೇ ಗ್ರಾಮದಲ್ಲಿನ ಮಠದ ಪಾಳುನಿವೇಶನದಲ್ಲಿರುವ ಮತ್ತೊಂದು ಶಾಸನ[೨೦] ಶಕ ೧೨೯೧ನೆಯ ಹೇಮಳಂಬಿ, ಮಾರ್ಗಶಿರ, ಶು.೫ ಎಂದು ಕಾಲವನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೨೦-೧೧-೧೨೯೭ರ ಬುಧವಾರಕ್ಕೆ (ಗುರುವಾರವಲ್ಲ) ಸಮನಾಗುತ್ತದೆ.

ಹಗರನೂರು ಕೆರೆಕಟ್ಟೆಯ ಬಳಿ ಬಯಲಿನಲ್ಲಿ ನೆಟ್ಟಿರುವ ಶಾಸನವು[೨೧] ಶಕ ೧೪೮೯,ಪ್ಲವಂಗ, ಕಾರ್ತೀಕ, ಶು.೨, ಬುಧವಾರವೆಂದು ಕಾಲವನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೧೫.೧೦.೧೫೪೭ರ ಶನಿವಾರ (ಬುಧವಾರವಲ್ಲ)ಕ್ಕೆ ಸಮನಾಗುತ್ತದೆ. ಮಾಗಳದ ವೇಣುಗೋಪಾಲಸ್ವಾಮಿ ದೇವಾಲಯ ದಲ್ಲಿರುವ ಶಾಸನವು[೨೨] ಶಕ ೧೧೩೬ನೆಯ ಭಾವ, ಚೈತ್ರ, ಶು.೧೧, ಬೃಹಸ್ಪತಿವಾರ ಎಂದು ಕಾಲವನ್ನು ಉಲ್ಲೇಖಿಸಿದೆ. ಇದನ್ನು ಸ್ವಾಮಿಕಣ್ಣು ಪಿಳ್ಳೆಯವರು ಕ್ರಿ.ಶ.೨-೩-೧೨೧೫ ಗುರುವಾರ, ೪೮. ಎನ್.ಬಿ. ಕ್ರಿ.ಶ.೧೨೧೪-೧೫ರಲ್ಲಿ ಭಾವ ಮತ್ತು ಶಕ ೧೧೩೬ ಆಗಿದ್ದು, ಇಲ್ಲಿ ಚೈತ್ರವೆಂದರೆ ಚೈತ್ರದ ಕೊನೆ ಎಂದಾಗಿ ಚೈತ್ರದ ಪ್ರಾರಂಭವಲ್ಲವೆಂದು ಭಾವಿಸಬೇಕಾಗಿದೆ(ಇಂಡಿಯನ್ ಕ್ರೋನೋಲೊಜಿ-ಭಾ-೩) ಎಂದಿದ್ದಾರೆ. ಆದರೆ ಇದು ಸಂಕ್ರಮಣದ ದಿನವಲ್ಲ. ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನ[೨೩] ಈ ಶಾಸನವು ಕಾಲವನ್ನು ಶಕ ೧೧೩೧ರ ಶುಕ್ಲ, ಶ್ರಾವಣ, ಶು. ೧೫, ಸೋಮವಾರ, ಸೋಮಗ್ರಹಣ ಎಂದು ದಾಖಲಿಸಿದ್ದು, ಇದು ಕರ್ಕಾಟಕ ಸಂಕ್ರಮಣ, ವ್ಯತಿಪಾತವಾಗಿದ್ದು ಅಂದರೆ ಇದು ಕ್ರಿ.ಶ.೧೮-೭-೧೨೦೯ರ ಶನಿವಾರ, ಸೋಮಗ್ರಹಣಕ್ಕೆ ಸರಿಯಾಗುತ್ತದೆ, ಅದೇ ಸ್ಥಳದ ಮತ್ತೊಂದು ಶಾಸನ[೨೪] ಚಾಳುಕ್ಯ ವಿಕ್ರಮವರ್ಷ ೪೧ನೆಯ ದುರ್ಮುಖಿ, ಪುಷ್ಯ,

ಶು.(ಬ. ಬದಲಿಗೆ ಶು.ಎಂದು ತಪ್ಪಾಗಿದೆ) ೩, ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿ ಎಂಬ ಕಾಲದ ಉಲ್ಲೇಖ ಈ ಶಾಸನದಲ್ಲಿದೆ. ಇದು ಕ್ರಿ.ಶ.೨೪-೧೨-೧೧೧೬ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಪುನಃ ಇದೇ ಶಾಸನವು ಮಾಘಮಾಸದ ಶು.೫, ಆದಿತ್ಯವಾರ, ಯುವ ಸಂವತ್ಸರ ಎನ್ನುವ ಮತ್ತೊಂದು ಕಾಲವನ್ನು ಉಲ್ಲೇಖಿಸಿದೆ. ಇದು ಸುಮಾರು ಕ್ರಿ.ಶ.೫-೧-೧೧೫೫ರ ಆದಿತ್ಯವಾರಕ್ಕೆ ಸಮವಾಗುತ್ತದೆ. ತಿಮ್ಮಲಾಪುರ ಕಲ್ಲೇಶ್ವರ ದೇವರ ಕಟ್ಟೆಗೆ ಸೇರಿಸಿರುವ ಶಾಸನವು[೭೫] ಶಾಲಿವಾಹನ ಶಕವರ್ಷ ೧೪೭೭ನೆಯ ರಾಕ್ಷಸ ಸಂವತ್ಸರದ ಶ್ರಾವಣ, ಶು.೫ ಎಂದು ಕಾಲವನ್ನು ಉಲ್ಲೇಖಿಸಿದ್ದು, ಇದು ಕ್ರಿ.ಶ.೨೩-೭-೧೫೫೫ ಮಂಗಳವಾರಕ್ಕೆ ಸಮವಾಗುತ್ತದೆ. ಕೊಟ್ನಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಕಲ್ಲಿನಲ್ಲಿರುವ ಬರಹ[೭೬] ಈ ಶಾಸನ ನಾಲ್ಕು ಬೇರೆ ಬೇರೆ ಕಾಲಗಳನ್ನು ಉಲ್ಲೇಖಿಸಿದ್ದು, ಆ ವಿವರ ಇಂತಿದೆ.

೧. ಚಾಳುಕ್ಯ ದೊರೆ ಜಗದೇಕಮಲ್ಲದೇವನ ೧೧ನೆಯ ವರ್ಷದ ಆಳ್ವಿಕೆಯ ವಿಭವ, ಪುಷ್ಯ, ಶು.೧೩, ಶುಕ್ರವಾರ, ಉತ್ತರಾಯಣ ಸಂಕ್ರಾಂತಿ ಎಂಬ ಕಾಲವನ್ನು ಈ ಶಾಸನ ಉಲ್ಲೇಖಿಸಿದ್ದು ಇದು ಕ್ರಿ.ಶ.೨೪-೧೨-೧೧೪೮ ಶುಕ್ರವಾರಕ್ಕೆ ಸಮನಾಗುತ್ತದೆ.

೨. (ಜಗದೇಕ ಮಲ್ಲದೇವನ?) ೬ನೆಯ ವರ್ಷದ ರುಧಿರೋದ್ಗಾರಿ, ಮಾಘ, ಶು.೫, ಸೋಮವಾರ ಎನ್ನುವ ಮತ್ತೊಂದು ಕಾಲವನ್ನು ಇದೇ ಶಾಸನ ಉಲ್ಲೇಖಿಸಿದ್ದು, ಅದು ಕ್ರಿ.ಶ. ೧೧-೧-೧೧೪೪ರ ಮಂಗಳವಾರಕ್ಕೆ(ಸೋಮವಾರವಲ್ಲ) ಸಮವಾಗುತ್ತದೆ.

೩. ವಿರೋಧಿ ಸಂವತ್ಸರ, ಆಷಾಢ, ಶು.೮, ಸೋಮವಾರ ಎಂದು ಇನ್ನೊಂದು ಕಾಲವನ್ನು ಇದೇ ಶಾಸನ ಉಲ್ಲೇಖಿಸಿದ್ದು, ಇದು ಕ್ರಿ.ಶ. ೪-೬-೧೧೯೯ರ ಬುಧವಾರ (ಸೋಮವಾರವೆಂದು ತಪ್ಪಾಗಿದೆ)ಕ್ಕೆ ಸಮವಾಗುತ್ತದೆ.

೪. ವಿಳಂಬ, ಶ್ರಾವಣ, ಶು.೧೧, ಶುಕ್ರವಾರ ಎನ್ನುವ ನಾಲ್ಕನೇ ಕಾಲವನ್ನು ಇದೇ ಶಾಸನ ಉಲ್ಲೇಖಿಸಿದ್ದು, ಇದು ಕ್ರಿ.ಶ. ೨೭-೭-೧೧೭೮ರ ಗುರುವಾರಕ್ಕೆ ಸಮವಾಗುತ್ತದೆ(ಇಲ್ಲಿ ಶುಕ್ರವಾರವೆಂದು ತಪ್ಪಾಗಿದೆ).

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ[೭೭] ಮೂಲತಃ ದಾನಶಾಸನವಾದ ಇದು ಬೇರೆ ಬೇರೆ ಕಾಲಗಳ ದಾಖಲೆಗಳನ್ನೊಳಗೊಂಡಿದೆ. ಅವುಗಳಲ್ಲಿ ಮೊದಲನೆಯದು ಚಾಳುಕ್ಯ ವಿಕ್ರಮವರ್ಷ ೧೫, ಪ್ರಮೋದ ಸಂವತ್ಸರದ ಆಶ್ವೀಜ ಮಾಸದ ಅಮವಾಸ್ಯೆ, ಆದಿವಾರ, ಸೂರ್ಯಗ್ರಹಣ ಉತ್ತರಾಯಣ ಸಂಕ್ರಾಂತಿ, ವ್ಯತೀಪಾತ ಎಂದಿದ್ದು, ವಾಸ್ತವವಾಗಿ ಅಂದು ಆಶ್ವೀಜ ಅಮವಾಸ್ಯೆಯಂದು ಆದಿತ್ಯವಾರವಿಲ್ಲ ಹಾಗೂ ಸೂರ್ಯಗ್ರಹಣದ ದಿನವೂ ಅಲ್ಲ. ಆ ವರ್ಷದ ಕಾರ್ತೀಕ ಮಾಸದಲ್ಲಿ ಸೂರ್ಯಗ್ರಹಣವು ಆದಿತ್ಯವಾರ ಬರುತ್ತದೆ. ಇದು ಕ್ರಿ.ಶ.೨೪-೧೧-೧೦೯೦ಕ್ಕೆ ಸಮವಾಗುವುದು. ಇದು ಬಹುಶಃ ಉದ್ದೇಶಿತ ದಿನವಾಗಿದೆ. ಆದರೂ ಇದು ಉತ್ತರಾಯಣ ಸಂಕ್ರಾಂತಿ ದಿನವಲ್ಲ. ಎರಡನೆಯದು

ಚಾಳುಕ್ಯ ವಿಕ್ರಮವರ್ಷ ೧೭, ಆಂಗೀರಸ, ವೈಶಾಖ, ಶು.೩, ಸೋಮವಾರ ಎನ್ನುವ ಉಲ್ಲೇಖವಿದ್ದು, ಇದು ಕ್ರಿ.ಶ. ೧೨-೪-೧೦೯೨ರ ಸೋಮವಾರಕ್ಕೆ ಸಮವಾಗುತ್ತದೆ. ಅದೇ ರೀತಿ ಈ ಶಾಸನದಲ್ಲಿ ಉಲ್ಲೇಖಿತವಾದ ಮೂರನೆಯ ಕಾಲವೆಂದರೆ ಚಾಳುಕ್ಯ ವಿಕ್ರಮ ವರ್ಷ ೫೦ನೆಯ ವಿಶ್ವಾವಸು, ಬನದ ಪೂರ್ಣಿಮೆ ಸೋಮವಾರ ಎಂದಿದೆ. ಇದು ಕ್ರಿ.ಶ. ೧೧-೧-೧೧೨೬ರ ಸೋಮವಾರಕ್ಕೆ ಸರಿಹೊಂದುತ್ತದೆ. ಇದೇ ಶಾಸನವು ದೇವರ ಸೇವಾಕಾರ್ಯಗಳಿಗಾಗಿ ದಾನ ಮಾಡಿದ ಉಲ್ಲೇಖವನ್ನು ದಾಖಲಿಸಿದ್ದು, ಆ ದಾನ ನೀಡಿದ ಕಾಲವು ಚಾಳುಕ್ಯ ವಿಕ್ರಮ ವರ್ಷ ೫೩, ಕೀಲಕ ಸಂವತ್ಸರದ ಕಾರ್ತೀಕ ಮಾಸದ ಪೂರ್ಣಿಮೆ, ಬೃಹಸ್ಪತಿವಾರ, ಕೃತ್ತಿಕಾ, ಸೋಮಗ್ರಹಣವೆಂದಿದೆ. ಇದು ಕ್ರಿ.ಶ. ೮-೧೧-೧೧೨೮ರ ಗುರುವಾರ, ಸೋಮಗ್ರಹಣಕ್ಕೆ ಸರಿಹೊಂದುತ್ತದೆ.

ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಮತ್ತೊಂದು ಶಾಸನವು[೭೮] ಶಕ ೧೧೮೫, ದುಂದುಬಿ, ಕಾರ್ತೀಕ ಶು.೧೫, ಸೋಮವಾರ, ವ್ಯತಿಪಾತ, ಸಂಕ್ರಾನ್ತಿ, ಗ್ರಹಣ ಎಂದು ಕಾಲವನ್ನು ದಾಖಲಿಸಿದ್ದು ಇದು ದುಂದುಬಿಯಲ್ಲಿ ಕಾರ್ತೀಕ, ಶು.೧೫ಯು ಕ್ರಿ.ಶ. ೨೮-೧೦-೧೨೬೨ರ ಶನಿವಾರ (ಸೋಮವಾರವಲ್ಲ)ಕ್ಕೆ ಸರಿಹೊಂದುತ್ತದೆ. ಅಂದು ವೃಶ್ಚಿಕ ಸಂಕ್ರಾನ್ತಿ ಯಾಗಿದ್ದರೂ ಅಂದು ಸೋಮಗ್ರಹಣವಿಲ್ಲ.

ಹೂವಿನಹಡಗಲಿ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನವು[೭೯] ಕಾಲವನ್ನು ಮುಂದಿನಂತೆ ಉಲ್ಲೇಖಿಸಿದೆ. ಶಕ ೯೩ನೆಯ ಸಾಧಾರಣ, ಫಾಲ್ಗುಣ, ಬ.೮ ಶುಕ್ರವಾರ, ವ್ಯತಿಪಾತವಾಗಿದ್ದು, ಇದು ಕ್ರಿ.ಶ.೨೫-೨-೧೦೭೧ ಶುಕ್ರವಾರಕ್ಕೆ ಸಮವಾಗುತ್ತದೆ. ಅದೇ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನವು ಚಾಳುಕ್ಯ ವಿಕ್ರಮವರ್ಷ ೩೫, ವಿಕೃತಿ, ಉತ್ತರಾಯಣ ಸಂಕ್ರಾನ್ತಿ ಎಂದು ಕಾಲವನ್ನು ಉಲ್ಲೇಖಿಸಿದ್ದು, ಇದು ಕ್ರಿ.ಶ.೧೧೧೦ಕ್ಕೆ ಸಮವಾಗುತ್ತದೆ. ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನವು[೮೦] ಶಕ ೯೮೪ನೆಯ ಶುಭಕೃತ್ ಸಂವತ್ಸರದ ಮಾರ್ಗಶಿರ, ಪುಣ್ಣಮೆ, ಮಂಗಳವಾರ ಎಂದು ಕಾಲವನ್ನು ದಾಖಲಿಸಿದ್ದು, ಇದು ಕ್ರಿ.ಶ.೧೯-೧೧-೧೦೬೨ರ ಮಂಗಳವಾರಕ್ಕೆ ಸಮವಾಗುತ್ತದೆ. ಹೂವಿನಹಡಗಲಿ ಹನುಮಂತ ದೇವಾಲಯದ ಆವರಣದಲ್ಲಿರುವ ತ್ರುಟಿತ ಶಾಸನ ಕಾಲವನ್ನು ಶಾಲಿವಾಹನ ಶಕ ವರ್ಷ ೧೪೫೬ನೆಯ ಮನ್ಮಥ, ವೈಶಾಖ, ಬ.೬, ಶುಕ್ರವಾರ ಎಂದು ದಾಖಲಿಸಿದೆ. ಈ ವರ್ಷ ಜಯಸಂವತ್ಸರವಾಗಿರುತ್ತದೆ. ಆದರೆ ಮುಂದಿನ ವರ್ಷ ಅಂದರೆ ಶಾಲಿವಾಹನ ಶಕವರ್ಷ ೧೪೫೭ ಮನ್ಮಥವಾಗಿರುತ್ತದೆ. ಇದು ಕ್ರಿ.ಶ. ೨೩-೪-೧೫೩೫ರ ಶುಕ್ರವಾರಕ್ಕೆ ಸಮನಾಗುತ್ತದೆ. ಹೊಳಗುಂದಿ ಬಲ್ಲೇಶ್ವರ ದೇವಾಲಯದಲ್ಲಿರುವ ತ್ರುಟಿತ ಶಾಸನವು ಚಾಳುಕ್ಯ ವಿಕ್ರಮವರ್ಷ ೧೭ನೆಯ ಶ್ರೀಮುಖ, ಭಾದ್ರಪದ ಅಮವಾಸ್ಯೆ, ಬೃಹಸ್ಪತಿವಾರ, ಸೂರ್ಯಗ್ರಹಣ, ಸಂಕ್ರಾನ್ತಿ, ವ್ಯತಿಪಾತ ಎಂದು ಕಾಲವನ್ನು ದಾಖಲಿಸಿದ್ದು ಇದು ಕ್ರಿ.ಶ.೨೩-೯-೧೦೯೭ರ ಶುಕ್ರವಾರಕ್ಕೆ ಸಮನಾಗುತ್ತದೆ. ಶಾಸನದಲ್ಲಿ ಶುಕ್ರವಾರಕ್ಕೆ ಬದಲಾಗಿ ಗುರುವಾರವೆಂದು ತಪ್ಪಾಗಿದೆ. ಹಾಗೆಯೇ ತುಲಾ ಸಂಕ್ರಮಣ ಸೆಪ್ಟೆಂಬರ್

೨೬ರಂದು ಬಂದಿರುತ್ತದೆ. ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಕಂಬದಲ್ಲಿನ ಶಾಸನವು[೮೧] ಹೊಯ್ಸಳ ದೊರೆ ವೀರನರಸಿಂಹನ ಕಾಲದ್ದಾಗಿದ್ದು, ಅದು ಆತನ ಆಳ್ವಿಕೆಯ ೬ನೆಯ ವರ್ಷದ ವ್ಯಯ, ಚೈತ್ರ, ಶು.೧೦, ಸೋಮವಾರ ಎಂದು ಕಾಲವನ್ನು ದಾಖಲಿಸಿದೆ. ಅಂದರೆ ಇದು ಕ್ರಿ.ಶ.೯-೩-೧೨೨೬ರ ಸೋಮವಾರಕ್ಕೆ ಸಮವಾಗುತ್ತದೆ. ಇದು ಇಮ್ಮಡಿ ವೀರನರಸಿಂಹದೇವನ ಕಾಲವಿರಬೇಕು. ಸೋಗಿ ಕಲ್ಲೇಶ್ವರ ದೇವಾಲಯದ ನವರಂಗ ಮಂಟಪದ ಕಂಬದ ಮೇಲೆ[೮೨] ಇದರ ಉಲ್ಲೇಖಿತ ಕಾಲವು ಶ್ರೀಮುಖ ಸಂವತ್ಸರದ ಅಶ್ವಯುಜ, ಬಹುಳ ಏಕಾದಶಿ, ಬ್ರಿಹವಾರ ಎಂದಿದ್ದು, ಅದು ಕ್ರಿ.ಶ.೧೧-೧೦-೧೨೧೮ರ ಶುಕ್ರವಾರಕ್ಕೆ (ಗುರುವಾರವಲ್ಲ) ಸರಿ ಹೊಂದುತ್ತದೆ. ಸೋಗಿ ಗ್ರಾಮದ ದೇವಾಲಯದ ದಕ್ಷಿಣಕ್ಕೆ ಮನೆಯ ಮುಂದೆ ಇರುವ ಶಾಸನ[೮೩] ಇದು ಕಾಲವನ್ನು ಚಾಳುಕ್ಯ ವಿಕ್ರಮವರ್ಷ ೩೫ನೆಯ ವಿಕೃತ, ಪುಷ್ಯ ಶು.೧೩, ಆದಿವಾರ, ಉತ್ತರಾಯಣ ಸಂಕ್ರಾಂತಿ, ವ್ಯತಿಪಾತ ಎಂದು ದಾಖಲಿಸಿದ್ದು, ಇದು ಕ್ರಿ.ಶ.೨೫.೧೨.೧೧೧೦ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಸೋಗಿ ಗ್ರಾಮದ ದಬ್ಬಗುಡಿಯ ಮುಂದೆ ಇರುವ ಶಾಸನ[೮೪] ಕಾಲವನ್ನು ಚಾಳುಕ್ಯ ವಿಕ್ರಮವರ್ಷ ೪೬ನೆಯ ಪ್ಲವ, ಪುಷ್ಯ. ಶು.೫ (ಶು.೧೫ ಎಂದಿರಬೇಕು) ಆದಿತ್ಯವಾರ, ಉತ್ತರಾಯಣ ಸಂಕ್ರಮಣ ಎಂದು ದಾಖಲಿಸಿದೆ. ಇದು ಕ್ರಿ.ಶ.೨೫-೧೨-೧೧೨೧ರ ಆದಿತ್ಯವಾರಕ್ಕೆ ಸಮನಾಗುತ್ತದೆ. ಸೋಗಿ ಗ್ರಾಮದ ಶಾಂತೀಶ್ವರಸ್ವಾಮಿ ದೇವಾಲಯದ ತೋಟದಲ್ಲಿನ ಶಾಸನ[೮೫] ಕಾಲವನ್ನು ಧಾತು, ಕಾರ್ತೀಕ ಶು.೫, ಎಂದು ದಾಖಲಿಸಿದ್ದು, ಇದು ಕ್ರಿ.ಶ.೩೦.೧೦.೧೫೧೬ರ ಗುರುವಾರಕ್ಕೆ ಸರಿ ಹೊಂದುತ್ತದೆ.

### ೬.೪.೩. ದಾನದ ಉಲ್ಲೇಖಗಳು

ಪ್ರಾಚೀನ ಕಾಲದಲ್ಲಿ ಸಮಾಜದ ಒಳತಿಗಾಗಿ ದಾನಗಳನ್ನು ಮಾಡುತ್ತಿದ್ದರು. ದಾನ ಅಂದು ಅವರ ಶ್ರೇಷ್ಠತೆಯ ಪ್ರತೀಕವಾಗಿತ್ತು. ಯಾವುದಾದರೂ ಸೇವೆ ಇಲ್ಲವೇ ಶ್ರೇಷ್ಠ ಕೆಲಸ ಮಾಡಿದ ವ್ಯಕ್ತಿಯನ್ನು ಇಲ್ಲವೇ ದೇವಾಲಯ ಇಲ್ಲವೇ ಮಠದಂತಹ ಸಾಮಾಜಿಕ ಸಂಸ್ಥೆಗಳ ಗಣನೀಯ ಸೇವೆಯನ್ನು ಗುರುತಿಸಿ ದಾನಗಳನ್ನು ಬಿಡಲಾಗುತ್ತಿತ್ತು. ಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ದಾನಗಳನ್ನು ಪೂರಕವಾಗಿ ಉಲ್ಲೇಖಿಸಿವೆ. ಇಲ್ಲಿನ ದಾನಗಳಲ್ಲಿ ಭೂದಾನವೇ ಅಧಿಕವಾಗಿದೆ. ಕುರುವತ್ತಿ ಹಿರೇಮಠದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ[೮೬] ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಸುರೇಶ್ವರ ಪಂಡಿತದೇವನು ಬೆಣ್ಣೆವೂರ-೧೨ನ್ನು ಆಳುತ್ತಿದ್ದಾಗ, ಕುರುವತ್ತಿಯಲ್ಲಿನ ಅಭಿನವ ಸೋಮೇಶ್ವರ ದೇವರ ಪೂಜೆಗಾಗಿ, ತಪೋಧನರ ಆಹಾರ ದಾನಕ್ಕಾಗಿ ಇನ್ನೂರು ಮಹಾಜನರು ತಮ್ಮ ಮುಖಂಡ ಕಾಳಿದಾಸಯ್ಯನ ನೇತೃತ್ವದಲ್ಲಿ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಹಾಗೆಯೇ ಕುರುವತ್ತಿ ಆಂಜನೇಯಸ್ವಾಮಿ ದೇವಾಲಯದ ಬಳಿ ಬಿದ್ದಿರುವ ತ್ರುಟಿತ ಎರಡನೇ ಶಾಸನದ[೮೭] ಎರಡನೇ ಭಾಗದಲ್ಲಿ ಭೂಮಿ ದಾನದ ವಿಷಯವಿದೆ. ಅದೇ ಸ್ಥಳದ ಐದನೇ ನಂಬರಿನ ಶಾಸನವು

ಹೊಯ್ಸಳ ವೀರಬಲ್ಲಾಳನ ೧೫ನೆಯ ವರ್ಷದ ಕ್ರೋಧನ, ಜೇಷ್ಠ, ಶುದ್ಧ ಪೌರ್ಣಮಿ, ಸೋಮವಾರ, ಸೋಮಗ್ರಹಣದಂದು ಪಟ್ಟಮಹಾದೇವಿ ಪದುಮಲದೇವಿಯರ ಮಹಾಪ್ರಧಾನ ಭಂಡಾರಿ ಸೋವರಸನು ಗುತ್ತೊಳಲಿನಿಂದ ಆಳುತ್ತಿರುವಾಗ ಲೋಕಾಭರಣ ದೇವನ ಕಾಲು ತೊಳೆದು ಆಹವಮಲ್ಲೇಶ್ವರ ದೇವರಿಗೆ ಆರು ಮತ್ತರು ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸಿದೆ. ಕುರುವತ್ತಿಯ ೬ನೇ ಶಾಸನವು[೮೮] ವೀರಬಲ್ಲಾಳನ ೧೬ನೆಯ ವರ್ಷದ ಕ್ಷಯ, ಚೈತ್ರ, ಬಹುಳ ಅಮಾವಾಸ್ಯೆ, ಆದಿವಾರ, ಸೂರ್ಯಗ್ರಹಣ, ವ್ಯತಿಪಾತವೆಂದಿದ್ದು, ಕ್ರಿ.ಶ.೧೨೦೬-೦೭ಕ್ಕೆ ಸಮನಾಗುತ್ತದೆ. ಸೂರ್ಯಗ್ರಹಣದ ಸಂದರ್ಭದಲ್ಲಿ ಉಚ್ಚಂಗಿಯ ಪಾಂಡ್ಯದೇವನ ಅನುಮತಿಯಂತೆ ದಾಸಿಯಣ ನಾಯಕರು ರಾಜಗುರು ಲೋಕಾಭರಣ ದೇವರ ಕಾಲನ್ನು ತೊಳೆದು ಆಹವಮಲ್ಲೇಶ್ವರ ದೇವರಿಗೆ ಮುಕ್ಕುರಬೆ ಗ್ರಾಮವನ್ನು ಮಾನ್ಯವಾಗಿ ಬಿಟ್ಟ ವಿವರವಿದೆ.

ಹ್ಯಾರಡ ಗ್ರಾಮದ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ತ್ರುಟಿತ ಶಾಸನವು[೮೯] ಯಾದವ ದೊರೆ ಮಹಾದೇವರಾಯನ ಆಳ್ವಿಕೆ ಮತ್ತು ಶ್ರೀಪರ್ವತದಲ್ಲಿನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗಾಗಿ ಹೆರಡ ಗ್ರಾಮವನ್ನು ಮಹಾಪಸಾಯಿತ ದಳವಯ್ಯ ......... ಸೋಯಿದೇವನು ದಾನ ಮಾಡಿದ ವಿವರವನ್ನು ಹೆಸರಿಸಿದೆ. ಅದೇ ರೀತಿ ಹ್ಯಾರಡದ ೪೪ನೇ ಶಾಸನವು ಶಾಲಿವಾಹನ ಶಕವರ್ಷ ೧೭೭೨, ವೈಶಾಖ, ಬ.೧೦ಕ್ಕೆ ಸರಿಯಾದ ಕ್ರಿ.ಶ. ೧೮೫೦ರಲ್ಲಿ ಬಾಗಳಿ ಸೋಮಶೇಖರ ನಾಯಕನ ಬಸವಪ್ಪ ನಾಯಕನು ಅಲ್ಲಿನ ಹಾಲಪ ಶ್ರೀಗುರುಗಳಿಗೆ ಸರ್ವಮಾನ್ಯವಾಗಿ ಭೂದಾನ ನೀಡಿದ ವಿವರವನ್ನು ಆ ಶಾಸನ ದಾಖಲಿಸಿದೆ. ಉತ್ತಂಗಿ ಶಂಕರೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ೧೦೭ನೇ ಶಾಸನ[೯೦] (ಇಮ್ಮಡಿ) ಜಗದೇಕಮಲ್ಲನು ಕಲ್ಯಾಣಪುರದಿಂದ ಆಳುತ್ತಿದ್ದಾಗ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ ಕೋಗಳಿ ನಾಡಿನ ಕುತ್ತಂಗಿಯಲ್ಲಿ ಸೌದರ ಬಸವಯ್ಯನು ಕಟ್ಟಿಸಿದ ಬಸವೇಶ್ವರ ದೇವರ ದೇವಾಲಯದ ಸೇವಾಕಾರ್ಯಗಳಿಗೆ ಭೂದಾನ ಮಾಡಿದನು. ನಂದಿಹಳ್ಳಿಯ ಹೊಲವೊಂದರಲ್ಲಿರುವ ೯೫ನೇ ನಂಬರಿನ ಶಾಸನ[೯೧] ತಿಮ್ಮಲಾಪುರ ಅಗ್ರಹಾರದಲ್ಲಿ ಬಯಿಕಾಜಿ ರಾಮಪಯನು ಮಾಡಿಸಿದ ಬಂದೇಶ್ವರ ಮತ್ತು ಗೋಪಿನಾಥ ದೇವರ ಸೇವಾಕಾರ್ಯಗಳಿಗೆ ವೊಳಲಗುಂದಿ ಗ್ರಾಮ ಬಯಿರಾಪುರಕ್ಕೆ ಪ್ರತಿನಾಮವಾದ ಗೋಪಿನಾಥಪುರವನ್ನು ಸದಾಶಿವದೇವ ಮಹಾರಾಯನು ದಾನ ಮಾಡಿದುದನ್ನು ಉಲ್ಲೇಖಿಸಿದೆ. ಹಾಗೆಯೇ ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ ಬಳಿ ಇರುವ ೨೫ನೇ ಶಾಸನವು[೯೨] ಶಕ ೯೬೮ನೆಯ(ಕ್ರಿ.ಶ.೧.೨.೧೦೪೬) ಶಾಸನವು ಮಹಾಮಂಡಲೇಶ್ವರ (ಗಂಡರಾ)ದಿತ್ಯರಸನು ಸಿಂಧವಾಡಿ-೧೦೦೦, ನರಗುಂದ ಅಗ್ರಹಾರ ಮತ್ತು ಬೆಣ್ಣೆಯೂರನ್ನು ಆಳುತ್ತಿರುವಾಗ ಪೆರ್ಗ್ಗಡೆ ಕಾಳಿಮಯ್ಯನು ಅಥವಾ ಕಾಳಿದಾಸನು ಮೆಳಿಮಡುವಿನ ತೇಜೋರಾಶಿ ಪಂಡಿತನ ಶಿಷ್ಯ ಚಿಲ್ಲಕಾಚಾರ್ಯನ ಕಾಲನ್ನು ತೊಳೆದು ಭೂಮಿಯನ್ನು, ಎರಡು ಮನೆಗಳನ್ನು, ಮಳಿಗೆಯನ್ನು, ಸ್ವಯಂಭುದೇವ ಮತ್ತು ಮೂಲಸ್ಥಾನದೇವರ ಸೇವಾ

ಕಾರ್ಯಗಳಿಗಾಗಿ ದಾನ ಮಾಡಿದನು. ಹೊಳಲು[೩]ನೇ ಶಾಸನವು ಚಾಳುಕ್ಯ ದೊರೆ ತ್ರಿಭುವನಮಲ್ಲನ ಕಾಲದಲ್ಲಿದ್ದ ಕೆಲವು ದಂಡನಾಯಕರನ್ನು ಹೆಸರಿಸಿದೆ. ಒಂದು ದೇವರಿಗೆ (ಹೆಸರು ಅಳಿಸಿದೆ) ಭೂದಾನ ನೀಡಿದ ಉಲ್ಲೇಖ ಹಾಗೂ ಗಂಡರಾದಿತ್ಯ ಪೊಳಲಿನ ಮಹಾಜನರನ್ನು ಅವರ ಶೌರ್ಯ ಮತ್ತು ಧರ್ಮದ ಪರಿಪಾಲನೆಯನ್ನು ಹೊಗಳಿದೆ. ಅದೇ ಗ್ರಾಮದ ಎರಡನೆಯ ಶಾಸನ[೪] ಅಪೂರ್ಣವಾಗಿದ್ದು, ಇದು ಚಾಲುಕ್ಯ ದೊರೆ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ಗಂಡರಾದಿತ್ಯಪೊಳಲಿನ ನೂರ ಇಪ್ಪತ್ತು ಮಹಾಜನರ ಪಾದಾರಾಧಕರಾದ ಉಗುರ-ಮೂನ್ನೂರ್ವರ ಕೊಯ್ಲುಳಿದೇವನು ಕೋಲೇಶ್ವರ ದೇವರ ಸೇವಾಕಾರ್ಯಗಳಿಗಾಗಿ ನೂರು ಕಂಬ ಗದ್ದೆಯನ್ನು ದಾನ ಮಾಡಿದನು. ಹೊಳಲಿನ ದೇವಾಲಯದ ಪೂರ್ವ ಗೋಡೆಯ ಬಳಿ ನಿಲ್ಲಿಸಿರುವ ಶಾಸನ ದೇವಾಲಯದೇವಾಲಯ[೫] ಶಕ ೧೧೧೬ರ ಕಾಲಕ್ಕೆ ಸೇರಿದ್ದು, ಇದು ಹೊಯ್ಸಳ ದೊರೆ (ಇಮ್ಮಡಿ) ವೀರಬಲ್ಲಾಳನ ಆಳ್ವಿಕೆಯ ಅವಧಿಯಲ್ಲಿ ಬಸವೆಯ ನಾಯಕನೆಂಬುವವನು ಚೋರರೊಡನೆ ಹೋರಾಡಿ ಸಾವನ್ನಪ್ಪಿದ್ದನು. ಈ ಸೇವಾಕಾರ್ಯಕ್ಕಾಗಿ ಊರಿನ ಮಹಾಜನರು ರಣರಂಗಭೈರವ ಬಸವೆಯ ನಾಯಕನ ಮಗ ಚೌಡೆಯನಾಯಕನಿಗೆ ಭೂದಾನ ಮಾಡಿದರು. ಹೊಳಲಿನ ವೀರಭದ್ರ ದೇವಾಲಯದಲ್ಲಿರುವ ಹೆಚ್ಚು ಭಾಗ ಹಾಳಾಗಿರುವ ಇನ್ನೊಂದು ಶಾಸನ[೬] ಚಾಳುಕ್ಯ ದೊರೆ ಭುವನೈಕಮಲ್ಲದೇವನ(ಇಮ್ಮಡಿ ಸೋಮೇಶ್ವರ) ಆಳ್ವಿಕೆಯಲ್ಲಿ ಗಂಡರಾದಿತ್ಯ ಚತುರ್ವೇದಿಮಂಗಲದ ೧೨೦ ಮಹಾಜನಗಳು, ತೆಲ್ಲಿಗರು, ಮುಮ್ಮರಿದಂಡಗಳು, ಸೆಟ್ಟಿಗಳು ಸೇರಿ ಗವರೇಶ್ವರ ದೇವರ ಸೇವೆಗಾಗಿ ಭೂದಾನವನ್ನು ಮಾಡಿದರು. ಐದುನೂರು ಸ್ವಾಮಿಗಳು ಕೆಲವು ವಸ್ತುಗಳ ಮೇಲೆ ತಾವಾಗಿಯೇ ಪಾಲನ್ನು ನೀಡುತ್ತಾರೆ. ಹ್ಯಾರಡದಲ್ಲಿ ಬಿದ್ದಿರುವ ಇನ್ನೊಂದು ಶಾಸನ ಹೆರಡದ ಸೇವಬೋವನ ಮಗ(ಹೆಸರು ಹಾಳಾಗಿದೆ)ನಿಗೆ ಬಾಗುಳಿ ಬಸಪ್ಪನಾಯಕನ ಆದೇಶದಂತೆ ಮದಪನಾಯಕನು ಭೂದಾನ ಮಾಡಿದನು(ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯ ದಲ್ಲಿದೆ).

ಹ್ಯಾರಡ ನಾಲ್ಕನೆಯ ಶಾಸನವು ಮುಂಮಡಿ ಬಸವಪ ನಾಯಕನು ತಳವಾರನೊಬ್ಬ ಚಂಣುಕಲು ಹೊಲದಲ್ಲಿ ಬಾವಿ ತೆಗೆದದ್ದಕ್ಕೆ ತಳವಾರಿಕೆ ಮಾನ್ಯವಾಗಿ ಭೂದಾನ ನೀಡಿದ. ಕತ್ತೆಬೆನ್ನೂರಿನ ಕೆರೆಕಟ್ಟೆ ಮೇಲೆ ಇರುವ ಆಕಳ ಕಲ್ಲಿನ ಶಾಸನ[೭] ತ್ರುಟಿತವಾಗಿದ್ದು, ಚಾಳುಕ್ಯ ದೊರೆ ಜಗದೇಕಮಲ್ಲದೇವನ ಆಳ್ವಿಕೆಯಲ್ಲಿ ತಂತ್ರಪಾಲ ಮಾಚಯ್ಯನು ಭೂದಾನ ಮಾಡಿದ ವಿಷಯ ತಿಳಿಸುತ್ತದೆ. ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನ[೮] ಚಾಳುಕ್ಯ ದೊರೆ ತ್ರೈಲೋಕ್ಯಮಲ್ಲದೇವನ ಆಳ್ವಿಕೆಯನ್ನು ಉಲ್ಲೇಖಿಸಿದೆ. ಈ ವೇಳೆಗೆ ಪೊಸವಡಂಗಿಲೆ ಗ್ರಾಮದ ಬ್ರಾಹ್ಮಣ ಮಹಾಜನಗಳಲ್ಲಿ ತ್ರಿವಿಕ್ರಮದೇವನೆಂಬುವವನಿದ್ದ. ಅವನಿಗೆ ನಕಲಿಮಯ್ಯ ಮತ್ತು ದೇಮರಸರೆಂಬ ಮಕ್ಕಳಿದ್ದರು. ಮಹಾಮಾತ್ಯನಾದ ದೇಮರಸನು ವಿಟಚಕ್ರವರ್ತಿಯೆಂದು ಹೆಸರಾಗಿದ್ದನು. ಈತನು ಪೊಸ ವಡಂಗಿಲೆಯಲ್ಲಿ ದೇಮೇಶ್ವರ ದೇವಾಲಯವನ್ನು ಕಟ್ಟಿಸಿ,

ಪೊಸವಡಂಗಿಲೆಯ ಮಹಾಜನಗಳಿಗೆ ದೇವರ ಸೇವಾಕಾರ್ಯಗಳಿಗಾಗಿ ಭೂದಾನ ಮಾಡುತ್ತಾನೆ. ಐದುನೂರು ಬಳಂಜುಗಳು ಮತ್ತು ನೂರಇಪ್ಪತ್ತು ಮಹಾಜನಗಳು ಎಣ್ಣೆಗಾಣ ಮತ್ತು ಕೆಲವು ಆದಾಯಗಳನ್ನು ದೇವರ ಸೇವಾಕಾರ್ಯಗಳಿಗಾಗಿ ದಾನ ಮಾಡಿದ ವಿವರವನ್ನು ಇದು ದಾಖಲಿಸಿದೆ. ಇಲ್ಲಿಯೇ ಇರುವ ಇನ್ನೊಂದು ಶಾಸನವು ಮಹಾಪ್ರಧಾನ ಅನಂತಪಾಲಯ್ಯನ ಅಳಿಯ ದಂಡನಾಯಕ ಮಾಚಿದೇವನು ದೇವರ ಸೇವಾಕಾರ್ಯಕ್ಕಾಗಿ ಸುಂಕದ ಆದಾಯದ ಭಾಗವನ್ನು ದಾನ ಮಾಡಿದನ್ನು ಉಲ್ಲೇಖಿಸಿದೆ. ದಂಡನಾಯಕ ಅತ್ತಿಮರಸ, ಚಾಕರಸನ ಮಗನಾದ ಉದಯಾದಿತ್ಯರಸ, ಭಾರಧ್ವಾಜ ಗೋತ್ರದ ಚಂದರಸನ ಮಗ ಶಂಕರಮಯ್ಯನು ವೀರವಿಷ್ಣು ತ್ರಿಭುವನ ಪೊಯ್ಸಳದೇವ ಬೆಳತೆಯ ಶಂಕರನಾಯಕ ಮತ್ತು ಶಾಂತಿವರ್ಮಯ್ಯ ನಾಯಕ ಮತ್ತು ಉಳಿದವರು ಅದೇ ದೇವರ ಸೇವಾಕಾರ್ಯಕ್ಕೆಂದು ದಾನ ಮಾಡಿದ ವಿವರವನ್ನು ಇದು ಉಲ್ಲೇಖಿಸಿದೆ.

ಹಿರೇಹಡಗಲಿಯ ಭೀಮೇಶ್ವರ–ದೇಮೇಶ್ವರ ದೇವಾಲಯದ ಮುಂದೆ ಇರುವ ಇನ್ನೊಂದು ಶಾಸನ[೯೯] ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ವೀರಬಲ್ಲಾಳನ ಕಾಲಾವಧಿಯಲ್ಲಿ ಆತನ ಹಿರಿಯ ರಾಣಿ ಪದುಮಲದೇವಿ ಹೊಸಪಂಡಗಿಲೆಯನ್ನು ಆಳುತ್ತಿದ್ದಳು. ಆಗ ಬ್ರಾಹ್ಮಣ ದಂಡನಾಯಕ ಗಂಗಿಮಯ್ಯ ನಾಯಕ ಮತ್ತು ದಾಮಣ್ಣ ದಂಡನಾಯಕರು ಹಿರಿಯಕೆರೆ ಮತ್ತು ತುಂಬಿನಕೆರೆಗಳಿಗೆ ೧೨೦ ಮಹಾಜನಗಳ ಸಮ್ಮುಖದಲ್ಲಿ ಭೂದಾನ ಮಾಡಿದ ಉಲ್ಲೇಖವಿದೆ. ದಂಡನಾಯಕ ಗಂಗಿಮಯ್ಯನ ವಂಶಾವಳಿಯನ್ನು ವಿವರಿಸಿದೆ. ಹೊಸಹಡಂಗಿಲೆಯ ಬ್ರಾಹ್ಮಣ ಮಹಾಜನಗಳನ್ನು ರಿಪುನಾಯಕ ಸಂತ್ರಾಸಿಗಳು ಎಂದು ವರ್ಣಿಸಲಾಗಿದೆ. ಹಿರೇಹಡಗಲಿಯ ಭೀಮೇಶ್ವರ ದೇವಾಲಯದ ದಕ್ಷಿಣ ಭಾಗಕ್ಕಿರುವ ಶಾಸನ[೧೦೦] ಮಹಾಮಂಡಳೇಶ್ವರ ವೀರ ಪಾಂಡ್ಯದೇವನು ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦ ಮತ್ತು ಕೋಗಳಿಯನ್ನು ಆಳುತ್ತಿರುವಾಗ ಆತನ ಚಿಕ್ಕಪ್ಪ ವಿಕ್ರಮ ಪಾಂಡ್ಯನು ಪತ್ನಿ ಬಾಚಲದೇವಿ ಮತ್ತು ಮಗಳು ಮಹಾದೇವಿಯ ಶ್ರೇಯೋಭಿವೃದ್ಧಿಗಾಗಿ ಭೂದಾನ ಮಾಡಿದ ವಿವರವಿದೆ. ಹಿರೇಹಡಗಲಿ ವೀರಭದ್ರ ಗುಡಿಯ ಮುಂದೆ ಬಿದ್ದಿರುವ ಶಾಸನದಲ್ಲಿ[೧೦೧] ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಆತನ ಮಾಂಡಲಿಕನಾದ ಕಾಂಚೀಪುರವರಾಧೀಶ್ವರ ಮಹಾಮಂಡಲೇಶ್ವರ ಮಹೇಂದ್ರನು ಮರಂದಲೆ ಮೇರೆಯಾಗಿ ದೇಶವನ್ನು ಆಳುತ್ತ ಕೋಗಳಿಯಲ್ಲಿದ್ದು ಪೊಸವಡಂಗಿಲೆಯ ೧೨೦ ಮಹಾಜನಗಳ ಮುಂದೆ ಮೂಲಸ್ಥಾನದೇವರ ಸೇವಾಕಾರ್ಯಗಳಿಗೆ ಭೂದಾನ ಮಾಡಿದನು. ಅದೇ ಪ್ರಜಾಪತಿ ಸಂವತ್ಸರ, ಚೈತ್ರ, ಶು.೧, ಸೋಮವಾರದಂದು ಅಂದರೆ ಕ್ರಿ.ಶ.೧-೩-೮೫೧ರ ಶನಿವಾರದಂದು (ಸೋಮವಾರವಲ್ಲ) ಮಲ್ಲಿಯಣ್ಣ ಮತ್ತು ಆತನ ತಂದೆ ಬಾಚಿಮಯ್ಯನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗೆ ಭೂಮಿ ದಾನ ಮಾಡಿದ ವಿವರವಿದೆ. ಹಿರೇಹಡಗಲಿ ಚನ್ನಪ್ಪ ಎಂಬ ವ್ಯಾಪಾರಿಯ ವಶದಲ್ಲಿದ್ದ ತಾಮ್ರ ಶಾಸನವು[೧೦೨] ಪ್ರಾಕೃತ ಭಾಷೆಯ ಈ ಶಾಸನವು ಕಾಂಚಿಯ ಬಪ್ಪ(?)ನ ಮಗ ಪಲ್ಲವರ ದೊರೆ

ಶಿವಸ್ಕಂದವರ್ಮನು ಚಿಲ್ಲರೇಕಕೋಡುಂಕ ಗ್ರಾಮದಲ್ಲಿನ ತೋಟವನ್ನು ದಾನ ಮಾಡಿದನು. ಮೊದಲು ಇದನ್ನು ಬಪ್ಪಸ್ವಾಮಿರಾಜನು ಬ್ರಾಹ್ಮಣರಿಗೆ ದಾನವಾಗಿ ನೀಡಿದ್ದನು. ಆ ದಾನವನ್ನು ವಿವಿಧ ಭಾಗಗಳಾಗಿ ವಿಂಗಡಿಸಿದೆ. ಕೆಲವು ಬ್ರಾಹ್ಮಣರಿಗೆ ಅದರಲ್ಲಿನ ಎರಡು ತುಂಡು ಭೂಮಿಯನ್ನು ನೀಡಿದ್ದಾನೆ. ತುಂಬಿಗೆರೆ ಈಶ್ವರ ದೇವಾಲಯದ ಬಳಿ ನಿಲ್ಲಿಸಿರುವ ಶಾಸನ[೧೦೩]ವು ಚಾಲುಕ್ಯ ದೊರೆ ಇಮ್ಮಡಿ ಜಯಸಿಂಹನ?(ಶಾಸನದಲ್ಲಿ ಹೆಸರು ಅಳಿದಿದೆ) ಮತ್ತು ಆತನ ಮಾಂಡಲಿಕ ಜಗದೇಕಮಲ್ಲ ಇಮ್ಮಡಿನೊಳಂಬ....ಪೆರ್ಮನಡಿದೇವನ ಕಾಲಾವಧಿಯಲ್ಲಿ ಪೆರ್ಗಡೆ ಚನ್ದಿಮಯ್ಯ ನಾಯಕನು ರಾಜನ ಅನುಮತಿಯನ್ನು ಪಡೆದು ತುಂಬಿಗೆರೆಯ ಮೂಲಸ್ಥಾನ ದೇವರಿಗೆ ೪೦೦ ಕಮ್ಮ ಗದ್ದೆಯನ್ನು ಆ ಸ್ಥಳದ ಮುನಿಗಳಿಗೆ ೩೦೦ ಕಮ್ಮವನ್ನು, ಮಠಕ್ಕೆ ೬ ಮತ್ತರನ್ನು ದಾನ ಮಾಡಿದ ವಿವರ ದಾಖಲಾಗಿದೆ. ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಬಳಿ ಇರುವ ತ್ರುಟಿತ ಶಾಸನವು[೧೦೪] ಕ್ರಿ.ಶ.೨೩-೧೦-೧೦೩೬ರಲ್ಲಿ ಅಯ್ಯಣ ಭೀವಜೋಗರಸ, ಮಾರಗಾವುಂಡ, ಮತ್ತಿತರರು ಕೋಗಳಿ-೫೦೦ರಲ್ಲಿದ್ದ ಮೊಸಳೆಮಡನ್ನು ಗುರುದೇವನು ಆಳುತ್ತಿರುವಾಗ ಕಲಿದೇವರ ಸೇವಾಕಾರ್ಯಗಳಿಗೆ ಭೂದಾನ ಮಾಡಿದ ವಿವರವನ್ನು ದಾಖಲಿಸಲಾಗಿದೆ.

ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಒಳಗೆ ಇರುವ ಶಾಸನವು[೧೦೫] ಮಾಂಡಲಿಕ ವಿಜಯಪಾಂಡ್ಯದೇವನು ಕೋಗಳಿ-೫೦೦, ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಮಹಾಮಂಡಳೇಶ್ವರ ವಿಕ್ರಮಾದಿತ್ಯರಾಯರಸನೊಡಗೂಡಿ ಕೆಲವು ಹೆಗ್ಗಡೆಗಳು ಹಾಗೂ ಗಾವುಂಡಗಳು ಕಲಿದೇವರಿಗೆ ಮೊದಲು ನೀಡಿದ್ದ ದಾನವನ್ನು ಸ್ಥಿರೀಕರಣಗೊಳಿಸಿ ಕಲ್ಯಾಣಶಕ್ತಿ ಪಂಡಿತನಿಗೆ ಇದರ ಪಾರುಪತ್ಯವನ್ನು ವಹಿಸಿದ ವಿವರ ದಾಖಲಾಗಿದೆ. ಇದೇ ಗ್ರಾಮದಲ್ಲಿನ ಮಠದ ಪಾಳು ನಿವೇಶನದಲ್ಲಿರುವ ಮತ್ತೊಂದು ಶಾಸನ[೧೦೬] ಯಾದವ ದೊರೆ ರಾಮಚಂದ್ರದೇವನ ಆಳ್ವಿಕೆಗೆ ಸೇರಿದ್ದು. ಇದು ಪೊಸ್ತಕಗಚ್ಛ, ದೇಶಿಗಣ, ಮೂಲಸಂಘದ ನೇಮಿಚಂದ್ರರಾವುಳನ ಶಿಷ್ಯ, ವಿನಯ ಚಂದ್ರದೇವನಿಗೆ ಭೂದಾನ ಮಾಡಿದುದನ್ನು ಉಲ್ಲೇಖಿಸುತ್ತದೆ. ಅಲ್ಲದೆ ಸಾವಂತ ಪಂಡಿತನ ಮಗನಾದ ಕೇಶವ ಪಂಡಿತನು ಮೊಸಳೆವಾಡದ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದಾಗ ವೈಷ್ಣವ ಭಕ್ತನಾದ ಮಹಾಮಂಡಲೇಶ್ವರ ಭೈರವ ದೇವರಸನು ಕೆಲವು ಗೌಡರೊಡಗೂಡಿ ಈ ದಾನವನ್ನು ಮಾಡಿದನು. ಎಂಟುಹಿಟ್ಟು ಮತ್ತು ಗ್ರಾಮದ ಜನರು ಮತ್ತು ಹಗರನೂರಿನ ಮುಖ್ಯಸ್ಥ ಪಾರಿಸಗೌಡನು ಪಾರ್ಶ್ವನಾಥ ದೇವಾಲಯಕ್ಕೆ ಭೂದಾನವನ್ನು ಮಾಡಿದ ವಿವರವನ್ನು ಇದೇ ಶಾಸನ ದಾಖಲಿಸಿದೆ. ಬಸರಕೋಡು ಕಲ್ಲೇಶ್ವರ ದೇವಾಲಯದ ಬಳಿ ನಿಲ್ಲಿಸಿರುವ ತ್ರುಟಿತ ವೀರಗಲ್ಲು ಶಾಸನವು[೧೦೭] ಶಕ ೧೨೯೫, ಪರಿಧಾವಿ, ಪ್ರಥಮ ಭಾದ್ರಪದ, ಬ.೧೨, ಗು(ರುವಾರ) ಎಂದು ಕಾಲವನ್ನು ಉಲ್ಲೇಖಿಸಿದ್ದು ಇದು ಕ್ರಿ.ಶ.೬-೮-೧೩೭೨ರ ಗುರುವಾರಕ್ಕೆ ಸಮನಾಗುತ್ತದೆ. ಹಗರನೂರು ಕೆರೆಕಟ್ಟೆಯ ಬಳಿಯಿರುವ ಬಯಲಿನಲ್ಲಿ ನೆಟ್ಟಿರುವ ಶಾಸನವು[೧೦೮] ಸದಾಶಿವಮಹಾರಾಯನ ಆಳ್ವಿಕೆಯಲ್ಲಿ ಮೂಡಗಂದಲ ತಿಮ್ಮರಸ ನಾಯಕನ ಮಗ ಬೆಮ್ಮನಾಯಕನು ಕೊಟ್ಟೂರ ಸೀಮೆಯಲ್ಲಿನ

ರಂಗಾಪುರ ಸ್ಥಳದಲ್ಲಿನ ಅಮರಗೆರೆ ಗ್ರಾಮವನ್ನು ಮಯಿಲಾರದ ಕಪಿಲಮುನಿ ಹೆಗ್ಗಪ್ಪ ಶಿವಾಚಾರ್ಯ ವೊಡೆಯನ ಮಗ ವರುಣಕಾಂತ ವೊಡೆಯರಿಗೆ ಬಯಪನಾಯಕನ ಮಗ ಕೃಷ್ಣಪ್ಪನಾಯಕನು ತನ್ನ ಶ್ರೇಯೋಭಿವೃದ್ಧಿಗಾಗಿ ದಾನ ನೀಡಿದ ವಿವರವನ್ನು ದಾಖಲಿಸಿದೆ. ಮಾಗಳ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿರುವ ಶಾಸನವು[೧೦೯] ಹೊಯ್ಸಳ ದೊರೆ ವಿಷ್ಣುವರ್ಧನ ವೀರಬಲ್ಲಾಳ(ಇಮ್ಮಡಿ)ನ ಆಳ್ವಿಕೆಯಲ್ಲಿ ಹರಿಹರ ಊರೊಡೆಯರು ಮತ್ತು ಗೋವಿಂದ, ಇಬ್ಬರು ವಿದ್ಯಾವಂತ ಹಾಗೂ ಮಾಂಗೊಳದ ಮಹಾಜನರೊಡಗೂಡಿ ದೇವರ ಪೂಜೆಗಾಗಿ ಭೂಮಿ ಮತ್ತು ಮನೆಗಳ ದಾನ ಮಾಡಿದ ವಿವರಗಳನ್ನು ಈ ಶಾಸನ ದಾಖಲಿಸಿದೆ.

ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನ[೧೧೦] ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ)ನು ಆಳ್ವಿಕೆಯಲ್ಲಿ ಆತ ವಿಜಯಸಮುದ್ರವೆಂಬ ಹಳ್ಳವೂರಿನಲ್ಲಿ ಶಿಬಿರದಲ್ಲಿದ್ದಾಗ ಬ್ರಾಹ್ಮಣ ಕಾಳಿಮಯ್ಯನ ಮಗ ಮರ್ಮರಸನು, ಶಿವ, ವಿಷ್ಣು, ಸೂರ್ಯರಿಗಾಗಿ ತ್ರಿಕೂಟ ದೇವಾಲಯವನ್ನು ಕಟ್ಟಿಸಿದಾಗ ಭಂಡಾರಿ ಸಿಂಗಯ್ಯ, ಮಾಂಗೊಳದ ೨೦೦ ಮಹಾಜನಗಳು ದೇವರ ಸೇವಾಕಾರ್ಯಕ್ಕಾಗಿ ಭೂದಾನವನ್ನು ಮಾಡಿದರು. ಅಲ್ಲದೆ ಇದೇ ದೇವಾಲಯಕ್ಕೆ ಇತರರು ಭೂದಾನ ಮಾಡಿದುದನ್ನು ಕೂಡ ಉಲ್ಲೇಖಿಸುತ್ತದೆ. ರಂಗಾಪುರ ನರಸಿಂಹ ದೇವಾಲಯದ ಶಾಸನ[೧೧೧] ಚಾಲುಕ್ಯರಾಜ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ರಾಣಿ ಪದುಮಲದೇವಿಯು ಮಾಂಗೊಳ ಅಗ್ರಹಾರವನ್ನು ಆಳುತ್ತಿರುವಾಗ, ಅಲ್ಲಿನ ಮಹಾಜನರ ವಿನಂತಿಯಂತೆ, ರಾಣಿ ಪುಳಿಯಮನಾಯಕನಿಗೆ ೧೧ ಮತ್ತರು ಭೂಮಿಯನ್ನು ನರಸಿಂಹದೇವರ ಪೂಜಾ ಸೇವಾಕಾರ್ಯಕ್ಕಾಗಿ ದಾನ ಮಾಡಲು ಆದೇಶಿಸಿದಳು. ಬಿದಿರಪಳ್ಳಿಯ ೧೨೦ ಮಹಾಜನಗಳು ಅದೇ ದೇವರ ಸೇವಾಕಾರ್ಯಕ್ಕಾಗಿ ೨೫ ಗದ್ಯಾಣವನ್ನು ದಾನ ಮಾಡಿದರು. ಸೋಮೇಶ್ವರಭಟ್ಟರ ಮಗ ಇಚ್ಚಿಯನಾಯಕ, ಆತನ ಸಹೋದರ ಬಲದೇವಘೈಸಾಸರು ಅದೇ ದೇವರ ಸೇವೆಗಾಗಿ ಭೂದಾನ ಮಾಡಿದರು ಎನ್ನುವ ವಿವರಗಳನ್ನು ಶಾಸನವು ಉತ್ತಮವಾಗಿ ವರ್ಣಿಸಿ ವಿವರಿಸಿದೆ.

ತಿಮ್ಮಲಾಪುರ ಕಲ್ಲೇಶ್ವರ ದೇವರ ಕಟ್ಟೆಗೆ ಸೇರಿಸುವ ಶಾಸನವು[೧೧೨] ಸದಾಶಿವರಾಯನು ವಿದ್ಯಾನಗರದಿಂದ ಆಳುತ್ತಿದ್ದಾಗ ಅಳಿಯ ರಾಮರಾಜ ಅರಸನು ಮತ್ತು ವಿಠಲಪ್ಪ ಒಡೆಯನು ಗುತ್ತವೊಳಲ ಸೀಮೆಯ ಹಕಹಂದಿಗನೂರು ಗ್ರಾಮವನ್ನು ವಿಠಲದ ಸಮೀಪವಿದ್ದ ಆಳ್ವರು ದೇವರ ಸೇವಾಕಾರ್ಯಗಳಿಗೆ ದಾನ ಮಾಡಿದುದನ್ನು ವ್ಯವಸ್ಥಿತವಾಗಿ ಉಲ್ಲೇಖಿಸಿದೆ. ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನವು[೧೧೩] ಚಾಲುಕ್ಯ ದೊರೆ ಜಗದೇಕಮಲ್ಲದೇವನ ಕಾಲದಲ್ಲಿ ಹೂವಿನಹಡಂಗಿಲೆಯ ಉತ್ತರಕ್ಕಿರುವ ಕೋಟಿಶಂಕರ ದೇವರ ಸೇವಾಕಾರ್ಯಗಳಿಗೆ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ವಿಕ್ರಮಾದಿತ್ಯನು ಕೊಟ್ಟಿಗನೂರು ಗ್ರಾಮವನ್ನು ದಾನ ಮಾಡಿದನು. ಈ ದಾನಗಳನ್ನು ಪಡಂಗಿಲೆಯ ೧೨೦ ಮಹಾಜನಗಳು ಪ್ರತಿಪಾಳಿಸುವರು. ಅಲ್ಲಿನ ಅದೇ ಮಹಾಜನಗಳು ಜಗದೇಕಮಲ್ಲದೇವನ? ಕಾಲದಲ್ಲಿ ಅದೇ ದೇವರ ದೇವತಾ ಕಾರ್ಯಗಳಿಗಾಗಿ

ದಾನವನ್ನು ಮಾಡಿದ ವಿವರವನ್ನು ಮತ್ತು ವಿರೋಧಿ ಸಂವತ್ಸರ, ಆಷಾಢ, ಶು.೮, ಸೋಮವಾರದಂದು ಶ್ರೀ ವೀರಕೇಶವ ದೇವರ ಸೇವಾಕಾರ್ಯಗಳಿಗೆ ವಿಕ್ರಮಾದಿತ್ಯರಸನು ಭೂದಾನ ಮಾಡಿದ್ದನ್ನು ಹಾಗೂ ವಿಳಂಬ, ಶ್ರಾವಣ, ಶು.೧೧, ಶುಕ್ರವಾರದಂದು ವಿಜಯ ಪಾಂಡ್ಯದೇವನು ಅದೇ ಕೋಟಿಶಂಕರ ದೇವರ ಸೇವಾಕಾರ್ಯಗಳಿಗೆ ಒಂದು ಮನೆ ಮತ್ತು ೩೮೦ ಕಂಬ ತೋಟವನ್ನು ದಾನ ಮಾಡಿದ ಸಮಗ್ರ ಮಾಹಿತಿಯನ್ನು ಇದೇ ಶಾಸನ ದಾಖಲಿಸಿದೆ. ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ[೧೧೪]ವು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ದಾನ ಮಾಡಿದ ದಾಖಲೆಗಳನ್ನೊಳಗೊಂಡಿದೆ. ಅವುಗಳಲ್ಲಿ ಮೊದಲನೆಯದು ಕ್ರಿ.ಶ.೨೪-೧೧-೧೯೦ರಲ್ಲಿ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ, ಶೂರಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯು ತನ್ನ ಹುಟ್ಟುರಾದ ಪೂವಿನ ಪೊಸವಡಂಗಿಲೆಯಲ್ಲಿ ದೇವರ ಸೇವಾಕಾರ್ಯಗಳಿಗಾಗಿ ಮತ್ತು ಬ್ರಾಹ್ಮಣರ ಆಹಾರಸತ್ರಕ್ಕಾಗಿ, ಹೂತೋಟಕ್ಕಾಗಿ ಭೂದಾನ ಮುಂತಾದವನ್ನು ಅಲ್ಲಿನ ಬ್ರಾಹ್ಮಣ ಮಹಾಜನಗಳ ಸಮ್ಮುಖದಲ್ಲಿ ದಾನ ಮಾಡಿದ ವಿವರವನ್ನು ಒಳಗೊಂಡಿದೆ. ಅದೇ ರೀತಿ ಈ ಶಾಸನ ದಾಖಲಿಸಿದ ಎರಡನೆಯ ದಾನವೆಂದರೆ ರವಿಯಣ(ರವಿಗ) ಭಟ್ಟನ ವಿನಂತಿಯಂತೆ ರಾಜನು ಅದೇ ದೇವರ ಸೇವಾಕಾರ್ಯಗಳಿಗಾಗಿ ಊರಚಲಗೇರಿ ಗ್ರಾಮವನ್ನು ದಾನ ಮಾಡಿದ್ದನ್ನು ಈ ಶಾಸನ ದಾಖಲಿಸಿದೆ. ಈ ಶಾಸನ ದಾಖಲಿಸಿದ ಮೂರನೆಯ ದಾನ ವೆಂದರೆ ವಾಸಿಷ್ಠಗೋತ್ರದ ರಾಯ್ಕೇಯಷಣಂಗಿಯು ೩ ಗದ್ಯಾಣಗಳನ್ನು ಕ್ರಿ.ಶ.೧೧-೧-೧೧೨೬ರ ಸೋಮವಾರದಂದು ಇದೇ ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಇದೇ ಶಾಸನವು ಮತ್ತೊಂದು ದಾನದ ವಿವರವನ್ನೊಳಗೊಂಡಿದೆ. ಅದೆಂದರೆ ಸಾಯಣ್ಣನ ಮಗಳು ಸೊರಿಕಯ್ವೆ ಮತ್ತು ಲೋಕೇಯಷಣಂಗಿಯ ಮಗ ಇವರು ೬೦೦ ಕಮ್ಮ ನೀರಾವರಿ ಭೂಮಿಯನ್ನು ಇದೇ ದೇವರ ಸೇವಾಕಾರ್ಯಗಳಿಗಾಗಿ ಕ್ರಿ.ಶ.೮-೧೧-೧೧೨೮ರ ಗುರುವಾರದಂದು ದಾನ ಮಾಡಿದ ವಿವರವನ್ನು ದಾಖಲಿಸಿದೆ.

ಕೊಟ್ಟೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಮತ್ತೊಂದು ಶಾಸನವು[೧೧೫] ಯಾದವ ದೊರೆ ಮಹಾದೇವರಾಯನು ದೇವಗಿರಿಯಿಂದ ಆಳುತ್ತಿದ್ದಾಗ ಕೋಟಿಗನೂರು ಮದುವಯನು ಮಾಸವಾಡಿ ೧೪೦ರಲ್ಲಿದ್ದ ದಕ್ಷಿಣ ಅಯ್ಯಾವೊಳೆಯೆಂದು ಪ್ರಸಿದ್ಧವಾಗಿದ್ದ ಕೌರವ ಗ್ರಾಮದ ೫೦೦ ಮಹಾಜನಗಳಿಂದ ಐದು ಮತ್ತರು ಭೂಮಿಯನ್ನು ದಾನವಾಗಿ ಪಡೆದು ಅದನ್ನು ತುಂಗಭದ್ರಾ ನದಿಯ ಬಲದಂಡೆಯ ಮೇಲಿನ ಕೋಟಿಶಂಕರ ದೇವರಿಗೆ ದಾನ ಮಾಡಿದ ವಿವರವನ್ನು ಉಲ್ಲೇಖಿಸಿದೆ. ಹೂವಿನಹಡಗಲಿ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ೮೪ನೇ ಶಾಸನವು[೧೧೬] ಕ್ರಿ.ಶ.೨೫-೨-೧೦೬೧ರಲ್ಲಿ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನು ಗೋವಿಂದವಾಡಿಯಿಂದ ಆಳುತ್ತಿದ್ದಾಗ ದಂಡನಾಯಕ ಚಿದ್ದಯ್ಯನು ಗೆಲುವಿನ ಉತ್ಸಾಹದಲ್ಲಿದ್ದಾಗ

ಕೊಮಾರಸ್ವಾಮಿ ದ್ವೇದಿಭಟ್ಟನು ಮತ್ತು ಪೂವಿನಪಡಂಗಿಲಿಯ ಉಳಿದ ಮಹಾಜನಗಳು ರಾಜನಲ್ಲಿಗೆ ಬಂದು ಆಶೀರ್ವದಿಸಿದರು. ಅವರ ವಿನಂತಿಯಂತೆ ರಾಜನು ಕಲಿದೇವರ ಸೇವಾಕಾರ್ಯಗಳಿಗೆ, ರಾಮೇಶ್ವರದ ಮಲಯಾಳ ಪಂಡಿತದೇವರ ಸನ್ತತಿ ಲಕುಲೇಶ್ವರ ಪಂಡಿತರ ಮಠದ ಯತಿಗಳ ಆಹಾರಕ್ಕೆ ಮತ್ತು ವಿದ್ಯಾರ್ಥಿಗಳ ಬಟ್ಟೆ ಮತ್ತು ಆಹಾರಕ್ಕೆ, ಸೇವಕರಿಗೆ, ಹಾಡುಗಾರರಿಗೆ, ಕೋಗಳಿ-೫೦೦ರ ಹಾಲ್ವೊಳ-೧೨ರಲ್ಲಿನ ಕೋಟಿಗನೂರು ಗ್ರಾಮವನ್ನು ರಾಜನು ದಾನ ಮಾಡಿದನು. ದಾನ ಮಾಡಿದ ಗ್ರಾಮದ ಆದಾಯವನ್ನು ಮೇಲಿನ ಮೂರು ಕಾರ್ಯಗಳಿಗಾಗಿ ವಿಂಗಡಿಸಿದ್ದರು. ಅದೇ ದೇವರಿಗೆ ಕೋಟಿಗನೂರಿನ ಮನ್ನೆಯ ಸಾಮ್ಯವನ್ನು ಮಹಾಸಾಮಂತ ಘಟ್ಟಿಯರಸನು ದಾನ ಮಾಡಿದನು ಎನ್ನುವ ಉಲ್ಲೇಖಗಳಿವೆ.

ಹೂವಿನಹಡಗಲಿ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನು ಕಲ್ಯಾಣದಿಂದ ಆಳುತ್ತಿರುವಾಗ ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು. ಆತನ ಮಾಂಡಲಿಕ(ಮುದ್ದ)ರಸನು ನೊಳಂಬವಾಡಿ-೩೨೦೦೦ದ ತೆರಿಗೆ ಅಧಿಕಾರಿ ಯಾಗಿದ್ದಾಗ ಪೂವಿನ ಪಡಂಗಿಲಿಯ ೧೨೦ ಮಹಾಜನಗಳ ಮುಂದೆ ಕಲಿದೇವರ ಸ್ಥಾನಿಕ ಖಳೇಶ್ವರ ಪಂಡಿತನ ಕಾಲು ತೊಳೆದು ಸೋಮೇಶ್ವರ ದೇವರಿಗೆ ಪನ್ನಾಯದ ತೆರಿಗೆಯನ್ನು ದಾನ ಮಾಡುತ್ತಾನೆ. ಖಳೇಶ್ವರ ಪಂಡಿತನ ಸನ್ಯಾಸ ಮತ್ತು ಮುದ್ದರಸನ ಕೆಲಸಗಳನ್ನು ಇದೇ ಶಾಸನದಲ್ಲಿ ವರ್ಣಿಸಿದೆ. ಹೂವಿನ ಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನವು[೧೧೭] ಕಲ್ಯಾಣದಲ್ಲಿ ತ್ರೈಲೋಕ್ಯಮಲ್ಲ ದೇವನು(ಒಂದನೇ ಸೋಮೇಶ್ವರ) ಆಳುತ್ತಿರುವಾಗ, ಆತನ ಮಗ ವಿಜಯಾದಿತ್ಯನು ನೊಳಂಬವಾಡಿ-೩೨೦೦೦ವನ್ನು ಕಂಪಿಲೆಯಿಂದ ಆಳುತ್ತಿದ್ದನು. ಆಗ ಪೂವಿನಪಂಡಗಿಲಿಯ ೧೨೦ ಮಹಾಜನಗಳು ಪೂವಿನಪಡಂಗಿಲಿಯ ಕಲಿದೇವಸ್ವಾಮಿಯ ದೇವಾಲಯವನ್ನು ಕಟ್ಟಲು ಕೆಸರುಗಲ್ಲು ಹಾಕಿದ ಮಾರೋಜನಿಗೆ ಭೂದಾನ ಮಾಡಿದ ವಿವರವನ್ನು ದಾಖಲಿಸಿದೆ. ಹೂವಿನಹಡಗಲಿ ಹನುಮಂತ ದೇವಾಲಯದ ಆವರಣದಲ್ಲಿರುವ ತ್ರುಟಿತ ಶಾಸನವು ಅಚ್ಚುತದೇವರಾಯನ ಕಾಲದಲ್ಲಿ ಹೂವಿನ ಹಡಗಲಿಯ ಹನುಮಂತ ದೇವರಿಗೆ ಸಿರಿಯಪ್ಪನು ಭೂದಾನ ಮಾಡಿದ ಉಲ್ಲೇಖ ಹೊಂದಿದೆ.

ಹೊಳಗುಂದಿ ಬಳ್ಳೇಶ್ವರ ದೇವಾಲಯದಲ್ಲಿರುವ ಶಾಸನವು[೧೧೮] ಚಾಲುಕ್ಯ ದೊರೆ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ಚಾವುಂಡರಸನ ಮಗ ಮಹಾಮಂಡಲೇಶ್ವರ ಗಂಗರಸನು ಅವನ ತಂದೆ ತನ್ನದೆಂದು ಕಟ್ಟಿಸಿದ ಬಾಳೇಶ್ವರ ದೇವರ ಸೇವಾಕಾರ್ಯಗಳಿಗೆ ಎರಕಗಾವುಂಡನ ಕೈಯಲ್ಲಿ ಭೂದಾನ ಮಾಡಿಸಿದನು. ದಾನವನ್ನು ಲಕುಲೀಶ ಪಂಥದ ಮಲಯಾಳ ಪಂಡಿತನ ಶಿಷ್ಯ, ಜ್ಞಾನೇಶ್ವರ ಪಂಡಿತ, ಆತನ ಶಿಷ್ಯ ಸೋಮೇಶ್ವರ ಪಂಡಿತ, ಆತನ ಶಿಷ್ಯ ಸಂತರಾಸಿ ಪಂಡಿತ, ಆತನ ಶಿಷ್ಯ ಖಳೇಶ್ವರ ಪಂಡಿತನ ಕಾಲು ತೊಳೆದು ರಾಜನ ಒಪ್ಪಿಗೆ ಪಡೆದು ಈ ದಾನ ಮಾಡಿದನು. ಅದೇ ದೇವರ ಸೇವಾಕಾರ್ಯಗಳಿಗೆ ಕೆಲವು ಗಾವುಂಡರು ದಾನ ಮಾಡಿದರೆಂದು

ದಾಖಲಾಗಿದೆ. ಸೋಗಿ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಕಂಬದಲ್ಲಿನ ಶಾಸನ[೧೧೯] ಹೊಯ್ಸಳ ದೊರೆ ವೀರನರಸಿಂಹನ ಮಹಾಪ್ರಧಾನ ಬೊಮ್ಮೆಯ ದಣನಾಯಕನ ಆದೇಶದಂತೆ, ಗೋಪರಸ, ಭೂತರಸ, ದೇಮಯ್ಯ ಮತ್ತು ಮಂಗತೆಯ್ಯ, ಸಿರಿಪಣ್ಣ, ಸುಂಕದ ಅಧಿಕಾರಿ ಮಯ್ಲಾರದೇವ ಮತ್ತು ಉಳಿದವರು ಪಾಂಡ್ಯನಾಡಿನ ಸೋಗೆಯ ಕಲಿದೇವರ ಸೇವಾಕಾರ್ಯಗಳಿಗೆ ಪಾಂಡ್ಯನಾಡಿನ ಸುಂಕದ ಆದಾಯದಲ್ಲಿ ವರ್ಷಕ್ಕೆ ಎರಡು ಗದ್ಯಾಣವನ್ನು ದಾನ ಮಾಡಿದ ವಿವರವನ್ನು ಈ ಶಾಸನ ದಾಖಲಿಸಿದೆ. ಅಲ್ಲದೆ ಇದೇ ಶಾಸನವು ಹೆಗ್ಗಡೆ ಹೇಮಯ್ಯ ಮತ್ತು ಉಳಿದವರು ಎರಡು ಗದ್ಯಾಣವನ್ನು ಮತ್ತು ಬಿಲುಕೊಡೆ ತೆರಿಗೆ ಅಧಿಕಾರಿಯಾಗಿದ್ದ ಹೆಗ್ಗಡೆ ಬೊಪ್ಪಯ ದಣಯಕನು ಹೆಗ್ಗಡೆ ಹರಿಯಣ್ಣನ ಆದೇಶದಂತೆ ಇದೇ ದೇವರ ದೇವತಾ ಕಾರ್ಯಕ್ಕಾಗಿ ದಾನ ಮಾಡಿದ್ದನ್ನು ದಾಖಲಿಸಿದೆ.

ಸೋಗಿ ಕಲ್ಲೇಶ್ವರ ದೇವಾಲಯದ ನವರಂಗ ಮಂಟಪದ ಕಂಬದ ಮೇಲೆ ಇರುವ ಶಾಸನವು[೧೨೦] ನಾನಾದೇಶಿ ಮಲಯಾಳ ಪೊರಯಚ್ಚಸೆಟ್ಟಿ ೭೦೦ ಕಮ್ಮ ಭೂಮಿಯನ್ನು ಮಾರಗೊಂಡನಿಂದ ಖರೀದಿಸಿ ಕಲಿದೇವರ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ ಕಾರ್ಯಗಳಿಗಾಗಿ ದಾನ ಮಾಡಿದನು. ಪೊರಯಚ್ಚಸೆಟ್ಟಿಯು ತನಗೂ ಮತ್ತು ತನ್ನ ತಮ್ಮ ಕುಮಾರಚ್ಚಸೆಟ್ಟಿಯ ಶ್ರೇಯಸ್ಸಿಗಾಗಿ ದಾನ ಮಾಡಿದ ಎನ್ನುವ ವಿವರವನ್ನು ಕಾಲಸಹಿತವಾಗಿ ದಾಖಲಿಸಿದೆ. ಸೋಗಿ ಗ್ರಾಮದ ವೀರಪ್ಪನ ಮನೆಯ ಮುಂದೆ ಬಿದ್ದ ಹಾಳಾದ ಶಾಸನದ ತುಂಡು[೧೨೧] ಹೊಯ್ಸಳ ರಾಜ ವಿಷ್ಣುವರ್ಧನ ವೀರಬಲ್ಲಾಳನ ಕಾಲಕ್ಕೆ ಸೇರಿದ್ದು, ಇದರಲ್ಲಿ ನಾಗವರ್ಮನ ವಂಶಕ್ಕೆ ಸೇರಿದ ಕಲಿಮಯ್ಯನ ಮಗ ತಿಳಕಯ್ಯನು ಕೋಗಳಿಯ ಉಭಯಚಾರ್ಯನೆಂಬ ಜೈನ ಗುರುಗಳಿಗೆ ಸ್ವಲ್ಪ ಭೂಮಿಯನ್ನು ದಾನ ಮಾಡಿದ ವಿವರವನ್ನು ದಾಖಲಿಸಿದೆ. ಸೋಗಿ ಗ್ರಾಮದ ದೇವಾಲಯದ ದಕ್ಷಿಣಕ್ಕಿರುವ ಮನೆಯ ಮುಂದೆ ಇರುವ ಶಾಸನ[೧೨೨] ಇದು ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ದಂಡಾಧಿಪತಿ ಮುದ್ದರಸ ಅಥವಾ ಮುದ್ದರಾಜನು ಸೋಗೆಯ ಬಳಿಯ ನಾಗಸಮುದ್ರ ಕೆರೆಗಾಗಿ ಕೆಲವು ದಾನ ಮಾಡಿದುದನ್ನು ದಾಖಲಿಸುತ್ತದೆ. ಸೋಗಿ ಗ್ರಾಮದ ಶಾಂತೀಶ್ವರಸ್ವಾಮಿ ದೇವಾಲಯದ ತೋಟದಲ್ಲಿನ ಶಾಸನ[೧೨೩] ಕೃಷ್ಣರಾಯ ಮಹಾರಾಯನ ಆಳ್ವಿಕೆಯಲ್ಲಿ ಅವನ ಅಧಿಕಾರಿ ಇಮ್ಮಡಿಬಸವಪ್ಪ ಒಡೆಯನ ತಾಯಿ ಪಾರ್ವತಿಅಮ್ಮನ ಆದೇಶದಂತೆ ಕೊಟ್ಟೂರಿನ ಪ್ರಧಾನ ಅರುಹ ತಿಮ್ಮಣನಾಯಕನು ದಣಾಯಕಪುರ ಗ್ರಾಮವನ್ನು ಸೋಗೆಯ ಧರ್ಮದ ಏತಕ್ಕಾಗಿ ತನ್ನ ಅರಸನಿಗೆ ಪುಣ್ಯವಾಗಲಿಯೆಂದು ದಾನ ಮಾಡಿದನು. ಏತದ ವೆಚ್ಚದಲ್ಲಿ ಮಿಕ್ಕಿದ ಹಣವನ್ನು ಸೋಗೆಯ ಕಲಿನಾಥದೇವರ ಸೇವಾಕಾರ್ಯಗಳಿಗಾಗಿ ಬಳಸುವುದು ಎಂದು ಶಾಸನ ದಾಖಲಿಸಿದೆ.

**೬.೪.೪. ಮಾನ್ಯದ ಉಲ್ಲೇಖಗಳು**

ಪ್ರಾಚೀನ ಕಾಲದಲ್ಲಿ ಕೆಲವು ಕಾರಣಗಳಿಗಾಗಿ ಮಾನ್ಯಗಳನ್ನು ಬಿಡುತ್ತಿದ್ದರು. ಅದು ಅಂದು ಅವರ ಶ್ರೇಷ್ಠತೆಯ ಪ್ರತೀಕವಾಗಿತ್ತು. ಮಾನ್ಯವನ್ನು ಅಂದು ಯಾವುದಾದರು ಸೇವೆ/ಶ್ರೇಷ್ಠ ಕೆಲಸ

ಮಾಡಿದ ವ್ಯಕ್ತಿಯನ್ನು ದೇವಾಲಯ ಇಲ್ಲವೇ ಮಠದಂತಹ ಸಾಮಾಜಿಕ ಸಂಸ್ಥೆಗಳ ಸೇವೆಯನ್ನು ಗುರುತಿಸಿ ಮಾನ್ಯಗಳನ್ನು ಬಿಡಲಾಗುತ್ತಿತ್ತು. ಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ಮಾನ್ಯಗಳನ್ನು ಪೂರಕವಾಗಿ ಉಲ್ಲೇಖಿಸಿವೆ.

ಕುರುವತ್ತಿಯ ೬ನೇ ಶಾಸನವು ವೀರಬಲ್ಲಾಳನ ೧೬ನೆಯ ವರ್ಷದ ಸೂರ್ಯಗ್ರಹಣದ ಸಂದರ್ಭದಲ್ಲಿ ಉಚ್ಚಂಗಿಯ ಪಾಂಡ್ಯದೇವನ ಅನುಮತಿಯಂತೆ ದಾಸಿಯಣ ನಾಯಕರು ರಾಜಗುರು ಲೋಕಾಭರಣ ದೇವರ ಕಾಲನ್ನು ತೊಳೆದು ಆಹವಮಲ್ಲೇಶ್ವರ ದೇವರಿಗೆ ಮುಕ್ಕುರಬೆ ಗ್ರಾಮವನ್ನು ಮಾನ್ಯವಾಗಿ ಬಿಟ್ಟ ವಿವರವಿದೆ. ಹ್ಯಾರಡದ ೪೩ನೇ ಶಾಸನವು ಹೆರಡದ ಸೇವಬೋವನ ಮಗ (ಹೆಸರು ಹಾಳಾಗಿದೆ)ನಿಗೆ ಬಾಗುಳಿ ಬಸಪ್ಪನಾಯಕನ ಆದೇಶದಂತೆ ಮದಪನಾಯಕನು ೧ ಸಲಗೆ ಮಾನ್ಯದ ಹೊಲವನ್ನು ಭೂದಾನ ಮಾಡಿದ ವಿವರ ಇದೆ. ಅದೇ ಗ್ರಾಮದ ೪೬ನೇ ಶಾಸನವು ಪರ್ಥಿವ ಸಂವತ್ಸರದ ಚೈತ್ರ, ಸು.೧೩ರಲ್ಲಿ ಮುಂಮಡಿ ಬಸವಪನಾಯಕನು ಅಲ್ಲಿನ ತಳವಾರನೊಬ್ಬ ಚಂಣುಕಲು ಹೊಲದಲ್ಲಿ ಬಾವಿ ತೆಗೆದದ್ದಕ್ಕೆ ಪ್ರತಿಯಾಗಿ ಅವನಿಗೆ ತಳವಾರಿಕೆಯನ್ನು ಮಾನ್ಯವಾಗಿ ಭೂದಾನ ನೀಡಿದ ವಿವರವನ್ನು ದಾಖಲಿಸಿದೆ.[೧೨೪] ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನ ಇದು ಕ್ರಿ.ಶ.೧೯-೧೧-೧೦೬೭ರಲ್ಲಿ ಕಲ್ಯಾಣದಲ್ಲಿ ತ್ರೈಲೋಕ್ಯಮಲ್ಲದೇವನು(ಒಂದನೇ ಸೋಮೇಶ್ವರ) ಆಳುತ್ತಿರುವಾಗ, ಆತನ ಮಗ ವಿಜಯಾದಿತ್ಯನು ನೊಳಂಬವಾಡಿ-೩೨೦೦೦ವನ್ನು ಕಂಪಿಲೆಯಿಂದ ಆಳುತ್ತಿದ್ದನು. ಆತನ ಮಾಂಡಲಿಕ ಘಟ್ಟಿಯರಸ ಮತ್ತು ಮಲ್ಲಪ್ಪರಸನು ಪೂಲಿಯಕೆರೆಯ ಮನ್ನೆಯವನ್ನು ಕಲಿದೇವರಿಗೆ ಬಿಟ್ಟುಕೊಟ್ಟದ್ದನ್ನು ಉಲ್ಲೇಖಿಸುತ್ತದೆ. ಸ್ಥಳದ ಸ್ಥಾನಿಕ ಮಲಯಾಳ ಪಂಡಿತನ ಶಿಷ್ಯ ಸಾಂತರಾಸಿ ಪಂಡಿತ, ಮಲ್ಲಪ್ಪರಸ ಮತ್ತು ಸ್ಥಳದ ಮಹಾಜನಗಳು ಈ ದಾನದ ಮೇಲ್ವಿಚಾರಕರಾಗಿರುತ್ತಾರೆ ಎನ್ನುವುದನ್ನು ಇದೇ ಶಾಸನ ದಾಖಲಿಸಿದೆ.[೧೨೫]

**೬.೪.೫. ಇತರೆ ಸೇವಾ ಕಾರ್ಯಗಳ ಉಲ್ಲೇಖಗಳು**

ಹಡಗಲಿ ತಾಲೂಕಿನ ವ್ಯಾಪ್ತಿಯಲ್ಲಿ ದೊರೆಯುವ ಶಾಸನಗಳು ವಿವಿಧ ವಿಷಯಗಳನ್ನು ತಿಳಿಸುವಂತೆ ಅಂದು ಅಸ್ತಿತ್ವದಲ್ಲಿದ್ದ ಸೇವೆಯ ವಿವರಗಳನ್ನು ದಾಖಲಿಸಿವೆ. ಇವುಗಳಿಂದ ಅಂದಿನ ಆಡಳಿತ ವ್ಯವಸ್ಥೆಯಲ್ಲಿ ಜನಸೇವೆಯ ಪಾತ್ರವೇನಾಗಿತ್ತು ಎಂಬುದನ್ನು ಅರಿಯಬಹುದಾಗಿದೆ.

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ(೮೩)ವು ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಆತನ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿ ರೆಬ್ಬಲದೇವಿ ಹೂತೋಟಕ್ಕಾಗಿ ಭೂದಾನ ಮಾಡಿದ ವಿವರ ಮತ್ತು ರವಿಗ ಯಾವ ನಾಯಕನಿಗೂ ಸಾಟಿಯಿಲ್ಲದವನಾಗಿದ್ದು ಸಂಧಿವಿಗ್ರಹಿ ಮತ್ತು ಚಾಲುಕ್ಯ ರಾಜ್ಯ ಮೂಲಸ್ತಂಭವಾಗಿ, ಹಿಮಾಲಯ ಮತ್ತು ಸೇತುವಿನ ಮಧ್ಯ ರಾಜನ

ಆದೇಶವನ್ನು ನೀಡುತ್ತಿದ್ದನು. ನರ್ಮದ, ಗಂಗಾ ಮತ್ತು ಜಮುನಾ ನದಿ ದಂಡೆಯ ಮೇಲೆ ಅನೇಕ ಸುರಾಲಯಗಳನ್ನು ಸ್ಥಾಪಿಸಿದ ಹಾಗೂ ಅಲ್ಲಲ್ಲಿ ಸಂಜೆ ಮಠಗಳನ್ನು ಸ್ಥಾಪಿಸಿದ ಎನ್ನುವ ವಿವರವನ್ನು ದಾಖಲಿಸಿದೆ.[೧೨೬] ಹೂವಿನಹಡಗಲಿ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನ ಕಲ್ಲೇಶ್ವರ ದೇವರಿಗೆ ಕೋಟಿಗನೂರಿನ ಮನ್ನೆಯಸಾಮ್ಯವನ್ನು ಮಹಾಸಾಮಂತ ಘಟ್ಟಿಯರಸನು ದಾನ ಮಾಡಿದ ವಿವರವನ್ನು ದಾಖಲಿಸಿದೆ.[೧೨೭] ಸೋಗಿ ಗ್ರಾಮದ ಶಾಂತೀಶ್ವರಸ್ವಾಮಿ ದೇವಾಲಯದ ತೋಟದಲ್ಲಿನ ಶಾಸನ ಕ್ರಿ.ಶ.೩೦-೧೦-೧೫೧೬ರಲ್ಲಿ ಕ್ರಷ್ಣರಾಯ ಮಹಾರಾಯನ ಆಳ್ವಿಕೆಯಲ್ಲಿ ಅವನ ಅಧಿಕಾರಿ ಇಮ್ಮಡಿಬಸವಪ್ಪ ಒಡೆಯನ ತಾಯಿ ಪಾರ್ವತಿಅಮ್ಮನ ಆದೇಶದಂತೆ ಕೊಟ್ಟೂರಿನ ಪ್ರಧಾನ ಅರುಹ ತಿಮ್ಮಣನಾಯಕನು ದಣಾಯಕಪುರ ಗ್ರಾಮವನ್ನು ಸೋಗೆಯ ಧರ್ಮದ ಏತಕ್ಕಾಗಿ ತನ್ನ ಅರಸನಿಗೆ ಪುಣ್ಯವಾಗಲಿಯೆಂದು ದಾನ ಮಾಡಿದನು. ಏತದ ವೆಚ್ಚದಲ್ಲಿ ಮಿಕ್ಕಿದ ಹಣವನ್ನು ಸೋಗೆಯ ಕಲಿನಾಥದೇವರ ಸೇವಾಕಾರ್ಯಗಳಿಗಾಗಿ ಬಳಸಬೇಕು ಎನ್ನುವ ವಿವರವನ್ನು ದಾಖಲಿಸಿದೆ.[೧೨೮]

### ೬.೪.೬. ರಾಜರ ವಂಶಾವಳಿ/ಬಿರುದು–ಬಾವಲಿಗಳ ಉಲ್ಲೇಖಗಳು

ಪ್ರತಿ ರಾಜವಂಶ ತನ್ನ ಶ್ರೇಷ್ಠತೆಯನ್ನು ಗುರುತಿಸಿಕೊಳ್ಳಲು ತಮ್ಮನ್ನು ಸೂರ್ಯ ಇಲ್ಲವೇ ಚಂದ್ರವಂಶೀಯರು ಎಂದು ಗುರುತಿಸಿಕೊಂಡು ಋಷಿಮುನಿಗಳ ಇಲ್ಲವೇ ಪೌರಾಣಿಕ ಮೂಲ ಪುರುಷರೊಂದಿಗೆ ತಮ್ಮ ವಂಶದಲ್ಲಿ ಆಗಿಹೋದ ತಮ್ಮ ಹಿರಿಯರ ವಿವರವನ್ನು ನೀಡುತ್ತವೆ. ಹಡಗಲಿ ತಾಲೂಕಿನ ಶಾಸನಗಳು ಸಹ ಇದಕ್ಕೆ ಹೊರತಾಗಿಲ್ಲ.

ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನ[೧೨೯]ದಲ್ಲಿ ಚಾಳುಕ್ಯ ದೊರೆ ತ್ರೈಲೋಕ್ಯಮಲ್ಲದೇವನ ವಂಶಾವಳಿ ಹೀಗಿದೆ. ತೈಲಪ, ಆತನ ಮಗ ಸತ್ಯಾಶ್ರಯ, ಅವನ ಮಕ್ಕಳು ವಿಕ್ರಮ, ಅಯ್ಯಣ ಮತ್ತು ಜಯಸಿಂಹ, ಜಯಸಿಂಹನ ಮಗ ಆಹವಮಲ್ಲದೇವ, ಆತನ ಮಕ್ಕಳು ಸೋಮ ಮತ್ತು ಗಂಗಪೆರ್ಮ್ಮಾಡಿ ವಿಕ್ರಮಾದಿತ್ಯ, ಕೊನೆಯವನು ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ನೊಳಂಬವಾಡಿ-೩೨೦೦೦ವನ್ನು ಕುಮಾರವೃತ್ತಿಯಿಂದ ಆಳುತ್ತಿದ್ದ ಎನ್ನುವ ವಿವರಗಳನ್ನು ದಾಖಲಿಸಿದೆ. ಹಿರೇಹಡಗಲಿ ಕಲ್ಲೇಶ್ವರ ದೇವಾಲಯದ ಮುಂದಿನ ಇನ್ನೊಂದು ಶಾಸನವು[೧೩೦] ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ದಂಡನಾಯಕನಾಗಿದ್ದ ಬ್ರಾಹ್ಮಣ ಗಂಗಿಮಯ್ಯನ ವಂಶಾವಳಿಯನ್ನು ವಿವರಿಸಿದೆ. ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನ[೧೩೧] ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ) ಮತ್ತು ದೇವಾಲಯದ ನಿರ್ಮಾತೃ ಮರ್ಮರಸ ಮತ್ತು ಸಿಂಗಮಯ್ಯನ ವಂಶಾವಳಿಯನ್ನು ಶಾಸನದಲ್ಲಿ ನೀಡಿದೆ. ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನವು[೧೩೨] ಚಾಳುಕ್ಯ ದೊರೆಗಳ ವಂಶಾವಳಿ; ಜಗದೇಕಮಲ್ಲನ ಮಾಂಡಲಿಕ ವೀರ ಪಾಂಡ್ಯದೇವ ಮತ್ತು ಆತನ ತಾಯಿ ಸೋವಲದೇವಿ, ಭಿಲ್ಲವರಾಯನ ಮಗಳು, ವಿಕ್ರಮಾದಿತ್ಯನ

ಸಹೋದರಿಯನ್ನು ಕುರಿತ ವಿವರ ಮತ್ತು ಅಜ್ಜ ನರನಾಥನ ಮಗ ಬೊಪ್ಪದೇವ, ವಿಕ್ರಮಾದಿತ್ಯನ ಮಗಳು ಮಹಾದೇವಿಯನ್ನು ಕುರಿತು ಶಾಸನವು ಮಾಹಿತಿ ನೀಡುತ್ತದೆ.

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶದ್ವಾರದ ಬಳಿಯ ತ್ರುಟಿತ ಶಾಸನವು[೧೩೩] ರವಿಗನ ಬಿರುದು ಮತ್ತು ಆತನ ವಂಶಾವಳಿಯನ್ನು ದಾಖಲಿಸಿದೆ. ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ದಂಡಾಧಿಪತಿಯಾದ ರವಿಗನು ಬಿಳಿಯ ಛತ್ರಿ, ಚಾಮರ, ಪಾವುಡಂಬರ ಮತ್ತು ಕುರುಳಕೊಂತಗಳೆಂಬ ರಾಜಮರ್ಯಾದೆಗಳನ್ನು ಪಡೆದಿದ್ದನು. ಆತನು ಯಾವ ನಾಯಕನಿಗೂ ಸಾಟಿಯಿಲ್ಲದವನಾಗಿದ್ದು ಸಂಧಿವಿಗ್ರಹಿ ಮತ್ತು ಚಾಲುಕ್ಯ ರಾಜ್ಯ ಮೂಲಸ್ತಂಭವಾಗಿ, ಹಿಮಾಲಯ ಮತ್ತು ಸೇತುವಿನ ಮಧ್ಯೆ ರಾಜನ ಆದೇಶವನ್ನು ನೀಡುತ್ತಿದ್ದನು. ನರ್ಮದಾ, ಗಂಗಾ ಮತ್ತು ಜಮುನಾ ನದಿ ದಂಡೆಯ ಮೇಲೆ ಅನೇಕ ಸುರಾಲಯಗಳನ್ನು ಸ್ಥಾಪಿಸಿದನು ಹಾಗೂ ಅಲ್ಲಲ್ಲಿ ಸಂಜೆ ಮಠಗಳನ್ನು ಸ್ಥಾಪಿಸಿದ. ಆತ ಮತ್ತು ಆತನ ಪತ್ನಿಯ ವಂಶಪರಂಪರೆಯನ್ನು ಇಲ್ಲಿ ನೀಡಲಾಗಿದೆ. ಸೋಗಿ ಕಲ್ಲೇಶ್ವರ ದೇವಾಲಯದ ದಕ್ಷಿಣಕ್ಕಿರುವ ಮನೆಯ ಮುಂದಿನ ಹಾಳಾದ ಶಾಸನ[೧೩೪] ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರ ಬರ್ಮದೇವರಸನು ಕೆಲವು ಬಿರುದುಗಳನ್ನು ಹೊಂದಿರುವುದನ್ನು ತಿಳಿಸುತ್ತದೆ.

**೬.೪.೭. ಚಾರಿತ್ರಿಕ ವ್ಯಕ್ತಿಗಳು ಮತ್ತು ಅವರ ಸೇವೆಗಳು**

ಚರಿತ್ರೆಯಲ್ಲಿ ಮಹಾನ್ ಪುರುಷರು ತಮ್ಮದೇ ಆದ ಸಾಧನೆಗಳಿಂದ ಪ್ರಸಿದ್ಧಿ ಪಡೆದಿರುತ್ತಾರೆ. ಹಡಗಲಿ ತಾಲೂಕಿನ ಶಾಸನಗಳು ಇಲ್ಲಿನ ರಾಜಮಹಾರಾಜರು, ಅಧಿಕಾರಿಗಳು, ರಾಣಿಯರು ಮತ್ತು ಊರಿನ ಹಿರಿಯರು ಮಾಡಿದ ಸೇವೆಯನ್ನು ವ್ಯವಸ್ಥಿತವಾಗಿ ದಾಖಲಿಸಿವೆ. ಕುರುವತ್ತಿ ಹಿರೇಮಠದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವು[೧೩೫] ಅಲ್ಲಿನ ದಂಡನಾಯಕ ಕಾಳಿದಾಸಯ್ಯನ ವಂಶಪರಂಪರೆ, ಕುರುವತ್ತಿಯ ಇನ್ನೂರು ಬ್ರಾಹ್ಮಣರು ಲಕುಲೀಶ ಪಂಡಿತನ ಗುರು ಮುಂತಾದವರನ್ನು ಈ ಶಾಸನ ವರ್ಣಿಸುತ್ತದೆ. ಅದೇ ರೀತಿ ಕುರುವತ್ತಿ ಆಂಜನೇಯಸ್ವಾಮಿ ದೇವಾಲಯದ ಬಳಿ ಬಿದ್ದಿರುವ ತ್ರುಟಿತ ಎರಡನೇ ಶಾಸನವು[೧೩೬] ಚಾಳುಕ್ಯ ತ್ರಿಭುವನಮಲ್ಲದೇವ ಮತ್ತು ಆತನ ಮಹಾಮಂಡಳೇಶ್ವರ ಶಂಕರದೇವನನ್ನು ಉಲ್ಲೇಖಿಸುತ್ತದೆ. ಯಾದವ ದೊರೆ ಮಹಾದೇವರಾಯನ ಆಳ್ವಿಕೆಗೆ ಸೇರಿದ ಹ್ಯಾರಡ ಗ್ರಾಮದ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ತ್ರುಟಿತ ಶಾಸನವು[೧೩೭] ಶ್ರೀಪರ್ವತದಲ್ಲಿನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗಾಗಿ ಹೆರಡ ಗ್ರಾಮವನ್ನು ಅಲ್ಲಿನ ಮಹಾಪಸಾಯಿತ ದಳವಯ್ಯ......ಸೋಯಿದೇವನು ದಾನ ಮಾಡಿದ ಎನ್ನುವ ವಿವರವನ್ನು ಉಲ್ಲೇಖಿಸಿದೆ. ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ ಬಳಿ ಇರುವ ೨೩ನೇ ಶಾಸನದಲ್ಲಿ[೧೩೮] 'ಮಹಾಮಂಡಲೇಶ್ವರ (ಗಂಡರಾ)ದಿತ್ಯರಸನ ಮತ್ತು ಪೆರ್ಗ್ಗಡೆ ಕಾಳಿಮಯ್ಯನು ಅಥವಾ ಕಾಳಿದಾಸನ ಹಾಗೂ ಮೆಳಿಮಡುವಿನ ತೇಜೋರಾಶಿ ಪಂಡಿತನ ಶಿಷ್ಯ ಚೆಲ್ಲಕಾಚಾರ್ಯನ ಇವರಲ್ಲದೆ ಕಾಳಿದಾಸನ ಸಹೋದರರಾದ ದೇಕ ಮತ್ತು

ಮೇಚಿಕರ ಉಲ್ಲೇಖಗಳು ಈ ಶಾಸನದಲ್ಲಿವೆ. ಮೈಲಾರದ ಮೈಲಾರಲಿಂಗ ದೇವಾಲಯದ ರಂಗಮಂಟಪದ ಮೇಲಿನ ಉತ್ತರ ಬದಿಯ ಕಂಬದ ಮೇಲಿನ ಶಾಸನವು ವಿಜಯನಗರದ ಸಂಗಮ ಮನೆತನದ ದೊರೆಯಾದ ಪ್ರೌಢದೇವರಾಯನ ಕಾಲದಲ್ಲಿ ದಂಡನಾಯಕ ಸಿಂಗಣನ ಆದೇಶದಂತೆ, ನಾಗಪ್ಪಯ್ಯನ ಮಗ ಮತ್ತು ಹೆಗ್ಗಡೆದೇವರಸನ ಸಹೋದರನಾದ ಗಂಗರಸನು ಮೇಲಿನ ದೇವಾಲಯದ ಬಳಿ ಶಿಲಾರಂಗಮಂಟಪವನ್ನು ಕಟ್ಟಿಸಿದ ವಿವರವನ್ನು ದಾಖಲಿಸಲಾಗಿದೆ.[೧೩೯] ಮೈಲಾರದ ಅರಳಿಕಟ್ಟೆಯ ಮೇಲಿರುವ ವೀರಗಲ್ಲಿನ ಮೇಲಿರುವ ಬರಹವು ಮಹಾದೇವಣ್ಣ ಮತ್ತು ಮಯಿಲಾರನ ಮರಣವನ್ನು ಉಲ್ಲೇಖಿಸುತ್ತದೆ. ಹೊಳಲು ಶಾಸನವು ಚಾಳುಕ್ಯ ದೊರೆ ತ್ರಿಭುವನಮಲ್ಲನ ಕಾಲದಲ್ಲಿದ್ದ ಕೆಲವು ದಂಡನಾಯಕರನ್ನು ಹೆಸರಿಸಿದೆ. ಒಂದು ದೇವರಿಗೆ(ಹೆಸರು ಅಳಿಸಿದೆ) ಭೂದಾನ ನೀಡಿದ ಉಲ್ಲೇಖ ಹಾಗೂ ಗಂಡರಾದಿತ್ಯ ಪೊಳಲಿನ ಮಹಾಜನರನ್ನು ಅವರ ಶೌರ್ಯ ಮತ್ತು ಧರ್ಮದ ಪರಿಪಾಲನೆಯನ್ನು ಹೊಗಳಿದೆ.[೧೪೦] ಹೊಳಲಿನ ಅಲ್ಲಿಯೇ ಇರುವ ಎರಡನೆಯ ಶಾಸನ ಅಪೂರ್ಣವಾದ ಈ ಶಾಸನ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಗಂಡರಾದಿತ್ಯ ಪೊಳಲಿನ ನೂರಇಪ್ಪತ್ತು ಮಹಾಜನರ ಪಾದಾರಾಧಕರಾದ ಉಗುರ-ಮೂನ್ನೂರ್ವರ ಕೊಯ್ಲುಳಿ ದೇವನು ಕೋಲೇಶ್ವರ ದೇವರ ಸೇವಾ ಕಾರ್ಯಗಳಿಗಾಗಿ ನೂರು ಕಂಬ ಗದ್ದೆಯನ್ನು ದಾನ ಮಾಡಿದನು.[೧೪೧]

ಹೊಳಲಿನ ವೀರಭದ್ರ ದೇವಾಲಯದಲ್ಲಿರುವ ಹೆಚ್ಚು ಭಾಗ ಹಾಳಾಗಿರುವ ಇನ್ನೊಂದು ಶಾಸನ ಚಾಳುಕ್ಯ ದೊರೆ ಭುವನೈಕಮಲ್ಲದೇವನ(ಇಮ್ಮಡಿ ಸೋಮೇಶ್ವರ) ಆಳ್ವಿಕೆಯಲ್ಲಿ ಗಂಡರಾದಿತ್ಯ ಚತುರ್ವೇದಿಮಂಗಲದ ೧೨೦ ಮಹಾಜನಗಳು, ತೆಲ್ಲಿಗರು, ಮುಮ್ಮರಿದಂಡಗಳು, ಸೆಟ್ಟಿಗಳು ಹಾಗೂ ಐದುನೂರು ಸ್ವಾಮಿಗಳ ಉಲ್ಲೇಖವಿದೆ.[೧೪೨] ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನವು ವಿಜಯಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಅವನ ದಂಡನಾಯಕ ಶಂಕರನನ್ನು, ಗಂಡರಾದಿತ್ಯನನ್ನು, ಹೊಳಲು ಗ್ರಾಮದಲ್ಲಿರುವ ೧೨೦ ಮಹಾಜನರನ್ನು, ಅಯ್ಯಾವೊಳೆ-೫೦೦ ವ್ಯಾಪಾರಿಗಳನ್ನು ವರ್ಣಿಸುತ್ತದೆ. ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ ವಿಜಯಪಾಂಡ್ಯ ದೇವರನ್ನು ಮತ್ತು ಶಂಕರ ದಂಡನಾಯಕನನ್ನು ಮತ್ತು ಅಲ್ಲಿನ ೧೨೦ ಮಹಾಜನರನ್ನು ಇದು ಉಲ್ಲೇಖಿಸಿದೆ. ಹ್ಯಾರಡದ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ಶಾಸನ ಯಾದವ ದೊರೆ ಮಹಾದೇವರಾಯ ಮತ್ತು ಮಹಾಪಸಾಯಿತ ದಳವಯ್ಯ........ ಸೋಯಿದೇವನ ಉಲ್ಲೇಖವಿದೆ.[೧೪೩] ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನವು ಚಾಳುಕ್ಯ ದೊರೆ ತ್ರೈಲೋಕ್ಯಮಲ್ಲದೇವ ಮತ್ತು ಅವನ ವಂಶದವರಾದ ತೈಲಪ, ಆತನ ಮಗ ಸತ್ಯಾಶ್ರಯ, ಅವನ ಮಕ್ಕಳು ವಿಕ್ರಮ, ಅಯ್ಯಣ ಮತ್ತು ಜಯಸಿಂಹ, ಜಯಸಿಂಹನ ಮಗ ಆಹವಮಲ್ಲದೇವ, ಆತನ ಮಕ್ಕಳು ಸೋಮ ಮತ್ತು ಗಂಗಪೆರ್ಮ್ಮಾಡಿ ವಿಕ್ರಮಾದಿತ್ಯರನ್ನು ಮತ್ತು ಪೊಸವಡಂಗಿಲೆ ಗ್ರಾಮದ ಬ್ರಾಹ್ಮಣ ಮಹಾಜನಗಳಲ್ಲಿ ಒಬ್ಬನಾದ ತ್ರಿವಿಕ್ರಮದೇವ ಹಾಗೂ ಅವನ ಮಕ್ಕಳವಾದ ನಕಲಿಮಯ್ಯ ಮತ್ತು ದೇಮರಸರನ್ನು(ಮಹಾಮಾತ್ಯನಾಗಿದ್ದ

ಈತ ವಿಟ ಚಕ್ರವರ್ತಿಯೆಂದು ಹೆಸರಾಗಿದ್ದ) ಹಾಗೂ ಪೊಸವಡಂಗಿಲೆಯ ಮಹಾಜನಗಳನ್ನು, ಐದುನೂರು ಬಳಂಜುಗಳನ್ನು ಮತ್ತು ನೂರಇಪ್ಪತ್ತು ಮಹಾಜನರನ್ನು ಸಹ ಇದೇ ಶಾಸನ ಉಲ್ಲೇಖಿಸಿದೆ. ಇಲ್ಲಿಯೇ ಇರುವ ಕ್ರಿ.ಶ.೧೧೦೭ರ ಶಾಸನವು ಮಹಾಪ್ರಧಾನ ಅನಂತಪಾಲಯ್ಯ ಮತ್ತು ಆತನ ಅಳಿಯ ದಂಡನಾಯಕ ಮಾಚಿದೇವ, ದಂಡನಾಯಕ ಅತ್ತಿಮರಸ, ಚಾಕರಸನ ಮಗನಾದ ಉದಯಾದಿತ್ಯರಸ, ಭಾರಧ್ವಾಜ ಗೋತ್ರದ ಚಂದರಸನ ಮಗ ಶಂಕರಮಯ್ಯನು ವೀರ ವಿಷ್ಣು ತ್ರಿಭುವನ ಪೊಯ್ಸಳದೇವ ಬೆಳತೆಯ ಶಂಕರನಾಯಕ ಮತ್ತು ಶಾಂತಿವರ್ಮಯ್ಯನಾಯಕರನ್ನು ಹೆಸರಿಸಿದೆ.[೧೪೪] ಹಿರೇಹಡಗಲಿ ಅದೇ ದೇವಾಲಯದ ಮುಂದೆ ಇರುವ ಇನ್ನೊಂದು ಶಾಸನ ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ವೀರಬಲ್ಲಾಳ ಮತ್ತು ಆತನ ಹಿರಿಯ ರಾಣಿ ಪದುಮಲದೇವಿ ಹಾಗೂ ಬ್ರಾಹ್ಮಣ ದಂಡನಾಯಕ ಗಂಗಿಮಯ್ಯನಾಯಕ ಮತ್ತು ದಾಮಣ್ಣ ದಂಡನಾಯಕರು ಹಾಗೂ ಹೊಸಹಡಂಗಿಲೆಯ ಬ್ರಾಹ್ಮಣ ಮಹಾಜನಗಳನ್ನು ರಿಪುನಾಯಕ ಸಂತ್ರಾಸಿಗಳು ಎಂದು ವರ್ಣಿಸಲಾಗಿದೆ.[೧೪೫] ಹಿರೇಹಡಗಲಿಯ ಭೀಮೇಶ್ವರ ದೇವಾಲಯದ ಸರಸ್ವತಿ ವಿಗ್ರಹದ ಪೀಠದಲ್ಲಿ ಶಾಸನವು ಕ್ರಿ.ಶ. ಸುಮಾರು ೧೦೬೦ ಕಾಲದ್ದಾಗಿದ್ದು, ಅದು ಅಲ್ಲಿನ ಅಧಿಕಾರಿ ದೇಮನನ್ನು ವಿನಿತೆಯನಿಗೆ, ಆಂಜನೇಯ ಮತ್ತು ಕಾರ್ತಿಕೇಯನಿಗೆ ಹೋಲಿಸಿದೆ.[೧೪೬] ಅದೇ ದೇವಾಲಯದ ದಕ್ಷಿಣ ಭಾಗಕ್ಕಿರುವ ಶಾಸನವು ಮಹಾಮಂಡಳೇಶ್ವರ ವೀರಪಾಂಡ್ಯದೇವ ಮತ್ತು ಆತನ ಚಿಕ್ಕಪ್ಪ ವಿಕ್ರಮಪಾಂಡ್ಯನು ಆತನ ಪತ್ನಿ ಬಾಚಲದೇವಿ ಮತ್ತು ಅವರ ಮಗಳು ಮಹಾದೇವಿಯರ ಹೆಸರುಗಳು ಶಾಸನಗಳಲ್ಲಿ ದಾಖಲಾಗಿವೆ.[೧೪೭]

ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಬಳಿ ಇರುವ ತ್ರುಟಿತ ಶಾಸನದಲ್ಲಿ ಚಾಳುಕ್ಯ ದೊರೆ ಜಗದೇಕಮಲ್ಲದೇವನ(ಇಮ್ಮಡಿ ಜಯಸಿಂಹ) ಆಳ್ವಿಕೆಯಲ್ಲಿ ಆತನ ಮಾಂಡಲಿಕ ನೊಳಂಬ ಪಲ್ಲವಪೆರ್ಮನಡಿ ಮತ್ತು ಅಯ್ಯಣ ಭೀವಜೋಗರಸ, ಮಾರಗಾವುಂಡ ಮತ್ತಿತರ ವ್ಯಕ್ತಿಗಳನ್ನು ಉಲ್ಲೇಖಿಸಲಾಗಿದೆ.[೧೪೮] ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಒಳಗೆ ಇರುವ ಶಾಸನವು ಚಾಳುಕ್ಯ ದೊರೆ ಜಗದೇಕಮಲ್ಲದೇವ, ಕಲಚೂರ್ಯ ದೊರೆ ರಾಯ ನಾರಾಯಣ ಆಹಮಲ್ಲದೇವ ಹಾಗೂ ಮಾಂಡಲಿಕ ವಿಜಯಪಾಂಡ್ಯದೇವ ಮತ್ತು ಮಹಾಮಂಡಳೇಶ್ವರ ವಿಕ್ರಮಾದಿತ್ಯರಾಯರಸ ವಿವರಗಳೊಂದಿಗೆ ಹೆಗ್ಗಡೆ ಹಾಗೂ ಗಾವುಂಡರ ಉಲ್ಲೇಖವಿದೆ.[೧೪೯] ಇದೇ ಗ್ರಾಮದಲ್ಲಿನ ಮಠದ ಪಾಳು ನಿವೇಶನದಲ್ಲಿರುವ ಮತ್ತೊಂದು ಶಾಸನವು ಶಕ ೧೨೧೯ರ ಕಾಲದ್ದಾಗಿದ್ದು, ಇದು ಯಾದವ ದೊರೆ ರಾಮಚಂದ್ರದೇವ ಮತ್ತು ನೇಮಿಚಂದ್ರ ರಾವುಳನ ಶಿಷ್ಯ, ವಿನಯಚಂದ್ರದೇವ ಮತ್ತು ಸಾವಂತಪಂಡಿತನ ಮಗನಾದ ಕೇಶವಪಂಡಿತ ಹಾಗೂ ಮಹಾಮಂಡಲೇಶ್ವರ ಭೈರವ ದೇವರಸನ, ಹಗರನೂರಿನ ಮುಖ್ಯಸ್ಥ ಪಾರಿಸಗೌಡ ಮತ್ತು ಕೇಶವಪಂಡಿತನ ತಾಯಿ ಕನ್ನಾಯಿ ವಿವರಗಳನ್ನೊಳಗೊಂಡಿದೆ.[೧೫೦] ಹಗರನೂರು ಕೆರೆಕಟ್ಟೆಯ ಬಳಿಯಿರುವ ಬಯಲಿನಲ್ಲಿ ನೆಟ್ಟಿರುವ ಶಾಸನವು ವಿಜಯನಗರದ ದೊರೆ ಸದಾಶಿವಮಹಾರಾಯ ಮತ್ತು ಮೂಡಗಂದಲ ತಿಮ್ಮರಸನಾಯಕನ ಮಗ ಬೆಮ್ಮನಾಯಕ ಹಾಗೂ ಮಯಿಲಾರದ ಕಪಿಲಮುನಿ ಹೆಗ್ಗಪ್ಪ ಶಿವಾಚಾರ್ಯ

ವೊಡೆಯನ ಮಗ ವರುಣಕಾಂತವೊಡೆಯ ಹಾಗೂ ಬಯಪನಾಯಕನ ಮಗ ಕ್ರಷ್ಣಪ್ಪನಾಯಕರ ವಿವರಗಳನ್ನು ಶಾಸನ ದಾಖಲಿಸಿದೆ.[೧೫೧] ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನ ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ), ಮಾಂಗೊಳದ ಇನ್ನೂರು ಮಹಾ ಜನರಲ್ಲೊಬ್ಬನಾದ ಬ್ರಾಹ್ಮಣ ಕಾಳಿಮಯ್ಯನ ಮಗ ಮರ್ಮರಸ, ಭಂಡಾರಿ ಸಿಂಗಯ್ಯರ ವಿವರಗಳನ್ನು ಶಾಸನವು ದಾಖಲಿಸಿದೆ.[೧೫೨] ರಂಗಾಪುರದ ನರಸಿಂಹ ದೇವಾಲಯದಲ್ಲಿರುವ ಶಾಸನ ಚಾಳುಕ್ಯ ರಾಜ ತ್ರಿಭುವನಮಲ್ಲದೇವ, ರಾಣಿ ಪದುಮಲದೇವಿಯು, ೨೦೦ ಮಹಾಜನಗಳು ಹಾಗೂ ಪುಳಿಯಮನಾಯಕ, ಸೋಮೇಶ್ವರಭಟ್ಟರ ಮಗ ಇಚ್ಚಿಯನಾಯಕ, ಆತನ ಸಹೋದರ ಬಲದೇವ ಫೈಸಾಸರು, ಹೆಗ್ಗಡೆ ಮತ್ತು ೧೨೦ ಮಹಾಜನಗಳ ಉಲ್ಲೇಖವನ್ನು ವ್ಯವಸ್ಥಿತವಾಗಿ ದಾಖಲಿಸಲಾಗಿದೆ.[೧೫೩] ತಿಮ್ಮಲಾಪುರ ಕಲ್ಲೇಶ್ವರ ದೇವರ ಕಟ್ಟೆಗೆ ಸೇರಿಸಿರುವ ಶಾಸನವು ಸದಾಶಿವರಾಯನು ವಿದ್ಯಾನಗರದಿಂದ ಆಳುತ್ತಿದ್ದಾಗ ಆತನ ಅಳಿಯ ರಾಮರಾಜ ಅರಸ ಮತ್ತು ವಿಠಲಪ್ಪ ಒಡೆಯನ ಉಲ್ಲೇಖಿಸಿದೆ.[೧೫೪] ಕೊಟ್ನಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನವು ಚಾಳುಕ್ಯ ದೊರೆ ಜಗದೇಕಮಲ್ಲದೇವ ಮತ್ತು ಆತನ ಮಾಂಡಲಿಕ ವೀರಪಾಂಡ್ಯದೇವ ಮತ್ತು ಆತನ ತಾಯಿ ಸೋವಲದೇವಿ, ಭಿಲ್ಲವರಾಯನ ಮಗಳು, ವಿಕ್ರಮಾದಿತ್ಯನ ಸಹೋದರಿ ಮತ್ತು ಅಜ್ಜ ನರನಾಥನ ಮಗ ಬೊಪ್ಪದೇವ, ವಿಕ್ರಮಾದಿತ್ಯನ ಮಗಳು ಮಹಾದೇವಿಯ, ವೀರಪಾಂಡ್ಯನ ಸಂಧಿವಿಗ್ರಹಿಯಾದ ಶಂಕರದೇವ ಹಾಗೂ ವಿಕ್ರಮಾದಿತ್ಯರಸ, ವಿಜಯಪಾಂಡ್ಯದೇವ ಮತ್ತು ಪಡಂಗಿಲೆಯ ೧೨೦ ಮಹಾಜನಗಳ ವಿವರಗಳನ್ನು ಈ ಶಾಸನ ವ್ಯವಸ್ಥಿತವಾಗಿ ವಿವರಿಸಿದೆ.[೧೫೫]

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ ಈ ಶಾಸನವು ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ, ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವ, ಶೂರಬ್ರಾಹ್ಮಣ ಸೇನಾಪತಿ ರವಿಗ ಅಥವಾ ರವಿದೇವ ಮತ್ತು ಆತನ ಪತ್ನಿಯಾದ ರೆಬ್ಬಲದೇವಿ ಹಾಗೂ ರವಿಯಣ(ರವಿಗ?) ಭಟ್ಟ, ವಾಸಿಷ್ಠ ಗೋತ್ರದ ರಾಯ್ಕೇಯಷಣಂಗಿ, ಸಾಯಣ್ಣನ ಮಗಳು ಸೊರಿಕಯ್ವೆ, ಲೋಕೇಯಷಣಂಗಿಯ ಮಗ ಮೊದಲಾದ ಚಾರಿತ್ರಿಕ ವ್ಯಕ್ತಿಗಳ ಹೆಸರನ್ನು ದಾಖಲಿಸಿದೆ.[೧೫೬] ಹೂವಿನಹಡಗಲಿ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನ ಚಾಳುಕ್ಯ ದೊರೆ ತ್ರಿಭುವನಮಲ್ಲದೇವ, ಅವನ ದಂಡನಾಯಕ ಚಿದ್ದಯ್ಯ, ಕೊಮಾರಸ್ವಾಮಿ ದ್ವೇದಿಭಟ್ಟ ಮತ್ತು ಅಲ್ಲಿನ ಮಹಾಜನಗಳು, ರಾಮೇಶ್ವರದ ಮಲಯಾಳ ಪಂಡಿತದೇವರ, ಲಕುಲೇಶ್ವರ ಪಂಡಿತರ ಮಠದ ಯತಿಗಳ, ಸೇವಕರ, ಹಾಡುಗಾರರ ಹಾಗೂ ಮಹಾಸಾಮಂತ ಘಟ್ಟಿಯರಸ ಮೊದಲಾದವರನ್ನು ಇದು ದಾಖಲಿಸಿದೆ.[೧೫೭] ಹೂವಿನಹಡಗಲಿ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನ ಕಲ್ಯಾಣದಿಂದ ಆಳುತ್ತಿದ್ದ ಚಾಳುಕ್ಯ ದೊರೆ ತ್ರಿಭುವನಮಲ್ಲದೇವ ಮತ್ತು ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವ, ಆತನ ಮಾಂಡಲಿಕ(ಮುದ್ದ)ರಸ, ೧೨೦ ಮಹಾಜನಗಳು ಹಾಗೂ ಕಲಿದೇವರ ಸ್ಥಾನಿಕ ಖಳೇಶ್ವರ ಪಂಡಿತರ ವಿವರಗಳು ಈ ಶಾಸನದಲ್ಲಿ ದಾಖಲಾಗಿವೆ.

ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನ ಕ್ರಿ.ಶ.೧೯-೧೧-೧೦೬೨ರಲ್ಲಿ ಕಲ್ಯಾಣದಿಂದ ಆಳುತ್ತಿದ್ದ ತ್ರೈಲೋಕ್ಯಮಲ್ಲದೇವ(ಒಂದನೇ ಸೋಮೇಶ್ವರ) ಮತ್ತು ಕಂಪಲಿಯಿಂದ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ ಆತನ ಮಗ ವಿನಯಾದಿತ್ಯ ಹಾಗೂ ಆತನ ಮಾಂಡಲಿಕ ಘಟ್ಟಿಯರಸ, ಮಲ್ಲಪ್ಪರಸನ, ಅದೇ ಸ್ಥಳದ ಸ್ಥಾನಿಕ ಮಲಯಾಳ ಪಂಡಿತನ ಶಿಷ್ಯ ಸಾಂತರಾಸಿ ಪಂಡಿತ, ಮಲ್ಲಪ್ಪರಸ ಮತ್ತು ಆ ಸ್ಥಳದ ಮಹಾಜನಗಳನ್ನು ಹಾಗೂ ಪೂವಿನಪಡಂಗಿಲಿಯ ಕಲಿದೇವ ಸ್ವಾಮಿಯ ದೇವಾಲಯವನ್ನು ಕಟ್ಟಲು ಕೆಸರುಗಲ್ಲು ಹಾಕಿದ ಮಾರೋಜ, ದೇವಾಲಯವನ್ನು ಕಟ್ಟಿದ ಶಿಲ್ಪಿಗಳ ಮಾಹಿತಿಯನ್ನು ದಾಖಲಿಸಿದೆ.[೧೫೮]

ಹೂವಿನಹಡಗಲಿ ಹನುಮಂತ ದೇವಾಲಯದ ಆವರಣದಲ್ಲಿರುವ ತ್ರುಟಿತ ಶಾಸನವು ಅಚ್ಚುತದೇವರಾಯನ ಕಾಲದಲ್ಲಿ ಹೂವಿನಹಡಗಲಿಯ ಹನುಮಂತ ದೇವರಿಗೆ ಸಿರಿಯಪ್ಪನು ಭೂದಾನ ಮಾಡಿದ ವಿವರವನ್ನು ದಾಖಲಿಸಿದೆ. ಹೊಳಗುಂದಿ ಬಳ್ಳೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಚಾಲುಕ್ಯ ದೊರೆ ತ್ರಿಭುವನಮಲ್ಲದೇವ, ಚಾವುಂಡರಸನ ಮಗ ಮಹಾಮಂಡಲೇಶ್ವರ ಗಂಗರಸ, ಎರಕಗಾವುಂಡ, ಲಕುಲೀಶ ಪಂಥದ ಮಲಯಾಳ ಪಂಡಿತನ ಶಿಷ್ಯ, ಜ್ಞಾನೇಶ್ವರ ಪಂಡಿತ, ಆತನ ಶಿಷ್ಯ ಸೋಮೇಶ್ವರ ಪಂಡಿತ, ಆತನ ಶಿಷ್ಯ ಸಾಂತರಾಸಿ ಪಂಡಿತ, ಆತನ ಶಿಷ್ಯ, ಖಳೇಶ್ವರ ಪಂಡಿತನ ಹಾಗೂ ಕೆಲವು ಗಾವುಂಡರ ಉಲ್ಲೇಖ ಬಂದಿದೆ.[೧೫೯] ಸೋಗಿ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಕಂಬದಲ್ಲಿನ ಶಾಸನ ಹೊಯ್ಸಳ ದೊರೆ ವೀರನರಸಿಂಹ, ಅತನ ಮಹಾಪ್ರಧಾನ ಬೊಮ್ಮೆಯ ದಣನಾಯಕ ಮತ್ತು ಗೋಪರಸ, ಭೂತರಸ, ದೇಮಯ್ಯ ಮತ್ತು ಮಂಗತೆಯ್ಯ, ಸಿರಿಪಣ್ಣ, ಸುಂಕದ ಅಧಿಕಾರಿ ಮಯ್ಲಾರದೇವ ಹಾಗೂ ಹೆಗ್ಗಡೆಹೇಮಯ್ಯ ಮತ್ತು ಬಿಲುಕೊಡೆ ತೆರಿಗೆ ಅಧಿಕಾರಿಯಾಗಿದ್ದ ಹೆಗ್ಗಡೆ ಬೊಪ್ಪಯ ದಣನಾಯಕನು ಹೆಗ್ಗಡೆ ಹರಿಯಣ್ಣರ ಉಲ್ಲೇಖಗಳನ್ನು ಈ ಶಾಸನ ದಾಖಲಿಸಿದೆ.[೧೬೦] ಸೋಗಿ ಕಲ್ಲೇಶ್ವರ ದೇವಾಲಯದ ನವರಂಗ ಮಂಟಪದ ಕಂಬದ ಮೇಲೆ ನಾನಾದೇಶಿ ಮಲಯಾಳ ಪೊರಯಚ್ಚಸೆಟ್ಟಿ ಮತ್ತು ಆತನ ತಮ್ಮ ಕುಮಾರಚ್ಚಸೆಟ್ಟಿ ಹಾಗೂ ಮಾರಗೊಂಡರ ಹೆಸರುಗಳನ್ನು ದಾಖಲಿಸಿದೆ.[೧೬೧]

ಸೋಗಿ ಗ್ರಾಮದ ವೀರಪ್ಪನ ಮನೆಯ ಮುಂದೆ ಬಿದ್ದ ಹಾಳಾದ ಶಾಸನದ ತುಂಡುಶಾಸನ ಹೊಯ್ಸಳ ರಾಜ ವಿಷ್ಣುವರ್ಧನ ವೀರಬಲ್ಲಾಳನ ಕಾಲಕ್ಕೆ ಸೇರಿದೆ. ಇದರಲ್ಲಿ ನಾಗವರ್ಮನ ವಂಶಕ್ಕೆ ಸೇರಿದ ಕಲಿಮಯ್ಯನ ಮಗ ತಿಳಕಯ್ಯ ಉಭಯಚಾರ್ಯನೆಂಬ ಜೈನ ಗುರುಗಳ ವಿವರವನ್ನು ದಾಖಲಿಸಿದೆ.[೧೬೨] ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ದಕ್ಷಿಣಕ್ಕಿರುವ ಮನೆಯ ಮುಂದೆ ಇರುವ ಶಾಸನವು ಚಾಲುಕ್ಯ ದೊರೆ ತ್ರಿಭುವನಮಲ್ಲದೇವ ಮತ್ತು ಅವನ ದಂಡಾಧಿಪತಿ ಮುದ್ದರಸ ಅಥವಾ ಮುದ್ದರಾಜನ ಹೆಸರುಗಳನ್ನು ದಾಖಲಿಸಿದೆ.[೧೬೩] ಸೋಗಿ ಗ್ರಾಮದ ದಬ್ಬಗುಡಿಯ ಮುಂದೆ ಇರುವ ಶಾಸನವು ತ್ರಿಭುವನಮಲ್ಲದೇವನು ಕಲ್ಯಾಣದಿಂದ ಆಳುತ್ತಿದ್ದಾಗ ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವ ಮತ್ತು ಆತನ ಮಹಾಮಂಡಲೇಶ್ವರ ಘಟ್ಟಿಯರಸ ಹಾಗೂ ಅವನ ಕಲಿದಂಡಾಧಿಪ ನಾಗವರ್ಮನ ಮಗನಾದ ಮಾರಸಿಂಗ ನಾಯಕ, ಆತನ

ಮಗನಾದ ಬಸಂತಿಮಯ್ಯ ನಾಯಕ ಆತನ ಮಕ್ಕಳಾದ ಮೂರು ಜನ ಸಹೋದರರಾದ ನಾಗವರ್ಮಯ್ಯ ನಾಯಕ, ಕಾಜೆಮಯ್ಯ ನಾಯಕ ಮತ್ತು ಮಹಾದೇವಯ್ಯ ನಾಯಕ ಮೊದಲಾದ ಹೆಸರುಗಳನ್ನು ಕ್ರಮವಾಗಿ ದಾಖಲಿಸಿದೆ.[೧೬೪] ಸೋಗಿ ಗ್ರಾಮದ ಶಾಂತೀಶ್ವರಸ್ವಾಮಿ ದೇವಾಲಯದ ತೋಟದಲ್ಲಿನ ಶಾಸನವು ಕ್ರಿ.ಶ.೩೦-೧೦-೧೫೧೬ರಲ್ಲಿ ಕ್ರಷ್ಣರಾಯ ಮಹಾರಾಯನ ಆಳ್ವಿಕೆಯಲ್ಲಿ ಅವನ ಅಧಿಕಾರಿ ಇಮ್ಮಡಿ ಬಸವಪ್ಪ ಒಡೆಯನ ತಾಯಿ ಪಾರ್ವತಿಅಮ್ಮನ ಆದೇಶದಂತೆ ಕೊಟ್ಟೂರಿನ ಪ್ರಧಾನ ಅರುಹತಿಮ್ಮಣನಾಯಕರ ವಿವರಗಳನ್ನು ಈ ಶಾಸನ ದಾಖಲಿಸಿದೆ.[೧೬೫]

**೬.೪.೮. ರಾಜಧಾನಿ, ಗ್ರಾಮ ಮತ್ತು ಆಡಳಿತ ಘಟಕ/ವಿಭಾಗಗಳು**

ಹಡಗಲಿ ತಾಲೂಕಿನ ವ್ಯಾಪ್ತಿಯಲ್ಲಿ ದೊರೆಯುವ ಶಾಸನಗಳು ಬೇರೆ ಬೇರೆ ವಿವರಗಳನ್ನು ತಿಳಿಸಿರುವಂತೆ ಅಂದು ಇಲ್ಲಿದ್ದ ಹಲವಾರು ಗ್ರಾಮಗಳನ್ನು ಮತ್ತು ಆಡಳಿತ ಕೇಂದ್ರಗಳಾಗಿದ್ದ ಅಂದಿನ ಸಮಕಾಲೀನ ರಾಜಧಾನಿ, ಆಡಳಿತ ವಿಭಾಗಗಳನ್ನು/ಘಟಕಗಳನ್ನು ವ್ಯವಸ್ಥಿತವಾಗಿ ದಾಖಲಿಸಿವೆ. ಇವುಗಳಿಂದ ಅವುಗಳ ನೈಜ ಪಾತ್ರವೇನಾಗಿತ್ತು ಎಂಬುದನ್ನು ಅರಿಯಬಹುದಾಗಿದೆ. ಇಲ್ಲಿ ದೊರೆತ ಶಾಸನಗಳು ಉಲ್ಲೇಖಿಸುವ ರಾಜಧಾನಿ, ಗ್ರಾಮ ಮತ್ತು ಆಡಳಿತ ಘಟಕಗಳನ್ನು ಗಮನಿಸಿದಾಗ–

ಹಡಗಲಿ ತಾಲೂಕಿನ ಹ್ಯಾರಡ ಗ್ರಾಮದ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ತ್ರುಟಿತ ಶಾಸನವು ಯಾದವ ದೊರೆ ಮಹಾದೇವರಾಯನ ಕಾಲಕ್ಕೆ ಸೇರಿದ್ದು, ಅದು ಅಂದಿನ ಆಡಳಿತ ಘಟಕವಾದ ಬೆಣ್ಣೆವೂರ-೧೨ನ್ನು ಹೆಸರಿಸಿದೆ.[೧೬೬] ಕುರುವತ್ತಿ ಗ್ರಾಮದ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ೧೩ನೇ ನಂಬರಿನ ಶಾಸನವು ಚಾಳುಕ್ಯ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ಮತ್ತು ಗಂಡರಾದಿತ್ಯನ ಪೊಳಲ ಅಗ್ರಹಾರದ ಮಹಾಜನಗಳು ಮನ್ನೆಯ ಬೊಪ್ಪಯ್ಯನು ಹೊಳಲನ್ನು ಸೆರೆ ಹಿಡಿದು, ಗ್ರಾಮವನ್ನು ಸುಲಿಗೆ ಮಾಡಿ, ಬ್ರಾಹ್ಮಣರನ್ನು ಕೊಂದನೆಂದು ದೊರೆಗೆ ದೂರು ನೀಡಿದಾಗ; ದೊರೆಯು ಅವನನ್ನು ದಂಡಿಸಿ, ಅವನು ಮತ್ತು ಅವನ ಸಂತತಿಯವರು ಹೊಳಲಿನ ಮನ್ನೆಯವನ್ನು ಪಡೆಯದಂತೆ ಆಜ್ಞಾಪಿಸಿದನು. ಆ ಪ್ರಕಾರ ಒಪ್ಪಿ ಬೆಣ್ಣೆವೂರ-೧೨, ನಿರುಗುಂದ, ಎರಡು ಹಡಂಗಿಲೆಗಳು, ಮಾಂಗೊಳ, ಬಿದರಹಳ್ಳಿ, ಹಹನೂರು, ಹೊನ್ನವಳ್ಳಿ, ಕುರುವತ್ತಿ ಮತ್ತು ಬಾಳ್ಗುಳಿಯನ್ನೊಳಗೊಂಡಂತೆ ೩೨ ಸಾವಿರದ ಜನರ ಸಮ್ಮುಖದಲ್ಲಿ ತ್ರಿಪುರಾಂತಕ ದೇವರ ಬಳಿ ಬೊಪ್ಪಯ್ಯನು ನೀರನ್ನು ಕುಡಿದು ನಂತರ ಈ ಕಲ್ಲನ್ನು ನಿಲ್ಲಿಸಿದ ವಿವರವಿದೆ.[೧೬೭] ಉತ್ತಂಗಿ ಶಂಕರೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ೧೦೭ನೇ ಶಾಸನ(ಇಮ್ಮಡಿ) ಜಗದೇಕಮಲ್ಲನು ಕಲ್ಯಾಣಪುರದಿಂದ ಆಳುತ್ತಿದ್ದಾಗ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ ಕೋಗಳಿ ನಾಡಿನ ಕುತ್ತಂಗಿಯಲ್ಲಿ ಸೌದರ ಬಸವಯ್ಯನು ಕಟ್ಟಿಸಿದ ಬಸವೇಶ್ವರ ದೇವರ ದೇವಾಲಯದ ಸೇವಾಕಾರ್ಯಗಳಿಗೆ ಭೂದಾನ ಮಾಡಿದ ವಿವರವಿದೆ.[೧೬೮] ನಂದಿಹಳ್ಳಿಯ ಹೊಲವೊಂದರಲ್ಲಿರುವ ೯೫ನೇ ನಂಬರಿನ ಶಾಸನ ತಿಮ್ಮಲಾಪುರ

ಅಗ್ರಹಾರದಲ್ಲಿ ಬಯಿಕಾಜಿ ರಾಮಪಯನು ಮಾಡಿಸಿದ ಬಂದೇಶ್ವರ ಮತ್ತು ಗೋಪಿನಾಥ ದೇವರ ಸೇವಾಕಾರ್ಯಗಳಿಗೆ ವೊಳಲಗುಂದಿ ಗ್ರಾಮ ಬಯಿರಾಪುರಕ್ಕೆ ಪ್ರತಿನಾಮವಾದ ಗೋಪಿನಾಥಪುರವನ್ನು ಸದಾಶಿವದೇವ ಮಹಾರಾಯನು ದಾನ ಮಾಡಿದುದನ್ನು ಉಲ್ಲೇಖಿಸಿದೆ.[೧೯] ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ ಬಳಿ ಇರುವ ೨೩ನೇ ಶಾಸನವು ಶಕ ೯೬೮ರ ಕಾಲದಾಗಿದ್ದು (ಕ್ರಿ.ಶ.೧-೨-೧೦೪೬), ಮಹಾಮಂಡಲೇಶ್ವರ(ಗಂಡರಾ)ದಿತ್ಯರಸನ ಕಾಲದ ಸಿಂದವಾಡಿ-೧೦೦೦, ನರಗುಂದ ಅಗ್ರಹಾರ ಮತ್ತು ಬೆಣ್ಣೆಯೂರ ಉಲ್ಲೇಖಗಳಿವೆ.[೨೦] ಹ್ಯಾರಡ ಆಗ್ನೇಯಕ್ಕೆ ಹೊಲವೊಂದರಲ್ಲಿ ಬಿದ್ದಿರುವ ನಂದಿಕಂಬದ ಮೇಲಿನ ಶಾಸನವು ಬೆಣ್ಣೆವೂರ-೧೨ನ್ನು ಹೆಸರಿಸಿದೆ.[೨೧]

ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ದೇವಾಲಯದ ಮುಂದೆ ಇರುವ ಶಾಸನವು ಚಾಲುಕ್ಯ ವಿಕ್ರಮಾದಿತ್ಯನು ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ನೊಳಂಬವಾಡಿ-೩೨೦೦೦ವನ್ನು ಕುಮಾರವೃತ್ತಿಯಿಂದ ಆಳುತ್ತಿದ್ದ ವಿವರಗಳಿವೆ.[೨೨] ಹಿರೇಹಡಗಲಿ ಭೀಮೇಶ್ವರ ದೇಮೇಶ್ವರ ದೇವಾಲಯದ ಮುಂದೆ ಇರುವ ಇನ್ನೊಂದು ಶಾಸನ ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ವೀರಬಲ್ಲಾಳನು ಹಳ್ಳವುರ ಅಥವಾ ವಿಜಯಸಮುದ್ರದ ನೆಲೆವೀಡಿನಿಂದ ಬನವಾಸಿ-೧೨೦೦೦, ನೊಳಂಬವಾಡಿ-೩೨೦೦೦, ಹುಲಿಗೆರೆ-೩೦೦, ಬೆಳುವಲ ಎರಡು, ಮಸವಾಡಿ ಮೊದಲಾಗಿ ಹೆದ್ದೊರೆವರೆಗೆ ಆಳುತ್ತಿದ್ದ ಕಾಲಾವಧಿಯಲ್ಲಿ ಆತನ ಹಿರಿಯ ರಾಣಿ ಪದುಮಲದೇವಿ ಹೊಸ ಪಂಡಗಿಲೆಯನ್ನು ಆಳುತ್ತಿದ್ದ ವಿವರಗಳಿವೆ.[೨೩] ಅದೇ ಊರಿನ ಭೀಮೇಶ್ವರ ದೇವಾಲಯದ ದಕ್ಷಿಣ ಭಾಗಕ್ಕಿರುವ ಶಾಸನ ಮಹಾಮಂಡಳೇಶ್ವರ ವೀರಪಾಂಡ್ಯದೇವನು ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦ ಮತ್ತು ಕೋಗಳಿ ಯನ್ನು ಆಳುತ್ತಿದ್ದ ವಿವರವನ್ನು ದಾಖಲಿಸಿದೆ.[೨೪] ಹಿರೇಹಡಗಲಿ ವೀರಭದ್ರ ಗುಡಿಯ ಮುಂದೆ ಬಿದ್ದಿರುವ ಶಾಸನದಲ್ಲಿ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಆತನ ಮಾಂಡಲಿಕನಾದ ಕಾಂಚಿಪುರವರಾಧೀಶ್ವರನೆಂದು ಖ್ಯಾತನಾದ ಮಹಾಮಂಡಲೇಶ್ವರ ಮಹೇಂದ್ರನು ಮರಂದಲೆ ಮೇರೆಯಾಗಿ ದೇಶವನ್ನು ಆಳುತ್ತ ಕೋಗಳಿಯಲ್ಲಿದ್ದನೆಂಬ ವಿವರಗಳಿದ್ದು, ಅದು ಹೂವಿನಹಡಗಲಿಯನ್ನು ಪೊಸವಡಂಗಿಲೆಯೆಂದು ಹೆಸರಿಸಿದೆ.[೨೫] ತುಂಬಿಗೆರೆ ಈಶ್ವರ ದೇವಾಲಯದ ಬಳಿ ನಿಲ್ಲಿಸಿರುವ ಶಾಸನವು ಚಾಲುಕ್ಯ ದೊರೆ ಇಮ್ಮಡಿ ಜಯಸಿಂಹನ? ಶಾಸನದಲ್ಲಿ ಹೆಸರು ಅಳಿದಿದೆ) ಮತ್ತು ಆತನ ಮಾಂಡಲಿಕ ಜಗದೇಕಮಲ್ಲ ಇಮ್ಮಡಿನೊಳಂಬ.......ಪೆರ್ಮನಡಿ ದೇವನು ರಾಜಧಾನಿ ಗಂಗತಿಯಿಂದ ಕೋಗಳಿ-೫೦೦, ಕರಿವಿಡಿ-೩೦, ಮತ್ತಿತರ ಪ್ರದೇಶಗಳನ್ನು ಆಳುತ್ತಿದ್ದ ಎನ್ನುವ ವಿವರಗಳನ್ನು ದಾಖಲಿಸಿದೆ.[೨೬]

ಮಾನ್ಯರ ಮಸಲವಾಡ ಕಲ್ಲೇಶ್ವರ ದೇವಾಲಯದ ಬಳಿ ಇರುವ ತ್ರುಟಿತ ಶಾಸನದಲ್ಲಿ ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦, ಕೋಗಳಿ-೫೦೦ ಮತ್ತು ಮೊಸಳೆಮಡುಗಳನ್ನು ದಾಖಲಿಸ ಲಾಗಿದೆ.[೨೭] ಹಗರನೂರು ಕೆರೆಕಟ್ಟೆಯ ಬಳಿಯಿರುವ ಬಯಲಿನಲ್ಲಿ ನೆಟ್ಟಿರುವ ಶಾಸನವು ವಿಜಯನಗರದ ಸದಾಶಿವಮಹಾರಾಯನ ಆಳ್ವಿಕೆಯಲ್ಲಿ ಮೂಡಗಂದಲ ಮತ್ತು ಕೊಟ್ಟೂರ

ಸೀಮೆಯಲ್ಲಿನ ರಂಗಾಪುರ ಸ್ಥಳದ ಅಮರಗೆರೆ ಗ್ರಾಮವನ್ನು ಹಾಗೂ ಮಯಿಲಾರದ ವಿವರಗಳನ್ನು ಶಾಸನವು ವಿವರಿಸಿದೆ.[೧೭೮] ಮಾಗಳ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿರುವ ಶಾಸನವು ಹೊಯ್ಸಳ ದೊರೆ ವಿಷ್ಣುವರ್ಧನ ವೀರಬಲ್ಲಾಳ(ಇಮ್ಮಡಿ)ನ ಆಳ್ವಿಕೆಯಲ್ಲಿ ಹರಿಹರ ಹಾಗೂ ಮಾಂಗೊಳ(ಇಂದಿನ ಮಾಗಳವೇ?)ಗಳ ಉಲ್ಲೇಖವನ್ನು ಇದು ದಾಖಲಿಸಿದೆ.[೧೭೯] ಮಾಗಳದ ಸೂರ್ಯನಾರಾಯಣಸ್ವಾಮಿ ದೇವಾಲಯದಲ್ಲಿನ ಶಾಸನವು ಹೊಯ್ಸಳ ದೊರೆ ವಿಷ್ಣುವರ್ಧನ ಬಲ್ಲಾಳ(ಇಮ್ಮಡಿ)ನು ಗಂಗವಾಡಿ-೯೬೦೦೦, ನೊಣ(ಳ)ಂಬವಾಡಿ-೩೨೦೦೦, ಬನವಸೆ-೧೨೦೦೦, ಹುಲಿಗೆರೆ-೩೦೦, ಎರಡು ಬೆಳುವಳಗಳು ಮತ್ತು ಮಾಸವಾಡಿಯಿಂದ ಹೆದ್ದೊರೆವರೆಗೆ ಆಳುತ್ತಿದ್ದ ಎನ್ನುವ ವಿವರವನ್ನು ಮತ್ತು ವಿಜಯಸಮುದ್ರವೆಂಬ ಹಳ್ಳವೂರಿನ ಕುರಿತು ಮತ್ತು ಮಾಂಗೊಳದ ಕುರಿತ ವಿವರಗಳನ್ನು ದಾಖಲಿಸಿದೆ.[೧೮೦] ರಂಗಾಪುರ ನರಸಿಂಹಸ್ವಾಮಿ ದೇವಾಲಯದ ಮತ್ತೊಂದು ಶಾಸನ ಚಾಲುಕ್ಯ ರಾಜ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ರಾಣಿ ಪದುಮಲದೇವಿಯು ಮಾಂಗೊಳ ಅಗ್ರಹಾರವನ್ನು ಆಳುತ್ತಿರುವ ವಿವರ ಮತ್ತು ಬಿದಿರಪಳ್ಳಿಯ ಉಲ್ಲೇಖವಿದೆ.[೧೮೧] ತಿಮ್ಮಲಾಪುರ ಕಲ್ಲೇಶ್ವರ ದೇವರ ಕಟ್ಟೆಗೆ ಸೇರಿಸಿರುವ ಶಾಸನವು ವಿಜಯನಗರದ ಸದಾಶಿವರಾಯನ ಆಳ್ವಿಕೆಯ ಅವಧಿಯಲ್ಲಿ ಗುತ್ತವೊಳಲ ಸೀಮೆಯ ಹಕಹಂದಿಗನೂರು ಗ್ರಾಮವನ್ನು ಸ್ಪಷ್ಟವಾಗಿ ಉಲ್ಲೇಖಿಸಿದೆ.[೧೮೨]

ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ ಉಲ್ಲೇಖವಿದೆ. ಅಲ್ಲದೆ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿಯಾದ ರೆಬ್ಬಲದೇವಿಯ ಹುಟ್ಟೂರಾದ ಪೂವಿನ ಪೊಸವಡಂಗಿಲೆಯನ್ನು ಮತ್ತು ರವಿಯಣ(ರವಿಗ) ಭಟ್ಟನ ವಿನಂತಿಯಂತೆ ರಾಜನು ಕೇಶವ ದೇವರ ಸೇವಾಕಾರ್ಯಗಳಿಗಾಗಿ ಊರಚಲಗೇರಿ ಗ್ರಾಮವನ್ನು ದಾನ ಮಾಡಿದ ವಿವರವನ್ನು ಇದೇ ಶಾಸನ ದಾಖಲಿಸಿದೆ.[೧೮೩] ಹೂವಿನಹಡಗಲಿ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನ ಕ್ರಿ.ಶ.೨೫-೨-೧೦೭೧ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನು ಆಳುತ್ತಿದ್ದ ಗೋವಿಂದವಾಡಿ ಮತ್ತು ಪೂವಿನಪಡಂಗಿಲಿ ಹಾಗೂ ಕೋಗಳಿ-೫೦೦ರ ಹಾಲ್ವೊಳ-೧೨ ರಲ್ಲಿನ ಕೋಟಿಗನೂರು ಗ್ರಾಮಗಳ ಉಲ್ಲೇಖಗಳನ್ನು ಈ ಶಾಸನ ಹೊಂದಿದೆ.[೧೮೪] ಹೂವಿನಹಡಗಲಿ ಅದೇ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನು ಆಳುತ್ತಿದ್ದ ಕಲ್ಯಾಣ ಮತ್ತು ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವನು ಆಳುತ್ತಿದ್ದ ನೊಳಂಬವಾಡಿ-೩೨೦೦೦ವನ್ನು ಹಾಗೂ ಪೂವಿನಪಡಂಗಿಲಿಯ ಕುರಿತ ಮಾಹಿತಿಯನ್ನು ಈ ಶಾಸನ ದಾಖಲಿಸಿದೆ. ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನ ಕ್ರಿ.ಶ.೧೯-೧೧-೧೦೬೨ರಲ್ಲಿ ತ್ರೈಲೋಕ್ಯಮಲ್ಲದೇವನು(ಒಂದನೇ ಸೋಮೇಶ್ವರ) ಆಳುತ್ತಿದ್ದ ಕಲ್ಯಾಣ, ಆತನ ಮಗ ವಿಜಯಾದಿತ್ಯನು ನೊಳಂಬವಾಡಿ-೩೨೦೦೦ವನ್ನು ಕಂಪಿಲೆಯಿಂದ ಆಳುತ್ತಿದ್ದ. ಆಗ

ಆತನ ಮಾಂಡಲಿಕ ಘಟ್ಟಿಯರಸ ಮತ್ತು ಮಲ್ಲಪ್ಪರಸನು ಪೂಲಿಯಕೆರೆಯ ಮನ್ನೆಯವನ್ನು ಪ್ರತಿಪಾಲಿಸುತ್ತಿದ್ದ ವಿವರವನ್ನು ಹಾಗು ಪೂವಿನಪಂಡಗಿಲಿಯನ್ನು ಈ ಶಾಸನ ದಾಖಲಿಸಿದೆ.[೧೮೫] ಸೋಗಿ ಗ್ರಾಮದ ದಬ್ಬಗುಡಿಯ ಮುಂದೆ ಇರುವ ಶಾಸನ ತ್ರಿಭುವನಮಲ್ಲದೇವನು ಕಲ್ಯಾಣದಿಂದ ಆಳುತ್ತಿದ್ದಾಗ ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು. ಇವನ ಮಹಾಮಂಡಲೇಶ್ವರ ಘಟ್ಟಿಯರಸನು ಕೋಗಳಿ-೫೦೦ನ್ನು ಆಳುತ್ತಿದ್ದ ಉಲ್ಲೇಖಗಳನ್ನು ಈ ಶಾಸನ ನಮಗೆ ನೀಡುತ್ತದೆ.[೧೮೬] ಸೋಗಿ ಗ್ರಾಮದ ಶಾಂತೀಶ್ವರಸ್ವಾಮಿ ದೇವಾಲಯದ ತೋಟದಲ್ಲಿನ ಶಾಸನವು ವಿಜಯನಗರದ ಕ್ರಷ್ಣರಾಯ ಮಹಾರಾಯನ ಆಳ್ವಿಕೆಯಲ್ಲಿ ಕೊಟ್ಟೂರಿನ ಪ್ರಧಾನ ಅರುಹ ತಿಮ್ಮಣನಾಯಕನು ದಣಾಯಕಪುರ ಗ್ರಾಮವನ್ನು ಸೋಗೆಯ ಧರ್ಮದ ಏತಕ್ಕಾಗಿ ತನ್ನ ಅರಸನಿಗೆ ಪುಣ್ಯವಾಗಲಿಯೆಂದು ದಾನ ಮಾಡಿದ ವಿವರವನ್ನು ದಾಖಲಿಸಿದೆ.[೧೮೭]

**೬.೪.೯. ಶಾಸನ ಕವಿ ಮತ್ತು ಶಿಲ್ಪಿಗಳು**

ಶಾಸನ ತಯಾರಿಕೆಯಲ್ಲಿ ಶಾಸನ ಕವಿಗಳು, ರೂವಾರಿಗಳು, ಶಿಲ್ಪಿ ಮೊದಲಾದವರು ಪ್ರಮುಖ ಪಾತ್ರ ವಹಿಸುತ್ತಾರೆ. ಇವರಿಲ್ಲದೆ ಶಾಸನ ರಚನೆ ಅಸಾಧ್ಯ. ಹಡಗಲಿ ತಾಲೂಕಿನಲ್ಲಿ ದೊರೆಯುವ ಶಾಸನಗಳು ಶಾಸನ ಕವಿ ಮತ್ತು ಶಿಲ್ಪಿಗಳನ್ನು ಹೆಸರಿಸಿವೆ.

ಚನ್ನಪ್ಪ ಎಂಬ ವ್ಯಾಪಾರಿಯ ವಶದಲ್ಲಿದ್ದ ಹಿರೇಹಡಗಲಿಯ ತಾಮ್ರಶಾಸನವು ಕ್ರಿ.ಶ. ಮೂರನೇ ಶತಮಾನದ ಪಲ್ಲವರ ದೊರೆ ಶಿವಸ್ಕಂದವರ್ಮನಿಗೆ ಸೇರಿದ್ದು, ಇದನ್ನು ಬರೆದವನು ಸಾತಹನಿರಠ(ಸಾತವಾಹನಿ ರಾಷ್ಟ್ರ)ದಲ್ಲಿದ್ದ ಕೋಳಿವಾಳದ ಭೋಜಕದ ಭಟ್ಟಸರ್ಮ(ಇನಾಮದಾರ) ಎಂದು ದಾಖಲಿಸಿದೆ.[೧೮೮] ಅದೇ ರೀತಿ ಕುರುವತ್ತಿ ಹಿರೇಮಠದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವು ಅಲ್ಲಿನ ಶಾಸನವನ್ನು ರಚಿಸಿದಾತ ಶ್ರೀಕಂಠಸೂರಿ, ಕಂಡರಿಸಿದವನು ಕಾಳೋಜ ಎಂದು ಹೆಸರಿಸುತ್ತದೆ.[೧೮೯] ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯ ದ್ವಾರದ ಬಳಿ ಇರುವ ೨೩ನೇ ಶಾಸನವನ್ನು ರಚಿಸಿದವನು ನಾಗವಾರ. ನಾಗಮ್ಮನೆಂಬುವವನು ಬರೆದ, ಕೆತ್ತಿದ ರೂವಾರಿ ಚಾವುಂಡೋಜ ಎಂಬ ಉಲ್ಲೇಖಗಳಿವೆ.[೧೯೦] ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನವನ್ನು ಬರೆದವನು ದೇವಣ್ಣ ಮತ್ತು ಕೆತ್ತಿದವನು ಮಾರಿಯೋಜ ಎಂಬ ವಿವರವಿದೆ.[೧೯೧] ಹೊಳಲು ಗ್ರಾಮದ ಅಮೃತೇಶ್ವರ ದೇವಾಲಯದ ನವರಂಗ ಮಂಟಪದ ಕಂಬದ ಮೇಲಿರುವ ಶಾಸನ ಕ್ರಿ.ಶ.೧೨ನೆಯ ಶತಮಾನಕ್ಕೆ ಸೇರಿದ್ದು, ಈ ಶಾಸನದಲ್ಲಿ ಕಲಿಯುಗ ವಿಶ್ವಕರ್ಮ ಬೋಕೋಜನ ಮಗ ಶ್ರೀಕರನಾಗನು ೬೪ ಬಗೆಯ ಪ್ರಾಸಾದ(ಕಟ್ಟಡ) ವಿಶಾರದನೆಂದೂ; ನಾಗರ, ಕಳಿಂಗಾಂಧ್ರ, ದ್ರಾವಿಡ ಮತ್ತು ವೇಸರ ಎಂಬ ನಾಲ್ಕು ಬಗೆಯ ದೇವಾಲಯಗಳ ಮಾದರಿಯನ್ನು ನಿರ್ಮಿಸುವ ಸೂತ್ರಧಾರಿಯೆಂದೂ, ಆತನು ನಾಲ್ಕು ಕಂಬಗಳನ್ನು ಮಾಡಿದ್ದಕ್ಕೆ ಒಂದು ಕಂಬಕ್ಕೆ ೨೦ ಗದ್ಯಾಣಗಳಂತೆ ಒಟ್ಟು ೮೦ ಗದ್ಯಾಣಗಳನ್ನು ಪಡೆದನೆಂಬ ವಿವರಗಳನ್ನು ಈ ಶಾಸನ

ದಾಖಲಿಸಿದೆ.[೧೯೨] ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನವು ವೀರಪಾಂಡ್ಯನ ಸಂಧಿವಿಗ್ರಹಿಯಾದ ಶಂಕರದೇವನು ಈ ಶಾಸನವನ್ನು ಬರೆದ ವಿವರವನ್ನು ದಾಖಲಿಸಿದೆ.[೧೯೩] ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಮತ್ತೊಂದು ಶಾಸನವು ಕ್ರಿ.ಶ.೨೮-೧೦-೧೨೬೨ರ ಶಾಸನವು ಇಂದೋಜನ ಮಗ ಚಾವೋಜನು ಕೆತ್ತಿದ ಎನ್ನುವ ವಿವರವನ್ನು ಉಲ್ಲೇಖಿಸಿದೆ.[೧೯೪] ಹೂವಿನಹಡಗಲಿ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನವನ್ನು ಕವಿಕಂಠಾಭರಣ ಬರೆದನೆಂಬ ವಿವರ ದಾಖಲಾಗಿದೆ.

### ೬.೪.೧೦. ಕೃಷಿ ಮತ್ತು ತೋಟದ ಉಲ್ಲೇಖಗಳು

ರಾಜ್ಯವೊಂದರ ಪ್ರಗತಿ ಅಲ್ಲಿನ ಕೃಷಿಯನ್ನು ಅವಲಂಬಿಸಿರುತ್ತದೆ. ಕೃಷಿಯಲ್ಲಿ ತೋಟಗಾರಿಕೆ ಬೆಳೆಗಳು ಪ್ರಮುಖ ಸ್ಥಾನವನ್ನು ಹಿಂದಿನಿಂದ ಹೊಂದಿವೆ. ಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಕೆಲ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ವಿಭಿನ್ನ ಪ್ರಕಾರದ ಕೆಲ ಪ್ರಮುಖ ಕೃಷಿ ಮತ್ತು ತೋಟಗಳನ್ನು ದಾಖಲಿಸಿವೆ.

ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ಲಲಾಟಬಿಂಬದ ಎಡಭಾಗದ ಬೋದಿಗೆಯ ಮೇಲಿರುವ ೧೦ ನಂಬರಿನ ಶಾಸನ ೧೨ನೆಯ ಶತಮಾನಕ್ಕೆ ಸೇರಿದ್ದು, ಈ ಶಾಸನದಲ್ಲಿ ಓಲೆಯ ಬರಿಸೆಟ್ಟಿಯ ಮಕ್ಕಳಾದ ಗುಡಯ್ಯಸೆಟ್ಟಿ, ಕರ್ಣಿಸೆಟ್ಟಿಯರು ಆಹವಮಲ್ಲೇಶ್ವರ ದೇವರಿಗೆ ೨೬ ಮತ್ತರು ತೋಟವನ್ನು ದಾನ ಮಾಡಿದರು ಮತ್ತು ಕೆರೆಯನ್ನು ಜೀರ್ಣೋದ್ಧಾರ ಮಾಡಿ ಆ ಕೆರೆಯ ಕೆಳಗೆ ಒಂದು ತುರ್ತುಕೆರೆಯನ್ನು ಕಟ್ಟಿಸುತ್ತಾರೆ ಎನ್ನುವ ವಿವರವಿದೆ.[೧೯೫] ಚನ್ನಪ್ಪ ಎಂಬ ವ್ಯಾಪಾರಿಯ ವಶದಲ್ಲಿದ್ದ ತ್ರಾಮಶಾಸನವು ಕ್ರಿ.ಶ.ಮೂರನೇ ಶತಮಾನಕ್ಕೆ ಸೇರಿದ್ದು, ಅದು ಪಲ್ಲವರ ದೊರೆ ಶಿವಸ್ಕಂದವರ್ಮನು ಚಿಲ್ಲರೇಕಕೋಡುಂಕ ಗ್ರಾಮದಲ್ಲಿನ ತೋಟವನ್ನು ದಾನ ಮಾಡಿದನು. ಇದನ್ನು ಬರೆದವನು ಕೋಳಿವಾಳ ಭೋಜಕದ ಭಟ್ಟಸರ್ಮ(ಕೋಳಿವಾಳದ ಇನಾಮದಾರ ಚಿಲ್ಲರೇ ಕೊಡುಂಕ ಗ್ರಾಮವು ಸಾತಹನಿರಠ(ಸಾತವಾಹನಿ ರಾಷ್ಟ್ರ)ದಲ್ಲಿತ್ತು ಎನ್ನುವುದನ್ನು ದಾಖಲಿಸಿದೆ.[೧೯೬] ಕೊಟ್ನೆಕಲ್ಲು ಕೋಟೇಶ್ವರ ದೇವಾಲಯದ ಗೋಡೆಗೆ ಸೇರಿಸಿರುವ ಶಾಸನವು ವಿಳಂಬ, ಶ್ರಾವಣ, ಶು.೧೧, ಶುಕ್ರವಾರದಂದು ಅಂದರೆ ಕ್ರಿ.ಶ.೨೭-೭-೧೧೭೮ರ ಗುರುವಾರದಂದು (ಇಲ್ಲಿ ಶುಕ್ರವಾರವೆಂದು ತಪ್ಪಾಗಿದೆ). ವಿಜಯಪಾಂಡ್ಯದೇವನು ಕೋಟಿಶಂಕರ ದೇವರ ಸೇವಾಕಾರ್ಯಗಳಿಗೆ ಒಂದು ಮನೆ ಮತ್ತು ೩೮೦ ಕಂಬ ತೋಟವನ್ನು ದಾನ ಮಾಡಿದ ವಿವರವನ್ನು ದಾಖಲಿಸಿದೆ.[೧೯೭] ಹೂವಿನಹಡಗಲಿ ಕೇಶವಸ್ವಾಮಿ ದೇವಾಲಯದ ಪಶ್ಚಿಮ ದಿಕ್ಕಿನ ಪ್ರವೇಶ ದ್ವಾರದ ಬಳಿಯ ತ್ರುಟಿತ ಶಾಸನವು ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ಮಾಂಡಲಿಕ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ಆತನ ಸೇನಾಪತಿ ರವಿಗ ಅಥವಾ ರವಿದೇವನ ಪತ್ನಿ ರೆಬ್ಬಲದೇವಿ ಅಲ್ಲಿನ ದೇವಾಲಯದ ಸೇವಾ ಕಾರ್ಯಗಳಿಗಾಗಿ ಮಹಾಜನಗಳ ಸಮ್ಮುಖದಲ್ಲಿ ಹೂತೋಟಕ್ಕಾಗಿ ಭೂದಾನ ಮಾಡಿದ ವಿವರವಲ್ಲದೆ ಇದೇ

ಶಾಸನವು ಸಾಯಣ್ಣನ ಮಗಳು ಸೊರಿಕಯ್ವೆ, ಲೋಕೇಯಷಣಂಗಿಯ ಮಗ ೫೦೦ ಕಮ್ಮ ನೀರಾವರಿ ಭೂಮಿಯನ್ನು ದೇವರ ಸೇವಾಕಾರ್ಯಗಳಿಗಾಗಿ ಕ್ರಿ.ಶ.೮-೧೧-೧೧೨೮ರ ಗುರುವಾರದಂದು ದಾನ ಮಾಡಿದ ವಿವರವನ್ನು ದಾಖಲಿಸಿದೆ.[೧೯೮]

**೬.೪.೧೧. ಕೆರೆಯ ಉಲ್ಲೇಖಗಳು**

ಸಮಾಜದ ಆರ್ಥಿಕ ಅಭಿವೃದ್ಧಿಯಲ್ಲಿ ಅಲ್ಲಿನ ನೀರಾವರಿ ವ್ಯವಸ್ಥೆ ಪ್ರಮುಖ ಪಾತ್ರ ವಹಿಸುತ್ತದೆ. ಅಂದು ಕೆರೆ–ಕಾಲುವೆಗಳು ಜೀವಸೆಲೆಯಾದ ನೀರನ್ನು ಪ್ರಾಣಿಸಂಕುಲಗಳಿಗೆ ಒದಗಿಸುವುದ ರೊಂದಿಗೆ ಅಲ್ಲಿನ ಭೂಮಿಗೆ ನೀರುಣಿಸಿ ಆ ಭೂಮಿ ಸದಾ ಹಚ್ಚ ಹಸಿರಾಗಿರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಹೂವಿನಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಇಲ್ಲಿದ್ದ ಕೆರೆಗಳನ್ನು ಸಂದರ್ಭಕ್ಕೆ ಅನುಗುಣವಾಗಿ ದಾಖಲಿಸಿವೆ. ಇವುಗಳಿಂದ ಅಂದಿನ ಕೆರೆಗಳ ಪಾತ್ರವೇನಾಗಿತ್ತು ಎಂಬುದನ್ನು ಅರಿಯಬಹುದಾಗಿದೆ.

ಕುರುವತ್ತಿ ಮಲ್ಲಿಕಾರ್ಜುನ ದೇವಾಲಯದ ಲಲಾಟಬಿಂಬದ ಎಡಭಾಗದ ಬೋದಿಗೆಯ ಮೇಲಿರುವ ೧೦ ನಂಬರಿನ ಶಾಸನ ೧೨ನೆಯ ಶತಮಾನಕ್ಕೆ ಸೇರಿದೆ. ಈ ಶಾಸನದಲ್ಲಿ ಓಲೆಯ ಬರಿಸೆಟ್ಟಿಯ ಮಕ್ಕಳಾದ ಗುಡಯ್ಯಸೆಟ್ಟಿ, ಕರ್ಣಿಸೆಟ್ಟಿಯರು ಆಹವಮಲ್ಲೇಶ್ವರ ದೇವರಿಗೆ ೨೬ ಮತ್ತರು ತೋಟವನ್ನು ದಾನ ಮಾಡಿದರು ಮತ್ತು ಕೆರೆಯನ್ನು ಜೀರ್ಣೋದ್ಧಾರ ಮಾಡಿ ಆ ಕೆರೆಯ ಕೆಳಗೆ ಒಂದು ತುರ್ತುಕೆರೆಯನ್ನು ಕಟ್ಟಿಸಿದ ವಿವರವಿದೆ.[೧೯೯] ಹಿರೇಹಡಗಲಿಯ ಶಾಸನ ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ವೀರಬಲ್ಲಾಳನ ಕಾಲಾವಧಿಯಲ್ಲಿ ಆತನ ಹಿರಿಯರಾಣಿ ಪದುಮಲದೇವಿ ಹೊಸಪಂಡಗಿಲೆಯನ್ನು ಆಳುತ್ತಿದ್ದಳು. ಆಗ ಬ್ರಾಹ್ಮಣ ದಂಡನಾಯಕ ಗಂಗಿಮಯ್ಯ ನಾಯಕ ಮತ್ತು ದಾಮಣ್ಣ ದಂಡನಾಯಕರು ಹಿರಿಯಕೆರೆ ಮತ್ತು ತುಂಬಿನಕೆರೆಗಳಿಗೆ ೧೨೦ ಮಹಾಜನಗಳ ಸಮ್ಮುಖದಲ್ಲಿ ಭೂದಾನ ಮಾಡಿದ ಉಲ್ಲೇಖವಿದೆ.[೨೦೦]

ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ದಕ್ಷಿಣದ ಮನೆಯ ಮುಂದೆ ಇರುವ ಶಾಸನ ಚಾಳುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಅವನ ದಂಡಾಧಿಪತಿ ಮುದ್ದರಸ ಅಥವಾ ಮುದ್ದರಾಜನು ಸೋಗೆಯ ಬಳಿಯ ನಾಗಸಮುದ್ರ ಕೆರೆಗಾಗಿ ಕೆಲವು ದಾನ ಮಾಡಿದುದನ್ನು ಹೇಳುತ್ತದೆ.[೨೦೧]

ಹ್ಯಾರಡದ ಹೊಲದಲ್ಲಿರುವ ಶಾಸನವು ಮುಮ್ಮಡಿ ಬಸವಪ್ಪ ನಾಯಕನು ತಳವಾರನೊಬ್ಬ ಚಂಣುಕಲು ಹೊಲದಲ್ಲಿ ಬಾವಿ ತೆಗೆದದ್ದಕ್ಕೆ ತಳವಾರಿಕೆ ಮಾನ್ಯವಾಗಿ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

**೬.೪.೧೨. ದವಸ ಧಾನ್ಯಗಳ ಉಲ್ಲೇಖಗಳು**

ರಾಜ್ಯವೊಂದರ ಪ್ರಗತಿಯ ಬೆನ್ನ ಹಿಂದೆ ಅಲ್ಲಿನ ಕೃಷಿವ್ಯವಸ್ಥೆ ಪ್ರಮುಖ ಪಾತ್ರ ವಹಿಸುತ್ತದೆ. ಕೃಷಿಯಲ್ಲಿ ಬೆಳೆಯುವ ಬೆಳೆಗಳಲ್ಲಿ ದವಸ ಧಾನ್ಯಗಳು ಮಾರುಕಟ್ಟೆ ಮತ್ತು ಜನರ ದೃಷ್ಟಿಯಿಂದ

ಪ್ರಮುಖ ಸ್ಥಾನವನ್ನು ಹಿಂದಿನಿಂದ ಹೊಂದಿವೆ. ಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ವಿಭಿನ್ನ ಪ್ರಕಾರದ ಕೆಲ ಪ್ರಮುಖ ದವಸ ಮತ್ತು ಧಾನ್ಯಗಳನ್ನು ದಾಖಲಿಸಿವೆ.

ಕುರುವತ್ತಿ ಹಿರೇಮಠದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವು[೨೦೨] ಅಂದು ಕುರುವತ್ತಿಯಲ್ಲಿ ಆಯಾತ ನಿರ್ಯಾತವಾಗುತ್ತಿದ್ದ ಧಾನ್ಯ, ಹತ್ತಿ, ಹುಲ್ಲು, ಸೌದೆ, ತರಕಾರಿ, ಹಣ್ಣು ಮುಂತಾದವುಗಳ ಮೇಲಿನ ಸುಂಕವನ್ನು ಅಲ್ಲಿನ ದೇವಾಲಯದ ಸೇವಾಕಾರ್ಯಕ್ಕೆ ದಾನ ನೀಡಿದ್ದನ್ನು ದಾಖಲಿಸಿದೆ. ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನವು ಮೂರು ಲಕ್ಷ ಅಡಕೆಯ ಸುಂಕವನ್ನು ವಸೂಲು ಮಾಡಿಕೊಡುವ ಜವಾಬ್ದಾರಿಯನ್ನು ೧೨೦ ಮಹಾಜನರು ಹೊರುತ್ತಾರೆ ಎನ್ನುವ ವಿವರವನ್ನು ದಾಖಲಿಸಿದೆ.

**೬.೪.೧೩. ಸುಂಕ ಮತ್ತು ತೆರಿಗೆಯ ಉಲ್ಲೇಖಗಳು**

ಸುಂಕ ಮತ್ತು ತೆರಿಗೆಗಳು ರಾಜ್ಯವೊಂದರ ಆದಾಯದ ಪ್ರಮುಖ ಮೂಲಗಳಾಗಿರುತ್ತವೆ. ಸಮಾಜದಲ್ಲಿ ಜನರು ಮತ್ತು ಇತರೆ ಸಂಸ್ಥೆಗಳು ನೀಡುತ್ತಿದ್ದ ಸುಂಕ ಮತ್ತು ತೆರಿಗೆಗಳು ಮತ್ತು ಅವುಗಳ ಪ್ರಮಾಣವನ್ನು ವಿಧಿವತ್ತಾಗಿ ನೀಡಿದ/ನೀಡುತ್ತಿದ್ದ ಇಲ್ಲವೇ ಅಂತಹವುಗಳನ್ನು ಸಮಾಜದ ಒಂದು ಒಳ್ಳೆಯ ಉದ್ದೇಶಕ್ಕಾಗಿ ಮಾಫಿ ಮಾಡಿದ ವಿವರಗಳನ್ನು ಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಉಲ್ಲೇಖಿಸಿರುವುದನ್ನು ಅರಿಯಬಹುದಾಗಿದೆ.

ಕುರುವತ್ತಿ ಆಂಜನೇಯಸ್ವಾಮಿ ದೇವಾಲಯದ ಬಳಿ ಬಿದ್ದಿರುವ ತ್ರುಟಿತ ಮೂರನೇ ಶಾಸನದಲ್ಲಿ ಕುಱುವತ್ತಿಯಲ್ಲಿನ ಆಹವಮಲ್ಲೇಶ್ವರ ದೇವಾಲಯಕ್ಕೆ ಸುಣ್ಣ ಬಳಿಯಲು ಲೋಕಾಭರಣ ದೇವನ ಕಾಲು ತೊಳೆದು ವೀಳ್ಯೆದೆಲೆಯ ಮೇಲಿನ ತೆರಿಗೆಯನ್ನು ಗಂಡರಾದಿತ್ಯಪೊಳಲ ಉಳಿಯ ಮೂನೂರ್ವರು ಮತ್ತು ಉಗುರು ಮೂನೂರ್ವರು ಹಾಗೂ ಮಹಾಜನರ ಸಮ್ಮುಖದಲ್ಲಿ ದಾನ ಕೊಡಲಾಗಿದೆ. ಅದೇ ರೀತಿ ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ಬಳಿಯ ಮತ್ತೊಂದು ಕ್ರಿ.ಶ.೨೦.೧೨.೧೨೦೩ರ ಶಾಸನವು ಕುಱುವತ್ತಿಯಲ್ಲಿನ ಆಹವಮಲ್ಲೇಶ್ವರ ದೇವಾಲಯಕ್ಕೆ ಸುಣ್ಣ ಬಳಿಯಲು ಲೋಕಾಭರಣದೇವನ ಕಾಲು ತೊಳೆದು ವೀಳ್ಯೆದೆಲೆಯ ಮೇಲಿನ ತೆರಿಗೆಯನ್ನು ಗಂಡರಾದಿತ್ಯಪೊಳಲ ಉಳಿಯ ಮೂನೂರ್ವರು ಮತ್ತು ಉಗುರು ಮೂನೂರ್ವರು ಹಾಗೂ ಮಹಾಜನರ ಸಮ್ಮುಖದಲ್ಲಿ ದಾನ ಕೊಡಲಾದ ವಿವರವನ್ನು ದಾಖಲಿಸಿದೆ.[೨೦೩] ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ ಬಳಿ ಇರುವ ೨೩ನೇ ಶಾಸನವು ರಾಜನು ಉಪ್ಪು, ಸಕ್ಕರೆ ಮತ್ತು ಉಳಿದ ಮೂರು ರಸಗಳ ಮೇಲಿನ ಸುಂಕವನ್ನು ಬಿಡುತ್ತಾನೆ ಎನ್ನುವ ವಿವರಗಳಿವೆ.[೨೦೪] ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನವು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ ವಿಜಯಪಾಂಡ್ಯದೇವರು ಶಂಕರ ದಂಡನಾಯಕನ ವಿನಂತಿಯಂತೆ ಗವರೇಶ್ವರ ದೇವರಿಗೆ ಹೆಜ್ಜುಂಕದಲ್ಲಿ ಲಕ್ಷಕ್ಕೆ ಹಾಗವೊಂದನ್ನು ಧಾರಾಪೂರ್ವಕವಾಗಿ ಬಿಟ್ಟನು.

ಮೂರು ಲಕ್ಷ ಅಡಕೆಯ ಸುಂಕವನ್ನು ವಸೂಲು ಮಾಡಿಕೊಡುವ ಜವಾಬ್ದಾರಿಯನ್ನು ೧೨೦ ಮಹಾಜನರು ಹೊರುತ್ತಾರೆ ಎನ್ನುವ ವಿವರಗಳನ್ನು ದಾಖಲಿಸಿದೆ. ಹೊಳಲು ಅನಂತಶಯನ ದೇವಸ್ಥಾನದ ಎದುರಿಗೆ ಇರುವ ಶಾಸನ ಶ್ರೀಮುಖ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯಂದು ಪಾಂಡ್ಯದೇವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದಾಗ, ಪಾಂಡ್ಯರಾಜನು ಮಂತ್ರಿ ಸೋಮೇಶ್ವರ ಭಟ್ಟನ ಮಗ ಪೊತ್ಯಣ್ಣಭಟ್ಟನು ನಾರಾಯಣ ದೇವರಿಗೆ ಒಂದು ಲಕ್ಷ ಅಡಕೆಗೆ ಒಂದು ಹಾಗ ತೆರಿಗೆಯನ್ನು ದಾನವಾಗಿ ಬಿಟ್ಟನು. ಶಂಕರಭಟ್ಟ ಮತ್ತು ಕಾಡಭಟ್ಟನ ಮಗ ನಾಳಭಟ್ಟರು ಕೆಲವು ದಾನಗಳನ್ನು ನೀಡುತ್ತಾರೆ. ಗಂಡರಾದಿತ್ಯ ಹೊಳಲಿನ ೧೨೦ ಮಹಾಜನರು ಈ ದಾನಗಳನ್ನು ಪ್ರತಿಪಾಳಿಸಬೇಕೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೨೦೫]

ರಂಗಾಪುರ ನರಸಿಂಹ ದೇವಾಲಯದ ಶಾಸನವು ಮಾಘಮಾಸದ ಶು.೫, ಆದಿತ್ಯವಾರ, ಯುವ ಸಂವತ್ಸರ ಸುಮಾರು ಕ್ರಿ.ಶ.೧-೧-೧೧೫೫ರ ಆದಿತ್ಯವಾರದಂದು ಹೆಗ್ಗಡೆಯ ಮುಂದಾಳುತನದಲ್ಲಿ ೧೨೦ ಮಹಾಜನಗಳು ೫ ತೋಟಗರನ್ನು ತೆರಿಗೆಯಿಂದ ಮುಕ್ತಗೊಳಿಸಿದ ವಿವರವನ್ನು ದಾಖಲಿಸಿದೆ. ಹೂವಿನಹಡಗಲಿ ಅದೇ ಗ್ರಾಮದ ಪಾಂಡುರಂಗ ದೇವಾಲಯದ ಆವರಣದಲ್ಲಿ ಬಿದ್ದಿರುವ ಶಾಸನವು ಚಾಳುಕ್ಯ ದೊರೆ ತ್ರಿಭುವನಮಲ್ಲದೇವನು ಕಲ್ಯಾಣದಿಂದ ಆಳುತ್ತಿರುವಾಗ ಆತನ ಮಾಂಡಲಿಕ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು. ಆಗ ಆತನ ಮಾಂಡಲಿಕ(ಮುದ್ದ)ರಸನು ನೊಳಂಬವಾಡಿ-೩೨೦೦೦ದ ತೆರಿಗೆ ಅಧಿಕಾರಿಯಾಗಿದ್ದಾಗ ಪೂವಿನಪಡಂಗಿಲಿಯ ೧೨೦ ಮಹಾಜನಗಳ ಮುಂದೆ ಕಲಿದೇವರ ಸ್ಥಾನಿಕ ಖಳೇಶ್ವರ ಪಂಡಿತನ ಕಾಲು ತೊಳೆದು ಸೋಮೇಶ್ವರ ದೇವರಿಗೆ ಪನ್ನಾಯದ ತೆರಿಗೆಯನ್ನು ದಾನ ಮಾಡುತ್ತಾನೆ ಎನ್ನುವ ವಿಶೇಷ ವಿವರವನ್ನು ಈ ಶಾಸನ ದಾಖಲಿಸಿದೆ.[೨೦೬] ಹೂವಿನಹಡಗಲಿಯ ಮೇಲಿನ ಶಾಸನದ ಬಳಿ ಇನ್ನೊಂದು ಶಾಸನ ಇದು ಕ್ರಿ.ಶ.೯.೧೧.೧೦೬೨ರಲ್ಲಿ ಇಲ್ಲಿನ ದೇವಾಲಯವನ್ನು ಕಟ್ಟುವ ಶಿಲ್ಪಿಗಳಿಗೆ ಕೆಲವು ತೆರಿಗೆಗಳಿಂದ ಪೂರ್ಣ ವಿನಾಯಿತಿ ನೀಡಿದ ಉಲ್ಲೇಖವನ್ನು ದಾಖಲಿಸಿದೆ.[೨೦೭]

ಸೋಗಿ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಕಂಬದಲ್ಲಿನ ಶಾಸನದಲ್ಲಿ ತೆರಿಗೆಗೆ ಸಂಬಂಧಿಸಿದ ವಿವರವಿದೆ. ಹೊಯ್ಸಳ ದೊರೆ ವೀರನರಸಿಂಹನ (ಕ್ರಿ.ಶ.೯.೩.೧೨೨೬) ಮಹಾಪ್ರಧಾನ ಬೊಮ್ಮೆಯ ದಣನಾಯಕನ ಆದೇಶದಂತೆ, ಗೋಪರಸ, ಭೂತರಸ, ದೇಮಯ್ಯ ಮತ್ತು ಮಂಗತೆಯ್ಯ, ಸಿರಿಪಣ್ಣ ಮತ್ತು ಸುಂಕದ ಅಧಿಕಾರಿ ಮಯ್ಲಾರದೇವ ಮತ್ತು ಉಳಿದವರು ಪಾಂಡ್ಯನಾಡಿನ ಸೋಗೆಯ ಕಲಿದೇವರ ಸೇವಾಕಾರ್ಯಗಳಿಗೆ ಪಾಂಡ್ಯನಾಡಿನ ಸುಂಕದ ಆದಾಯದಲ್ಲಿ ವರ್ಷಕ್ಕೆ ಎರಡು ಗದ್ಯಾಣವನ್ನು ದಾನ ಮಾಡಿದರು. ಅಲ್ಲದೆ ಹೆಗ್ಗಡೆ ಹೇಮಯ್ಯ ಮತ್ತು ಉಳಿದವರು ೨ ಗದ್ಯಾಣವನ್ನು ಅದೇ ದೇವರ ಸೇವಾಕಾರ್ಯಗಳಿಗಾಗಿ ಬಿಲುಕೊಡೆ ತೆರಿಗೆ ಅಧಿಕಾರಿಯಾಗಿದ್ದ ಹೆಗ್ಗಡೆ ಬೊಪ್ಪಯ ದಣನಾಯಕನು ಹೆಗ್ಗಡೆ ಹರಿಯಣ್ಣನ ಆದೇಶದಂತೆ ದಾನ ಮಾಡಿದ ವಿವರವನ್ನು ಸಹ ಇದೇ ಶಾಸನ ದಾಖಲಿಸಿದೆ.[೨೦೮]

### ೬.೪.೧೪. ವ್ಯಾಪಾರಿ ವರ್ಗದ ಉಲ್ಲೇಖಗಳು

ರಾಜ್ಯವೊಂದರ ಕೀರ್ತಿ ಮತ್ತು ಅಭಿವೃದ್ಧಿ ಅಲ್ಲಿ ನಡೆಯುವ ವ್ಯಾಪಾರ ವಹಿವಾಟನ್ನು ಅವಲಂಬಿಸಿರುತ್ತದೆ. ಸಮಾಜದ ಜನರ ಜೀವನಾವಶ್ಯಕ ವಸ್ತುಗಳು ಸಕಾಲಿಕವಾಗಿ ಜನರಿಗೆ ದೊರೆಯುವುದು ಅಲ್ಲಿನ ವ್ಯಾಪಾರಿ ವರ್ಗದ ಶ್ರಮದ ಮೇಲೆ ನಿಂತಿರುತ್ತದೆ. ಹೂವಿನಹಡಗಲಿ ತಾಲೂಕಿನ ವಿವಿಧೆಡೆ ದೊರೆಯುವ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ವ್ಯಾಪಾರಸ್ಥರನ್ನು ಅವರ ಸಾಧನೆಗಳನ್ನು ಮತ್ತು ಅವರ ಸ್ಥಾನಮಾನಗಳನ್ನು ಸಂದರ್ಭಕ್ಕೆ ಅನುಗುಣವಾಗಿ ದಾಖಲಿಸಿವೆ. ಇವುಗಳಿಂದ ಅಂದಿನ ವ್ಯಾಪಾರಿ ವರ್ಗದ ಪಾತ್ರವೇನಾಗಿತ್ತು ಎಂಬುದನ್ನು ಅರಿಯ ಬಹುದಾಗಿದೆ.

ಕುರುವತ್ತಿಯ ೧೯ನೇ ಶಾಸನದಲ್ಲಿ ಐಯ್ಯಾವೊಳೆ-೫೦೦ ಸ್ವಾಮಿಗಳನ್ನು ಯಮನ ಸೇವಕರಂತೆ, ಸ್ಥಳದಿಂದ ಸ್ಥಳಕ್ಕೆ ತಿರುಗಾಡುವವರು, ಕೈಯಲ್ಲಿ ವಜ್ರಾಯುಧವನ್ನು ಹಿಡಿದು ಘರ್ಜಿಸುವವರು, ಎದುರು ನಿಂತ ವೈರಿಗಳನ್ನು ಹಿಡಿದು ಯಮನಿಗೆ ಕೊಟ್ಟವರೆಂದು ವರ್ಣಿಸಲಾಗಿದೆ. ನಾನಾ ದೇಶಿಗಳು ಮತ್ತು ಮುಮ್ಮರಿದಂಡಗಳು ಕುರುವತ್ತಿಯಲ್ಲಿ ಸೇರಿ ಆಹವಮಲ್ಲೇಶ್ವರ ದೇವರ ಸೇವೆಗಾಗಿ ಲೋಕಾಭರಣ ಮುನೀಂದ್ರರಿಗೆ ಹೆಜ್ಜುಂಕರಾವುಳದ ಒಂದು ಪಾಗವನ್ನು ದಾನ ಮಾಡಿದರು ಎನ್ನುವ ವಿವರವಿದೆ.[೨೦೯] ಈ ಶಾಸನವು ಗುತ್ತವಂಶದ(ಇಮ್ಮಡಿ) ವಿಕ್ರಮಾದಿತ್ಯನ ಕಾಲಕ್ಕೆ ಸೇರಿದೆ. ಹೊಳಲಿನ ವೀರಭದ್ರ ದೇವಾಲಯದಲ್ಲಿರುವ ಹೆಚ್ಚು ಭಾಗ ಹಾಳಾಗಿರುವ ಇನ್ನೊಂದು ಶಾಸನ ಶಕ ೯೯೬ರ ಆನಂದ, ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ. ಇದು ಕ್ರಿ.ಶ.೩೧-೫-೧೦೭೪ ಮಂಗಳವಾರಕ್ಕೆ ಸರಿಯಾಗಿದೆ. ಚಾಳುಕ್ಯ ದೊರೆ ಭುವನೈಕಮಲ್ಲದೇವನ(ಇಮ್ಮಡಿ ಸೋಮೇಶ್ವರ) ಆಳ್ವಿಕೆಯಲ್ಲಿ ಗಂಡರಾದಿತ್ಯ ಚತುರ್ವೇದಿಮಂಗಲದ ೧೨೦ ಮಹಾಜನಗಳು, ತೆಲ್ಲಿಗರು, ಮುಮ್ಮರಿ ದಂಡಗಳು, ಸೆಟ್ಟಿಗಳು ಸೇರಿ ಗವರೇಶ್ವರ ದೇವರ ಸೇವೆಗಾಗಿ ಭೂದಾನವನ್ನು ಮಾಡಿದರು. ಐದುನೂರು ಸ್ವಾಮಿಗಳು ಕೆಲವು ವಸ್ತುಗಳ ಮೇಲೆ ತಾವಾಗಿಯೇ ಪಾಲನ್ನು ನೀಡುತ್ತಾರೆ ಎನ್ನುವ ವಿವರವಿದೆ.[೨೧೦] ಹೊಳಲಿನ ಗೌರೀಶ್ವರ ದೇವಾಲಯದಲ್ಲಿರುವ ಶಾಸನ ಹೊಳಲ ಗ್ರಾಮದಲ್ಲಿರುವ ೧೨೦ ಮಹಾಜನರನ್ನು, ಅಯ್ಯಾವೊಳೆ-೫೦೦ ವ್ಯಾಪಾರಿಗಳನ್ನು ವರ್ಣಿಸುತ್ತದೆ. ಮಾನ್ಯರ ಮಸಲವಾಡ ಗ್ರಾಮದಲ್ಲಿನ ಮಠದ ಪಾಳು ನಿವೇಶನದಲ್ಲಿರುವ ಮತ್ತೊಂದು ಶಾಸನ ಪೊಸ್ತಕಗಚ್ಛ, ದೇಶಿಗಣ, ಮೂಲಸಂಘದ ನೇಮಿಚಂದ್ರರಾವುಳನ ಶಿಷ್ಯ, ವಿನಯಚಂದ್ರದೇವನ ವಿವರಗಳನ್ನು ದಾಖಲಿಸಿದೆ.[೨೧೧] ಮಾಗಳ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿರುವ ಶಾಸನವು ಹೊಯ್ಸಳ ದೊರೆಯಾದ ವಿಷ್ಣುವರ್ಧನ ವೀರಬಲ್ಲಾಳ(ಇಮ್ಮಡಿ)ನ ಆಳ್ವಿಕೆಯಲ್ಲಿ ಹರಿಹರದ ಊರೊಡೆಯರು ಮತ್ತು ಗೋವಿಂದ ಹಾಗೂ ಮಾಂಗೊಳದ ಮಹಾಜನರ ವಿವರಗಳನ್ನು ದಾಖಲಿಸಿದೆ.[೨೧೨] ಸೋಗಿ ಕಲ್ಲೇಶ್ವರ ದೇವಾಲಯದ ನವರಂಗ ಮಂಟಪದ ಕಂಬದ ಮೇಲಿನ ಶಾಸನದಲ್ಲಿ ನಾನಾದೇಶಿ ಮಲಯಾಳ ಪೊರಯಚ್ಚಸೆಟ್ಟಿ ಮತ್ತು ಆತನ ತಮ್ಮ ಕುಮಾರಚ್ಚಸೆಟ್ಟಿಯ ವಿವರವಿದೆ.[೨೧೩]

**೬.೪.೧೫. ವೀರಮರಣದ ದಾಖಲೆಗಳು**

ವೀರಮರಣ ಹೊಂದಿದರೆ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ಹಿಂದಿನ ಜನರಲ್ಲಿ ಬಲವಾಗಿತ್ತು. ಗೆದ್ದರೆ ಜಯ; ಕಾದಾಡಿ ಸತ್ತರೆ ವೀರಸ್ವರ್ಗ ಎಂಬ ನುಡಿ ಅಂದು ಪ್ರಚಲಿತದಲ್ಲಿತ್ತು. ಹಡಗಲಿ ತಾಲೂಕಿದ್ಯಾಂತ ದೊರೆಯುವ ಶಾಸನಗಳು ಬೇರೆ ಬೇರೆ ಕಾರಣಗಳಿಗಾಗಿ ಮರಣ ಹೊಂದಿದ ಸಾಕ್ಷ್ಯಗಳನ್ನು ವ್ಯವಸ್ಥಿತವಾಗಿ ದಾಖಲಿಸಿವೆ. ಇವುಗಳಿಂದ ಅಂದಿನ ಗ್ರಾಮಗಳ ಪಾತ್ರವೇನಾಗಿತ್ತು ಎಂಬುದನ್ನು ಅರಿಯಬಹುದಾಗಿದೆ. ಇಲ್ಲಿ ದೊರೆತ ಶಾಸನಗಳು ವೀರಮರಣವನ್ನು ಹಾಗೂ ಮತ್ತಿತರೆ ಪ್ರಕಾರದಲ್ಲಿ ಮರಣ ಹೊಂದಿದ ವಿವರಗಳನ್ನು ಉಲ್ಲೇಖಿಸುವ ಶಾಸನಗಳಿವೆ. ಮೈಲಾರದ ಅರಳಿಕಟ್ಟೆಯ ಮೇಲಿರುವ ವೀರಗಲ್ಲಿನ ಮೇಲಿರುವ ಬರಹವು ಮಹಾದೇವಣ್ಣ ಮತ್ತು ಮಯಿಲಾರನ ಮರಣವನ್ನು ಉಲ್ಲೇಖಿಸುತ್ತದೆ. ಹಾಗೆಯೇ ಕತ್ತೆಬೆನ್ನೂರಿನ ಆಂಜನೇಯ ದೇವಾಲಯದ ಎದುರು ಇರುವ ವೀರಗಲ್ಲು ಬಂಮ[ಚಾ]ಯನು ವೀರಮರಣ ಹೊಂದಿದ್ದನ್ನು ದಾಖಲಿಸಿದೆ. ಉತ್ತಂಗಿ ಉತ್ತರಕ್ಕಿರುವ ಹೊಲದಲ್ಲಿರುವ ನಿಶಿದಿ ಶಾಸನವು ಪುಟಿಯ ಬೊಂಮಗ ಮತ್ತು ಉಡನ ಮಗ ಮಯಸ ಮರಣ ಹೊಂದಿದ ವಿವರವನ್ನು ದಾಖಲಿಸಿದೆ. ಬಸರಕೋಡು ಕಲ್ಲೇಶ್ವರ ದೇವಾಲಯದ ಬಳಿ ನಿಲ್ಲಿಸಿರುವ ತ್ರುಟಿತ ವೀರಗಲ್ಲು ಶಕ ೧೨೭೫ರ ಬುಕ್ಕರಾಯನು ಆಳ್ವಿಕೆಯಲ್ಲಿ ಪ್ರಧಾನಿ ಕೇಚರಿದೇವನು ನಡೆಸಿದ ಕಾಳಗದಲ್ಲಿ ಚಂದಪ್ಪನು ಮರಣ ಹೊಂದಿದ ವಿಷಯವನ್ನು ತಿಳಿಸುತ್ತದೆ.[೨೧೪]

**೬.೪.೧೬. ಶಿಕ್ಷೆಯ ಉಲ್ಲೇಖಗಳು**

ಹಡಗಲಿ ತಾಲೂಕಿನ ವ್ಯಾಪ್ತಿಯಲ್ಲಿ ದೊರೆಯುವ ಶಾಸನಗಳು ವಿವಿಧ ವಿಷಯಗಳನ್ನು ತಿಳಿಸುವಂತೆ ಅಂದು ಅಸ್ತಿತ್ವದಲ್ಲಿದ್ದ ಶಿಕ್ಷೆಯ ವಿವರಗಳನ್ನು ದಾಖಲಿಸಿವೆ. ಇವುಗಳಿಂದ ಅಂದಿನ ಆಡಳಿತ ವ್ಯವಸ್ಥೆಯಲ್ಲಿ ದಂಡನೆಯ ಪಾತ್ರವೇನಾಗಿತ್ತು ಎಂಬುದನ್ನು ಅರಿಯಬಹುದಾಗಿದೆ. ಇಲ್ಲಿ ದೊರೆತ ಶಾಸನಗಳು ಶಿಕ್ಷೆಯ ವಿವರಗಳನ್ನು ಉಲ್ಲೇಖಿಸಿವೆ.

ಕುರುವತ್ತಿ ಗ್ರಾಮದ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ೧೩ನೇ ನಂಬರಿನ ಶಾಸನವು ಚಾಳುಕ್ಯ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಮತ್ತು ಗಂಡರಾದಿತ್ಯನ ಪೊಳಲ ಅಗ್ರಹಾರದ ಮಹಾಜನಗಳು ಮನ್ನೆಯ ಬೊಪ್ಪಯ್ಯನು ಹೊಳಲನ್ನು ಸೆರೆ ಹಿಡಿದು, ಗ್ರಾಮವನ್ನು ಸುಲಿಗೆ ಮಾಡಿ, ಬ್ರಾಹ್ಮಣರನ್ನು ಕೊಂದನೆಂದು ದೊರೆಗೆ ದೂರು ನೀಡಿದಾಗ; ದೊರೆಯು ಅವನನ್ನು ದಂಡಿಸಿ, ಅವನು ಮತ್ತು ಅವನ ಸಂತತಿಯವರು ಹೊಳಲಿನ ಮನ್ನೆಯವನ್ನು ಪಡೆಯದಂತೆ ಆಜ್ಞಾಪಿಸಿದನು.[೨೧೫] ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಮುಖ್ಯದ್ವಾರದ ಬಳಿ ಇರುವ ೨೩ನೇ ಶಾಸನವು ಶಕ ೯೬೮ರಲ್ಲಿ(ಕ್ರಿ.ಶ.೧-೨-೧೦೪೬) ಆ ಸ್ಥಳದ ಇನ್ನೂರ್ವರು ಆ ದೇವಾಲಯದಲ್ಲಿ ಬ್ರಹ್ಮಚಾರಿಯಾದ ತಪಸ್ವಿಯನ್ನು ನಿಲ್ಲಿಸಬೇಕೆಂದೂ ಅಲ್ಲದವನನ್ನು ಓಡಿಸಬೇಕೆಂದೂ ಹೇಳಿದೆ. ಅಲ್ಲದೆ ರಾಜನು ಉಪ್ಪು, ಸಕ್ಕರೆ ಮತ್ತು ಉಳಿದ ಮೂರು ರಸಗಳ ಮೇಲಿನ ಸುಂಕವನ್ನು

ಬಿಡುತ್ತಾನೆ. ಅಲ್ಲದೆ ಬಯ್ದವನಿಗೆ ಒಂದು ಪಣ ದಂಡ, ಹೊಡೆದವನಿಗೆ ಆರು ಪಣ ದಂಡ, ಇರಿದವನಿಗೆ ೧೨ ಪಣ, ಕತ್ತಿ ಹಿಡಿದು ಬೆದರಿಸಿದವನಿಗೆ ೮ ಪಣವನ್ನು ದಂಡವಾಗಿ ವಿಧಿಸಿದ ವಿವರ ಉಲ್ಲೇಖ ಈ ಶಾಸನದಲ್ಲಿದೆ.[೨೧೬]

**೬.೪.೧೭. ಯೋಗಕ್ಕೆ ಸಂಬಂಧಿಸಿದ ಉಲ್ಲೇಖ**

ಮಾಗಳ ಮತ್ತು ಅಲ್ಲಿಂದ ಸುಮಾರು ೨ ಕಿ.ಮೀ. ದೂರದಲ್ಲಿರುವ ರಂಗಾಪುರದ ಶಾಸನಗಳಲ್ಲಿ ೨೦೦ ಪ್ರಮುಖ ಮಹಾಜನರ ಉಲ್ಲೇಖವಿದೆ. ಇವರು ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಅನುಷ್ಠಾನ ಜಪ ಸಮಾಧಿಶೀಲ ಷಟ್ಕರ್ಮ ಕ್ರಿಯಾನಿರತರೂ ವೇದ ವೇದಾಂಗಗಳನ್ನು ಅನೇಕ ಶಾಸ್ತ್ರಗಳನ್ನು ಅರಿತವರೂ ಕಳಂಕರಹಿತರೂ ಆಗಿದ್ದರೆಂದು ತಿಳಿಸುತ್ತವೆ. ಊರೊಡೆಯರಾದ ಹರಿಹರ, ಗೋವಿಂದ, ಮಾಧವರೆಂಬ ಬ್ರಾಹ್ಮಣ ಸೈನ್ಯಾಧಿಕಾರಿ ಮತ್ತು ಮಂತ್ರಿಯ ಶೌರ್ಯ, ಪರಾಕ್ರಮಗಳನ್ನು ಉಲ್ಲೇಖಿಸಿವೆ. ಅಲ್ಪವ್ಯತ್ಯಾಸದೊಂದಿಗೆ ಈ ಶಾಸನೋಕ್ತಿಗಳು ಪತಂಜಲಿಯ ಯೋಗಸೂತ್ರದಲ್ಲಿ ಹೇಳಿರುವ ಸಾಲುಗಳಂತೆಯೇ ಇವೆ(ಶಾ.ಸಂ.೭೧, ಚಾಲುಕ್ಯ ತ್ರಿಭುವನಮಲ್ಲನ ಕಾಲ ಕ್ರಿ.ಶ.೧೧೧೬). ಮಾಗಳದ ವಿಷ್ಣುವರ್ಧನ ೨ನೇ ಬಲ್ಲಾಳನ ಕಾಲದ ಶಾಸನದಲ್ಲಿ ಪ್ರಾಣಾಯಾಮ, ಪ್ರತ್ಯಾಹಾರಗಳ ಬಗ್ಗೆ ಹೇಳುತ್ತದೆ.[೨೧೭]

**ಟಿಪ್ಪಣಿಗಳು**

೧. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಪು.೪.

೨. ಅದೇ, ಪು.೧೧.

೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೫.

೪. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೩.

೫. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೫.

೬. ರಹಮತ್ ತರೀಕೆರೆ, ಪೂರ್ವೋಕ್ತ, ಪು.೧೨.

೭. ಅದೇ, ಪು.೧೭.

೮. ಕ.ವಿ.ವಿ. ಶಾಸನ ಸಂಪುಟ–೧ ಹಡಗ–೨೫, ಕ್ರಿ.ಶ.೧೨೮೨.

೯. ಅದೇ, ಹಡಗ–೩೧, ಕಾಲ ನಮೂದಿಸಿಲ್ಲ.

೧೦. ಅದೇ, ಹಡಗ–೨೬, ಕ್ರಿ.ಶ.೧೫೧೮.

೧೧. ಅದೇ, ಹಡಗ–೩೩, ತ್ರುಟಿತ.

೧೨. ದೇವರಕೊಂಡಾರೆಡ್ಡಿ, ಹರತಿಸಿರಿ; ಸಪ್ತಮಾತೃಕೆಯರು, ಪು.೯೧–೯೨.

೧೩. ಕ.ವಿ.ವಿ. ಶಾಸನ ಸಂಪುಟ–೧ ಹಡಗ–೩೯, ಕ್ರಿ.ಶ.೧೧೭೮.

೧೪. ಅದೇ, ಹಡಗ–೩೭, ಕ್ರಿ.ಶ.೧೦೭೪.

೧೫. ಅದೇ, ಹಡಗ-೦೧, ಕ್ರಿ.ಶ. ೧೦೯೯.

೧೬. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೪೮.

೧೭. ಕರುಣ ಮಂಗಳವೇಡೆ, ಕರ್ನಾಟಕದ ದೇವಾಲಯಗಳಲ್ಲಿ ರಂಗಭೋಗ, ಪು.೯.

೧೮. ಕ.ವಿ.ವಿ. ಶಾಸನ ಸಂಪುಟ-೧ ಹಡಗ-೮೩, ಕ್ರಿ.ಶ.೧೦೯೦.

೧೯. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೫೫.

೨೦. ಭಾರತಿ ಅಳವಂಡಿಮಠ, ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ; ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೨೩, ಅಪ್ರಕಟಿತ.

೨೧. ಕ.ವಿ.ವಿ. ಶಾಸನ ಸಂಪುಟ-೧ ಹಡಗ-೮೪, ಕ್ರಿ.ಶ.೧೦೭೧.

೨೨. ಅದೇ, ಹಡಗ-೨೭, ಕ್ರಿ.ಶ.೧೪೧೨.

೨೩. ಅದೇ, ಹಡಗ-೩೧, ಕಾಲ ನಮೂದಿಸಿಲ್ಲ.

೨೪. ಅದೇ, ಹಡಗ-೮೪, ಕ್ರಿ.ಶ.೧೦೭೧.

೨೫. ಅದೇ, ಹಡಗ-೮೩, ಕ್ರಿ.ಶ.೧೦೯೦.

೨೬. ಅದೇ, ಹಡಗ-೮೧, ಕ್ರಿ.ಶ.೧೧೪೮.

೨೭. ಅದೇ, ಹಡಗ-೦೧, ಕ್ರಿ.ಶ.೧೦೯೯.

೨೮. ಅದೇ, ಹರಪ-೧೦೨, ಕ್ರಿ.ಶ.೧೧೦೩.

೨೯. ಅದೇ, ಹಡಗ-೦೧, ಕ್ರಿ.ಶ.೧೦೯೯.

೩೦. ಅದೇ, ಹಡಗ-೦೭, ಕ್ರಿ.ಶ.೧೦೮೭.

೩೧. ಅದೇ, ಹಡಗ-೭೧, ಕ್ರಿ.ಶ.೧೧೧೬.

೩೨. ಕುಂಬಾಸ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಪು.೧೧೪.

೩೩. ಕ.ವಿ.ವಿ.ಶಾಸನ ಸಂಪುಟ-೧, ಹಡಗ-೯೫, ಕಾಲದ ಉಲ್ಲೇಖವಿಲ್ಲ.

೩೪. ಅದೇ, ಹಗರಿ-೪೦, ಕ್ರಿ.ಶ.೧೫೪೪.

೩೫. ಗೋಪಾಲರಾವ್ ಎಚ್.ಎಸ್., ಕಲ್ಯಾಣ ಚಾಲುಕ್ಯರ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಪು.೧೬೭.

೩೬. ಅದೇ, ಪು.೧೫೯.

೩೭. ಬ.ಜಿ.ಶಾಸನಗಳು, ಚನ್ನಬಸಪ್ಪ ಎಸ್.ಪಾಟೀಲ್, ಶಾ.ಸಂಖ್ಯೆ-೧೯೦.

೩೮. ಅದೇ, ಶಾ.ಸಂಖ್ಯೆ-೧೮೦.

೩೯. ಗೋಪಾಲರಾವ್ ಎಚ್.ಎಸ್., ಪೂರ್ವೋಕ್ತ, ಪು-೧೬೩.

೪೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೧೦.

೪೧. ಕ.ವಿ.ವಿ.ಶಾ.ಸಂಪುಟ-೧, ಹಡಗ-೭೦, ಕ್ರಿ.ಶ.೧೦೫೮.

೪೨. ಬ.ಜಿ.ಶ.ಶಾ.ಸಂಖ್ಯೆ–೧೮೯.

೪೩. ಕ.ವಿ.ವಿ.ಶಾ.ಸಂಪುಟ–೧, ಹಡಗ–೧೧೧, ಕಾಲದ ಉಲ್ಲೇಖವಿಲ್ಲ.

೪೪. ಅದೇ, ಹಡಗ–೧೧೨, ಕ್ರಿ.ಶ.೧೧೯೪.

೪೫. ಅದೇ, ಹಗರಿ–೧೭, ಕ್ರಿ.ಶ.೯೯೨.

೪೬. ಅದೇ, ಹಡಗ–೨೩, ಕ್ರಿ.ಶ.೧೦೪೬.

೪೭. ಅದೇ, ಹಡಗ–೫೨, ಕ್ರಿ.ಶ.೧೦೫೭.

೪೮. ಅದೇ, ಹಡಗ–೬೨, ಕ್ರಿ.ಶ.೧೨೯೭.

೪೯. ಅದೇ, ಹಡಗ–೬೭, ಕ್ರಿ.ಶ.೧೨೦೯.

೫೦. ಅದೇ, ಹಡಗ–೮೩, ಕ್ರಿ.ಶ.೧೦೯೦.

೫೧. ಅದೇ, ಹಡಗ–೮೬, ಕ್ರಿ.ಶ.೧೦೬೨.

೫೨. ಅದೇ, ಹಡಗ–೧೦೩, ಕ್ರಿ.ಶ.೧೧೨೧.

೫೩. ಅದೇ, ಹಡಗ–೫೭, ಕ್ರಿ.ಶ.೩ನೇ ಶತಮಾನ.

೫೪. ಅದೇ, ಹಡಗ–೦೧, ಕ್ರಿ.ಶ.೧೦೯೯.

೫೫. ಅದೇ, ಹಡಗ–೦೩, ಕ್ರಿ.ಶ.೧೨೦೩.

೫೬. ಅದೇ, ಹಡಗ–೪೨, ಕ್ರಿ.ಶ.೧೨೬೩.

೫೭. ಅದೇ, ಹಡಗ–೧೩, ಕ್ರಿ.ಶ.೧೧೦೪.

೫೮. ಅದೇ, ಹಡಗ–೧೦೭, ಕ್ರಿ.ಶ.೧೧೫೦.

೫೯. ಅದೇ, ಹಡಗ–೨೩, ಕ್ರಿ.ಶ.೧೦೪೬.

೬೦. ಅದೇ, ಹಡಗ–೭, ಕ್ರಿ.ಶ.೧೦೮೭.

೬೧. ಅದೇ, ಹಡಗ–೩೫, ಕ್ರಿ.ಶ.೧೧೯೪.

೬೨. ಅದೇ, ಹಡಗ–೩೭, ಕ್ರಿ.ಶ.೧೦೭೪.

೬೩. ಅದೇ, ಹಡಗ–೪೦, ಕಾಲದ ಉಲ್ಲೇಖವಿಲ್ಲ.

೬೪. ಅದೇ, ಹಡಗ–೪೨, ಕ್ರಿ.ಶ.೧೨೬೩.

೬೫. ಅದೇ, ಹಡಗ–೫೨, ಕ್ರಿ.ಶ.೧೧೦೭.

೬೬. ಅದೇ, ಹಡಗ–೫೩, ಕ್ರಿ.ಶ.೧೨೧೨.

೬೭. ಅದೇ, ಹಡಗ–೫೬, ಕ್ರಿ.ಶ.೮೫೧.

೬೮. ಅದೇ, ಹಡಗ–೬೦, ಕ್ರಿ.ಶ.೧೦೩೬.

೬೯. ಅದೇ, ಹಡಗ–೬೧, ಕ್ರಿ.ಶ.೧೧೮೩.

೭೦. ಅದೇ, ಹಡಗ–೬೨, ಕ್ರಿ.ಶ.೧೨೯೭.

೭೧. ಅದೇ, ಹಡಗ–೬೪, ಕ್ರಿ.ಶ.೧೫೪೭.

೭೨. ಅದೇ, ಹಡಗ–೬೫, ಕ್ರಿ.ಶ.೧೨೧೫.

೭೩. ಅದೇ, ಹಡಗ–೬೭, ಕ್ರಿ.ಶ.೧೨೦೯.

೭೪. ಅದೇ, ಹಡಗ–೭೧, ಕ್ರಿ.ಶ.೧೧೧೬.

೭೫. ಅದೇ, ಹಡಗ–೮೦, ಕ್ರಿ.ಶ.೧೫೫೫.

೭೬. ಅದೇ, ಹಡಗ–೮೧, ಕ್ರಿ.ಶ.೧೧೪೮.

೭೭. ಅದೇ, ಹಡಗ–೮೩, ಕ್ರಿ.ಶ.೧೧೯೦.

೭೮. ಅದೇ, ಹಡಗ–೮೨, ಕ್ರಿ.ಶ.೧೨೬೨.

೭೯. ಅದೇ, ಹಡಗ–೮೪, ಕ್ರಿ.ಶ.೧೦೭೧.

೮೦. ಅದೇ, ಹಡಗ–೮೬, ಕ್ರಿ.ಶ.೧೦೬೨.

೮೧. ಅದೇ, ಹಡಗ–೯೭, ಕ್ರಿ.ಶ.೧೨೨೬.

೮೨. ಅದೇ, ಹಡಗ–೯೯, ಕ್ರಿ.ಶ.೧೨೧೮.

೮೩. ಅದೇ, ಹಡಗ–೧೦೧, ಕ್ರಿ.ಶ.೧೧೧೦.

೮೪. ಅದೇ, ಹಡಗ–೧೦೩, ಕ್ರಿ.ಶ.೧೧೨೧.

೮೫. ಅದೇ, ಹಡಗ–೧೦೬, ಕ್ರಿ.ಶ.೧೫೧೬.

೮೬. ಅದೇ, ಹಡಗ–೧, ಕ್ರಿ.ಶ.೧೨೯೯.

೮೭. ಅದೇ, ಹಡಗ–೨, ಕಾಲದ ಉಲ್ಲೇಖವಿಲ್ಲ.

೮೮. ಅದೇ, ಹಡಗ–೬, ಕ್ರಿ.ಶ.೧೨೦೬–೦೭.

೮೯. ಅದೇ, ಹಡಗ–೪೨, ಕ್ರಿ.ಶ.೧೨೬೩.

೯೦. ಅದೇ, ಹಡಗ–೧೦೭, ಕ್ರಿ.ಶ.೧೧೫೦.

೯೧. ಅದೇ, ಹಡಗ–೯೫, ಕಾಲದ ಉಲ್ಲೇಖವಿಲ್ಲ.

೯೨. ಅದೇ, ಹಡಗ–೨೩, ಕ್ರಿ.ಶ.೧೦೪೬.

೯೩. ಅದೇ, ಹಡಗ–೩೩, ಕಾಲದ ಉಲ್ಲೇಖವಿಲ್ಲ.

೯೪. ಅದೇ, ಹಡಗ–೩೪, ಕಾಲದ ಉಲ್ಲೇಖವಿಲ್ಲ.

೯೫. ಅದೇ, ಹಡಗ–೩೫, ಕ್ರಿ.ಶ.೧೧೯೪.

೯೬. ಅದೇ, ಹಡಗ–೩೭, ಕ್ರಿ.ಶ.೧೦೭೪.

೯೭. ಅದೇ, ಹಡಗ–೪೮, ಕ್ರಿ.ಶ.೧೧ನೇ ಶತಮಾನ.

೯೮. ಅದೇ, ಹಡಗ-೫೨, ಕ್ರಿ.ಶ.೧೦೫೭.

೯೯. ಅದೇ, ಹಡಗ-೫೩, ಕ್ರಿ.ಶ.೧೨೧೨.

೧೦೦. ಅದೇ, ಹಡಗ-೫೪, ಕಾಲದ ಉಲ್ಲೇಖವಿಲ್ಲ.

೧೦೧. ಅದೇ, ಹಡಗ-೫೬, ಕ್ರಿ.ಶ.೮೫೧.

೧೦೨. ಅದೇ, ಹಡಗ-೫೭, ಕಾಲದ ಉಲ್ಲೇಖವಿಲ್ಲ.

೧೦೩. ಅದೇ, ಹಡಗ-೫೮, ಕಾಲದ ಉಲ್ಲೇಖವಿಲ್ಲ.

೧೦೪. ಅದೇ, ಹಡಗ-೬೦, ಕ್ರಿ.ಶ.೧೦೩೬.

೧೦೫. ಅದೇ, ಹಡಗ-೬೧, ಕ್ರಿ.ಶ.೧೧೮೩.

೧೦೬. ಅದೇ, ಹಡಗ-೬೨, ಕ್ರಿ.ಶ.೧೨೯೭.

೧೦೭. ಅದೇ, ಹಡಗ-೬೩, ಕ್ರಿ.ಶ.೧೩೭೨.

೧೦೮. ಅದೇ, ಹಡಗ-೬೪, ಕ್ರಿ.ಶ.೧೫೪೭.

೧೦೯. ಅದೇ, ಹಡಗ-೬೫, ಕ್ರಿ.ಶ.೧೨೧೫.

೧೧೦. ಅದೇ, ಹಡಗ-೬೭, ಕ್ರಿ.ಶ.೧೨೦೭.

೧೧೧. ಅದೇ, ಹಡಗ-೭೧, ಕ್ರಿ.ಶ.೧೧೧೬.

೧೧೨. ಅದೇ, ಹಡಗ-೮೦, ಕ್ರಿ.ಶ.೧೫೫೫.

೧೧೩. ಅದೇ, ಹಡಗ-೮೧, ಕ್ರಿ.ಶ.೧೧೪೮.

೧೧೪. ಅದೇ, ಹಡಗ-೮೩, ಕ್ರಿ.ಶ.೧೦೯೦.

೧೧೫. ಅದೇ, ಹಡಗ-೮೨, ಕ್ರಿ.ಶ.೧೨೬೨.

೧೧೬. ಅದೇ, ಹಡಗ-೮೪, ಕ್ರಿ.ಶ.೧೦೭೧.

೧೧೭. ಅದೇ, ಹಡಗ-೮೬, ಕ್ರಿ.ಶ.೧೦೬೨.

೧೧೮. ಅದೇ, ಹಡಗ-೯೩, ಕ್ರಿ.ಶ.೧೦೯೭.

೧೧೯. ಅದೇ, ಹಡಗ-೯೭, ಕ್ರಿ.ಶ.೧೨೨೬.

೧೨೦. ಅದೇ, ಹಡಗ-೯೯, ಕ್ರಿ.ಶ.೧೨೧೮.

೧೨೧. ಅದೇ, ಹಡಗ-೧೦೦, ಹೊಯ್ಸಳರ ಕಾಲ.

೧೨೨. ಅದೇ, ಹಡಗ-೧೦೧, ಕ್ರಿ.ಶ.೧೧೧೦.

೧೨೩. ಅದೇ, ಹಡಗ-೧೦೬, ಕ್ರಿ.ಶ.೧೫೧೬.

೧೨೪. ಅದೇ, ಹಡಗ-೪೬, ಕಾಲದ ಉಲ್ಲೇಖವಿಲ್ಲ.

೧೨೫. ಅದೇ, ಹಡಗ-೮೬, ಕ್ರಿ.ಶ.೧೦೬೨.

೧೨೬. ಅದೇ, ಹಡಗ–೮೩, ಕ್ರಿ.ಶ.೧೦೯೦.

೧೨೭. ಅದೇ, ಹಡಗ–೮೪, ಕ್ರಿ.ಶ.೧೦೭೧.

೧೨೮. ಅದೇ, ಹಡಗ–೧೦೬, ಕ್ರಿ.ಶ.೧೫೧೬.

೧೨೯. ಅದೇ, ಹಡಗ–೫೨, ಕ್ರಿ.ಶ.೧೦೫೭.

೧೩೦. ಅದೇ, ಹಡಗ–೫೩, ಕ್ರಿ.ಶ.೧೨೧೨.

೧೩೧. ಅದೇ, ಹಡಗ–೬೭, ಕ್ರಿ.ಶ.೧೨೦೯.

೧೩೨. ಅದೇ, ಹಡಗ–೮೧, ಕ್ರಿ.ಶ.೧೧೪೮.

೧೩೩. ಅದೇ, ಹಡಗ–೮೩, ಕ್ರಿ.ಶ.೧೦೯೦.

೧೩೪. ಅದೇ, ಹಡಗ–೧೦೨, ಚಾಲುಕ್ಯರ ಕಾಲ.

೧೩೫. ಅದೇ, ಹಡಗ–೧, ಕ್ರಿ.ಶ.೧೦೯೯.

೧೩೬. ಅದೇ, ಹಡಗ–೨, ತ್ರುಟಿತ.

೧೩೭. ಅದೇ, ಹಡಗ–೪೨, ಕ್ರಿ.ಶ.೧೨೬೩.

೧೩೮. ಅದೇ, ಹಡಗ–೨೩, ಕ್ರಿ.ಶ.೧೦೪೬.

೧೩೯. ಅದೇ, ಹಡಗ–೨೯, ಶಕ ೧೩೫೮.

೧೪೦. ಅದೇ, ಹಡಗ–೩೩, ಕಾಲದ ನಿರ್ದೇಶನವಿಲ್ಲ.

೧೪೧. ಅದೇ, ಹಡಗ–೩೪, ಕಾಲದ ಉಲ್ಲೇಖವಿಲ್ಲ.

೧೪೨. ಅದೇ, ಹಡಗ–೩೭, ಕ್ರಿ.ಶ.೧೦೭೪.

೧೪೩. ಅದೇ, ಹಡಗ–೪೨, ಕ್ರಿ.ಶ.೧೨೬೩.

೧೪೪. ಅದೇ, ಹಡಗ–೫೨, ಕ್ರಿ.ಶ.೧೦೫೭.

೧೪೫. ಅದೇ, ಹಡಗ–೫೩, ಕ್ರಿ.ಶ.೧೨೧೨.

೧೪೬. ಅದೇ, ಹಡಗ–೫೫, ಕ್ರಿ.ಶ.೧೦೬೦.

೧೪೭. ಅದೇ, ಹಡಗ–೫೪, ಕಾಲದ ಉಲ್ಲೇಖವಿಲ್ಲ.

೧೪೮. ಅದೇ, ಹಡಗ–೬೦, ಕ್ರಿ.ಶ.೧೦೩೬.

೧೪೯. ಅದೇ, ಹಡಗ–೬೧, ಕ್ರಿ.ಶ.೧೧೮೩.

೧೫೦. ಅದೇ, ಹಡಗ–೬೨, ಕ್ರಿ.ಶ.೧೨೯೭.

೧೫೧. ಅದೇ, ಹಡಗ–೬೪, ಕ್ರಿ.ಶ.೧೫೪೭.

೧೫೨. ಅದೇ, ಹಡಗ–೬೭, ಕ್ರಿ.ಶ.೧೨೦೯.

೧೫೩. ಅದೇ, ಹಡಗ–೭೧, ಕ್ರಿ.ಶ.೧೧೧೬.

೧೫೪. ಅದೇ, ಹಡಗ–೮೦, ಕ್ರಿ.ಶ.೧೫೫೫.

೧೫೫. ಅದೇ, ಹಡಗ-೮೧, ಕ್ರಿ.ಶ.೧೧೪೮.

೧೫೬. ಅದೇ, ಹಡಗ-೮೩, ಕ್ರಿ.ಶ.೧೧೯೦.

೧೫೭. ಅದೇ, ಹಡಗ-೮೪, ಕ್ರಿ.ಶ.೧೦೭೧.

೧೫೮. ಅದೇ, ಹಡಗ-೮೬, ಕ್ರಿ.ಶ.೧೦೬೨.

೧೫೯. ಅದೇ, ಹಡಗ-೯೩, ಕ್ರಿ.ಶ.೧೧೯೭.

೧೬೦. ಅದೇ, ಹಡಗ-೯೭, ಕ್ರಿ.ಶ.೧೨೨೬.

೧೬೧. ಅದೇ, ಹಡಗ-೯೯, ಕ್ರಿ.ಶ.೧೨೧೮.

೧೬೨. ಅದೇ, ಹಡಗ-೧೦೦, ಹೊಯ್ಸಳರ ಕಾಲ.

೧೬೩. ಅದೇ, ಹಡಗ-೧೦೧, ಕ್ರಿ.ಶ.೧೧೧೦.

೧೬೪. ಅದೇ, ಹಡಗ-೧೦೩, ಕ್ರಿ.ಶ.೧೧೨೧.

೧೬೫. ಅದೇ, ಹಡಗ-೧೦೬, ಕ್ರಿ.ಶ.೧೫೧೬.

೧೬೬. ಅದೇ, ಹಡಗ-೪೨, ಕ್ರಿ.ಶ.೧೨೬೩.

೧೬೭. ಅದೇ, ಹಡಗ-೧೩, ಕ್ರಿ.ಶ.೧೧೦೪.

೧೬೮. ಅದೇ, ಹಡಗ-೧೦೭, ಕ್ರಿ.ಶ.೧೧೫೦.

೧೬೯. ಅದೇ, ಹಡಗ-೯೫, ಕಾಲದ ಉಲ್ಲೇಖವಿಲ್ಲ.

೧೭೦. ಅದೇ, ಹಡಗ-೨೩, ಕ್ರಿ.ಶ.೧೦೪೬.

೧೭೧. ಅದೇ, ಹಡಗ-೪೨, ಕ್ರಿ.ಶ.೧೨೬೩.

೧೭೨. ಅದೇ, ಹಡಗ-೫೨, ಕ್ರಿ.ಶ.೧೦೫೭.

೧೭೩. ಅದೇ, ಹಡಗ-೫೩, ಕ್ರಿ.ಶ.೧೨೧೨.

೧೭೪. ಅದೇ, ಹಡಗ-೫೪, ತ್ರುಟಿತ.

೧೭೫. ಅದೇ, ಹಡಗ-೫೬, ಕ್ರಿ.ಶ.೮೫೧.

೧೭೬. ಅದೇ, ಹಡಗ-೫೮, ಕಾಲದ ಉಲ್ಲೇಖವಿಲ್ಲ.

೧೭೭. ಅದೇ, ಹಡಗ-೬೦, ಕ್ರಿ.ಶ.೧೦೩೬.

೧೭೮. ಅದೇ, ಹಡಗ-೬೪, ಕ್ರಿ.ಶ.೧೫೪೭.

೧೭೯. ಅದೇ, ಹಡಗ-೬೫, ಕ್ರಿ.ಶ.೧೨೧೫.

೧೮೦. ಅದೇ, ಹಡಗ-೬೭, ಕ್ರಿ.ಶ.೧೨೦೯.

೧೮೧. ಅದೇ, ಹಡಗ-೭೧, ಕ್ರಿ.ಶ.೧೧೧೬.

೧೮೨. ಅದೇ, ಹಡಗ-೮೦, ಕ್ರಿ.ಶ.೧೫೫೫.

೧೮೩. ಅದೇ, ಹಡಗ–೮೩, ಕ್ರಿ.ಶ.೧೦೯೦.

೧೮೪. ಅದೇ, ಹಡಗ–೮೪, ಕ್ರಿ.ಶ.೧೦೭೧.

೧೮೫. ಅದೇ, ಹಡಗ–೮೬, ಕ್ರಿ.ಶ.೧೦೬೨.

೧೮೬. ಅದೇ, ಹಡಗ–೧೦೩, ಕ್ರಿ.ಶ.೧೧೨೧.

೧೮೭. ಅದೇ, ಹಡಗ–೧೦೬, ಕ್ರಿ.ಶ.೧೫೧೬.

೧೮೮. ಅದೇ, ಹಡಗ–೫೭, ಕ್ರಿ.ಶ.೩ನೇ ಶತಮಾನ.

೧೮೯. ಅದೇ, ಹಡಗ–೧, ಕ್ರಿ.ಶ.೧೦೯೯.

೧೯೦. ಅದೇ, ಹಡಗ–೨೩, ಕ್ರಿ.ಶ.೧೦೪೬.

೧೯೧. ಅದೇ, ಹಡಗ–೩೯, ಕ್ರಿ.ಶ.೧೧೭೮.

೧೯೨. ಅದೇ, ಹಡಗ–೪೧, ಕ್ರಿ.ಶ.೧೨ನೇ ಶತಮಾನ.

೧೯೩. ಅದೇ, ಹಡಗ–೮೧, ಕ್ರಿ.ಶ.೧೧೪೮.

೧೯೪. ಅದೇ, ಹಡಗ–೮೨, ಕ್ರಿ.ಶ.೧೨೬೨.

೧೯೫. ಅದೇ, ಹಡಗ–೧೦, ಕ್ರಿ.ಶ.೧೨ನೇ ಶತಮಾನ.

೧೯೬. ಅದೇ, ಹಡಗ–೫೭, ಕ್ರಿ.ಶ.೩ನೇ ಶತಮಾನ.

೧೯೭. ಅದೇ, ಹಡಗ–೮೧, ಕ್ರಿ.ಶ.೧೧೪೮.

೧೯೮. ಅದೇ, ಹಡಗ–೮೩, ಕ್ರಿ.ಶ.೧೦೯೦.

೧೯೯. ಅದೇ, ಹಡಗ–೧೦, ಕ್ರಿ.ಶ.೧೨ನೇ ಶತಮಾನ.

೨೦೦. ಅದೇ, ಹಡಗ–೫೩, ಕ್ರಿ.ಶ.೧೨೧೨.

೨೦೧. ಅದೇ, ಹಡಗ–೧೦೧, ಕ್ರಿ.ಶ.೧೧೧೦.

೨೦೨. ಅದೇ, ಹಡಗ–೧, ಕ್ರಿ.ಶ.೧೦೯೯.

೨೦೩. ಅದೇ, ಹಡಗ–೩, ಕ್ರಿ.ಶ.೧೨೦೩.

೨೦೪. ಅದೇ, ಹಡಗ–೨೩, ಕ್ರಿ.ಶ.೧೦೪೬.

೨೦೫. ಅದೇ, ಹಡಗ–೪೦, ಕಾಲದ ಉಲ್ಲೇಖವಿಲ್ಲ.

೨೦೬. ಅದೇ, ಹಡಗ–೮೫, ಕ್ರಿ.ಶ.೧೧೧೦.

೨೦೭. ಅದೇ, ಹಡಗ–೮೬, ಕ್ರಿ.ಶ.೧೦೬೨.

೨೦೮. ಅದೇ, ಹಡಗ–೯೭, ಕ್ರಿ.ಶ.೧೨೨೬.

೨೦೯. ಅದೇ, ಹಡಗ–೧೯, ಕಾಲದ ಉಲ್ಲೇಖವಿಲ್ಲ.

೨೧೦. ಅದೇ, ಹಡಗ–೩೭, ಕ್ರಿ.ಶ.೧೦೭೪.

೨೧೧. ಅದೇ, ಹಡಗ–೬೨, ಕ್ರಿ.ಶ.೧೨೯೭.

೨೧೨. ಅದೇ, ಹಡಗ–೬೫, ಕ್ರಿ.ಶ.೧೨೨೧೫.

೨೧೩. ಅದೇ, ಹಡಗರ್–೯೯, ಕ್ರಿ.ಶ.೧೨೨೧೮.

೨೧೪. ಅದೇ, ಹಡಗ–೬೩, ಕ್ರಿ.ಶ.೧೩೭೨.

೨೧೫. ಅದೇ, ಹಡಗ–೧೩, ಕ್ರಿ.ಶ.೧೧೧೦೪.

೨೧೬. ಅದೇ, ಹಡಗ–೨೩, ಕ್ರಿ.ಶ.೧೦೪೬.

೨೧೭. ಇ.ದ.ಸಂ.೯, ಹರಿಹರ ಶ್ರೀನಿವಾಸರಾವ್, ಪು.೧೩೦.

□□

ಅಧ್ಯಾಯ : ಏಳು

# ಸಮಾರೋಪ

**'ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ'** ಎಂಬ ಶೀರ್ಷಿಕೆಯ ಅಧ್ಯಯನವು ಹಡಗಲಿ ತಾಲೂಕಿನಲ್ಲಿ ದೊರೆತಿರುವ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನವಾಗಿದೆ.

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು ಕರ್ನಾಟಕದ ಇನ್ನಿತರ ತಾಲೂಕುಗಳಂತೆ ಪ್ರಾಚೀನ ಕಾಲದ ಇತಿಹಾಸವನ್ನು ಹೊಂದಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಪ್ರದೇಶವಾಗಿದ್ದ ಹೂವಿನಹಡಗಲಿ ತಾಲೂಕು ಯಾವ ರೀತಿಯಲ್ಲಿ ಬೆಳವಣಿಗೆ ಹೊಂದಿದೆ ಎಂಬುದನ್ನು ದೇವಾಲಯ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ಪರಿಶೀಲಿಸುವ ಕೆಲಸ ಪ್ರಸ್ತುತ ಅಧ್ಯಯನ ಮಾಡಿದೆ. ದೇವಾಲಯಗಳು ಆಯಾ ಕಾಲದ ಜನರ, ರಾಜರ ಸಾಹಸ ಜೀವನವನ್ನು, ಪ್ರವೃತ್ತಿಯನ್ನು, ಧಾರ್ಮಿಕ ಮನೋಭಾವವನ್ನು ಹುದುಗಿಸಿಟ್ಟುಕೊಂಡಂತೆ, ಶಾಸನಗಳು ಆಯಾ ಕಾಲದ ಎಲ್ಲ ಕ್ಷೇತ್ರಗಳ ವಿಷಯಗಳನ್ನು ಗುರುತಿಸುವಲ್ಲಿ ನಮಗೆ ಸಹಕಾರಿಯಾಗಿವೆ. ಈ ಹಿನ್ನೆಲೆಯಲ್ಲಿ ಹೂವಿನಹಡಗಲಿ ತಾಲೂಕಿನಲ್ಲಿ ಕಂಡುಬರುವ ದೇವಾಲಯಗಳು ಮತ್ತು ಶಾಸನಗಳು ಇತಿಹಾಸದ ಕುರುಹುಗಳೇ ಆಗಿದ್ದು ಶತಶತಮಾನಗಳ ಚರಿತ್ರೆಯನ್ನು ಕಟ್ಟಿಕೊಡುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು.

ಒಂದು ಸಮಾಜದ ಸಂಪೂರ್ಣ ಚಿತ್ರಣ ನಮಗೆ ದೊರೆಯಬೇಕಾದರೆ, ಆ ಸಮಾಜದ ಆಚಾರ-ವಿಚಾರ, ಧಾರ್ಮಿಕ ನಂಬಿಕೆಗಳು, ಸಾಮಾಜಿಕ ಹಾಗೂ ಸಾಂಸ್ಕೃತಿಕ ರೀತಿಗಳು, ಜೀವನ ವಿಧಾನ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ನೋಡಬೇಕಾಗುತ್ತದೆ. ದೇವಾಲಯದ ವಾಸ್ತುಶೈಲಿ ಮತ್ತು ಶಿಲ್ಪಗಳನ್ನು ಅಧ್ಯಯನ ಮಾಡುವುದರ ಮೂಲಕ ಅಂದಿನ ಕಾಲದಲ್ಲಿ ಜನರ ಧಾರ್ಮಿಕ ಮನೋಭಾವವನ್ನು ತಿಳಿಯಬಹುದು. ಈ ದೇವಾಲಯಗಳು ಜನರಿಗೆ ಹೇಗೆ, ಯಾವ ಯಾವ ವಿಧದಲ್ಲಿ ಉಪಯೋಗಕ್ಕೆ ಬರುತ್ತಿದ್ದವು ಎಂಬುದನ್ನು ಚರ್ಚಿಸಲಾಗಿದೆ. ಅಂದಿನ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಪ್ರಸ್ತುತ ಅಧ್ಯಯನದಲ್ಲಿ ತೆರೆದಿಡಲಾಗಿದೆ.

ಪ್ರಾಗೈತಿಹಾಸಿಕ ಕಾಲದಿಂದಲೂ ಈ ಭಾಗದಲ್ಲಿ ಪ್ರಾಚೀನ ಜನವಸತಿ ಇದ್ದ ಬಗ್ಗೆ ದಾಖಲೆಗಳು ದೊರೆತಿವೆ. ಹಡಗಲಿಯಲ್ಲಿ ಮುಖ್ಯವಾಗಿ ಆದಿಹಳೆಯ ಶಿಲಾಯುಗ, ನೂತನ ಶಿಲಾಯುಗ, ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗದ ನೆಲೆಗಳು ಇದ್ದವು. ಇದು ಭೌಗೋಳಿಕವಾಗಿ

ಬಳ್ಳಾರಿ ಜಿಲ್ಲೆಯ ಒಂದು ಭಾಗವಾಗಿದ್ದು, ಹಗರಿಬೊಮ್ಮನಹಳ್ಳಿಗೆ ಹೊಂದಿಕೊಂಡಂತೆ ಇದೆ. ಇದು ಒಂದು ಪ್ರಾಗೈತಿಹಾಸಿಕ ನೆಲೆಯಾಗಿ ಹೊರಹೊಮ್ಮಿರುವುದು ಅಧ್ಯಯನದಿಂದ ತಿಳಿದುಬಂದಿದೆ.

ಹಡಗಲಿಗೆ ಸೀಮಿತವಾದಂತೆ ಐತಿಹಾಸಿಕ ಚರಿತ್ರೆಯನ್ನು ಗಮನಿಸಿದರೆ ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದಿಂದ ಆರಂಭವಾಗುತ್ತದೆ ಎಂಬುದು ತಿಳಿದುಬಂದಿದೆ. ಇದರ ನಂತರ ಈ ಭಾಗದಲ್ಲಿ ಹೊಯ್ಸಳರು, ವಿಜಯನಗರದ ಅರಸರು, ಯಾದವರು ಆಳ್ವಿಕೆಯನ್ನು ನಡೆಸಿದರು. ಶಾತವಾಹನರ ಕಾಲಕ್ಕೆ ಸೇರಿತ್ತು ಎಂಬಂತಹ ಶಾಸನ ಇಲ್ಲಿ ದೊರೆತಿದೆ. ಆದರೆ ಇದರಲ್ಲಿ 'ಸಾತವಾಹನಿರಠ' ಎಂಬ ಉಲ್ಲೇಖ ಬಂದಿರುವುದರಿಂದಾಗಿ ಇದು ಶಾತವಾಹನರ ಕಾಲಕ್ಕೆ ಸೇರಿದ್ದಿರಬಹುದು ಎಂದು ಊಹಿಸಬಹುದು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹಡಗಲಿಯ ಪರಿಸರ ಅತ್ಯಂತ ಸುಸ್ಥಿತಿಯಲ್ಲಿತ್ತು. ಈ ಅವಧಿಯಲ್ಲಿ ನಿರ್ಮಾಣವಾದ ದೇವಾಲಯಗಳು ಮತ್ತು ದೊರೆತ ಶಾಸನಗಳು ಬೇರಾವ ಕಾಲಘಟ್ಟದಲ್ಲಿಯೂ ದೊರೆತಿಲ್ಲ. ಇವರ ಕಾಲದಲ್ಲಿ ಅನೇಕ ಸಾಮಂತ ಅರಸರು ತಮ್ಮ ಚೌಕಟ್ಟಿನಲ್ಲಿಯೇ ಅದ್ಭುತವಾದ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅನೇಕ ಪಾಳೆಯಗಾರರೂ ಸಹ ಇಲ್ಲಿನ ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಇಲ್ಲಿ ದೊರೆತಿರುವ ಶಾಸನಗಳಲ್ಲಿ ಹೆಚ್ಚಿನವು ದಾನಶಾಸನಗಳೇ ಆಗಿರುವುದರಿಂದ ಜನರ ಸಾಮಾಜಿಕ ಜೀವನ ತುಂಬಾ ಚೆನ್ನಾಗಿತ್ತು. ಒಟ್ಟಾರೆಯಾಗಿ ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಹಲವಾರು ಜನಪರ ಕಾರ್ಯಗಳು ನಡೆದಿವೆ. ಹಾಗೆಯೇ ಮುಂದುವರೆದು ಹೊಯ್ಸಳರ ಕಾಲ ಮತ್ತು ವಿಜಯನಗರದ ಕಾಲದಲ್ಲಿಯೂ ಜನರು ಸುಭಿಕ್ಷೆಯಿಂದಿದ್ದರು.

ಇಲ್ಲಿನ ದೇವಾಲಯಗಳಲ್ಲಿ ಹೆಚ್ಚಿನವು ಚಾಲುಕ್ಯ ಶೈಲಿಯಲ್ಲಿಯೇ ನಿರ್ಮಾಣವಾಗಿವೆ. ಇಂದಿಗೂ ಕೂಡ ಹಲವಾರು ದೇವಾಲಯಗಳು ಪ್ರಾಚ್ಯವಸ್ತು ಇಲಾಖೆಯ ಅಡಿಯಲ್ಲಿ ಬಂದು ತಮ್ಮ ಇರುವಿಕೆಯನ್ನು ಉಳಿಸಿಕೊಂಡಿವೆ. ಹಾಗೆಯೇ ಕೆಲವು ದೇವಾಲಯಗಳು ವಿನಾಶದ ಅಂಚಿನಲ್ಲಿವೆ. ಅವುಗಳ ರಕ್ಷಣೆ ಕಡೆ ಯಾರೂ ಗಮನಹರಿಸುತ್ತಿಲ್ಲ. ಆದರೂ ಅಂದಿನ ಕಾಲದ ವಾಸ್ತುಶಿಲ್ಪ ರಚನೆಗೆ ಮೂಕಪ್ರತೀಕವಾಗಿವೆ. ಈ ಎಲ್ಲಾ ಅಂಶಗಳನ್ನು ವಿವರವಾಗಿ ಸಂದರ್ಭೋಚಿತವಾಗಿ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಹಡಗಲಿ ತಾಲೂಕು ತನ್ನದೇ ಆದ ಸ್ವತಂತ್ರ ಇತಿಹಾಸವನ್ನು ಹೊಂದಿದ್ದು, ಸ್ವತಂತ್ರವಾದ ಸಂಸ್ಕೃತಿ ಹಾಗೂ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಂಡು ತನ್ನತನವನ್ನು ಗುರುತಿಸಿಕೊಂಡಿದೆ.

ಅಧ್ಯಯನದ ಆರಂಭದಲ್ಲಿ ಇಟ್ಟುಕೊಂಡ ಉದ್ದೇಶಗಳಿಗೆ ಅನುಗುಣವಾಗಿ ಈ ಮಹಾ ಪ್ರಬಂಧವನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಂಗಡಿಸಿ ಈ ಅಧ್ಯಯನವನ್ನು ಕಟ್ಟಿಕೊಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹಡಗಲಿ ತಾಲೂಕಿನ ಭೌಗೋಳಿಕ ಲಕ್ಷಣಗಳನ್ನು, ಅದರ ವೈಶಿಷ್ಟ್ಯತೆಯನ್ನು ಮತ್ತು ಪ್ರಭಾವವನ್ನು ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಡಗಲಿ ತಾಲೂಕಿನ ಐತಿಹಾಸಿಕ ಹಿನ್ನೆಲೆಗೆ ಸಂಬಂಧಿಸಿದ ಅಂದಿನ ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಶಾಸನಗಳ ವೈವಿಧ್ಯತೆಯನ್ನು ಅದರಲ್ಲಿ ದಾನಶಾಸನಗಳು, ವೀರಗಲ್ಲುಗಳು ಮತ್ತು ಸಂದರ್ಭೋಚಿತವಾಗಿ ಸ್ಮಾರಕಶಿಲ್ಪಗಳನ್ನು ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳನ್ನು ಅವುಗಳ ನಿರ್ಮಾಣದ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ. ಪ್ರಮುಖ ದೇವಾಲಯಗಳ/ಮೂರ್ತಿಗಳ ವಾಸ್ತುವೈಶಿಷ್ಟ್ಯತೆಯನ್ನು ಮತ್ತು ಅವುಗಳ ಮಹತ್ವವನ್ನು ಕುರಿತು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವಾದ ದೇವಾಲಯ ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನದಡಿಯಲ್ಲಿ ಧಾರ್ಮಿಕ, ಸಾಮಾಜಿಕ ಮತ್ತು ಸಮುದಾಯದ ಕೇಂದ್ರಗಳಾಗಿ ದೇವಾಲಯಗಳು ಯಾವ ರೀತಿ ಕಾರ್ಯನಿರ್ವಹಿಸುತ್ತಿದ್ದವು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ ಶಾಸನ ಉಲ್ಲೇಖಿತ ಸಾಂಸ್ಕೃತಿಕ ವಿವರಗಳನ್ನು ಧಾರ್ಮಿಕ, ಚಾರಿತ್ರಿಕ, ರಾಜಕೀಯ, ಕೃಷಿ ಸಂಬಂಧಿ, ಆರ್ಥಿಕ ಮತ್ತು ಆಡಳಿತ ವಿಷಯಗಳಿಗೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ.

ಹೀಗೆ ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನದ ಚೌಕಟ್ಟಿನಲ್ಲಿ ಮಹಾಪ್ರಬಂಧ ರಚನೆಯಾಗಿದೆ. ಈ ಅಧ್ಯಯನದಿಂದ ತಿಳಿದುಬರುವ ಕೆಲವು ಸಾಮಾನ್ಯ ನಿರ್ಣಯಗಳು ಈ ಕೆಳಕಂಡಂತಿವೆ.

**ಅಧ್ಯಯನದಿಂದ ಕಂಡುಕೊಂಡ ಅಂಶಗಳು**

* ಹೂವಿನಹಡಗಲಿ ತಾಲೂಕಿನ ಭೌಗೋಳಿಕ ಲಕ್ಷಣಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಪ್ರಮುಖವಾಗಿ ನಿಸರ್ಗದತ್ತವಾಗಿ ಪಶ್ಚಿಮ ಮತ್ತು ದಕ್ಷಿಣ ದಿಕ್ಕಿನಲ್ಲಿ ಹರಿಯುತ್ತಿರುವ ತುಂಗಾಭದ್ರ ನದಿ ಪ್ರಮುಖ ಪಾತ್ರ ವಹಿಸುತ್ತಿದೆ. ಪ್ರಾಗಿತಿಹಾಸಿಕ ಕಾಲದಿಂದಲೂ ಮಾನವನ ವಾಸ ನೆಲೆಯಾಗಿಸಲು ತುಂಗಾಭದ್ರ ನದಿ ಪ್ರಮುಖ ಕಾರಣವಾಗಿದೆ. ಹಾಗೆಯೇ ಈ ಪ್ರದೇಶದಲ್ಲಿರುವ ಬೆಟ್ಟ-ಗುಡ್ಡಗಳಿಂದ ಆವೃತವಾದ ಒಟ್ಟು ಪರಿಸರ ಸಂಸ್ಕೃತಿ ಮತ್ತು ಪರಂಪರೆ ಬೆಳವಣಿಗೆಗೆ ಕಾರಣವಾಗಿದೆ.

* ಚಾರಿತ್ರಿಕ ಕಾಲಘಟ್ಟದಲ್ಲಿ ಹೂವಿನಹಡಗಲಿ ತಾಲೂಕನ್ನು ಆಳಿದ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ದ್ವಾರಸಮುದ್ರದ ಹೊಯ್ಸಳರು, ಕುಮ್ಮಟದುರ್ಗದ ಅರಸರು, ಕುರುಗೋಡಿನ ಸಿಂಧರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ನೊಳಂಬ ಪಲ್ಲವರು, ಸೇವುಣರು, ವಿಜಯನಗರದ ಅರಸರು, ಪಾಳೆಯಗಾರರು ಇತ್ಯಾದಿ ಮನೆತನಗಳು ವಿಶೇಷವಾದ ಕೊಡುಗೆಗಳನ್ನು ನೀಡಿವೆ. ಪ್ರಸ್ತುತ

ಕಾಲಘಟ್ಟದಲ್ಲೂ ದೊರೆಯುವ ಪ್ರಾಚ್ಯ ಅವಶೇಷಗಳು ರಾಜಮನೆತನಗಳ ಕೊಡುಗೆಗಳನ್ನು ಕುರುಹಾಗಿಸಿವೆ.

* ಆಯಾ ಕಾಲಘಟ್ಟಗಳಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಮನೋಭಾವನೆಗಳನ್ನು ಗಮನಿಸಿದಾಗ ದೇವಾಲಯಗಳ ನಿರ್ಮಾಣದ ಹಿನ್ನೆಲೆಯನ್ನು ಗುರುತಿಸಬಹುದು. ಪ್ರಮುಖವಾಗಿ ದೇವಾಲಯಗಳನ್ನು ಮೋಕ್ಷ, ಪ್ರತಿಷ್ಠೆ, ಭಕ್ತಿ, ಧಾರ್ಮಿಕ, ವಿದ್ಯಾಕೇಂದ್ರ, ನ್ಯಾಯ ಕೇಂದ್ರ, ಸಾಂಸ್ಕೃತಿಕ ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದರು. ಅದರಿಂದ ಜನಸಾಮಾನ್ಯರಿಗೆ ದೇವಾಲಯಗಳ ಮೇಲೆ ಅತೀವ ಭಯ, ಭಕ್ತಿ, ಗೌರವ ಇರುವುದನ್ನು ಕಂಡುಕೊಳ್ಳಲಾಗಿದೆ.

* ರಾಜ್ಯದ ಇತರೆ ದೇವಾಲಯಗಳಲ್ಲಿನ ವಿಗ್ರಹಗಳನ್ನು ನಿಧಿ ಕಳ್ಳತನಕ್ಕಾಗಿ ನಾಶಪಡಿಸಿದಂತೆ ಹೂವಿನಹಡಗಲಿಯಲ್ಲಿರುವ ದೇವಾಲಯಗಳಲ್ಲಿ ನಿಧಿ ಕಳ್ಳತನಕ್ಕಾಗಿ ನಾಶಪಡಿಸಿದ ಕುರುಹುಗಳು ಕಂಡುಬರುವುದಿಲ್ಲ.

* ಹೂವಿನಹಡಗಲಿ ತಾಲೂಕಿನಲ್ಲಿ ಶೈವ, ವೈಷ್ಣವ, ಶಾಕ್ತ, ಜೈನ, ಇತರೆ (ಸೂರ್ಯ, ಬ್ರಹ್ಮ, ಹರಿಹರೇಶ್ವರ) ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು, ಬಸದಿಗಳು ಹಾಗೂ ಮೂರ್ತಿಗಳು ವಿವಿಧ ಸ್ಥಳಗಳಲ್ಲಿ ದೊರೆತಿವೆ. ಇಲ್ಲಿ ಶೈವ ಧರ್ಮದ ಆರಾಧಕರು ಹೆಚ್ಚಾಗಿದ್ದರೆಂದು ಹಾಗೂ ಪ್ರಾಚೀನ ಮಧ್ಯಯುಗೀನ ಕಾಲದಲ್ಲಿ ಶೈವ ಧರ್ಮ ಇತರೆ ಧರ್ಮಗಳಿಗಿಂತ ಪ್ರಾಬಲ್ಯದಲ್ಲಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ.

* ವೀರಗಲ್ಲುಗಳಲ್ಲಿ ತುರುಗೋಳ್ ವೀರಗಲ್ಲುಗಳು ಅಧಿಕ ಸಂಖ್ಯೆಯಲ್ಲಿವೆ. ನಾಲ್ಕೈದು ಸತಿಕಲ್ಲುಗಳಿವೆ. ಇದರಿಂದ ಕಂಡುಬರುವುದೇನೆಂದರೆ ಹಡಗಲಿ ಪರಿಸರವು ಸಂಪದ್ಭರಿತವಾಗಿದ್ದಿತು. ಸತಿ ಪದ್ಧತಿ ಆಚರಣೆಯಲ್ಲಿತ್ತು.

* ಹಿರೇಹಡಗಲಿಯ ಶಿವಸ್ಕಂದವರ್ಮನ ತಾಮ್ರಶಾಸನವೊಂದನ್ನು ಬಿಟ್ಟರೆ ಉಳಿದಂತೆ ಶಾಸನಗಳ ಮಾಧ್ಯಮ ಶಿಲೆಯಾಗಿದೆ. ದೊರೆತ ಶಾಸನಗಳಲ್ಲಿ ಏಕಭಾಷಾ ಶಾಸನಗಳು ಇನ್ನೂ ಹಲವು ದ್ವಿಭಾಷಾ ಶಾಸನಗಳಾಗಿವೆ(ಕನ್ನಡ ಮತ್ತು ಸಂಸ್ಕೃತ).

* ಹೂವಿನಹಡಗಲಿ ತಾಲೂಕಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಅತ್ಯಂತ ಮಹತ್ವದ್ದು ಮೈಲಾರ ಸುಕ್ಷೇತ್ರವಾಗಿದೆ. ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಮೈಲಾರ ಕ್ಷೇತ್ರದ ಕೊಡುಗೆ ಅಪಾರವಾಗಿದೆ.

* ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯ ಆಧಾರಿತವಾಗಿ ಮಾಡಲಾಗಿದ್ದು, ಹೂವಿನಹಡಗಲಿಯ ದೇವಾಲಯ ಮತ್ತು ಶಾಸನಗಳ ಅಧ್ಯಯನವಾಗಿದ್ದರೂ ಪ್ರಸ್ತುತ ಈ ಪರಿಸರದಲ್ಲಿನ ಐತಿಹ್ಯಗಳನ್ನು ಹಬ್ಬ-ಹರಿದಿನಗಳ, ಜಾತ್ರೆ ವೈಶಿಷ್ಟ್ಯತೆಗಳು ಕಂಡುಬಂದಿವೆ.

* ದೇವಾಲಯಗಳು ಹಿಂದಿನ ಸಮಾಜದ ಬೆಳವಣಿಗೆಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿದ್ದವು ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಅಧ್ಯಯನದ ಫಲಿತಗಳು**

* ಹೂವಿನಹಡಗಲಿ ತಾಲೂಕಿನಲ್ಲಿ ಈಗಾಗಲೇ ಬಳ್ಳಾರಿ ಜಿಲ್ಲೆಯ ದೇವಾಲಯ ಕೋಶದಲ್ಲಿ ೫೩ ದೇವಾಲಯಗಳನ್ನು ಪ್ರಕಟಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಪ್ರಕಟಗೊಳ್ಳದೇ ಇರುವ ೫೦ ದೇವಾಲಯಗಳನ್ನು ವಿಶ್ಲೇಷಿಸಲಾಗಿದೆ.

* ಪ್ರಕಟಿತ ಶಾಸನಗಳು ೧೧೫, ಪ್ರಸ್ತುತ ಅಧ್ಯಯನದಲ್ಲಿ ಹೊಸದಾಗಿ ೧೦ ಅಪ್ರಕಟಿತ ಶಾಸನಗಳನ್ನು ಹೊಸದಾಗಿ ಬೆಳಕಿಗೆ ತರಲಾಗಿದೆ.

* ಹೂವಿನಹಡಗಲಿ ತಾಲೂಕಿನಲ್ಲಿ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಾಣವಾಗಿರುವ ದೇವಾಲಯ ಗಳಲ್ಲಿ ವಾಸ್ತು ವೈಶಿಷ್ಟ್ಯತೆಯನ್ನು ಗಮನಿಸಿದಾಗ ಕಲ್ಯಾಣ ಚಾಳುಕ್ಯ ಶೈಲಿಯ ದೇವಾಲಯಗಳೇ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತವೆ. ಪ್ರಾಚೀನ ಕಾಲದ ದೇವಾಲಯಗಳು ಪ್ರಾಚ್ಯ ಅವಶೇಷಗಳಾಗಿವೆ. ಕಾಲನ ತುಳಿತ ಮತ್ತು ಇತರೆ ಕಾರಣಗಳಿಂದಾಗಿ ಅವಸಾನ ಹೊಂದುವುದು ಸಹಜ. ಮುಂದಿನ ಪೀಳಿಗೆಗೆ ಅಲಭ್ಯವಾಗುವುದು ಸಹಜ ಸಂಗತಿ. ಈ ಹಿನ್ನೆಲೆಯಲ್ಲಿ ಹೂವಿನಹಡಗಲಿ ತಾಲೂಕಿನ ಮಾಗಳದ ನರಸಿಂಹಸ್ವಾಮಿ, ಹೊಳಗುಂದಿಯ ಬಳೇಶ್ವರ ಮತ್ತು ವೀರಭದ್ರೇಶ್ವರ ದೇವಾಲಯ, ಸೋಮೇಶ್ವರ ದೇವಾಲಯ, ಉತ್ತಂಗಿಯ ರಾಮೇಶ್ವರ, ಶಂಕರಲಿಂಗೇಶ್ವರ ದೇವಾಲಯಗಳು, ಸೋಗಿಯ ವೀರಭದ್ರೇಶ್ವರ, ಬೆಟ್ಟದ ಮಲ್ಲೇಶ್ವರ ದೇವಾಲಯಗಳು, ಮಾನ್ಯರ ಮಸಲವಾಡ ಮುಕ್ತೇಶ್ವರ, ಮೈಲಾರದ ಕಲ್ಲೇಶ್ವರ ಮತ್ತು ಅಂಗೂರಿನ ಕಲ್ಲೇಶ್ವರ ದೇವಾಲಯಗಳ ತಲನಕ್ಷೆಗಳನ್ನು ಶಾಸ್ತ್ರಬದ್ಧವಾಗಿ ಈ ಅಧ್ಯಯನದ ಮೂಲಕ ಸಿದ್ಧಪಡಿಸಲಾಗಿದೆ. ಇವು ಮುಂದಿನ ಅಧ್ಯಯನಕಾರರಿಗೆ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ.

* ಪ್ರಸ್ತುತ ಅಧ್ಯಯನದ ಮೂಲಕ ನಾಲ್ಕು ಶಾಸನಗಳನ್ನು ಬೆಳಕಿಗೆ ತರಲಾಗಿದೆ. ಇವು ಇತ್ತೀಚಿನ ಸಂಶೋಧನಾ ನಿಯತಕಾಲಿಕೆಯಲ್ಲಿ ಪ್ರಕಟವಾಗಿವೆ ಮತ್ತು ಪುರಾತತ್ವ ಇಲಾಖೆಯಡಿಯಲ್ಲಿ ಪ್ರಕಟಣೆಯ ಹಂತದಲ್ಲಿದೆ. ಅಪ್ರಕಟಿತ ಆರು ಶಾಸನಗಳ ಪಠ್ಯ ಸಿದ್ಧಪಡಿಸಲಾಗಿದೆ.

ಇದುವರೆಗೆ ಹಲವಾರು ವಿದ್ವಾಂಸರು ಅಧ್ಯಯನ ಮಾಡಿರುವ ಹಾದಿಯಲ್ಲಿಯೇ ಮುಂದು ವರೆದು, ವಿವಿಧ ಕಾಲದಲ್ಲಿ ಹೊರಡಿಸಲ್ಪಟ್ಟ ಶಾಸನಗಳು/ನಿರ್ಮಿಸಲ್ಪಟ್ಟ ದೇವಾಲಯಗಳು ಮತ್ತು ಅವುಗಳ ವೈಶಿಷ್ಟ್ಯವನ್ನು ಗುರುತಿಸುವುದಕ್ಕೆ ಪ್ರಸ್ತುತ ಅಧ್ಯಯನವು ಒತ್ತುಕೊಟ್ಟಿದೆ. ಹಾಗೆಯೇ ಶಾಸನಗಳ ಅನಿವಾರ್ಯ ಅಂಗಗಳಾದ ಶಾಸನಶಿಲ್ಪಗಳ ಕುರಿತು ಅಲ್ಲಲ್ಲಿ ಪೂರಕವಾಗಿ ಚರ್ಚಿಸಿರುವುದು ಈ ಪ್ರಬಂಧದ ವಿಶೇಷವಾಗಿದೆ.

ದೇವಾಲಯ ಹಾಗೂ ಶಾಸನಗಳು ದೊರೆಯುವ ಬಹುತೇಕ ಪ್ರದೇಶಗಳಲ್ಲಿ ವಿಭಿನ್ನ ರೀತಿಯ ಐತಿಹ್ಯಗಳಿವೆ. ಅನೇಕ ಸ್ಥಳೀಯರು ಇವುಗಳ ಬಳಿ ನಿಧಿ ಇದೆ, ಇವುಗಳನ್ನು ಸರ್ಪ ಕಾಯುತ್ತಿದೆ ಹಾಗೂ ಇದನ್ನು ಜಕಣಾಚಾರಿ ನಿರ್ಮಿಸಿದ್ದಾನೆಂಬ ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಈ ರೀತಿಯ ಐತಿಹ್ಯಗಳ ಕುರಿತು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬೇಕಾದ ಅಗತ್ಯತೆ ಇದೆ. ಇಲ್ಲಿನ ದೇವಾಲಯ ಮತ್ತು ಶಾಸನಗಳ ಕುರಿತು ಸುದೀರ್ಘವಾಗಿ ಇನ್ನೂ ಹೆಚ್ಚಿನ ಮಟ್ಟದಲ್ಲಿ ಅಧ್ಯಯನ ಮಾಡಲು ಅವಕಾಶಗಳು ಇವೆ.

ಹೂವಿನಹಡಗಲಿ ತಾಲೂಕಿನ ದೇವಾಲಯ ಮತ್ತು ಶಾಸನಗಳ ಕುರಿತು ಇಲ್ಲಿಯವರೆಗೆ ನಡೆದಿರುವ ಕೆಲ ವಿರಳವಾದ ಅಧ್ಯಯನಗಳ ಕುರಿತು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ತಾಲೂಕಿನಲ್ಲಿ ಹೊರಡಿಸಲ್ಪಟ್ಟ ಶಾಸನಗಳ ಹಾಗೂ ದೇವಾಲಯಗಳ ಮಹತ್ವದ ಕುರಿತು ಒಂದೆಡೆ ಇಡಿಯಾಗಿ ಮಾಹಿತಿ ಲಭ್ಯವಾಗುವ ರೀತಿ ಮೊದಲ ಬಾರಿಗೆ ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಆದಾಗ್ಯೂ ಇಲ್ಲಿನ ದೇವಾಲಯ ಮತ್ತು ಶಾಸನಗಳ ಕುರಿತು ವಿವಿಧ ದೃಷ್ಟಿಕೋನಗಳಿಂದ ಮತ್ತಷ್ಟು ಅಧ್ಯಯನ ನಡೆಸುವುದಕ್ಕೆ ಹೇರಳವಾದ ಅವಕಾಶಗಳಿವೆ.

□□

# ಅನುಬಂಧ

೧. ಸಂಕ್ಷೇಪಗಳು

೨. ಪರಾಮರ್ಶನ ಗ್ರಂಥಗಳು

೩. ಅಪ್ರಕಟಿತ ಶಾಸನಗಳು

೪. ತಲನಕ್ಷೆಗಳು

೫. ಛಾಯಾಚಿತ್ರಗಳು

# ೧. ಸಂಕ್ಷೇಪಗಳು

| | | |
|---|---|---|
| ಎಸ್.ಐ.ಐ. | : | ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ |
| ಎಂ.ಎ.ಆರ್. | : | ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ |
| ಕ.ವಿ.ವಿ.ಶಾ.ಸಂ.೧ | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧ |
| ಕ.ಸಾ.ಪ. | : | ಕನ್ನಡ ಸಾಹಿತ್ಯ ಪರಿಷತ್ತು |
| ಇ.ದ.ಸಂ. | : | ಇತಿಹಾಸ ದರ್ಶನ ಸಂಪುಟ |
| ಬ.ಜಿ.ಶಾಸನಗಳು | : | ಬಳ್ಳಾರಿ ಜಿಲ್ಲೆಯ ಶಾಸನಗಳು |
| ಬಳ್ಳಾರಿ | : | ಬಳ್ಳಾರಿ ತಾಲೂಕು |
| ಹಡಗ | : | ಹಡಗಲಿ |
| ಹಗರಿ | : | ಹಗರಿಬೊಮ್ಮನಹಳ್ಳಿ |
| ಹರಪ | : | ಹರಪನಹಳ್ಳಿ |
| ಸಿರುಗುಪ್ಪ | : | ಸಿರುಗುಪ್ಪ ತಾಲೂಕು |
| ಎ.ಕ./E.C. | : | ಎಫಿಗ್ರಾಫಿಯಾ ಕರ್ನಾಟಿಕಾ |
| ಕೆ.ಆಯ್./K.I. | : | ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ |
| ಎ.ಇ./E.I. | : | ಎಫಿಗ್ರಾಫಿಯಾ ಇಂಡಿಕಾ |

□□

## ೨. ಪರಾಮರ್ಶನ ಗ್ರಂಥಗಳು


**ಕನ್ನಡ ಕೃತಿಗಳು**

* ಅಪರ್ಣ ಕೂ.ಸ., **ದೇಗುಲ ವಾಸ್ತುಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.
* ಅಣ್ಣಿಗೇರಿ ಎ.ಎಂ., ಮತ್ತು ಮೇವುಂಡಿ ಮಲ್ಲಾರಿ, **ಶಾಸನ ಸಾಹಿತ್ಯ ಪರಿಚಯ**, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೬೧.
* ಅಣ್ಣಿಗೇರಿ, ಎ.ಎಂ.(ಸಂ.), **ಕರ್ನಾಟಕದ ಶಾಸನಗಳ ಸ್ವರೂಪ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೫.
* ಕಪಟರಾಳ ಕೃಷ್ಣರಾವ್, **ಕರ್ನಾಟಕ ಸಂಸ್ಕೃತಿಯ ಸಂಶೋಧನೆ**, ಉಷಾ ಸಾಹಿತ್ಯಮಾಲೆ, ಬೆಂಗಳೂರು, ೧೯೭೦.
* ಕರಣಂ ವಿರೂಪಾಕ್ಷಗೌಡ, **ಹೂವಿನಹಡಗಲಿ ತಾಲೂಕು ಸಮಗ್ರ ಶಾಸನಗಳ ಅಧ್ಯಯನ**, ಪವಿತ್ರ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೨.
* ಕಲಬುರ್ಗಿ ಎಂ.ಎಂ., **ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೦.
* ಕಲಬುರ್ಗಿ ಎಂ.ಎಂ., **ಕರ್ನಾಟಕ ಕೈಫಿಯತ್ತುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.
* ಕಲಬುರ್ಗಿ ಎಂ.ಎಂ., **ಕನ್ನಡ ಶಾಸನ ಸಾಹಿತ್ಯ**, ಚೇತನ ಬುಕ್‌ಹೌಸ್, ಮೈಸೂರು, ೨೦೧೧.
* ಕರುಣಾ ವಿಜಯೇಂದ್ರ, **ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ(ನೃತ್ಯ)**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೭–೦೮.
* ಕುಮಾರಸ್ವಾಮಿ ಕೆ.ಎಸ್., **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು**, ಕರ್ನಾಟಕ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬.
* ಕೃಷ್ಣರಾವ್ ಎಂ.ವಿ., ಕೇಶವಭಟ್ ಎಂ., **ಕರ್ನಾಟಕದ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦.
* ಕೃಷ್ಣಶರ್ಮ ಬೆಟಗೇರಿ, **ಕರ್ನಾಟಕ ಜನಜೀವನ**, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೧.

* ಕೃಷ್ಣ ಎಂ.ಹೆಚ್., **ಕನ್ನಡ ನಾಡಿನ ಚರಿತ್ರೆ**, ಭಾಗ-೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೭.
* ಕೊಟ್ರೇಶ್ ಎಂ., **ಬಳ್ಳಾರಿ ಜಿಲ್ಲೆಯ ಕೋಟೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
* ಗಿರಿಜಾ ಟಿ., **ಶ್ರೀ ಕುರುವತ್ತಿ ಬಸವೇಶ್ವರ ಕ್ಷೇತ್ರದರ್ಶನ**, ಬಸವ ಮಿತ್ರ ಬಳಗ, ದಾವಣಗೆರೆ, ೨೦೦೦.
* ಗುಡ್ಡದೇಶ್ವರಪ್ಪ ಎಚ್., **ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪೂಜಾ ಪ್ರಕಾಶನ, ಚಿತ್ರದುರ್ಗ, ೨೦೧೦.
* ಗೋಪಾಲ ಬಾ.ರಾ., **ಕರ್ನಾಟಕದಲ್ಲಿ ನವಶಿಲಾಯುಗ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೨
* ಗೋಪಾಲರಾವ್ ಎಚ್.ಎಸ್., **ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು-ಒಂದು ಸಾಂಸ್ಕೃತಿಕ ಅಧ್ಯಯನ**, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೩.
* ಗೋವಿಂದರಾಜು ಸಿ.ಆರ್., **ಇತಿಹಾಸ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
* ಚಂದ್ರಶೇಖರ ಟಿ.ಆರ್., **ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು**, ಶ್ರೀ ಸಿದ್ಧಾವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಪುರ, ಹೂವಿನಹಡಗಲಿ ತಾಲೂಕು, ೧೯೯೪
* ಚಿದಾನಂದಮೂರ್ತಿ ಎಂ., **ಸಂಶೋಧನ ತರಂಗ**, ಸಂಪುಟ-೨, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೯.
* ಚಿದಾನಂದಮೂರ್ತಿ ಎಂ., **ಮಾಸ್ತಿಗಲ್ಲು-ವೀರಗಲ್ಲು**, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೪.
* ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨.
* ಚಂದ್ರಶೇಖರಯ್ಯ ಬಿ.ಎಂ., **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ**, ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು, ೨೦೦೫.
* ಚೆನ್ನಕ್ಕ ಎಲಿಗಾರ, **ಪ್ರಾಚೀನ ಕರ್ನಾಟಕದ ರಾಣಿಯರು**, ಗೌರೀಶ ಮುದ್ರಣಾಲಯ, ಧಾರವಾಡ, ೧೯೮೭.
* ಚೆನ್ನಕ್ಕ ಪಾವಟೆ, **ಶಾಸನಗಳಲ್ಲಿ ಸ್ತ್ರೀ ಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦.

* ಜಯತೀರ್ಥ ರಾಜಪುರೋಹಿತ, **ಕನ್ನಡ ತೀರ್ಪುಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭.
* ಜಯದೇವಪ್ಪ ಜೈನಕೇರಿ, **ಕರ್ನಾಟಕ ಶಿಲ್ಪ-ಸಂಸ್ಕೃತಿ**, ಶಾಂತಲಾ ಪ್ರಕಾಶನ, ಶಿವಮೊಗ್ಗ, ೨೦೦೯.
* ಜೋಶಿ ಶಂ.ಬಾ. **ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ**, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೬.
* ತಾಪಿ ಧರ್ಮಾರಾವ್ ಎಸ್.ಆರ್., ಅನು: **ದೇವಾಲಯಗಳಲ್ಲಿ ಲೈಂಗಿಕ ಶಿಲ್ಪಗಳು**, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೧೯೯೩.
* ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, ೨೦೧೦.
* ನಂಜಮ್ಮಣ್ಣಿ ಎಂ., **ಭಾರತೀಯ ಸಾಮಾಜಿಕ ಸಂಸ್ಥೆಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೨.
* ನಾಗಯ್ಯ ಜೆ.ಎಂ., **ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ**, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ಮಠ, ಬೆಳಗಾವಿ, ೧೯೯೨.
* ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨
* ನಾಯಕ ಹಾ.ಮಾ.(ಸಂ), **ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ**, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೯.
* ನೇಗಿನಹಾಳ ಎಂ.ಬಿ., **ಪ್ರಾಚೀನ ಕನ್ನಡ ಶಾಸನ ಭಾಷಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೨.
* ನೇಗಿನಹಾಳ ಎಂ.ಬಿ., **ನೇಗಿನಹಾಳ ಪ್ರಬಂಧಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.
* ಪರಮಶಿವಮೂರ್ತಿ ಡಿ.ವಿ., **ಕನ್ನಡ ಶಾಸನಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.
* ಪರಮಶಿವಮೂರ್ತಿ ಡಿ.ವಿ., **ತುಱುಗೋಳ್ ಸಂಕಥನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
* ಪಂಚಮುಖಿ ಆರ್.ಎಸ್., **ಕರ್ನಾಟಕ ಇತಿಹಾಸ**, ಕರ್ನಾಟಕ ಇತಿಹಾಸ ಸಂಸ್ಥೆ, ಮಂಡಲ, ಧಾರವಾಡ, ೧೯೬೭.
* ಪುಟ್ಟಪ್ಪ ಕೆ.ವಿ., **ಭಾರತೀಯ ಸಂಸ್ಕೃತಿ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೪.

* ಪ್ರಭಾಕರ್ ಎಂ.ಎನ್., **ದೇವಾಲಯ ವಾಸ್ತು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
* ಬ್ರಹ್ಮಕುಮಾರಿ ಭಾರತೀಜೀ, **ರಬ್ಬಲದೇವಿಯ ಹೂವಿನ** ಸಿರಿ, ನರಸಿಂಹಪ್ಪ ಸುಬ್ರಾಯ್ ದಿವಾಕರ್, ಹೂವಿನಹಡಗಲಿ, ೨೦೧೦.
* ಮಹದೇವ ಸಿ.,(ಸಂ) **ಮೈಲಾರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.
* ಮಂಜುನಾಥ ಬೇವಿನಕಟ್ಟಿ, **ಮೈಲಾರಲಿಂಗನ ಕಾವ್ಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.
* ಮಂಜುನಾಥ ಎಂ.ಜಿ., **ಕರ್ನಾಟಕ ಸಾಂಸ್ಕೃತಿಕ ಇತಿಹಾಸ**, ಸುಮುಖ ಪ್ರಕಾಶನ, ಬೆಂಗಳೂರು, ೨೦೦೯
* ಮೇವುಂಡಿ ಮಲ್ಲಾರಿ, **ಕನ್ನಡ ಶಾಸನ ಕವಿಗಳು**, ಪ್ರತಿಭಾ ಗ್ರಂಥಮಾಲೆ, ಧಾರವಾಡ, ೧೯೬೩.
* ರಮೇಶ ಕೆ.ವಿ., **ಕರ್ನಾಟಕ ಶಾಸನ ಸಮೀಕ್ಷೆ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧.
* ರಹಮತ್ ತರೀಕೆರೆ(ಸಂ.), **ಧರ್ಮ–ವಿಶ್ವಕೋಶ**, ಭಾಗ–೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ರಾಮಚಂದ್ರರಾವ್ ಎಸ್.ಕೆ., **ಭಾರತದ ದೇವಾಲಯ ನೆಲೆ–ಹಿನ್ನೆಲೆ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೮.
* ರಾಜಶೇಖರ ಸಿಂದಗಿ, **ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಸುಜಾತ ಪಬ್ಲಿಕೇಶನ್ಸ್, ಧಾರವಾಡ, ೧೯೮೮.
* ರಾಜರಾಂ ಹೆಗಡೆ, **ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯದ ಐತಿಹಾಸಿಕ ವಿಶ್ಲೇಷಣೆ**, ಅರಿವು ಬರಹ, ಸಂ.೩, ಭಾಗ–೧, ೧೯೯೨.
* ರಾಮಚಂದ್ರರಾವ್ ಎಸ್.ಕೆ., **ಮೂರ್ತಿಶಿಲ್ಪ ನೆಲೆ–ಹಿನ್ನೆಲೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೬.
* ವಸಂತಲಕ್ಷ್ಮಿ ಕೆ., **ಭಾರತೀಯ ಮೂರ್ತಿಶಿಲ್ಪ ಪ್ರವೇಶಿಕೆ.**
* ವಾಸುದೇವ ಬಡಿಗೇರ, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.
* ವಿರೂಪಾಕ್ಷಿ ಪೂಜಾರಹಳ್ಳಿ, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
* ವೆಂಕಟಸುಬ್ಬಯ್ಯ ಜಿ., **ಕನ್ನಡ ನಿಘಂಟು ಪರಿವಾರ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.

* ಶಿವರಾಮ ಕಾರಂತ, **ಚಾಲುಕ್ಯ ವಾಸ್ತುಶಿಲ್ಪ**, ಮೈಸೂರು ರಾಜ್ಯದ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೬೯
* ಶಿವತಾರಕ್ ಕೆ.ಬಿ., **ಕರ್ನಾಟಕದ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೧.
* ಶೇಷಶಾಸ್ತ್ರಿ ಆರ್., **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೭.
* ಶೇಠೆ ಎನ್., **ಕರ್ನಾಟಕದಲ್ಲಿ ಸತಿಪದ್ಧತಿ**, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು, ರುದ್ರಾಕ್ಷಿಮಠ, ಬೆಳಗಾವಿ, ೧೯೯೧.
* ಶೇಷಾದ್ರಿ ಬಿ. ಮತ್ತು ಚಂದ್ರಶೇಖರ್ ಟಿ.ಆರ್.(ಸಂ.), **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮
* ಸದಾಶಿವಪ್ಪ ಕುಂ.ಬಾ., **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಹರಪನಹಳ್ಳಿ ಶ್ರೀ ಮಾಲತೇಶ ಪ್ರಕಾಶನ, ಕುಂಚೂರು, ೧೯೯೦.
* ಸದಾಶಿವಪ್ಪ ಕುಂ.ಬಾ., **ಹರಪನಹಳ್ಳಿ ಪಾಳೆಯಗಾರರು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.
* ಸುಂದರ ಅ., **ಕರ್ನಾಟಕ ಪ್ರಾಗಿತಿಹಾಸ ಕಾಲದ ನೆಲೆ**, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೮೪.
* ಸುರೇಶ್ ಕೆ.ಎಂ. ಮತ್ತು ಇತರರು, **ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.
* ಸುರೇಂದ್ರರಾವ್ ಬಿ., **ಕರ್ನಾಟಕ ಚರಿತ್ರೆ ಸಂ.೨**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.
* ಹಿರೇಮಠ ಬಿ.ಆರ್., **ಶಾಸನಗಳಲ್ಲಿ ವರ್ತಕರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦.
* ಜ್ಞಾನಾನಂದ ಜಿ., **ಶಿಲ್ಪಾದರ್ಶ, ಸಂ–೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

**ಶಾಸನ ಸಂಪುಟಗಳು**

* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ., (ಸಂ), **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ.**
* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ., (ಸಂ), **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ–೩, ಹಂಪಿ.**

